# ಅಧ್ಯಾತ್ಮ ವಿದ್ಯಾ

ಸ್ವಾಮಿ ಶಿವಾನಂದ
ಸಂಸ್ಥಾಪಕರು : ದಿವ್ಯ ಜೀವನ ಸಂಘ
ಹೃಷೀಕೇಶ

ಪ್ರಕಾಶನ :
ದಿವ್ಯ ಜೀವನ ಸಂಘ
( ಮಹಿಳಾ ಶಾಖೆ )
ಝಾನ್ಸಿ ಲಕ್ಷ್ಮೀಬಾಯಿ ರಸ್ತೆ, ಮೈಸೂರು ೪

# ಅಧ್ಯಾತ್ಮ ವಿದ್ಯಾ

ಸ್ವಾಮಿ ಶಿವಾನಂದ
ಸಂಸ್ಥಾಪಕರು : ದಿವ್ಯ ಜೀವನ ಸಂಘ
ಹೃಷೀಕೇಶ

ಪ್ರಕಾಶನ :
ದಿವ್ಯ ಜೀವನ ಸಂಘ
( ಮಹಿಳಾ ಶಾಖೆ )
ಝಾನ್ಸಿ ಲಕ್ಷ್ಮೀಬಾಯಿ ರಸ್ತೆ, ಮೈಸೂರು ೪



ಪ॥ ಪೂ॥ ಸ್ವಾಮಿ ಶಿವಾನಂದರು
ಶಿವಾನಂದ ಜ್ಞಾನಾಲಯ
ಮೈಸೂರು.



ಶಿವಾನಂದ ಪಾದರೇಣು

**ಸ್ವಾಮಿ ವೆಂಕಟೇಶಾನಂದರು**

# Holy Blessings

**1. H. H. Swami Sivananda 13–1–1963**

Sivananda Jnanalaya is in its completion. May the building inspire, elevate and illuminate everyone who comes there. Divine Vibrations of Lord's Name will purify the entire atmosphere and also the heart of every one. It is going to be a Vaikuntam.

**2. H. H. Swami Chidananda 13–5–1965**

Immensely happy to visit the "Sivananda Jnanalaya" this day and worship Sri Gurudev at the shrine there. The daily puja so very systematically conducted here is unique in its traditional detail and completeness and has created the feeling of living presence of Gurudev. This worship is an exceptional feature here, not to be found in most of the other centres elsewhere in India. It is inspiring.

I was shown the library and also noted the presence of beautiful paintings portraying the different great prophets and saints. All these features have gone to make this Jnanalaya an ideal place of Satsang, Sadhana and spiritual Inspiration and awakening.

Gurudev's grace is surely upon this institution. May its good work prosper. May all associated with it be supremely Blessed !

Jai Gurudev Sivananda

**3. H. H. Swami Krishnananda 21-4-1970**

I am very glad to hear that your goodself has taken the good work of translating and printing of the book 'Seif-knowledge' of our Gurudev Sri Swami Sivanandaji Maharaj, info Kannada. Surely, I hope that this sort of noble work will appease the hunger of many aspiring souls and guide them to reach their goal of life. Life without the knowledge of the Self or attainment of God-consciousness becomes a failure even if one becomes the possesser of the entire wealth of the three worlds. Scriptures say that even the Devas (gods) have prejudice against human beings because they alone can easily achieve the knowledge of the Self with their discriminative mind rather than others in the universe. Hence human life is a process of knowledge. All knowledge implies a subject or a knower, whose relation to an object manifests knowledge. The existence of the knower in an act of knowledge cannot be doubted, for, without a knower there is no knowledge and without knowledge there is no experience. The whole of one's life is constituted of various forms of experience, and all experience is attended with consciousness. Consciousness has always to be in relation with the subject or the knower. Without a knowing self there is no objective knowledge. The experience of a world outside would become impossible if it is not to be given to a knowing subject. The fact of the known implies the truth of a knower. Even thinking would lose its meaning without our tacitly admitting the existence of our own self. This self reveals itself as the centre of all the knowledge which illumines every

form of human activity. All activities can, ultimately, be reduced to a kind of knowledge. This is the crux of Self-knowledge or 'Brahmavidya',– the need to recognise oneself as the Pure subject in all things.

I hope the readers of this book will lead their lives with this understanding, by being good and doing good, and helping others also achieve this sublime end.

May God bless you all!

**4. H. H. Swami Shanthananda 28–5–1965**

Om Namo Bhagawate Sivanandaya

May the 'Sivananda Jnanalaya' become 'Sivananda Jnana Gangotri' and make the hearts of men of Mysore a Brindavan of love and devotion is my humble prayer.

## PUSHPANJALI

Self-knowledge lived in Gurudev Swami Sivananda. He did not talk about Self-knowledge. He lived it. Gurudev belonged to the category of Raja Janaka who demonstrated that an active life of lokasamgraha was not only not incompatible with the Jivanmukta state, but a natural corollary to it. Gurudev showed us that only a Jivanmukta can effectively bring light, power and wisdom to the world.

It is most appropriate that his message of Self-knowledge should be broadcast by equally great and noble devotees of Gurudev, in Mysore. The translator Sri Venkatramu is saturated with the wisdom of the Yoga Vasishtha. By Practice and by precept Gurudev and his foremost devotees exhort us to lead the divine life which is Jivanmukti.

My prostrations at the lotus feet of Sri Gurudev enshrined in the hearts of all seekers!

Canada.
1st Aug. 1970

Dust of his lotus feet
**Swami Venkatesananda**

# ಮುನ್ನುಡಿ

ಭಾರತೀಯ ಸಂಸ್ಕೃತಿಯ ನಿರ್ಮಾತರು ರಾಜಕಾರಣಿಗಳಲ್ಲ, ಯೋಧರಲ್ಲ, ವರ್ತಕರಲ್ಲ ; ಅದರ ನಿರ್ಮಾತರು ಸಂತರು ಋಷಿಗಳು ಆಚಾರ್ಯರು ಎಂಬ ಸಂಗತಿ ನಿರ್ವಿವಾದವಾದುದು. ವೇದಗಳ ಕಾಲದಿಂದ ಹಿಡಿದು ಈ ತನಕ — ಆಧುನಿಕ ವೈಜ್ಞಾನಿಕ ಯುಗದಲ್ಲಿಯೂ – ಈ ಋಷಿಪರಂಪರೆ ಅವಿಚ್ಛಿನ್ನವಾಗಿ ಸಾಗುತ್ತಿದೆ. ಪರ್ವತವಾಸಿಗಳೊ ಆಶ್ರಮವಾಸಿಗಳೊ ಆದ ಈ ಮಹಾಮಹಿಮರ ತಪಸ್ಸಿನಿಂದ ಹೊರಹೊಮ್ಮಿದ ಭಾವಾನುಭವ ವಿಚಾರಗಳು ಸರ್ವದೇಶ ಯುಗ ಯಾತ್ರಿಯಾಗಿ ಅಮೃತ ಸಂಜೀವಿನಿಯಾಗಿ ಭಾರತೀಯತ್ವವನ್ನು ರೂಪಿಸುತ್ತಿವೆ, ಭಾರತೀಯರನ್ನುದ್ಧರಿಸುತ್ತಿವೆ, ಲೋಕದ ಗೌರವಕ್ಕೆ ಭಾಜನವಾಗಿವೆ. ಶ್ರೀರಾಮಕೃಷ್ಣ ಪರಮಹಂಸರು ಅರವಿಂದರು ರಮಣಮಹರ್ಷಿಗಳಿರಲಿ, ಗಾಂಧೀಜಿಯಂಥ ರಾಷ್ಟ್ರ ನಾಯಕರು ಸಹ ಸಂತರೆಂಬ ಬಿರುದಿಗೆ ಪಾತ್ರರಾಗಿದ್ದಾರೆ. ರಾಜಕೀಯಾದಿ ಲೌಕಿಕ ವ್ಯವಹಾರಗಳೂ ಧರ್ಮದ ಹಿನ್ನೆಲೆಯಲ್ಲಿ ರೂಪಿತವಾಗಿರುವುದೇ ಭಾರತೀಯ ಸಂಸ್ಕೃತಿಯ ರಹಸ್ಯ. ಭರತಖಂಡದಲ್ಲಿ ಜನ್ಮಧಾರಣೆ ಮಾಡಿರುವಷ್ಟು ಸಂತರು ಬೇರೆ ದೇಶಗಳಲ್ಲಿ ಕಾಣದಿರುವುದೇ ಭಾರತೀಯ ಸಂಸ್ಕೃತಿಯ ಮಹಾಮಹಿಮೆಗೂ ಚಿರಂತನತೆಗೂ ಜೀವಂತ ನಿದರ್ಶನವಾಗಿದೆ.

ಈ ಮಹಾಸಂತ ಪರಂಪರೆಯಲ್ಲಿ ಸ್ವಾಮಿ ಶಿವಾನಂದರೊಬ್ಬರು. ದಕ್ಷಿಣ ಭಾರತದ ಪಂಡಿತೋತ್ತಮರ ವಂಶದಲ್ಲಿ ಜನ್ಮತಾಳಿ, ವೈದ್ಯ ಪದವಿ ಪಡೆದ ನಂತರ ಮಲಯದಲ್ಲಿ ವೈದ್ಯ ವೃತ್ತಿಯ ಮೂಲಕ ಅಪಾರ ಯಶಸ್ಸುಗಳಿಸಿ, ತರುಣ ವಯಸ್ಸಿನಲ್ಲಿಯೆ ಅವರ ಮನಸ್ಸು ಅಧ್ಯಾತ್ಮ ಸಾಧನೆಯ ಕಡೆಗೆ ವಾಲಲು ಋಷಿಕೇಶದಲ್ಲಿ ನೆಲಸಿ ಸಿದ್ಧಿ ಗಳಿಸಿದ ಸಾಹಸಮಯ ಜೀವನ

ಅವರದು. ಅವರ ಮಹಾತಪಸ್ಸಿನ ಸಿದ್ಧಿ ಸಾಹಿತ್ಯದ ರೂಪದಲ್ಲಿ, ದಿವ್ಯ ಜೀವನ ಸಂಘದ ರೂಪದಲ್ಲಿ, ಯೋಗ ವೇದಾಂತ ವನ ವಿಶ್ವವಿದ್ಯಾನಿಲಯದ ರೂಪದಲ್ಲಿ, ಶಿಷ್ಯವೃಂದದ ರೂಪದಲ್ಲಿ, ಇನ್ನೂ ಹಲವು ಯೋಜನೆಗಳ ರೂಪ ದಲ್ಲಿ ಸಮುಜ್ವಲವಾಗಿ ಅಭಿವ್ಯಕ್ತಗೊಂಡಿದೆ. ಅವರು ಪರಿವ್ರಾಜಕರಾಗಿ ಭರತಖಂಡದ ದಕ್ಷಿಣ ಉತ್ತರ ಪೂರ್ವ ಪಶ್ಚಿಮ ವಲಯಗಳಲ್ಲಿ ಸಂಚರಿಸಿ, ತಮ್ಮ ಉಪದೇಶಾಮೃತದಿಂದ ಹಲವು ಸಂತಪ್ತ ಹೃದಯಗಳಿಗೆ ತಂಪನ್ನೆರೆದರು, ಅನೇಕರ ಮನಸ್ಸನ್ನು ಅಧ್ಯಾತ್ಮ ಸಾಧನೆಯ ಕಡೆಗೆ ತಿರುಗಿಸಿದರು, ರಾಷ್ಟ್ರದ ಕುಂಡಲಿನಿ ಶಕ್ತಿಯನ್ನೆಚ್ಚರಿಸಿದರು.

ಅವರು ಹೊಸ ತತ್ತ್ವವನ್ನು ಬೋಧಿಸಲಿಲ್ಲ, ಹೊಸ ಪಂಥವನ್ನು ಪ್ರಾರಂಭಿಸಲಿಲ್ಲ; ವೇದೋಪನಿಷತ್ತುಗಳಲ್ಲಿಲ್ಲದ್ದನ್ನು ಉಪದೇಶಿಸಲಿಲ್ಲ. ಸರ್ವೇ ಸಾಧಾರಣವಾಗಿ ಭರತಖಂಡದ ಎಲ್ಲ ಮತಾಚಾರ್ಯರೂ ವೇದೋಪನಿಷತ್ತು ಗಳಿಗೆ ಶರಣಾಗಿ, ಅವುಗಳ ಆಧಾರದ ಮೇಲೆ ತಂತಮ್ಮ ಪಂಥಗಳನ್ನು ನಿರ್ಮಿಸಿ ಕೊಂಡಿದ್ದಾರೆ. ಸ್ವಾಮಿ ಶಿವಾನಂದರು ವೇದೋಪನಿಷತ್ತುಗಳ ಹಿನ್ನೆಲೆಯಲ್ಲಿ ನಡೆಸಿದ ಸಾಧನೆಯಿಂದ ಪಡೆದ ಅನುಭವವನ್ನು ಶ್ರೀ ಅರವಿಂದರಂತೆ ಆಂಗ್ಲ ಭಾಷಾ ಮಾಧ್ಯಮದ ಮೂಲಕ ಜನರಿಗೆ ಹಂಚಿದ್ದಾರೆ. ಎಲ್ಲ ಸಂತರಂತೆ ಅವರೂ ತಮ್ಮ ಅನುಭವಾಮೃತವನ್ನು ಸಾಮತಿ, ಕತೆ, ಉಪಮೆಗಳ ಮೂಲಕ ಸರ್ವರಿಗೂ ಗ್ರಾಹ್ಯವಾಗುವಂತೆ ವಿವರಿಸಿದ್ದಾರೆ. ಅವರ ಬರಹದ ಮೊತ್ತ ಅಪಾರವಾಗಿದೆ; ಗ್ರಂಥ ಹಾಗೂ ಲೇಖನಗಳ ಸಂಖ್ಯೆ ೩೦೦ರಷ್ಟಿರಬೇಕೆಂದು ಎಣಿಸಲಾಗಿದೆ.

ಪಂಜಾಬಿನಲ್ಲಿ ನಡೆದ ದಿವ್ಯ ಜೀವನ ಸಂಘದ ಪ್ರಥಮ ಸಮ್ಮೇಲನದ ನಿರ್ಣಯಗಳ ಪ್ರಕಾರ ಸಂಘದ ಸರ್ವ ಸದಸ್ಯರು ಹಿಂದಿಯಲ್ಲಿ ಮಾತ್ರ ವ್ಯವಹರಿಸಬೇಕೆಂಬ ನಿಯಮವಿದೆ. ಈ ನಿಯಮವನ್ನನುಸರಿಸುವುದಾದರೆ ಸ್ವಾಮಿ ಶಿವಾನಂದರ ತಪಸ್ಸಿದ್ಧಿಯ ಫಲ ಸರ್ವರಿಗೂ ದೊರೆತಂತಾಗುವುದಿಲ್ಲ; ಅಷ್ಟೇ ಅಲ್ಲ, ಅವರ ಉಪದೇಶ ಹಿಂದೀಯರಿಗೆ ಮಾತ್ರ ಸೀಮಿತವಾಗುತ್ತದೆ. ಅದೇನೆ ಇರಲಿ, ದಿವ್ಯಜೀವನ ಸಂಘದ ಮೈಸೂರು ಮಹಿಳಾ ಶಾಖೆ ಸ್ವಾಮಿ ಶಿವಾನಂದ ಸಾಹಿತ್ಯವನ್ನು ಕನ್ನಡಕ್ಕೆ ತರುವುದರ ಮೂಲಕ ಅದರ ವ್ಯಾಪಕತೆಯನ್ನು ವಿಸ್ತರಿಸಿದ್ದಲ್ಲದೆ, ಕನ್ನಡಿಗರಿಗೆ ಮಹೋಪಕಾರ ಮಾಡಿದೆ. ಅದರ ಕರ್ತೃವಿಗೂ ಗೌರವ ಸಲ್ಲಿಸಿದೆ.

ಪ್ರಸ್ತುತ ಭಾಷಾಂತರ ಕೃತಿ 'ಅಧ್ಯಾತ್ಮ - ವಿದ್ಯಾ' ಸೃಷ್ಟಿ, ಹಿಂದೂಧರ್ಮ, ಗುರು - ಶಿಷ್ಯ, ದೇವರು - ಅವತಾರ, ಭಕ್ತಿಯೋಗ, ಭಕ್ತಿ ಮಾರ್ಗ, ಜಪಯೋಗ, ಕರ್ಮಯೋಗ, ಮಾಯಾ, ಬ್ರಹ್ಮವಿದ್ಯಾ, ವೇದಾಂತ, ಜ್ಞಾನಯೋಗ, ಜೀವನ್ಮುಕ್ತ ಮೊದಲಾದ ಹದಿಮೂರು ಪ್ರಕರಣಗಳನ್ನೊಳಗೊಂಡಿದೆ. ಗ್ರಂಥದ ಪ್ರಾರಂಭದಲ್ಲಿ ಬರುವ ಗುರು ಶಿವ ಕೃಷ್ಣ ಪರವಾದ ಪ್ರಾರ್ಥನೆಗಳನ್ನು ಬಿಟ್ಟು ಉಳಿದ ಪ್ರಾರ್ಥನೆಗಳನ್ನೂ ಭಗವದ್ಗೀತೆಯ ಸಾರಾಂಶವನ್ನೂ, ಭಾಷಾಂತರದಲ್ಲಿ ಕೈಬಿಡಲಾಗಿದೆ. ಪ್ರಕರಣಗಳ ತಲೆ ಹೆಸರು ಸೂಚಿಸುವಂತೆ ಇದು ಸಾಧಕರಿಗೊಂದು ಕೈಪಿಡಿಯಾಗಿದೆ. ಅಧ್ಯಾತ್ಮ ಸಂಬಂಧವಾದ ಗಹನ ವಿಚಾರಗಳನ್ನೆಲ್ಲ ಸಾಮಾನ್ಯರಿಗೂ ಸುಲಭವಾಗಿ ಅರ್ಥ ವಾಗುವಂತೆ ವಿವರಿಸಲಾಗಿದೆ. ಇದನ್ನೋದಿದಾಗ ಹಿಂದೂಧರ್ಮದ ಸ್ವರೂಪ ತಿಳಿಯುವುದಲ್ಲದೆ, ಮನಸ್ಸು ಊರ್ಧ್ವಮುಖಿಯಾಗುತ್ತದೆ. ಭಕ್ತಿಯೋಗ ಕರ್ಮಯೋಗ ಮತ್ತು ಜ್ಞಾನಯೋಗಗಳ ವಿವರಣೆ ಹೃದ್ಯವಾಗಿದೆ. ತಾತ್ತ್ವಿಕ ವಾಗಿ ಇವನ್ನು ಬೇರೆಬೇರೆಯಾಗಿ ವಿವೇಚಿಸುವುದಿದ್ದರೂ ದ್ವೈತಾದ್ವೈತಗಳಂತೆ ಒಂದೇ ಕ್ರಿಯೆಯ ಪ್ರತ್ಯೇಕ ರೂಪಗಳು. ಸಾಧಕ ದ್ವೈತದ ಮೂಲಕ ಅದ್ವೈತ ವನ್ನು ಮುಟ್ಟುವಂತೆ, ಭಕ್ತ ಭಕ್ತಿಯೋಗದ ಮೂಲಕ ಜ್ಞಾನಯೋಗದ ಸಿದ್ಧಿಯನ್ನು ಪಡೆಯುತ್ತಾನೆ. ಅವು ಪರಸ್ಪರ ಪೂರಕ, ಪೋಷಕ ; ಒಂದರಲ್ಲಿ ಮತ್ತೊಂದು ಚಾಚಿಕೊಂಡಿದೆ. ಭಕ್ತ ಕರ್ಮಯೋಗಿಯೂ ಅಹುದು, ಜ್ಞಾನ ಯೋಗಿಯೂ ಆಹುದು ; ಜ್ಞಾನಯೋಗಿಯಲ್ಲಿ ಭಕ್ತಿ ಕರ್ಮಯೋಗಗಳೆರಡೂ ಸಮಾವೇಶಗೊಂಡಿರುತ್ತವೆ. ಅವು ಒಂದೇ ಶಕ್ತಿಯ ಮೂರು ಮುಖಗಳು. ಒಂದು ರೀತಿಯಲ್ಲಿ ಇದು ಭಗವದ್ಗೀತೆಯ ಸಾರವೆಂದು ಹೇಳಬಹುದಾಗಿದೆ.

ಈ ಗ್ರಂಥದಲ್ಲಿ ಬರುವ ಒಂದು ಸಂಗತಿ ಮಾತ್ರ ನನಗೆ ಅರ್ಥವಾಗದಿದೆ. ಎಲ್ಲ ಮತಗಳ ಮೂಲ ಹಿಂದೂಧರ್ಮವೆನ್ನುವಾಗ, ಕಾಶಿ ಕಾಶ್ಮೀರಗಳಲ್ಲಿ ತಪಸ್ಸುಮಾಡಿ ಹಿಂದೂಧರ್ಮದ ತತ್ತ್ವಗಳನ್ನು ಹೀರಿಕೊಂಡು ಯೇಸುಕ್ರಿಸ್ತ ಹೊಸ ಮತವನ್ನು ರೂಪಿಸಿದನೆನ್ನುವಲ್ಲಿ ಜರಾತುಷ್ಟ್ರ, ಕ್ರೈಸ್ತಮತಗಳು ಹಿಂದೂ ಧರ್ಮದಿಂದಲೆ ಹೊರಬಂದುವೆಂದು ಹೇಳುವಲ್ಲಿ ಎದೆ ಜಗ್ಗೆನ್ನುತ್ತದೆ. ಈ ಮಾತು ನಿಜವಾದರೆ ಭಾರತೀಯನಾದವನಿಗೆ ಹೆಮ್ಮೆಯಾಗುತ್ತದೆ. ಆದರೆ ಅದು ನಿಜವೆಂದು ಸಾಧಿಸುವುದು ತುಂಬ ಕಷ್ಟವಾಗುತ್ತದೆ. ಎಲ್ಲ ಮತಗಳ

ದೃಷ್ಟಿ ಧ್ಯೇಯಗಳು ಒಂದೆಯಾಗಿರಬಹುದು ; ಆದರೆ ಅವುಗಳ ಉಗಮಸ್ಥಾನ ಒಂದೇಯೆಂದು ಹೇಳುವುದು ದಾರ್ಷ್ಟ್ಯವಾಗುತ್ತದೆ.

ಇಂಥ ಆಧ್ಯಾತ್ಮಿಕ ಗ್ರಂಥದ ಭಾಷಾಂತರ ಅಷ್ಟು ಕಷ್ಟವಾಗದು. ಅದರಲ್ಲಿಯೂ ವೇದೋಪನಿಷತ್ತು ಬ್ರಹ್ಮಸೂತ್ರ ಭಗವದ್ಗೀತೆಗಳ ಪರಿಚಯವುಳ್ಳ ವಿದ್ವಾಂಸರಿಗೆ ಇದು ತುಂಬ ಸುಲಭವಾಗುತ್ತದೆ. ಈಗಾಗಲೆ ಭಾಷಾಂತರಕಾರರಾದ ಶ್ರೀ ಬಿ. ವೆಂಕಟರಾಮು ಅವರು 'ಜಗದ್ಗುರು ಶ್ರೀ ಶಂಕರಾಚಾರ್ಯ' ಮೊದಲಾದ ಶ್ರೇಷ್ಠ ಗ್ರಂಥಗಳನ್ನು ರಚಿಸಿ ಪಳಗಿದ್ದಾರೆ. ಸಂಸ್ಕೃತ ಕನ್ನಡ ಎರಡರಲ್ಲಿಯೂ ಪ್ರಭುತ್ವವಿರುವ ಈ ಮಿತ್ರರು 'Self Knowledge' ಗ್ರಂಥವನ್ನು ಮೂಲದ ಶೈಲಿಯನ್ನನುಸರಿಸಿಯೇ ಭಾಷಾಂತರಿಸಿದ್ದಾರೆ. ತೊಡರು, ಹಳ್ಳಿತಿಟ್ಟು, ಅಸಮತೆ, ಕೃತಕತೆ, ಅಸ್ಪಷ್ಟತೆ ಮೊದಲಾದ ಭಾಷಾಂತರ ದೋಷಗಳು ಇಲ್ಲಿ ಕಾಣುವುದಿಲ್ಲ. ಒಮ್ಮೊಮ್ಮೆ ಮೂಲದಲ್ಲಿ ವಿವರವಾಗಿದ್ದುದು ಭಾಷಾಂತರದಲ್ಲಿ ಸಂಕ್ಷಿಪ್ತವಾಗುತ್ತದೆ. 'Thou art an ocean of mercy. Thou art omnipotent' ಎನ್ನುವ ಎರಡು ವಾಕ್ಯಗಳು 'ನೀನು ದಯಾಸಾಗರನು, ಸರ್ವಶಕ್ತನು' ಎಂಬಿಷ್ಟೇ ಪದಗಳಲ್ಲಿ ಅಡಕಗೊಂಡಿವೆ. ಇದು ಒಳ್ಳೆಯ ಭಾಷಾಂತರದ ಲಕ್ಷಣ. 'I have taken sole refuge in thee', 'The senses are revolting' ಇವನ್ನು 'ನಾನು ನಿನ್ನನ್ನೆ ಪೂರ್ಣವಾಗಿ ನಂಬಿರುವೆನು,' 'ಇಂದ್ರಿಯಗಳು ವಿರೋಧಿಸುತ್ತಿವೆ' ಎಂದು ಭಾಷಾಂತರಿಸಿದೆ. ಈ ಭಾಷಾಂತರ ಸರಿಯಲ್ಲವೆಂದು ನನ್ನ ಭಾವನೆ. ಶ್ರೇಷ್ಠ ಭಾಷಾಂತರದಲ್ಲಿಯೂ ತಪ್ಪು ಹುಡುಕಬಹುದು. ಭಾಷಾಂತರ ಎಂದೂ ಪರಿಪೂರ್ಣವಲ್ಲ. ಅಲ್ಲೊಂದು ಇಲ್ಲೊಂದು ದೋಷ ಈ ಭಾಷಾಂತರ ಕೃತಿಯಲ್ಲಿ ಕಾಣುವುದಾದರೂ ಅವು ಇದರ ಘನತೆಗೆ ಕುಂದು ತರುವುದಿಲ್ಲ. ಸರಾಗತೆ ಸರಳತೆ ಹೃದ್ಯತೆ ಈ ಭಾಷಾಂತರದ ಲಕ್ಷಣಗಳಾಗಿವೆ. ಕೈ ನುರಿಯದೆ ಈ ಲಕ್ಷಣಗಳು ಸಿದ್ಧಿಸವು. ಒಬ್ಬ ಲೇಖಕನ ಒಂದು ಕೃತಿಯನ್ನು ಭಾಷಾಂತರಿಸಿದ ಕೈ ಅದೇ ಲೇಖಕನ ಇತರ ಕೃತಿಗಳನ್ನು ಇನ್ನೂ ಸುಲಭವಾಗಿ ಶೀಘ್ರವಾಗಿ ಭಾಷಾಂತರಿಸಬಹುದು. ಶ್ರೀಮಾನ್ ವೆಂಕಟರಾಮು ಅವರು ಸ್ವಾಮಿ ಶಿವಾನಂದರ ಸಮಗ್ರ ಕೃತಿಗಳನ್ನೂ ಕನ್ನಡಕ್ಕೆ ಭಾಷಾಂತರಿಸಬಲ್ಲ ಸಾಮರ್ಥ್ಯವನ್ನು ಪಡೆದಿದ್ದಾರೆ. ಅವರು ಈ ಕೆಲಸವನ್ನು ಮುಂದು

ವರಿಸಿಯಾರೆಂದು ನಂಬಿದ್ದೇನೆ ; ಮುಂದುವರಿಸಿ ಈ ಕಾಯಕದ ಮೂಲಕ ಜೀವನದ ಸಾಫಲ್ಯವನ್ನು ಕಂಡುಕೊಳ್ಳಲೆಂದು ಹಾರೈಸುತ್ತೇನೆ.

ನಮ್ಮ ಜನ ನಮ್ಮ ನಾಡಿನಲ್ಲಿಯೇ ಪರಕೀಯರಾಗುತ್ತಿದ್ದಾರೆ. ಹಲವರು ವೇದೋಪನಿಷತ್ತುಗಳ ಹೆಸರು ಕೇಳಿಲ್ಲ, ರಾಮಾಯಣ ಭಾರತಗಳನ್ನು ನೋಡಿಲ್ಲ ; ನಮ್ಮ ಸಂಸ್ಕೃತಿಯ ಸ್ವರೂಪವನ್ನು ತಿಳಿದಿಲ್ಲ. ವಿದೇಶೀಯ ಶಿಕ್ಷಣ ಪದ್ಧತಿಯ ಆವರಣದಲ್ಲಿ ವಿಕಾಸಗೊಳ್ಳುತ್ತಿರುವ ವಿದ್ಯಾರ್ಥಿಮತಿ ದಿಕ್ಕುಗೆಟ್ಟು ಶಕ್ತಿಹೀನವಾಗಿದೆ. ಅದನ್ನು ಪುನಶ್ಚೇತರಿಸಲು ದಿವ್ಯಜೀವನ ಸಂಘದಂಥ ಸಂಸ್ಥೆಗಳು ಮುಂದೆ ಬರಬೇಕಾಗಿದೆ. ಈ ಸಂಘದ ಮೈಸೂರು ಮಹಿಳಾ ಶಾಖೆಯಲ್ಲಿ ಉತ್ಸಾಹೀ ಕ್ರಿಯಾಶೀಲರಿದ್ದಾರೆ, ನಿಷ್ಠಾವಂತ ಕಾರ್ಯ ದಕ್ಷರಿದ್ದಾರೆ. ಈಗಾಗಲೇ ಅವರು ಸಾಧಿಸಿರುವ ಕಾರ್ಯ ಅದರ ಭವಿತವ್ಯಕ್ಕೆ ಸಾಕ್ಷಿಯಾಗಿದೆ. ಈ ಸಂಘ ಇಂಥ ಹಲವಾರು ಕೃತಿಗಳನ್ನು ಪ್ರಕಟಿಸುವುದರ ಮೂಲಕ ನಮ್ಮ ಜನಮನವನ್ನು ರೂಪಿಸಲಿ, ಭಾರತೀಯ ಸಂಸ್ಕೃತಿಯನ್ನು ವ್ಯಾಪಕವಾಗಿ ಹರಡಲಿ ಎಂದು ಹಾರೈಸುತ್ತೇನೆ.

[illegible]. ೭. ೧೯೭೦<br>ಕುಲಪತಿ ಭವನ,<br>ಮೈಸೂರು

**ದೇ. ಜವರೇಗೌಡ**<br>ಉಪ-ಕುಲಪತಿ

# THE DIVINE LIFE SOCIETY

WAS ESTABLISHED IN 1936

BY

SRI SWAMI SIVANANDAJI MAHARAJ,

AND

IT EXISTS TODAY

## TO SERVE YOU!

By dissemination of spiritual knowledge far and wide
By training spiritual aspirants in Yoga and Vedanta
Through the Yoga-Vedanta Forest University,
By the establishment of institutions like,

i. **The Sivananda Charitable Hospital,**
ii. **The Sivananda Primary School,**
iii. **The Sivananda Ayurvedic Pharmaceutical Works,**
iv. **The Viswanath Mandir,**

**etc.,**

in order to exemplify in themselves the tenets of Life Divine, to inspire and guide mankind, and to give a lead to the leaders of the world.

**THE INSTITUTION IS ENTIRELY MAINTAINED BY YOUR SUPPORT AND CO-OPERATION!**

**YOUR CONTRIBUTIONS WILL ENABLE US TO CARRY ON THIS WORK ON A GRAND SCALE!**

Your token of goodwill, support and co-operation will be gratefully welcomed and acknowledged by :

The Secretary,
**Divine Life Society, P.O. Sivananda Nagar.**

# ಪೀಠಿಕೆ

ವಿಶ್ವದಲ್ಲಿನ ಮಾನವನ ಬಾಳು ಆತ್ಮಸಾಕ್ಷಾತ್ಕಾರಕ್ಕಾಗಿ, ಧಾರ್ಮಿಕ ಜೀವನವನ್ನು ನಡೆಸಲು ಜನಿಸಿದ್ದರೂ ಸಹ ಅವನು ಪ್ರಲೋಭನೆಗಳ ಸೆಳೆತಕ್ಕೆ ಸಿಕ್ಕಿ ತಪ್ಪುಹಾದಿಗೆ ತಳ್ಳಲ್ಪಟ್ಟಿರುವನು. ಆಕಾಂಕ್ಷೆಗಳನ್ನು ವಿರೋಧಿಸು ವಷ್ಟು ಸಂಕಲ್ಪ ಬಲವನ್ನು ಹೊಂದಿಲ್ಲವು.

ಒಮ್ಮೆ ಒಬ್ಬ ಉನ್ನತಾಧಿಕಾರಿಯು ಹೇಳಿದರು : "ಸ್ವಾಮಿಜೀ, ಪ್ರಪಂಚಕ್ಕೆ ಇಂದು ಬೇಕಾಗಿರುವದು ಅನ್ನ. ನನಗೆ ಬೇಕಾಗಿರುವದೂ ಅನ್ನ. ಆ ಆತ್ಮನಿಗೆ ಎರಡು ಪೈಸೆಯಷ್ಟೂ ಬೆಲೆಯಿಲ್ಲ. ಯಾರಿಗೆ ಬೇಕಾಗಿದೆ ಆತ್ಮ, ಹಾಗೂ ಆತ್ಮವಿದ್ಯಾ ? ಇಂದು ಅಧ್ಯಾತ್ಮ ವಿದ್ಯೆಗೆ ಯಾರೂ ಗಮನ ಕೊಡು ವುದಿಲ್ಲ." ನಾನು (ಸ್ವಾಮಿಜೀ) ಅವರಿಗೆ ಕೊಟ್ಟ ಉತ್ತರ ಇಷ್ಟೆ. 'ನೀವು ಅನ್ನವೊಂದರಿಂದಲೇ ಬದುಕಲಾರಿರಿ. ಮನಸ್ಸು ಮಾನಸಿಕ ಆಹಾರವನ್ನೇ ಬಯಸುವದು. ಆತ್ಮವು ಆಧ್ಯಾತ್ಮಿಕ ಆಹಾರವನ್ನು ಬಯಸುವುದು. ಆದ್ದರಿಂದ ಬ್ರಹ್ಮದ ಪ್ರತೀಕವಾದ 'ಓಂ'ನ ಆಧಾರದಿಂದ ಬದುಕ ಬಲ್ಲಿರಿ".

ದುರಭಿಮಾನದ ಡಾಂಭಿಕ ವ್ಯಕ್ತಿಗಳು ತಮ್ಮ ಜೀವನದಲ್ಲಿ ಎಡರು ತೊಡರುಗಳನ್ನೂ, ವಿಪತ್ತುಗಳನ್ನೂ, ಕಷ್ಟಗಳನ್ನೂ, ನಿರಾಶೆಗಳನ್ನೂ ಕಂಡಾಗ ಮಾತ್ರ ಆತ್ಮಜ್ಞಾನವನ್ನು ಪಡೆಯಬೇಕೆಂಬ ಇಚ್ಛೆಯು ಅವರಲ್ಲಿ ಉದಯಿಸುವದು. ಆಸೆಗಳಿಂದ ಮುಕ್ತರಾದರೆ ಮಾತ್ರ ಆತ್ಮಜ್ಞಾನವು ಪ್ರಾಪ್ತವಾಗುವದು.

ಅಧ್ಯಾತ್ಮ ಸಂಸ್ಕಾರಗಳಿಂದ ತುಂಬಿ ಆತ್ಮಜ್ಞಾನಕ್ಕಾಗಿ ಹವಣಿಸುತ್ತಿರು ವವರನ್ನು ನೋಡಿದರೆ ನನ್ನ ಹೃದಯವು ಸಂತಸದಿಂದ ತುಂಬಿ ಉಕ್ಕಿ ಹರಿ ಯುವದು. ಈ ಕಲಿಯುಗದಲ್ಲಿ ಅನೇಕರು ಹೆಣ್ಣು – ಹೊನ್ನುಗಳ ಬೆನ್ನು

ಹತ್ತಿ ಹೋಗುತ್ತಿರುವಾಗ, ಕೇವಲ ಕೆಲವೇ ಶ್ರದ್ಧಾವಂತ ಮತ್ತು ಪ್ರಾಮಾಣಿಕ ಯುವಕರು ಭಗವಂತ ಮತ್ತು ಭಗವಂತನೊಬ್ಬನನ್ನೇ ಬಯಸುವವರಾಗಿದ್ದರೆ, ನಿಜವಾಗಿಯೂ ಅವರು ಉಜ್ವಲ ಮಹಾಪುರುಷರು. ಅವರಿಗೆ ನನ್ನ ಹೃತ್ಪೂರ್ವಕವಾದ ಪ್ರಣಾಮಗಳು.

"ನಾನು ಸದಾ ನೆಮ್ಮದಿಯಿಂದಿರುವೆನೆ? ನಾನು ಉತ್ತಮ ಶೀಲ ಸ್ವಭಾವದವನೆ? ನನಗೆ ಆತ್ಮಸಂಯಮವಿದೆಯೆ? ಅಜ್ಞಾನದಿಂದ ಮುಕ್ತನಾಗಿರುವೆನೆ? ಪರಿಶುದ್ಧವಾದ ಪರಮಾತ್ಮನನ್ನು ಕಂಡುಕೊಂಡಿರುವೆನೆ?" ಎಂದು ಪ್ರಶ್ನೆಗಳನ್ನು ಹಾಕಿಕೊಂಡು ಪರೀಕ್ಷಿಸಿಕೊ. ಈ ಸದ್ಗುಣ ಸಾಮರ್ಥ್ಯಗಳು ನಿನ್ನಲ್ಲಿ ಇಲ್ಲವಾದರೆ, ಆಗ ಬಾ. ನೆಮ್ಮದಿಯಿಂದ ಕುಳಿತುಕೊ. ಈ ಗ್ರಂಥದಲ್ಲಿ ಕೊಟ್ಟಿರುವ ಉಪದೇಶಗಳನ್ನು ಓದು. ನಿನಗಾಗಿ ಇಲ್ಲಿ ಅಮೃತ ಸಂದೇಶವಿರುವದು. ಇದರಲ್ಲಿ ಸ್ವಲ್ಪ ಮಾತ್ರವಾದರೂ, ಅಷ್ಟನ್ನೇ ಅನುಷ್ಠಾನ ಮಾಡಿದರೆ ನೋವು, ದುಃಖ, ಮತ್ತು ಮೃತ್ಯುವನ್ನು ಗೆಲ್ಲಬಹುದು.

ಮನಸ್ಸು ಮತ್ತು ಇಂದ್ರಿಯಗಳನ್ನು ಜಯಿಸು, ಇವೇ ನಿನ್ನ ನಿಜವಾದ ಶತೃಗಳು. ಬೇರುಬಿಟ್ಟ ಹಳೆಯ ಕೆಟ್ಟ ಅಭ್ಯಾಸಗಳನ್ನು, ದುಷ್ಟ ಸಂಸ್ಕಾರಗಳನ್ನು, ಮತ್ತು ವಾಸನೆಗಳನ್ನು ಗೆಲ್ಲಬೇಕು. ಅಂಧಕಾರ ಶಕ್ತಿಗಳ ವಿರುದ್ಧ ಹೋರಾಡಬೇಕು. ಅವನತಿಯನ್ನು ಹೊಂದುತ್ತಿರುವ ಸಂಕಲ್ಪಬಲವನ್ನು ತಡೆಗಟ್ಟಬೇಕು. ಪ್ರಕ್ಷುಬ್ಧ ಮನಸ್ಸನ್ನು ಗೆಲ್ಲುವದೇ ಜೀವನದಲ್ಲಿ ಮಹಾನ್ ಜಯವು. ಆಧ್ಯಾತ್ಮಿಕ ಸಂಗ್ರಾಮವೇ ಸತ್ಯವಾಗಿಯೂ ಘನ ಘೋರ ಸಂಗ್ರಾಮವು.

ಅಧ್ಯಾತ್ಮ ಸಂಗ್ರಾಮದಲ್ಲಿ ಅಧ್ಯಾತ್ಮದ ನಾಯಕನಾಗು, ವೀರನೂ ಧೀರನೂ ಆದ ಸೇನಾನಿಯಾಗು. ಮನಸ್ಸಿನ ವಾಸನೆಗಳು ತೃಷ್ಣೆಗಳು, ಚಿತ್ತವೃತ್ತಿಗಳು ಮತ್ತು ದುಷ್ಟ ಸಂಸ್ಕಾರಗಳ ವಿರುದ್ಧ ಹೋರಾಡು. ಬ್ರಹ್ಮವಿಚಾರವೆಂಬ ಫಿರಂಗಿಯಿಂದ (Canon) ಮನಸ್ಸಿನ ವಾಸನಾ ಜಾಲವೆಂಬ ಕೋಟೆಯನ್ನು ಧೂಳೀಪಟಮಾಡು. '**ಸೋಽಹಂ**' ಜಪದ ಸಮುದ್ರಾಂತಗಾಮಿ (Submarine) ಮತ್ತು '**ಓಂ**' ಎಂಬ ನೌಕಾಸ್ಫೋಟವನ್ನು (Tarpedo) ಬಳಸುತ್ತಾ ಮೂಲಾಧಾರದಲ್ಲಿ ಮುಳುಗಿ ಅರಿಷಡ್ವರ್ಗಗಳೆಂಬ ಅಂತರ್ಗಾಮಿಗಳನ್ನು ನಾಶಗೊಳಿಸು. ಬ್ರಹ್ಮಾಕಾರ ವೃತ್ತಿಯ ವಿಮಾನದಲ್ಲಿ

(Aero-plane) ಭೂಮಾನಂದ ಸಾಮ್ರಾಜ್ಯಕ್ಕೆ ಹಾರು. ವಿವೇಕವೆಂಬ ಫಿರಂಗಿಯ ರಥವನ್ನು (Tank) ನಡೆಸುತ್ತಾ ದಶೇಂದ್ರಿಯಗಳನ್ನು ದಮನ ಮಾಡು. ದಿವ್ಯಜೀವನ ಸಂಸ್ಥೆಯನ್ನು ಆರಂಭಿಸಿ ಮಿತ್ರರಾಜ್ಯಗಳಾದ ಅನಾಸಕ್ತಿ, ಮನಸ್ಥೈರ್ಯ, ಸಹನೆ, ತಾಳ್ಮೆ, ಸಮಾಧಾನ ಮತ್ತು ಆತ್ಮ ಸಂಯಮದೊಡನೆ ಮೈತ್ರಿಯನ್ನು ಬೆಳೆಸು. ನಾನು ದೇಹಿ, ಕರ್ತೃ, ಭೋಕ್ತೃ ಎಂಬ ಮಾಯಿಕ ಮಂದಿರಗಳನ್ನು ನಾಶಮಾಡಲು **'ಶಿವೋಹಂ'** ಎಂಬ ಸಿಡಿಗುಂಡನ್ನು (Bomb) ಎಸೆ. ತಾಮಸ, ರಾಜಸವೆಂಬ ಬಾಹ್ಯ ಶತೃಗಳನ್ನು ಸತ್ವವೆಂಬ ಅನಿಲದಿಂದ (Gas) ಕೊಲ್ಲು. ವೃತ್ತಿಗಳೆಂಬ ವಿದ್ಯುದ್ದೀಪಗಳನ್ನು ಆರಿಸಿ (Black-out) ಶತೃ ಮನಸ್ಸು ಏನನ್ನೂ ನೋಡದಂತೆ ಮಾಡು. ನೀನು ಏನೇ ಆಗಿದ್ದರೂ, ಯಾವುದೇ ವಾತಾವರಣದಲ್ಲಿದ್ದರೂ, ಪೂರ್ವ ಇತಿಹಾಸವು ಯಾವುದೇ ಆಗಿದ್ದರೂ ಮೋಕ್ಷಕ್ಕಾಗಿ ಪ್ರಯತ್ನಿಸು. ಸಮಾಧಿಯ ನಿತ್ಯಸುಖ – ಶಾಂತಿ – ಆನಂದವು ನಿನ್ನದಾಗಿದೆ. ಸಾಧನೆಗಳ ಸಾಧನೆಯಿಂದ ಶುದ್ಧನಾಗಿ ಜಯಶೀಲನಾಗು.

ಈ ಅಧ್ಯಾತ್ಮ ವಿದ್ಯಾ ಗ್ರಂಥದಲ್ಲಿರುವ ಲೇಖನಗಳು ಯಾರಿಗಾಗಿ ಉದ್ದೇಶಪೂರ್ವಕ ಹೇಳಲ್ಪಟ್ಟಿದೆ ಎಂದರೆ : "ಧರ್ಮ, ದೇವರು, ಕರ್ಮದ ನಿಯಮ, ಪುನರ್ಜನ್ಮ, ಪರಲೋಕ ಮುಂತಾದವುಗಳಲ್ಲಿ ನಂಬಿಕೆಯಿಲ್ಲದವರಿಗಾಗಿ, ನಾಸ್ತಿಕರಿಗಾಗಿ ಮತ್ತು ಸಂಶಯಗಳಿಂದ ತೊಳಲುತ್ತಿರುವವರಿಗಾಗಿ." ಈ ಬೋಧನೆಗಳು ಕಳೆದ ಹದಿನೈದು ವರ್ಷಗಳಲ್ಲಿ ಉಪನ್ಯಾಸ ರೂಪವಾಗಿ ನೀಡಲ್ಪಟ್ಟಿವೆ. ಇವುಗಳನ್ನು ಶ್ರವಣ ಮಾಡಿದವರೆಲ್ಲರೂ ಅಧ್ಯಾತ್ಮದ ಹಾದಿಯಲ್ಲಿ ಬಹಳವಾಗಿ ಮುಂದುವರೆದು ಆನಂದವನ್ನು ಅನುಭವಿಸುತ್ತಿರುವರು. ಅಧ್ಯಾತ್ಮ ಜಿಜ್ಞಾಸುಗಳಿಗೆ **"ಅಧ್ಯಾತ್ಮ ವಿದ್ಯೆಯು"** ಚಿಂತಾಮಣಿಯು, ಕಲ್ಪವೃಕ್ಷವು. ಅಷ್ಟೇಕೆ ? ಕಾಮಧೇನುವು. ಇವು ಶಾಂತಿಯ, ಪ್ರೀತಿಯ, ಅದ್ವೈತದ ಪಾಠಗಳು. ಆಯ್ದುಕೊಂಡ ಕೇವಲ ಕೆಲವೇ ವ್ಯಕ್ತಿಗಳಿಗಾಗಿ, ಸುಸಂಸ್ಕೃತರಿಗಾಗಿ ಅಥವಾ ಶ್ರೀಮಂತರಿಗಾಗಿ ಹೇಳಿದ ನುಡಿಗಳಲ್ಲ. ನಾನು ಬಡವರ, ರೋಗಿಗಳ, ಅಸ್ಪೃಶ್ಯರ, ಹತಾಶರಾದವರ, ಅಪರಾಧಿಗಳ, ತುಳಿಯಲ್ಪಟ್ಟವರ ಮಿತ್ರನು. ಆದರೆ ಪಶ್ಚಾತ್ತಾಪವಿಲ್ಲದ ಪಾಪಿಗಳ ಮಿತ್ರನಲ್ಲ. ಖೈದಿಗಳ, ದರಿದ್ರರ, ರೋಗಿಗಳ ಸೇವೆ ಮಾಡಲು ಬದುಕುವೆನು. ಈ ಇಡೀ

ವಿಶ್ವವೇ ನನ್ನ ಮನೆಯು. ಈ ಪ್ರಪಂಚವೇ ನನ್ನ ದೇಹವು. ನನ್ನ ಸಂದೇಶಗಳು ಹಾಗೂ ಉಪದೇಶಗಳು ನೊಂದವರಿಗಾಗಿ. ಎಲ್ಲರನ್ನೂ ಆಲಂಗಿಸುವೆನು. ನಾನು ವಿಶ್ವದ ಮಿತ್ರನು. ಯಾರು ಬೇಕಾದರೂ ತಮ್ಮ ಸದುದ್ದೇಶಗಳಿಗೆ ನನ್ನನ್ನು ಬಳಸಿಕೊಳ್ಳಬಹುದು. ನಾನು ಎಲ್ಲರಿಗೂ ಸೇರಿದವನು, ಎಲ್ಲರ ಸೇವಕನು ಮತ್ತು ಸಹೋದರನು.

ಈ ಅಧ್ಯಾತ್ಮ ಗ್ರಂಥದಲ್ಲಿ ಎಲ್ಲ ಬಗೆಯ ಸಾಧಕರಿಗೆ ಶೀಘ್ರವಾಗಿ ಜೀರ್ಣಿಸಿ ರಕ್ತಗತವಾಗುವಂತೆ ಸಂಗ್ರಹಿಸಿ ಸಕ್ಕರೆಯ ಲೇಪನವೆಂಬ ರುಚಿ ಕಟ್ಟಾದ ಮಾತುಗಳಿಂದ ಆಧ್ಯಾತ್ಮಿಕ ಮಾತ್ರೆಯನ್ನು ಕೊಟ್ಟಿರುವೆನು. ನೀವು ನಿಜವಾಗಿಯೂ ದೃಢ ವಿಶ್ವಾಸದಿಂದ ಈ ಬೋಧನೆಗಳನ್ನು ಅನುಸರಿಸುವಿರಾ ? ದಯಾಮಯಿಯಾದ ದೇವರು ಸದಾ ನಿಮಗೆ ಸನ್ಮಂಗಳವನ್ನುಂಟು ಮಾಡಲಿ.

ಓಂ ತತ್ಸತ್

ಶಿವಾನಂದನಗರ
೧. ೬. ೧೯೫೮

ಸ್ವಾಮಿ ಶಿವಾನಂದ

# ಕೃತಜ್ಞತೆ

ವಿವಿಧ ರಾಷ್ಟ್ರಗಳಲ್ಲಿ ಅಸಂಖ್ಯಾತ ಸಂತ ಮಹಂತರು ಬಾಳಿ ಬೆಳಗಿದ್ದಾರೆ. ಅದರಲ್ಲೂ ಭಾರತಾಂಬೆಯು ಸಂತರ, ದಾರ್ಶನಿಕರ, ಭಕ್ತವರೇಣ್ಯರ, ಕರ್ಮ ಭಕ್ತಿ ಜ್ಞಾನಯೋಗಿಗಳ ಹಾಗೂ ಆಚಾರ್ಯತ್ರಯರಿಗೆ ಅವತಾರವನ್ನಿತ್ತ ದಿವ್ಯಮಾತೆಯಾಗಿದ್ದಾಳೆ. ವಿಶ್ವ ವಿಖ್ಯಾತ ಧರ್ಮಗಳ ತತ್ತ್ವಗಳನ್ನು ಸಮೀಕರಿಸಿ ಸಾಧಕರ ಸಂಶಯಗಳನ್ನು ನಿವಾರಿಸಿ ಸನ್ಮಾರ್ಗದಲ್ಲಿ ದಿವ್ಯಜೀವನದ ರಹಸ್ಯವನ್ನು ತೋರಿಸಬಲ್ಲ ಪುಣ್ಯಪುರುಷನ ಮಾರ್ಗದರ್ಶನದ ಆವಶ್ಯಕತೆಯು ಈ ಆಧುನಿಕ ಯುಗದಲ್ಲಿ ಅನಿವಾರ್ಯವಾಯಿತು. ಈ ಕೊರತೆಯನ್ನು ನೀಗಲು, ಜೀವಕೋಟಿಯನ್ನು ಉದ್ಧರಿಸಲು ಬುದ್ಧ, ಕ್ರಿಸ್ತ, ಶಂಕರ ಮತ್ತು ರಾಮಕೃಷ್ಣ ಪರಮಹಂಸರ ಅಮೋಘ ಉಪದೇಶಗಳನ್ನು ಆಚರಣೆಯಲ್ಲಿ ತಂದು ಆತ್ಮ ಸಾಕ್ಷಾತ್ಕಾರವನ್ನು ಹೊಂದುವದಲ್ಲದೆ ಆನಂದ ಮಾರ್ಗದಲ್ಲಿ ಇತರರನ್ನೂ ನಡೆಸಬಲ್ಲ ಮಹಾ ಪುರುಷ ಶ್ರೇಷ್ಠನಿಗೆ ೧೮೮೭ನೇ ಸೆಪ್ಟೆಂಬರ್ ೮ ರಂದು ಭರಣಿ ನಕ್ಷತ್ರದಲ್ಲಿ ಭಾರತಾಂಬೆಯು ಜನ್ಮವಿತ್ತಳು. ಆ ಮಹಾಮಹಿಮರೇ, ವಿಶ್ವೋದ್ಧಾರಕರೇ, **ಸ್ವಾಮಿ ಶಿವಾನಂದ ಸರಸ್ವತಿ**ಗಳವರು.

ಮಲಯದಲ್ಲಿ ವೈದ್ಯರಾಗಿ ಸೇವೆ ಸಲ್ಲಿಸಿ ಪ್ರೇಮ ತ್ಯಾಗದ ಪ್ರತೀಕವಾಗಿ ೧೯೨೪ ಜೂನ್ ೧ ರಂದು ಹೃಷೀಕೇಶದಲ್ಲಿ ಸಂನ್ಯಾಸ ಸ್ವೀಕರಿಸಿದರು. ೧೯೩೦ರ ವರೆಗೆ ಕಠಿಣವಾದ ತಪಶ್ಚರ್ಯೆಯಲ್ಲಿ ಮುಳುಗಿ ಜ್ಞಾನಿಯಾಗಿ ಬುದ್ಧನಂತೆ ಬೆಳಕನ್ನು ನೀಡಬಲ್ಲವರಾದರು. ‘ ಸೇವೆ ’ಯನ್ನೇ ತಮ್ಮ ಗುರಿಯನ್ನಾಗಿ ಉಳ್ಳ ಶಿವಾನಂದರು ೧೯೩೪ ರಲ್ಲಿ ಆಸ್ಪತ್ರೆಯನ್ನು ಆರಂಭಿಸಿದರು. ಜ್ಞಾನ ಪ್ರಸಾರಕ್ಕಾಗಿಯೇ ೧೯೩೬ ರಲ್ಲಿ ‘ ದಿವ್ಯಜೀವನ ’ ಮಾಸಪತ್ರಿಕೆಯನ್ನಾರಂಭಿಸಿದರು. ಸೇವೆ, ಪ್ರೇಮ, ತ್ಯಾಗ, ಜ್ಞಾನ, ಮೋಕ್ಷದ ಬಗ್ಗೆ ಸಾಧಕರಿಗೆ ಸಲಹೆ

ಸಹಾಯಗಳನ್ನು ನೀಡಲು ೧೯೩೬ ಏಪ್ರಿಲ್ ೧೬ರಂದು ‘Divine Life Society’ ಯನ್ನು ಆರಂಭಿಸಿದರು. ವಿಶ್ವ ಕಲ್ಯಾಣಕ್ಕಾಗಿ ‘ಹರೇರಾಮ’ ಸಂಕೀರ್ತನೆಯನ್ನು ಅಖಂಡವಾಗಿ ನಡೆಸುವ ಏರ್ಪಾಟು ಮಾಡಿದರು. ಪೂಜ್ಯ ಗುರುದೇವರ ಅಸಂಖ್ಯಾತ ಅಮರವಾಣಿಯನ್ನು ಅಶೋಕನಂತೆ ಅಮರಗೊಳಿಸಲು ೧೯೫೦ರ ಮೇ ೩ರಂದು ‘Sivananda Pillar’ ನ್ನು ಪ್ರತಿಷ್ಠಿಸಲಾಯಿತು. ೧೯೬೧ ರಲ್ಲಿ ‘ದಿವ್ಯಜೀವನ ಸಂಘ’ದ (ಹೃಷೀಕೇಶ) ಬೆಳ್ಳಿಯ ಹಬ್ಬವು ವಿಶ್ವಾದ್ಯಂತ ಆಚರಿಸಲಾಯಿತು.

‘ಸೇವೆಯೇ ಜೀವನದ ಪರಮಗುರಿ. ಸೇವೆಯಿಂದ ಆತ್ಮನ ಉದ್ಧಾರ. ಸೇವೆಯಿಂದ ನಿಜವಾದ ಆನಂದ ಪ್ರಾಪ್ತಿ’ – ಎಂಬುದನ್ನು ಸಾರಿ ಸಾರಿ ಹೇಳಿದ ಸ್ವಾಮಿಜೀ ಕೊನೆಗೆ ‘I live to serve you’ ಎಂದು ನುಡಿದರು. ಗುರುದೇವರ ಮಹತ್ವಾಕಾಂಕ್ಷೆಯನ್ನು ಕಾರ್ಯರೂಪಕ್ಕೆ ತಂದು ವಿಶ್ವನಾಥನನ್ನು ವಿಶ್ವದ ಪ್ರತಿಯೊಂದು ವ್ಯಕ್ತಿಯಲ್ಲೂ ಕಾಣಬೇಕೆಂಬ ಘನ ಉದ್ದೇಶದಿಂದ ದಿವ್ಯ ಜೀವನಸಂಘದ ಸಹಸ್ರಾರು ಶಾಖೆಗಳು ಅಮೆರಿಕ, ಯೂರೋಪ್, ಆಫ್ರಿಕ, ಆಸ್ಟ್ರೇಲಿಯಾ ಖಂಡಗಳಲ್ಲಿ ಅವಿರತವಾಗಿ ಶ್ರಮಿಸುತ್ತಿವೆ. ಈ ದಿಶೆಯಲ್ಲಿ ಮಾದರಿಯ ಮೈಸೂರು ನಗರವೂ ಮುಂದೆ ಹೆಜ್ಜೆ ಇಟ್ಟಿದೆ.

ಪೂಜ್ಯ ಗುರುದೇವರಿಂದ ಆಶೀರ್ವಾದ ಪಡೆದ ಮೈಸೂರು ಮಹಿಳಾ ಶಾಖೆಯು ೧೯೬೦ರಲ್ಲಿ ಆರಂಭವಾಗಿ ಸತ್ಸಂಗಗಳನ್ನು ಸಂಕೀರ್ತನೆಗಳನ್ನು ಮಾತ್ರವಲ್ಲದೆ, ಹಿಂದುಳಿದ ಜನಾಂಗದ ಮಕ್ಕಳಿಗೆ ಹಾಲು ಹಣ್ಣು ಬಟ್ಟೆಗಳನ್ನು ಹಂಚುವ ಸೇವಾ ಕಾರ್ಯವನ್ನು ಆರಂಭಿಸಿತು. ಆನಂತರ ಮೈಸೂರು ಪುರಸಭೆಯ ಅಧ್ಯಕ್ಷರ ಸಹಕಾರದಿಂದ ‘P. K. Sanatorium’ ನಲ್ಲಿಯೂ ರೋಗಿಗಳಿಗೆ ದಾನ ನೀಡುವದಲ್ಲದೆ ಸಂಕೀರ್ತನ ಪ್ರವಚನಗಳನ್ನು ನಡೆಸುತ್ತಿದೆ. ಸಾಂಸ್ಕೃತಿಕ ಕಾರ್ಯಗಳು ನಡೆಯುತ್ತಿದ್ದು ನಂತರ ಸ್ವಾಮಿಜೀಯವರ ಅಪೇಕ್ಷೆಯಂತೆ **‘ಶಿವಾನಂದ ಜ್ಞಾನಾಲಯ’** ಎಂಬ ಭವ್ಯ ಮಂದಿರವು ನಿರ್ಮಾಣವಾಯಿತು. ಈ ಭವನದ ಅಸ್ತಿಭಾರವು ಶೃಂಗೇರಿಯ ಪ॥ ಪೂ॥ ಶಂಕರಾಚಾರ್ಯರಿಂದ ೧೯೬೩ರಲ್ಲಿ ಪ್ರತಿಷ್ಠಾಪಿತವಾಗಿ, ೧೯೬೪ರಲ್ಲಿ ಪೂ॥ ದ್ವಾರಕಾ ಶಂಕರಾಚಾರ್ಯರಿಂದ ಉದ್ಘಾಟನೆ ಮಾಡಲ್ಪಟ್ಟಿತು. ಬೆಂಗಳೂರು ಮಹಾಬೋಧಿ ಸಂಸ್ಥೆಯ ಆಚಾರ್ಯ ಬುದ್ಧರಕ್ಷಿತ ಥೇರಾ

ಅವರು ೧೯೬೭ ರಲ್ಲಿ " ಶಿವಾನಂದ ಕ್ಲಿನಿಕ್ " ಎಂಬ ಆಸ್ಪತ್ರೆಯನ್ನು ಆರಂಭಗೊಳಿಸಿದರು. ' ಸೇವೆ ಮತ್ತು ಪ್ರೇಮವು ಆನಂದಕ್ಕೆ ಸುಲಭ ಸೋಪಾನವು ' ಎಂಬ ಗುರುದೇವರ ಉಪದೇಶಾಮೃತದಂತೆ Sivananda Clinic ಅನ್ನು ಶಾಖೆಯ ಸ್ವಂತ ಕಟ್ಟಡದಲ್ಲಿ ಪ್ರತಿ ವಾರವೂ ನಡೆಸಲಾಗುತ್ತಿದೆ. ಸಹಸ್ರಾರು ಮಾತೆಯರೂ ಮಕ್ಕಳೂ ಔಷಧೋಪಚಾರಗಳನ್ನು ಪಡೆಯುತ್ತಿರುವರು. ಜಗತ್ತಿನ ನಾನಾ ಭಾಗಗಳಿಂದ ಬರುವ ಎಲ್ಲ ಧರ್ಮ ಹಾಗು ಮತಗಳ ಮಹಾತ್ಮರೂ ' ಜ್ಞಾನಾಲಯದಲ್ಲಿ ' ಪ್ರವಚನ, ಸಂದೇಶ ಗಳನ್ನು ನೀಡುತ್ತಿರುವರು. ಇದು ಅಲ್ಲದೆ ಅನೇಕ ಸಂತರ ಜಯಂತ್ಯೋತ್ಸವ ಗಳನ್ನು ಆಚರಿಸಲಾಗುತ್ತಿದೆ.

ಪೂಜ್ಯ ಸ್ವಾಮಿ ಶಿವಾನಂದರ ಪರಮ ಗುರಿಯಂತೆ ಜನಸೇವೆಯು ಶಾರೀರಿಕ ಮಾತ್ರವಲ್ಲವೆ ಮಾನಸಿಕ ಮತ್ತು ಆಧ್ಯಾತ್ಮಿಕವೂ ಹೌದು. ' Dissemination of spiritual knowledge is the highest form of worship ' ಎಂದಿರುವರು. "Give, Give, Give " ಎಂದು ನುಡಿದು, ನಡೆದು ಅವರು ' Give-Ananda ' ರೆನ್ನಿಸಿರುವರು — Swami Venkatesananda. ಪ್ರತಿ ವರ್ಷವು ನಡೆಯುವ ದಿವ್ಯಜೀವನ ಸಮ್ಮೇಳನ ದಲ್ಲಿ ಅನ್ನದಾನ, ಸಂಕೀರ್ತನ, ಪ್ರವಚನಗಳ ಜೊತೆಗೆ, ಗುರುದೇವರ ಅಮರ ಸಂದೇಶಗಳನ್ನೊಳಗೊಂಡ, ಹಸ್ತಪ್ರತಿ, ಕಿರುಹೊತ್ತಿಗೆ ಹಾಗೂ ಬೃಹದ್ಗ್ರಂಥ ಗಳು ಉಚಿತವಾಗಿ ಹಂಚಲ್ಪಡುವವು.

ಮೈಸೂರಿನ ಮಹಿಳಾ ಶಾಖೆಯು ಪ್ರಾರಂಭವಾಗಲು ಪೂಜ್ಯ ಶಿವಾ ನಂದರ ಶಿಷ್ಯರಾದ **ಶಿವಾನಂದ ಪಾದಸೇವಕ ಸ್ವಾಮಿ ವೆಂಕಟೇಶಾನಂದರ** ಅನುಗ್ರಹವೇ ಕಾರಣವು. ಅವರು ಹಾಕಿದ ಮೇಲ್ಪಂಕ್ತಿಯಂತೆ ಜ್ಞಾನಾಲಯ ದಲ್ಲಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ಮಹಿಳಾಶಾಖೆಯು ಈ ಹತ್ತು ವರ್ಷಗಳಲ್ಲಿ ಹತ್ತಾರು ಕಿರುಹೊತ್ತಿಗೆಗಳನ್ನು ಪ್ರಕಾಶಪಡಿಸಿ ಉಚಿತ ವಾಗಿ ಹಂಚಿದೆ. ಮೇಲಾಗಿ ಸ್ವಾಮಿ ಶಿವಾನಂದರ " Light of Vedanta " ಎಂಬ ಗ್ರಂಥವನ್ನು ಪ್ರಪ್ರಥಮ ಬಾರಿಗೆ ಪ್ರಕಾಶಪಡಿಸಿತು. ಈಗ ಗುರುದೇವ ರಿಂದ ರಚಿತವಾದ " Self knowledge " — " ಅಧ್ಯಾತ್ಮ ವಿದ್ಯಾ " (ಬ್ರಹ್ಮವಿದ್ಯಾ) ಎಂಬ ಗ್ರಂಥವನ್ನು Sivananda Literature

Dissemination Committee ಯು ೧೯೬೧ನೇ ಸಾಲಿನಲ್ಲಿ ಮಾಡಿದ ತೀರ್ಮಾನದಂತೆ ಮೈಸೂರು ಮಹಿಳಾ ಶಾಖೆಯು ಮೇಲ್ಕಂಡ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿಸಿ ಈಗ ಪ್ರಕಾಶಪಡಿಸಲಾಗಿದೆ. ಅಧ್ಯಕ್ಷರಾದ ಸ್ವಾಮಿ ಶ್ರೀಕೃಷ್ಣಾನಂದರ ಅಪ್ಪಣೆಯ ಮೇರೆ "Self knowledge" ಗ್ರಂಥದ ಆರಂಭದಲ್ಲಿರುವ "Bhagavad Geeta for the Blind"— ಪುಟ ೧ರಿಂದ ೪೪ರ ಭಾಗವನ್ನು ಕೈಬಿಡಲಾಗಿದೆ. ಕಾರಣ : ಆ ಭಾಗವು ಈಗಾಗಲೆ ಪ್ರತ್ಯೇಕವಾಗಿ ಗ್ರಂಥರೂಪದಲ್ಲಿ ಬೆಳಕಿಗೆ ಬಂದಿದೆ.

ಸಂಘದ ಅಧ್ಯಕ್ಷರಾದ ಸ್ವಾಮಿ ಚಿದಾನಂದಜಿಯವರು ವಿದೇಶ ಪ್ರವಾಸದಲ್ಲಿರುವುದರಿಂದ, ಹೃಷಿಕೇಶದಲ್ಲಿ ಸಂಘದ ಸಮಸ್ತ ಕಾರ್ಯ ಚಟುವಟಿಕೆಗಳ ಹೊಣೆಗಾರಿಕೆಯನ್ನು ಹೊತ್ತಿದ್ದರೂ ನಮ್ಮ ಶಾಖೆಗೆ ಆಗಿಂದಾಗ್ಯೆ ಸೂಕ್ತ ಸಲಹೆಗಳನ್ನು ನೀಡುತ್ತಾ ಈ ಪುಸ್ತಕಕ್ಕೆ ಆಶೀರ್ವಾದ ಪತ್ರವನ್ನು ದಯ ಪಾಲಿಸಿರುವ **ಸ್ವಾಮಿ ಶ್ರೀಕೃಷ್ಣಾನಂದರಿಗೆ** ನಮ್ಮ ಅನಂತ ಪ್ರಣಾಮಗಳು. ಅನುವಾದನಕ್ಕಾಗಿ ಅವಶ್ಯಕವಾದ ಮೂಲಗ್ರಂಥ "Self Knowledge" ನ್ನು ಸಮಯದಲ್ಲಿ ಒದಗಿಸಿದ ಶಿವಾನಂದರ **ಶಿಷ್ಯರತ್ನ ಸ್ವಾಮಿ ಸಚ್ಚಿದಾನಂದಜೀಯವರಿಗೆ** ನಮ್ಮ ಕೃತಜ್ಞತಾಪೂರ್ವಕ ವಂದನೆಗಳು. "ಅಧ್ಯಾತ್ಮ ವಿದ್ಯಾ" ಗ್ರಂಥದೇವಿಗೆ ಮುನ್ನುಡಿಯ ತಿಲಕವನ್ನಿಟ್ಟು ಮಹದುಪಕಾರ ಮಾಡಿದ ಮೈಸೂರಿನ ವಿಶ್ವವಿದ್ಯಾಲಯದ ಮಾನ್ಯ ಉಪಕುಲಪತಿಗಳಾದ **ಶ್ರೀಮಾನ್ ದೇ. ಜವರೇಗೌಡರಿಗೆ** ನಮ್ಮ ಅನಂತ ಪ್ರಣಾಮಗಳು. ಗ್ರಂಥವನ್ನು ಅಂದವಾಗಿ ಮುದ್ರಿಸಿ ಉಪಕರಿಸಿದ ವಿದ್ಯಾ ಮುದ್ರಣದ ಅಧಿಕಾರಿಗಳಾದ ಶ್ರೀ ಶಿವರಾಮ್‌ರವರಿಗೂ ವಂದನೆಗಳು ಮತ್ತು ಗ್ರಂಥ ಪ್ರಕಾಶನಕ್ಕೆ ಧನಸಹಾಯವನ್ನು ನೀಡಿದ ಧರ್ಮಾತ್ಮರಿಗೂ, ಸಕಲ ವಿಧವಾದ ಸಹಾಯವನ್ನು ನೀಡಿದ ಸರ್ವರಿಗೂ ಗುರುದೇವ ಸ್ವಾಮಿ ಶಿವಾನಂದರು ಸನ್ಮಂಗಳವನ್ನುಂಟುಮಾಡಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

**ದಿವ್ಯ ಜೀವನ ಸಂಘ (ಮಹಿಳಾ ಶಾಖೆ)**
**ಮೈಸೂರು**

# ವಿಷಯಾನುಕ್ರಮಣಿಕೆ


| | | | | |
|---|---|---|---|---|
| | | Holy Blessings | .... | iii |
| | | ಮುನ್ನುಡಿ | ... | vii |
| | | ಪೀಠಿಕೆ | .... | xiii |
| | | ಕೃತಜ್ಞತೆ | ... | xvii |
| | ೧. | ಗುರುಪ್ರಾರ್ಥನೆ | ... | ೧ |
| | ೨. | ಶಿವಪ್ರಾರ್ಥನಾ | ... | ೧ |
| | ೩. | ಶ್ರೀಕೃಷ್ಣ ಸ್ತೋತ್ರ | .... | ೩ |

## ಅಧ್ಯಾತ್ಮ ವಿದ್ಯಾ

| | | | | |
|---|---|---|---|---|
| 1. | ೧. | ಸೃಷ್ಟಿಯು ಮತ್ತು ವಿಕಾಸವು | .... | ೯ |
| | ೨. | ಪ್ರಪಂಚವೆಂದರೇನು ? | .... | ೧೯ |
| | ೩. | ಪುನರ್ಜನ್ಮದ ಸಿದ್ಧಾಂತವು | .... | ೨೭ |
| | ೪. | ಸಾವು ಎಂದರೇನು ? | .... | ೩೧ |
| | ೫. | ಮೋಕ್ಷವು | .... | ೩೬ |
| 2. | ೧. | ಹಿಂದೂ ದರ್ಶನವು | ... | ೪೦ |
| | ೨. | ನಿಜವಾದ ಧರ್ಮ | .... | ೪೨ |
| | ೩. | ಭಾರತಾಂಬೆಯ ಮಹಿಮೆ | .... | ೪೪ |
| 3. | ೧. | ಗುರುವಿನ ಆವಶ್ಯಕತೆ | .... | ೪೯ |
| | ೨. | ಗುರು ಮತ್ತು ಶಿಷ್ಯ | .... | ೫೨ |
| | ೩. | ಆತ್ಮತತ್ತ್ವಾಕಾಂಕ್ಷಿಯ ಅರ್ಹತೆಗಳು | ... | ೫೮ |
| | ೪. | ಸಂಚಿತ ಪುರುಷಾರ್ಥ ಮತ್ತು ಪ್ರಾರಬ್ಧ ಕರ್ಮಗಳು | | ೬೪ |

4. **ದೇವರು ಮತ್ತು ಅವತಾರ :**
೧. ಭಗವಂತನ ಸಗುಣ ಮತ್ತು ನಿರ್ಗುಣ ರೂಪವು .... ೭೧
೨. ಭಗವಂತನ ಗುಣಗಳು .... ೮೦
೩. ಭಗವಂತನ ಕೃಪೆಯು .... ೮೫
೪. ಅವತಾರದ ಉದ್ದೇಶ .... ೯೨
೫. ಮೂರ್ತಿ ಪೂಜೆಯು .... ೯೪
೬. ಮಾನಸ ಪೂಜೆಯು .... ೧೦೧
5. **ಭಕ್ತಿ ಯೋಗವು :**
೧. ಭಕ್ತಿ ಎಂದರೇನು ? .... ೧೦೪
೨. ಭಕ್ತಿಯ ವೈವಿಧ್ಯತೆ .... ೧೧೪
೩. ಭಕ್ತಿಯಲ್ಲಿ ಭಾವ .... ೧೧೭
೪. ಪರಾಭಕ್ತಿ .... ೧೧೮
೫. ವಿಶ್ವಪ್ರೇಮವನ್ನು ಬೆಳೆಸು .... ೧೨೬
೬. ಭಕ್ತನೆಂದರೆ ಯಾರು ? .... ೧೩೧
6. ೧. ಭಕ್ತಿಯನ್ನು ಬೆಳೆಸುವುದು ಹೇಗೆ ? .... ೧೩೩
೨. ಭಗವಂತನಲ್ಲಿ ಶ್ರದ್ಧೆ .... ೧೫೦
೩. ಪ್ರಾರ್ಥನೆಯು .... ೧೫೩
೪. ನಮಸ್ಕಾರ .... ೧೫೭
೫. ಸಂಕೀರ್ತನೆಯ ಪ್ರಾಮುಖ್ಯತೆ .... ೧೫೮
೬. ಧರ್ಮ .... ೧೬೨
೭. ಸತ್ಸಂಗ .... ೧೬೮
೮. ಶರಣಾಗತಿ .... ೧೭೧
7. **ಜಪಯೋಗ :**
೧. ಜಪವು ಸುಲಭ ಸಾಧನವು .... ೧೭೫
೨. ಜಪದ ಮಂತ್ರಗಳು .... ೧೭೮
೩. ಅಜಪ ಜಪ .... ೧೮೦
೪ ಲಿಖಿತ ಜಪ .... ೧೮೧

೫. ಜಪದ ಪ್ರಯೋಜನಗಳು .... ೧೮೨

೬. ಜಪ ನಿಷ್ಠೆಯಲ್ಲಿ ಭಾವದ ಆವಶ್ಯಕತೆ .... ೧೮೫

8. **ಕರ್ಮಯೋಗ :**

೧. ಕರ್ಮಯೋಗದ ಅವಶ್ಯಕತೆ ... ೧೮೭

೨. ಕರ್ಮಯೋಗದ ಪ್ರಭೇದಗಳು .... ೧೯೪

೩. ಕರ್ಮಯೋಗದ ಅನುಷ್ಠಾನವು .... ೧೯೭

9. **ಮಾಯಾ :**

೧. ಮಾಯಾ ಎಂದರೇನು ? .... ೨೦೯

೨. ಅವಿದ್ಯಾ ... ೨೧೨

೩. ಅಹಂಕಾರ .... ೨೧೪

10. **ಬ್ರಹ್ಮ ವಿದ್ಯಾ :**

೧. ಶರೀರತ್ರಯಗಳು .... ೨೧೯

೨. ಅವಸ್ಥಾತ್ರಯವು .... ೨೨೪

೩. ಬ್ರಹ್ಮ ವಿದ್ಯಾ .... ೨೩೫

೪. ಅಧ್ಯಾಸ ... ೨೩೯

11. **ವೇದಾಂತ**

೧. ವೇದಾಂತ ದರ್ಶನ ... ೨೪೬

೨. ವೇದಾಂತದ ಉಪದೇಶಗಳು .... ೨೬೦

೩. ವೈವಿಧ್ಯತೆಯಲ್ಲಿ ಐಕ್ಯತೆ .... ೨೬೮

೪. ವೆಂದಾಂತದ ಮಹಿಮೆ .... ೨೭೪

೫. ವೇದಾಂತದ ಅನುಷ್ಠಾನ ... ೨೭೭

೬. ಆಧ್ಯಾತ್ಮಿಕ ಧ್ಯಾನವು ... ೨೯೨

12. **ಜ್ಞಾನಯೋಗ :**

೧. ಬ್ರಹ್ಮವೆಂದರೇನು ? .... ೩೦೦

೨. ಬ್ರಹ್ಮದ ಸ್ವರೂಪ .... ೩೦೫

೩. ವೇದಾಂತ ತತ್ವವು ... ೩೦೮

೪. ವೇದಾಂತ ಮತ್ತು ಇತರ ದರ್ಶನಗಳು .... ೩೧೩

೫. ತತ್ವಗಳು .... ೩೧೫
೬. ಬ್ರಹ್ಮವಿದ್ಯಾ ವಿದ್ಯಾರ್ಥಿಗಳು .... ೩೧೭
೭. ರಾಜನೀತಿಯಲ್ಲಿ ಶಾಂತಿ .... ೩೨೧
೮. ಸಾಧಕರಿಗೆ ಸೂಚನೆಗಳು .... ೩೨೩
13. **ಜೀವನ್ಮುಕ್ತನು** .... ೩೩೧

---



## ॥ ಶ್ರೀ ಗಣಪತಿ ಶಾರದಾ ಗುರುಭ್ಯೋನಮಃ ॥

## ೧. ಗುರುಪ್ರಾರ್ಥನೆ

ಪರಮ ಪೂಜ್ಯರಾದ ಗುರುಗಳಿಗೆ ಪ್ರಣಾಮಗಳು. ತಾವು ನನಗೆ ಈ ವಿಧದ ಸಾಧನೆಯನ್ನೂ, ಆ ರೀತಿಯ ಅನುಷ್ಠಾನಗಳನ್ನೂ ವಿಧಿಸಿರುವಿರಿ. ನಾನು ದುರ್ಗುಣಗಳ ರಾಶಿಯು. ಹಲವು ಬಗೆಯ ದುಷ್ಕರ್ಮಗಳನ್ನೆಸಗಿರುವೆನು. ನನ್ನ ಸ್ವಪ್ರಯತ್ನದಿಂದಲೇ ನಡೆಸಬೇಕಾದ ವಿವಿಧ ಅನುಷ್ಠಾನಗಳನ್ನೇ ಮೋಕ್ಷ ಅಥವ ಆತ್ಮಜ್ಞಾನವು ಆಶ್ರಯಿಸಿದ್ದರೆ, ಇನ್ನು ತಮ್ಮ ಕೃಪೆ ಎಲ್ಲಿ? ತಮ್ಮ ಅನುಗ್ರಹವೇಕೆ? ಓ ಪ್ರಭುವೆ! ನನ್ನಲ್ಲಿ ದಯೆ ತೋರಿ. ನಾನು ತಮ್ಮ ಶರಣಾಗತನಾಗಿ ಬಂದಿರುವೆನು.

ಕೋಟ್ಯಂತರ ಜನ್ಮಗಳನ್ನೆತ್ತಬೇಕಾದರೂ, ಅವುಗಳನ್ನನುಭವಿಸಬೇಕಾದರೂ ನಾನು ಮಾತ್ರ ತಮ್ಮನ್ನು ಬೇಡಿಕೊಳ್ಳುವುದು, ತಮ್ಮಲ್ಲಿರುವ ಭಕ್ತಿ ಮತ್ತು ಶ್ರದ್ಧೆಯು ಸ್ವಲ್ಪವೂ ಕುಂದದಿರಲೆಂದು.

## ೨. ಶಿವಪ್ರಾರ್ಥನಾ

ಪಾರ್ವತೀವಲ್ಲಭನೂ, ದೇವಾಧಿದೇವನೂ, ಮನ್ಮಥನಾಶಕನೂ, ಕೈಲಾಸಪತಿಯೂ, ಜ್ಞಾನಾನಂದದಾಯಕನೂ, ಪಾಪಹಾರಿಯೂ, ಸಕಲ ಜೀವ

ಸಂರಕ್ಷಕನೂ, ತ್ರಿಶೂಲ ಡಮರುಗಧಾರಿಯೂ, ವ್ಯಾಘ್ರ ಚರ್ಮಾಂಬರಧರನೂ, ಸಕಲ ಪೂಜ್ಯನೂ, ಸರ್ವೋತ್ತಮನೂ, ಸದ್ಗುಣಗಣಮಣಿಯೂ, ಗಂಗಾ ಜಟಾಜೂಟ ವಿರಾಜಿತನೂ ಆದ. ಪರಮೇಶ್ವರನನ್ನು ಧ್ಯಾನಿಸುವೆನು.

ಮಾಯಾತೀತನೂ, ಮಾಯಾನಿಯಂತ್ರಕನೂ, ಯೋಗೀಶ್ವರನೂ, ಯೋಗಗಮ್ಯನೂ ಆದ ಶಿವನಿಗೆ ಪ್ರಣಾಮಗಳು.

ಹೇ ಪೂಜನೀಯ ಪ್ರಭುವೇ! ನೀನು ಕೃಪಾವಿಷ್ಟನಾದರೆ ಕಲ್ಲು ಬಂಡೆಯು ಹಾಲನ್ನು ಕೊಡಬಲ್ಲದು. ನೀನು ದಯಾವಂತನಾದರೆ ವಿಷವು ಅಮೃತವಾಗುವುದು, ಕಬ್ಬಿಣವು ಬೆಣ್ಣೆಯಾಗುವುದು. ಹೇ ಕರುಣಾಮಯಿ! ನನ್ನಲ್ಲಿ ದಯೆತೋರು, ಕೃಪೆಯನ್ನು ವರ್ಷಿಸು, ನೀನೇ ಎಲ್ಲವು, ನೀನು ಎಲ್ಲವನ್ನೂ ಮಾಡುವೆ, ನೀನೇ ಧರ್ಮವು.

ಓ ಅನುಕಂಪ ಮೂರ್ತಿಯೇ! ನೀನು ನನ್ನ ತಂದೆಯು, ನಾನು ನಿನ್ನ ಕಂದನು. ಈ ಕಠಿಣ ಸಂಕೋಲೆಗಳಿಂದ ನನ್ನನ್ನು ಏಕೆ ಬಂಧಿಸಿರುವೆ? ಈ ದೇಹ ಬಂಧನವನ್ನು ಮುರಿಯಲು ಇಚ್ಛಿಸುವೆನು. ಇನ್ನು ಈ ಕಷ್ಟ ಸಂಕುಲ ಗಳನ್ನು ಸಹಿಸಲಾರೆ. ನನಗೆ ನಿನ್ನ ಮಂದಸ್ಮಿತಮುಖಾರವಿಂದವನ್ನು ತೋರು. ಈ ಎರಡು ತೋಳುಗಳಿಂದಲೂ ನಿನ್ನನ್ನು ಅಪ್ಪಿಕೊಳ್ಳುವ ಆಸೆಯಾಗುತ್ತಿರು ವುದು. ಬಾ! ಓ ನನ್ನ ಮಧುರ ಪ್ರಿಯತಮನೆ! ಒಂದು ಕ್ಷಣವನ್ನೂ ತಡ ಮಾಡಬೇಡ. ನಿನ್ನ ದರ್ಶನಕ್ಕಾಗಿ ಹಂಬಲಿಸುತ್ತಿರುವೆನು. ನೀನೊಬ್ಬನೇ ನನ್ನ ಹೃದಯದ ಕಾತುರತೆಯನ್ನು ತಿಳಿದಿರುವೆ. ನೀನೇ ನನ್ನ ಪರಮಗತಿಯು ಮತ್ತು ಪರಮಾಶ್ರಯವು. ಹೇ ದೇವ ರಕ್ಷಿಸು, ನನ್ನನ್ನು ರಕ್ಷಿಸು, ನನ್ನನ್ನು ಮೇಲಕ್ಕೆತ್ತಿ ಉದ್ಧರಿಸು. ನೀನಲ್ಲದೆ ಮತ್ತೇನನ್ನೂ ಬಯಸೆನು.

ಹೇ ಪ್ರಭು! ಜಪ, ಧ್ಯಾನ, ಮಾನಸ ಪೂಜಾವಿಧಾನವನ್ನು ಅರಿಯೆನು. ನನ್ನ ಹೃದಯವು ಬರಡಾಗಿದೆ. ಅದು ಭಕ್ತಿ ಅಥವ ಸದ್ಗುಣ ಗಳಿಂದ ತಿರಸ್ಕರಿಸಲ್ಪಟ್ಟಿದೆ. ನಾನು ಎಂದೋ ಒಮ್ಮೊಮ್ಮೆ ನಿನ್ನನ್ನು ಸ್ಮರಿಸಲು ಮತ್ತು ಸಾಧು, ಸನ್ಯಾಸಿ ಮತ್ತು ಬಡವರನ್ನು ಉಪಚರಿಸಲು ಪ್ರಯತ್ನಿ ಸಿರುವೆನು. ನನಗೆ ತಿಳಿದಿರುವುದು ಇಷ್ಟೇ. ನಿನ್ನ ದಯಾ ಮತ್ತು ಕೃಪೆಯನ್ನು ನಾನು ಪಡೆಯುವೆನೇ? ಓ ಪೂಜ್ಯ ತಂದೆಯೇ ನಿನ್ನ ಉದಾರ ದರ್ಶನವನ್ನು ಶೀಘ್ರದಲ್ಲಿ ನನಗೆ ಅನುಗ್ರಹಿಸು. ಈ ಸಂಸಾರ ದುಃಖವನ್ನು

ಇನ್ನು ಹೆಚ್ಚು ಕಾಲ ಸಹಿಸಲಾರೆನು. ನಾನು ನಿಜವಾಗಿಯೂ ಹಾತೊರೆಯುತ್ತಿರುವೆನು.

ಓ ಸರ್ವಸೃಷ್ಟಿ ಸಾರ್ವಭೌಮನೆ! ನನಗೆ ಯಾವ ಐಶ್ವರ್ಯವಾಗಲಿ, ಮೋಕ್ಷವಾಗಲಿ, ಸಾಮ್ರಾಜ್ಯವಾಗಲಿ ಬೇಕಿಲ್ಲವು. ಆದರೆ ಸರ್ವಜೀವಿಗಳ ಕಷ್ಟ ಮತ್ತು ನೋವುಗಳು ಕೊನೆಗಾಣಲೆಂದು ನಾನು ಇಚ್ಛಿಸುವೆನು. ನೀನು ದಯಾಸಾಗರನು, ಸರ್ವಶಕ್ತನು. ಇದನ್ನು ನೀನು ಮಾಡಬಲ್ಲೆ.

## ೩. ಶ್ರೀ ಕೃಷ್ಣ ಸ್ತೋತ್ರ

ಓ ಪೂಜ್ಯ ಭಗವನ್! ನೀನು ದೀನಬಂಧು, ದೀನನಾಥ, ಕೃಪಾನಿಧಿ, ಕೃಪಾಸಾಗರ, ಅನಾಥರಕ್ಷಕ ಎಂದು ಜನರು ಸ್ತುತಿಸುವರು. ಅಹಲ್ಯ, ದ್ರೌಪದಿ, ಪ್ರಹ್ಲಾದ, ಧ್ರುವ, ಗಜೇಂದ್ರನನ್ನು ರಕ್ಷಿಸಿದೆ ಎನ್ನುವರು. ಆದರೆ ನನ್ನ ವಿಷಯದಲ್ಲಿ ನೀನು ಏನನ್ನೂ ಮಾಡಿಲ್ಲವು. ನಾನು ಇನ್ನೂ ದುಃಖ, ನೋವು ಮತ್ತು ಅಂಧಕಾರದಲ್ಲಿರುವೆನು. ನಿನ್ನ ಕೃಪೆ ಮತ್ತು ನೆರವಿಗಾಗಿ ನಾನು ಕೂಗುತ್ತಲೇ ಇದ್ದೇನೆ. ಓ ಜಗತ್ತಿನ ಗೈರುಹಾಜರಿ ಜಮಿನ್ದಾರನೆ! ನೀನು ಎಲ್ಲಿಗೆ ಹೋದೆ?

ಹೇ ಪೂಜ್ಯ ಪ್ರಭು! ನೀನು ಸೂಕ್ಷ್ಮದಲ್ಲಿ ಸೂಕ್ಷ್ಮನು. ಆದ್ದರಿಂದ ನಿನ್ನನ್ನು ಅರಿಯುವುದು ಬಹು ಕಷ್ಟ. ಭೂತ, ಭವಿಷ್ಯತ್, ವರ್ತಮಾನವು, ನಿನಗಿಂತ ಬೇರೇನೂ ಅಲ್ಲವು. ನೀನು ಕೃಪಾ ಮತ್ತು ದಯೆಯ ಅನಂತ ಸಾಗರನು. ನೀನು ನಿನ್ನ ಭಕ್ತರಿಗೆ ಮಾತ್ರ ತಿಳಿದಿರುವೆ. ನಿನಗೆ ಗುಣರೂಪಗಳಿಲ್ಲದಿದ್ದರೂ ಸರ್ವಗುಣರೂಪನಾಗಿರುವೆ. ನಿನ್ನ ಹಿರಿಮೆ, ಗರಿಮೆಗಳನ್ನು ಅರಿಯುವುದೇ ಕಷ್ಟ. ನೀನೆನ್ನ ತಂದೆ, ತಾಯಿ, ಗುರು ಮತ್ತು ಆಶ್ರಯದಾತನು. ನಿನಗೆ ನಮಸ್ಕಾರಗಳು. ನನ್ನನ್ನು ಕಾಪಾಡು, ನನಗೆ ದಾರಿ ತೋರು. ಈ ಭಯಂಕರ ಜನನ-ಮರಣ ಸುಳಿಯಿಂದ ಉದ್ಧರಿಸು.

ಓ ಪೂಜ್ಯತಮನಾದ ಕೃಪೇಶ್ವರನೆ! ನಿನಗೆ ನಮಸ್ಕಾರಗಳು. ಪ್ರಲೋಭನೆಗಳನ್ನು ತಡೆಯಲು, ವಜ್ರಕ್ಕಿಂತಲೂ ಕಠಿಣವಾದ ಈ ಅಹಂಕಾರವನ್ನು ನಿನ್ನಲ್ಲಿಕರಗಿಸಲು ಅಧ್ಯಾತ್ಮ ಶಕ್ತಿಯನ್ನು ಕೊಡು. ಸರ್ವಲೋಕಗಳಲ್ಲಿ ಆಡುವ ನಿನ್ನ ಲೀಲೆಗಳಲ್ಲಿ ನನ್ನನ್ನು ಶಾಶ್ವತ ಜೊತೆಗಾರನಾಗಿ ಮಾಡಿಕೊ. ನಿನ್ನ

ಲೀಲೆಯ ವೈಚಿತ್ರ್ಯವನ್ನು ನಾನು ಅರಿತುಕೊಳ್ಳುವಂತಾಗಲಿ. ನಿನ್ನ ಮಕ್ಕಳೆಲ್ಲರಿಗೆ ನಿನ್ನಿಂದ ಹರಿಯುವ ನಿರಂತರ ಮಧುರ ಪ್ರೇಮಪ್ರವಾಹವನ್ನಾಗಿ ಮಾಡು. ನನ್ನ ದೇಹ, ಇಂದ್ರಿಯಗಳು, ಮನಸ್ಸನ್ನು ನಿನ್ನ ಅದ್ಭುತ ಲೀಲೆಗೆ ಬಳಸಿಕೊ. ಓ ಅಂತರ್ಗತ ಪ್ರೇಮವೆ! ಓ ಮಧುರ ಮೌನವೆ! ಓ ಅವಿನಾಶಿ ಸೌಂದರ್ಯವೆ! ನನ್ನ ಆತ್ಮವು ಎಂದೆಂದಿಗೂ ನಿನ್ನಲ್ಲಿ ಶಾಂತವಾಗಿ ವಿಶ್ರಮಿಸಲಿ.

ಓ ಆತ್ಮಪ್ರಕಾಶನಾಯಕನೆ! ಮೀನು ನೀರನ್ನು ಬಿಟ್ಟು ಬದುಕಲಾರದು. ಸೂರ್ಯಕಾಂತಿ ಪುಷ್ಪವು ಸೂರ್ಯನನ್ನು ಬಿಟ್ಟು ಜೀವಿಸಲಾರದು. ಪತಿವ್ರತೆಯು ತನ್ನ ಗಂಡನನ್ನು ಬಿಟ್ಟು ಬದುಕಲಾರಳು. ಮನಸ್ಸು ತನ್ನ ಪ್ರಾಣವನ್ನು ಬಿಟ್ಟು ಉಳಿಯಲಾರದು. ಹಣತೆಯಲ್ಲಿನ ದೀಪವು ಎಣ್ಣೆಯಿಲ್ಲದೆ ಉರಿಯಲಾರದು. ಹಾಗೆಯೇ ನಾನು ನಿನ್ನನ್ನು ಬಿಟ್ಟು ಬದುಕಲಾರೆ. ಓ ಪ್ರಾಣನಾಥ! ಬಾ, ಬಾ. ನನ್ನ ಹೃದಯಸಿಂಹಾಸನದಲ್ಲಿ ಕುಳಿತುಕೊ. ನನ್ನ ಪ್ರಾಣದ ಪ್ರಾಣವು ನೀನು. ನನ್ನ ಆತ್ಮದ ಆತ್ಮವಾಗಿರುವೆ.

ಜಯವಾಗಲಿ! ನಿನಗೆ ಜಯವಾಗಲಿ, ಹೇ ಕರುಣಾಪ್ರಭು! ಹೇ ವಿಶ್ವಾಧಾರನೆ! ಆದಿಪುರುಷನೆ! ಪೂರ್ಣಬ್ರಹ್ಮನೆ! ಪರಮಗುರುವೆ! ಬಾ. ನನ್ನನ್ನು ಅನುಗ್ರಹಿಸು. ಈಗಲೇ ನನಗೆ ನಿನ್ನ ದರ್ಶನವನ್ನು ಕೊಡು. ನಿನ್ನನ್ನು ಬಿಟ್ಟು ಬದುಕಲಾರೆನು, ನನ್ನ ಚಿತ್ತಕ್ಕೆ ಸಮಾಧಾನವಿಲ್ಲವು. ಎನ್ನ ಹೃದಯದೇಗುಲದಲ್ಲಿ ಸಿಂಹಾಸನಾರೂಢನಾಗು. ನಾನು ನಿನ್ನನ್ನೆ ಪೂರ್ಣವಾಗಿ ನಂಬಿರುವೆನು.

ಸರ್ವಭೂತ ಸಂರಕ್ಷಕನೆ! ಕಾಲವು ಓಡುತ್ತಿದೆ. ಇಂದ್ರಿಯಗಳು ವಿರೋಧಿಸುತ್ತಿವೆ. ಮನಸ್ಸು ಕುಣಿಯುತ್ತಿದೆ. ಮಾಯೆಯು ಭ್ರಾಂತಿಯನ್ನುಂಟುಮಾಡುತ್ತಿರುವಳು. ತಾಪತ್ರಯಗಳು ದಹಿಸುತ್ತಿವೆ. ಪಂಚಕ್ಲೇಶಗಳು ಹಿಂಸಿಸುತ್ತಿವೆ. ಮಿತ್ರರು ತೊಂದರೆಪಡಿಸುತ್ತಿರುವರು. ರೋಗಗಳು ಗೋಳುಗುಟ್ಟಿಸುತ್ತಿವೆ. ಬೇಸಿಗೆಯ ಬಿಸಿಲು ಸುಡುತ್ತಿದೆ. ನೊಣಗಳು, ಸೊಳ್ಳೆಗಳು, ತಿಗಣೆಗಳು, ಚೇಳುಗಳು ಪೀಡಿಸುತ್ತಿವೆ. ಜಗತ್ತಿನ ಆಕರ್ಷಣೆಗಳು ಆಸೆಯನ್ನುಂಟುಮಾಡುತ್ತಿವೆ. ನಾನು ಚಿತ್ತೈಕಾಗ್ರತೆಯಿಂದ ಧ್ಯಾನಮಾಡಲಾರೆ. ನಿನ್ನ ಶ್ರೇಷ್ಠವಾದ ಕೃಪೆಯಿಲ್ಲದೆ ಅಧ್ಯಾತ್ಮಮಾರ್ಗದಲ್ಲಿ ಅಡಿ

ಇಡಲಾರೆನು. ಹೇ ಪ್ರಭು ! ನೀನು ದಯಾಸಾಗರನು. ಕರುಣೆ ತೋರು. ಆ ದಯಾಸಾಗರದಿಂದ ನಾನು ಒಂದು ಹನಿಯನ್ನು ಪಡೆದರೆ ಅದು ಒಣಗಿ ಹೋಗುವುದೇನು ?

ಹೇ ಮುರಳೀಧಾರಿ ! ಈಗ ಬಾ. ಬೇಗ ಬಾ. ನಿನ್ನ ಸುಂದರವದನಾರವಿಂದವನ್ನು ತೋರು. ಹೇ ದೇವಕೀ ಪುತ್ರ, ನಾನು ನಿನ್ನನ್ನು ಹೇಗೆ ಸ್ವಾಗತಿಸಲಿ ? ಹಾಲಾಗಲಿ, ಮೊಸರಾಗಲಿ, ಬೆಣ್ಣೆಯಾಗಲಿ, ಈ ಭೂಮಿಯಲ್ಲಿ ಬೆಳೆದ ಕಂದಮೂಲ ಫಲಗಳಾಗಲೀ ಇಲ್ಲವು. ಫಲಪುಷ್ಪಗಳು ಅನ್ಯರ ಪಾಲಾಗಿವೆ. ದಯಮಾಡಿ ಶುಷ್ಕವಾದ ಈ ಶಾಖಾಹಾರವನ್ನೇ ಒಪ್ಪಿಸಿಕೊ. ಹೇ ಕೃಷ್ಣ, ಈಗ ಬಾ. ಈಗಲೇ ಬಾ.

ಓ ಬೃಂದಾವನ ಸ್ವಾಮಿ ; ದೇವಕೀನಂದ, ಭಕ್ತಾಶ್ರಯ ! ಈ ಪ್ರಾಣವು ದೇಹವನ್ನು ಬಿಡುವ ಮುನ್ನ ನಿನ್ನ ನಾಮವನ್ನು ಉಚ್ಚರಿಸುವಂತಾಗಲಿ. ನನ್ನ ಪ್ರಾಣವು ಬೃಂದಾವನದ ಯಮುನೆಯ ದಡದಲ್ಲೋ, ಹೃಷೀಕೇಶ ಅಥವ ಕಾಶಿಯಲ್ಲಿನ ಗಂಗಾ ತಟದಲ್ಲೋ ಹೋಗುವಂತಾಗಲಿ. ಗಾನದಿಂದ ತುಂಬಿರುವ ಮುರಳಿಯನ್ನು ಹಿಡಿದು ಶಿಖಿ ಪಿಂಛಧಾರಿಯಾಗಿ ನಿಲ್ಲು. ನಿನ್ನ ಆ ದಿವ್ಯಮಂಗಳ ರೂಪವನ್ನು ಧ್ಯಾನಿಸುತ್ತಾ ಪ್ರಾಣಬಿಡುವೆ. ನನ್ನನ್ನು ನಿನ್ನ ಮಧುರ ಮುರಳಿಯಾಗಿ ಮಾಡು. ನಿನ್ನ ಪಾದ ಪ್ರಾಂತದ ತುಳಸಿಯು, ಚರಣಾಮೃತವು ನನ್ನ ನಾಲಿಗೆಯಲ್ಲಿರುವಂತೆ ಮಾಡು. ನನ್ನ ಪ್ರಾಣವು ಅನಾಯಾಸವಾಗಿ ಹೋಗುವಂತೆ ಮಾಡು. ಈ ಭಯಂಕರ ಯಾತನೆಯಿಂದ ನನ್ನನ್ನು ತಪ್ಪಿಸು. ನನ್ನ ಉಸಿರು ಗಂಟಲನ್ನು ಸೇರಿದಾಗ ಯಾವ ರೋಗವೂ ಹಿಂಸಿಸದಿರಲಿ. ಓ ನನ್ನ ಪ್ರಾಣಪ್ರಭುವೆ, ಅಂತ್ಯಕಾಲದಲ್ಲಿ ಶೀಘ್ರವಾಗಿ ಬಾ. ಪ್ರೀತಿಯ ಕೃಷ್ಣಾ, ನನ್ನನ್ನು ಮರೆಯದಿರು ಇದೇ ನನ್ನ ಸಂತತ ಪ್ರಾರ್ಥನೆಯು. ಇದನ್ನು ಒಪ್ಪಿದರೆ ನಿನಗೇನು ನಷ್ಟವಿಲ್ಲವಲ್ಲ. ಇದು ನಿನ್ನ ಕರ್ತವ್ಯಗಳಲ್ಲಿ ಒಂದಲ್ಲವೆ ? ಹೇ ಸರ್ವದಯಾಪೂರ್ಣ ಭಗವನ್ ! ಇದೊಂದೇ ನನ್ನ ನಮ್ರ ಪಾರ್ಥನೆಯು. ಎಲ್ಲವೂ ನಿನ್ನ ಇಚ್ಛೆಗೆ ಸೇರಿದುದು. ನಿನ್ನ ಇಷ್ಟ ಬಂದಂತೆ ಮಾಡು. ನೀನು ಭಕ್ತವತ್ಸಲನೆಂಬುದೂ, ಭಕ್ತರಪ್ರೇಮಿಯೆಂದೂ, ಪತಿತ ಪಾವನನೆಂದೂ, ದೀನೋದ್ಧಾರಕನೆಂದೂ ನಾನು ಚೆನ್ನಾಗಿ ತಿಳಿದಿರುವೆನು. ಈಗಾಗಲೇ ನನ್ನ ಪ್ರೇಮಪಾಶದಿಂದ ಕಟ್ಟಲ್ಪಟ್ಟಿರುವೆ. ನಿಶ್ಚಯವಾಗಿ ಈಗ

ತಪ್ಪಿಸಿಕೊಳ್ಳಲಾರೆ. ನನ್ನ ಮಧುರ ಪ್ರಿಯತಮನೇ, ನೀನು ತಪ್ಪಿಸಿಕೊಳ್ಳುವೆಯಾ ?

ನಮ್ಮ ನಾಲಗೆಯು ನಿನ್ನ ಮಹಿಮೆಯನ್ನು ಕೊಂಡಾಡಲಿ; ನಮ್ಮ ಕಿವಿಗಳು ನಿನ್ನ ಅದ್ಭುತ ಲೀಲೆಗಳನ್ನು ಕೇಳುವಂತಾಗಲಿ; ನಮ್ಮ ಕೈಗಳು ನಿನ್ನ ಪಾದಗಳಿಗೆ ಪುಷ್ಪಗಳನ್ನು ಅರ್ಪಿಸುವಂತೆ ಮತ್ತು ಮಾನವ ಸೇವೆ ಮಾಡುವಂತಾಗಲಿ; ನಮ್ಮ ಮನಸ್ಸು ನಿನ್ನ ಸುಂದರ ರೂಪವನ್ನು ಧ್ಯಾನಿಸುವಂತಾಗಲಿ; ನಮ್ಮ ಕಣ್ಣುಗಳು ನಿನ್ನ ಪವಿತ್ರ ಪಾದವನ್ನೂ, ಸುಂದರ ಶ್ರೀಮುಖವನ್ನೂ ನೋಡುವಂತಾಗಲಿ; ನಮ್ಮ ಪಾದಗಳು ಪವಿತ್ರ ಸ್ಥಳಗಳಿಗೆ, ಸಾಧುಗಳ ನಿವಾಸಕ್ಕೆ ಹೋಗುವಂತಾಗಲಿ!

---



# ೧. ಸೃಷ್ಟಿಯೂ ಮತ್ತು ವಿಕಾಸವು

ಆದಿಯಲ್ಲಿ ಅದ್ವಿತೀಯವಾದ ಬ್ರಹ್ಮವೊಂದೇ ಆದ "ಸತ್" (ಎಂದರೆ ಬರಿಯ ಇರವಾಗಿರುವ ವಸ್ತು) ಆಗಿತ್ತು. ತಮಸ್ಸಿನ ಮೇಲೆ ತಮಸ್ಸು ಉರುಳುತ್ತಿರುವಾಗಲೂ 'ಸತ್' (ಚೈತನ್ಯ) — ಇರುವಿಕೆಯೊಂದೇ — ಇದ್ದಿತು. ಈ ವಿಶ್ವವು ಹೇಗೆ ಅಸ್ತಿತ್ವಕ್ಕೆ ಬಂದಿತು ಎಂಬುದನ್ನು ಯಾರೂ ಅರಿತಿಲ್ಲವು. "ಈ ಬಹುಪ್ರಕಾರದ ವಿಶ್ವವು ಯಾವಾಗ ಬಂದಿತು ಎಂಬುದನ್ನು ಇಲ್ಲಿ ಯಾರು ಹೇಳಬಲ್ಲರು? ಇಲ್ಲಿ ಯಾರು ಅರಿತುಕೊಂಡಿರುವರು? ದೇವತೆಗಳೂ ಸೃಷ್ಟಿಗೆ ಉತ್ತರಕಾಲೀನರಾಗಿರುವಾಗ, ಇದು ಯಾವಾಗ ಆಯಿತು ಎಂದು ಯಾರು ತಿಳಿಯುತ್ತಾರೆ?" ಎಂಬ ಮಂತ್ರವನ್ನು **ಋಗ್ವೇದ** (viii – ೧೨ – ೬) ದಲ್ಲಿ ನೀವು ನೋಡಬಹುದು.

ಹಿರಣ್ಯಗರ್ಭನು ಅಗ್ರಜನು. ಸೃಷ್ಟಿ ಸಂಬಂಧದ ದೃಷ್ಟಿಯಿಂದ ಭಗವಂತನಾದ ಬ್ರಹ್ಮವನ್ನೇ ಸೂತ್ರಾತ್ಮ ಅಥವ ಕಾರ್ಯಬ್ರಹ್ಮ ಎಂದು ಕರೆಯುವರು. ಸೂತ್ರಾತ್ಮನೆಂದರೆ ಸಮಷ್ಟಿ ವ್ಯಷ್ಟ್ಯಾತ್ಮಕನೆಂಬ ವಾಯುವು. ಹೂವಿನ ಹಾರದೊಳಗಿನ ದಾರದಂತೆ ಹಿರಣ್ಯಗರ್ಭನು ಸಕಲ ಜೀವರಾಶಿಗಳಲ್ಲಿರುವನು. ಆದ್ದರಿಂದ ಅವನಿಗೆ ಸೂತ್ರಾತ್ಮನೆಂದು ಹೆಸರು. "ಇದೆಲ್ಲವೂ ನನ್ನಲ್ಲಿ ದಾರದಲ್ಲಿ ರತ್ನಗಳ ಗುಂಪುಗಳಂತೆ ಪೋಣಿಸಲ್ಪಟ್ಟಿರುತ್ತದೆ" (**ಗೀತಾ ಅ. ೭. ಶ್ಲೋ. ೭**). ಹಿರಣ್ಯಗರ್ಭನೇ (effect) ಕಾರ್ಯಬ್ರಹ್ಮನು.

ಈಶ್ವರನು ಕಾರಣ (cause) ಬ್ರಹ್ಮನು. ಹಿರಣ್ಯಗರ್ಭನು ಈಶ್ವರನಿಂದಾದನು.

ಭಗವದಾಜ್ಞೆಯಂತೆ ಜಗತ್ತು ಶೂನ್ಯದಿಂದ (ಅಸತ್) ಸೃಷ್ಟಿಯಾಯಿತೆಂದು ಮತ್ತು ಪ್ರಲಯಕಾಲದಲ್ಲಿ ಶೂನ್ಯದಲ್ಲೇ ಲಯವಾಗುವುದೆಂದು ಕೆಲವರು ಹೇಳುವರು. 'ಶೂನ್ಯದಿಂದ ಶೂನ್ಯದ ಉತ್ಪತ್ತಿಯು' ಎಂಬ ಸೃಷ್ಟಿತತ್ವವನ್ನು ವಿಜ್ಞಾನಿಗಳು ಒಪ್ಪುವುದಿಲ್ಲ. ಅವರ ಹೇಳಿಕೆಯಂತೆ ಈಗ ಏನೇನು ಇರುವುದೋ ಅವು ಹಿಂದೆಯೂ ಇದ್ದವು ಮುಂದೆಯೂ ಒಂದಲ್ಲ ಒಂದು ರೀತಿಯಲ್ಲಿ ಇದ್ದೇ ಇರುವುದು. ಸಾಂಖ್ಯ ಶಾಸ್ತ್ರದಲ್ಲಿಯೂ "ಇರುವುದು ಇಲ್ಲದುದರಿಂದ ಬಂದಿರಲಾರದು". (ಸಾಂಖ್ಯಸೂತ್ರ 78). ಗೀತೆಯಲ್ಲಿ (ಅ. 2. ಶ್ಲೋ. 16). "ಅಸತ್ತಿಗೆ ಇರುವಿಕೆಯಿಲ್ಲ, ಸತ್ತಿಗೆ ಇಲ್ಲದಿರುವಿಕೆಯಿಲ್ಲ. ಇವೆರಡರ ನೆಲೆಯೂ ತತ್ತ್ವದರ್ಶಿಗಳಿಗೆ ಕಂಡುಬಂದಿರುತ್ತದೆ''. ಶೂನ್ಯ ಅಥವ ಅಭಾವದಿಂದ ಯಾವುದೊಂದೂ ಬರಲಾರದು. ಏನು ಬರಬೇಕಾದರೂ ಯಾವುದಾದರೊಂದು ಇರಲೇಬೇಕು.

ಅಜ್ಞವಾದ ಜಡವು ಜಗತ್ತಿನ ಸೃಷ್ಟಿಗೆ ಮೂಲಕಾರಣವಾಗಲಾರದು. ಸರ್ವಜ್ಞನೂ, ಸರ್ವಶಕ್ತನೂ ಆದ ಸರ್ವೇಶ್ವರನು ಮಾತ್ರ ಸುವ್ಯವಸ್ಥಿತವಾದ ವಿಶ್ವದ ಸೃಷ್ಟಿಗೆ ಕಾರಣನಾಗಬಲ್ಲನು.

ಕಾರ್ಯವು ಕಾರಣವನ್ನು ಬಿಟ್ಟು ಪ್ರತ್ಯೇಕವಾಗಿ ಇರಲಾರದು: ಕಾರ್ಯರೂಪವಾದ ಮಡಕೆಯು ಉಪಾದಾನ ಕಾರಣವಾದ ಮಣ್ಣನ್ನು ಬಿಟ್ಟು ತಾನೊಂದೇ ಇರಲಾರದು. ಹೀಗೆಯೇ ಜಗತ್ತು ತನ್ನ ಉಪಾದಾನ ಕಾರಣವಾದ ಬ್ರಹ್ಮವನ್ನು ಬಿಟ್ಟು ಎಂದಿಗೂ ಇರಲಾರದು. ಅದು ಸ್ವತಂತ್ರ ಇರುವಿಕೆಯನ್ನು (Independent existence) — ಸತ್ತಾವನ್ನು — ಹೊಂದಿಲ್ಲವು ಅದು ಬ್ರಹ್ಮದೊಡನೆ ಒಂದಾಗಿದೆ. ಬ್ರಹ್ಮವೊಂದೇ ಇರುವುದು. ಈ ಜಗತ್ತು ಕೇವಲ ತೋರಿಕೆಯು. ಬೆಳಕನ್ನು ತರುವುದರಿಂದ ಹಾವೆಂಬ ಭ್ರಾಂತಿಯು ತೊಲಗಿ ನಿಜವಾದ ಹಗ್ಗದ ಜ್ಞಾನ ಲಾಭವಾಗುವಂತೆ, ಆತ್ಮಜ್ಞಾನದಿಂದ ಜಗದ್ಭ್ರಾಂತಿಯು ತೊಲಗುವುದು.

ಈಶ್ವರನು ಸೃಷ್ಟಿಸುವೆನೆಂದು ಸಂಕಲ್ಪಿಸುವನು. ಅವನ ಪ್ರಭಾವಕ್ಕೆ ಒಳಪಟ್ಟ ಕಲೆಯ ಮೂಲಕ ಗುಣಗಳ ಸಮತೂಕವು ತಪ್ಪಿ ಕ್ಷೋಭಿತವಾಗುವುದು. ಕಲೆಯು ಈಶ್ವರನ ಒಂದು ಶಕ್ತಿಯು. ನಂತರ ಪ್ರಕೃತಿಯ ಸಾರ

(ರಸ) ವಾದ, ಸ್ವಭಾವದಿಂದ ಪರಿವರ್ತನೆಯುಂಟಾಗುವುದು (Transformation). ಮಹತ್ತತ್ತ್ವದ ಕ್ರಮವಿಕಾಸವು (development) ಕರ್ಮ ದಿಂದ ಅನುಸರಿಸಿ ಆಗುವುದು. ಮೂಲತಃ ಜಗತ್ತು ತಮಸ್ಸಿನಲ್ಲಿ ಆಚ್ಛಾದಿಸ ಲ್ಪಟ್ಟಿತ್ತು (enveloped). ಈಶ್ವರ ಅಥವ ಭಗವಂತನು ಸ್ವಯಮ್ ಅವ್ಯಕ್ತ (unmanifest) ನಾಗಿದ್ದರೂ, ಈ ವಿಶ್ವವು ಅನುಕ್ರಮವಾಗಿ ವ್ಯಕ್ತ ವಾಗುವಂತೆ ಮಾಡಿದನು. ಜಗತ್ತಿಗೆ ಮೂಲಾಧಾರನೂ, ಅವ್ಯಯನೂ ಆದ ಈಶ್ವರನು ತನ್ನ ಇಚ್ಛಾಶಕ್ತಿಯಿಂದ ಪ್ರಸಕ್ತ ಜಗತ್ತಿನ ರಚನೆಗೆ ಆವಶ್ಯಕ ಗಳಾದ ಪಂಚಭೂತಗಳು, ಮನಸ್ಸು, ಪ್ರಾಣ, ಪಂಚತನ್ಮಾತ್ರೆಗಳು, ಅಹಂಕಾರ, ಬುದ್ಧಿ ಮತ್ತು ಚತುರ್ವಿಂಶತಿ ತತ್ತ್ವಗಳು ಅನುಕ್ರಮವಾಗಿ, ಹಂತಹಂತವಾಗಿ ವಿಕಾಸವಾಗಲೆಂದು, ಪ್ರಧಾನವಾದ ತನ್ನ ಸಮತೂಕ ಸ್ಥಿತಿಯನ್ನು ಕೊಡವಿ ಬಿಡುವ ಹಾಗೆ ಪ್ರಕೃತಿಯನ್ನು ಪ್ರಚೋದಿಸಿದನು.

ಮೂಲಾಂಶವು (Element) ಸೂಕ್ಷ್ಮತರವಾದಷ್ಟೂ ಅದರ ಸಾಮ ರ್ಥ್ಯವು ಅಧಿಕತರವಾಗುವುದು. ಜಲವು ಪೃಥ್ವಿಗಿಂತಲೂ ಸಮರ್ಥವು. ಏಕೆಂದರೆ ಅದು ಪೃಥ್ವಿಗಿಂತಲೂ ಸೂಕ್ಷ್ಮವು. ಜಲವು ಪೃಥ್ವಿಯನ್ನು ಲಯ ಗೊಳಿಸುವುದು. ತೇಜಸ್ಸು ಜಲಕ್ಕಿಂತಲೂ ಸೂಕ್ಷ್ಮವಾದುದರಿಂದ ಜಲವನ್ನು ಬತ್ತಿಸುವುದು. ವಾಯುವು ತೇಜಸ್ಸಿಗಿಂತಲೂ ಸೂಕ್ಷ್ಮವಾದುದರಿಂದ, ತೇಜಸ್ಸನ್ನು ಅಡಗಿಸುವುದು. ಆಕಾಶವು (Ether) ವಾಯುವಿಗಿಂತ ಸೂಕ್ಷ್ಮವು. ಆದ್ದರಿಂದ ವಾಯುವು ತನಗಿಂತ ಸಮರ್ಥವಾದ ಆಕಾಶದಲ್ಲಿ ಅಡಗುವುದು. ಎಂದರೆ ಆಕಾಶವು ವಾಯುವಿಗೆ ಆಧಾರವು. ಆಕಾಶದಿಂದ ವಾಯುವು, ವಾಯುವಿನಿಂದ ತೇಜಸ್ಸೂ, ತೇಜಸ್ಸಿನಿಂದ ಜಲವೂ, ಜಲದಿಂದ ಪೃಥ್ವಿಯೂ ಹುಟ್ಟಿರುವುದು. ಹೀಗೆಯೇ ಮಹಾಪ್ರಲಯದಲ್ಲಿ ಪೃಥ್ವಿಯು ಜಲದಲ್ಲಿ ಐಕ್ಯವು. ಜಲವು ತೇಜಸ್ಸಿನಲ್ಲಿ, ತೇಜಸ್ಸು ವಾಯುವಿನಲ್ಲಿ ಮತ್ತು ವಾಯುವು ಆಕಾಶದಲ್ಲಿ ಲಯಗೊಳ್ಳುವುದು.

ಈಗ ಸ್ಥೂಲ ವಿಶ್ವದ ವಿಕಾಸವನ್ನು ವಿವರಿಸುವೆನು. ಪಂಚತನ್ಮಾತ್ರೆ ಗಳು ಎರಡು ಸಮಭಾಗಮಾಡಲ್ಪಡುವವು. ಒಂದು ತನ್ಮಾತ್ರೆಯ ½ ಭಾಗವು ಇತರ ತನ್ಮಾತ್ರೆಗಳ ⅛ ಅಂಶದೊಡನೆ ಬೆರೆಯಲ್ಪಟ್ಟು ಪಂಚಸ್ಥೂಲ ಭೂತ ಗಳಾದುವು. ಇದರಿಂದ ಪಂಚೀಕರಣವಾಯಿತು (Quintuplication).

ಪಂಚತನ್ಮಾತ್ರೆಗಳು ಪರಸ್ಪರ ಬೆರೆಯದೆ ತಮ್ಮ ಸ್ವೈಜ ಸ್ಥಿತಿಯಲ್ಲಿರುವಾಗ ಅಪಂಚೀಕರಣ (non-Quintuplicated) ವೆಂದು ಕರೆಯಲ್ಪಡುವವು. ಇಡೀ ವಿಶ್ವವು, ಉದ್ಭಿಜ (Seed-born), ಸ್ವೇದಜ (born of sweat), ಅಂಡಜ (oviparous) ಮತ್ತು ಜರಾಯುಜ (viviparous), ಎಂಬ ನಾಲ್ಕು ವಿಧ ಸ್ಥೂಲರೂಪಿಗಳೂ ಹಾಗೂ ಸುಖರೂಪದ ಸರ್ವವಸ್ತುಗಳೂ ಪಂಚೀಕರಣ ದಿಂದಾಗಿವೆ. ಮನುಷ್ಯ ಶರೀರಗಳು ಅನ್ನಮಯಕೋಶದಿಂದಾಗುವವು. ಜೀವನು ಈ ದೇಹದಿಂದ ಜಾಗೃತ್ತನ್ನು ಅನುಭವಿಸುವನು.

ಪಂಚೀಕರಣ ವ್ಯವಸ್ಥೆಯ ರೀತಿಯು ಹೀಗಿದೆ: ಪಂಚ ತನ್ಮಾತ್ರೆಗಳಾದ (rudimentary elements) ಪೃಥ್ವಿ, ಅಪ್, ತೇಜಸ್, ವಾಯು, ಆಕಾಶದಲ್ಲಿ ಪ್ರತಿಯೊಂದೂ ಎರಡಾಗಿ ವಿಭಜಿಸಲ್ಪಡುವುದು. ನಂತರ ಪ್ರತಿ ತನ್ಮಾತ್ರೆಯ ½ ಭಾಗವು ಇತರ ನಾಲ್ಕು ಮಾತ್ರೆಗಳ ಪ್ರತಿ ⅛ ಭಾಗದೊಡನೆ ಬೆರೆತು ಸ್ಥೂಲ ಭೂತರೂಪವನ್ನು ತಾಳುವುದು. ಆಗ ಸ್ಥೂಲ ಬ್ರಹ್ಮಾಂಡವು ಮತ್ತು ಭೌತ ಶರೀರಗಳೂ ರೂಪುಗೊಳ್ಳುವವು.

ಇನ್ನು ಸೂಕ್ಷ್ಮ ಜಗತ್ತಿನ ವಿಕಾಸವನ್ನು ವಿವರಿಸುವೆನು. ಈಶ್ವರನು ಇಚ್ಛಿಸಿದನು. ತಮೋಗುಣವು ಆವರಣ ಶಕ್ತಿ (veiling power) ಮತ್ತು ವಿಕ್ಷೇಪ ಶಕ್ತಿ (projecting power) ಎಂದು ಇಬ್ಭಾಗವಾಯಿತು. ಈ ಆವರಣ ಶಕ್ತಿಯ ನಿಮಿತ್ತ ಜೀವನು ತನ್ನ ಸಚ್ಚಿದಾನಂದ ಸ್ವರೂಪ ವನ್ನು ಅರಿಯಲು ಅಸಮರ್ಥನಾಗಿರುವನು. ಅವನು ಪಂಚಕೋಶಗಳಲ್ಲವು (Sheathes). ವಿಶ್ವಗಳನ್ನು ಹೊರಕ್ಕೆ ಚಿಮ್ಮುತ್ತಿರುವುದು ವಿಕ್ಷೇಪ ಶಕ್ತಿಯು. ವಿಕ್ಷೇಪ ಶಕ್ತಿಯಿಂದ ಸೂಕ್ಷ್ಮಾಕಾಶವುಂಟಾಯಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಆಪವು, ಆಪದಿಂದ ಪೃಥ್ವಿಯೂ ಉಂಟಾದವು. ಅಪಂಚೀಕರಣವಾದ ಈ ಸೂಕ್ಷ್ಮ ಪಂಚತನ್ಮಾತ್ರೆಗಳನ್ನು, ಮೂಲಭೂತಗಳೆಂದು (root-elements) ಕರೆಯುವರು. ಇವು ತ್ರಿಗುಣಾ ತ್ಮಕವು ಎಂದರೆ ಸತ್ವ, ರಜಸ್ ಮತ್ತು ತಮಸ್‌ನಿಂದ ಕೂಡಿರುವವು. ಆಕಾಶದ ಸತ್ವಾಂಶದಿಂದ ಶ್ರೋತ್ರೇಂದ್ರಿಯವು (ear), ವಾಯುವಿನಿಂದ ಸ್ಪರ್ಶೇಂದ್ರಿಯವು (skin), ಅಗ್ನಿಯಿಂದ ನಯನೇಂದ್ರಿಯವು (eye ರೂಪ) ಜಲದಿಂದ ರಸನೇಂದ್ರಿಯವು (tongue) ಮತ್ತು ಪೃಥ್ವಿಯಿಂದ ಘ್ರಾಣೇಂದ್ರಿ

ಯವು (nose) ಆದುವು. ಈ ಪಂಚೇಂದ್ರಿಯಗಳ, ಪಂಚತನ್ಮಾತ್ರೆಗಳ ಪೂರ್ಣವಾದ ' ಸತ್ವ ' ದ ಅಂಶದಿಂದ ಅಂತಃಕರಣಚತುಷ್ಟಯವಾಯಿತು. ಮನಸ್, ಬುದ್ಧಿ, ಅಹಂಕಾರ ಮತ್ತು ಚಿತ್ತ ಎಂದು ಅಂತಃಕರಣಗಳು ನಾಲ್ಕು. ಮನಸ್ಸಿಗೆ ತಕ್ಕಂತೆ ಚಿತ್ತವೂ ಬುದ್ಧಿಗೆ ತಕ್ಕಂತೆ ಅಹಂಕಾರವೂ ಬರುವುದು.

ಸಾಂಖ್ಯಶಾಸ್ತ್ರದ ಪ್ರವರ್ತಕರಾದ ಕಪಿಲ ಮುನಿಗಳ ಪ್ರಕಾರ ಸತ್ವ, ರಜಸ್, ತಮಸ್ ಎಂಬ ತ್ರಿಗುಣಾತ್ಮಕ ಪ್ರಕೃತಿಯು ಜಗತ್ಕಾರಣವು. ನ್ಯಾಯಶಾಸ್ತ್ರದಂತೆ ' ನಿತ್ಯಜ್ಞಾನ ಇಚ್ಛಾಪ್ರಯತ್ನವೆನಿಸಿದ ಈಶ್ವರನು ಈ ಜಗತ್ತಿನ ನಿಮಿತ್ತ ಕಾರಣನು (Efficient cause). ಕಣಾದನ ಅನುಯಾಯಿಗಳಾದ ವೈಶೇಷಿಕರ ಮತದಂತೆ ಪರಮಾಣುಗಳು ಉಪಾದಾನ ಕಾರಣಗಳು (material cause). ಪತಂಜಲಿಯ ಯೋಗಶಾಸ್ತ್ರದಂತೆ ಯಾವನನ್ನು ಕ್ಲೇಷ, ಕರ್ಮ, ವಿಪಾಕ, ಆಶಯಗಳು ಮುಟ್ಟಲಾರವೋ ಆ ವಿಶೇಷ ಪುರುಷನು (ಈಶ್ವರ) ಈ ಜಗತ್ತಿನ ನಿಮಿತ್ತ ಕಾರಣನು. ಮೀಮಾಂಸ ಶಾಸ್ತ್ರ ಪ್ರವರ್ತಕ ಜೈಮಿನಿಯ ಪ್ರಕಾರ ಕರ್ಮವೇ (ಧರ್ಮಾಧರ್ಮಗಳು) ಕಾರಣವು. ಮಾಯೆಯಲ್ಲಿ ಪ್ರತಿಬಿಂಬಿತವಾದ ಶುದ್ಧ ಚೈತನ್ಯವು ಈಶ್ವರನು ಎನ್ನುವುದು ವೇದಾಂತವು. ಈ ಜಗತ್ತಿಗೆ ಮಾಯಾಸಹಿತ ಚೈತನ್ಯವೇ ಅಭಿನ್ನ ನಿಮಿತ್ತೋಪಾದಾನ ಕಾರಣವು.

ಇವೆಲ್ಲದರ ಮೂಲವು ' ಕಾಲ ' ಎಂದು ಕಾಲವಾದಿಗಳು ಹೇಳುತ್ತಾರೆ. ಕಾಲವೇ ಎಲ್ಲವೂ ಆಗಿದೆ. ಕಾಲವೇ ದೇವರು. ಕಾಲವು ನಿಜವಾಗಿಯು ಜಗತ್ತಿನ ಮೂಲವು. ಪುನಃ ಕಾಲವೇ ತನಗೆ ಇಚ್ಛೆ ಬಂದಾಗ ಇವೆಲ್ಲವನ್ನೂ ಹಿಂದಕ್ಕೆಳೆದುಕೊಳ್ಳಬಹುದು (ಲಯ). ಆದರೆ ಕಾಲವು ಜಡವು. ನಿತ್ಯತೆಯಲ್ಲಿ ಕಾಲವು ಕೇವಲ ಒಂದು ಹನಿಯು. ಬ್ರಹ್ಮವೊಂದೇ ನಿತ್ಯವು.

ವಿಜ್ಞಾನವೊಂದೇ ಇರುವುದೆಂದು ಕ್ಷಣಿಕ ವಿಜ್ಞಾನಿಯು ಹೇಳುವನು. ಜಗತ್ತು ಕೇವಲ ಭಾವನಾಮಾತ್ರವು. ಆ ಭಾವನೆಯೇ (Idea) ವಸ್ತುಗಳಾಗಿರುವಂತೆ ತೋರಿಕೊಳ್ಳುವುದು. ಆದರೆ ಶೂನ್ಯವಾದಿಗಳು ವಸ್ತುಗಳನ್ನು ಹಾಗೂ ವಿಜ್ಞಾನವನ್ನು ಪೂರ್ಣವಾಗಿ ಅಲ್ಲಗಳೆಯುವರು.

ಪೃಥ್ವಿ, ಅಪ್, ತೇಜಸ್ ಎಂಬ ಭೂತತ್ರಯಗಳು ಮೂರ್ತ (with form) ವೆನ್ನಿಸುವವು. ವಾಯು ಮತ್ತು ಆಕಾಶವು (ether) ಅಮೂರ್ತ (formless) ವೆನ್ನಿಸುವುದು.

ಬೇಸಿಗೆಯ ಬಿಸಿಲಿನ ತಾಪದಿಂದ ಭೂಮಿಯು ಕಮರಿಹೋಗುವುದು (scarched). ಭೂಮಿಯು ಪಾಳುಬೀಳುವುದು, ಆದರೆ ಸಸ್ಯಗಳ ಮೂಲವು ಭೂತಲದಲ್ಲಿ ಅಡಗಿರುವವು. ವರ್ಷಾಕಾಲದಲ್ಲಿ ಎಲ್ಲ ಬೇರುಗಳು ಮೊಳೆತು ಪೂರ್ಣಶಕ್ತಿಯಿಂದ ಹೊರ ತೋರಿಕೊಳ್ಳುವವು. ಹೀಗೆಯೇ ಹಿಂದಿನ ಸೃಷ್ಟಿಯು ಪ್ರಲಯಾಗ್ನಿಯಿಂದ ಸುಡಲ್ಪಟಾಗ ಸಂಸಾರಕ್ಕೆ ಕಾರಣವಾದ ವೃಕ್ಷದ ಮೂಲಗಳು ಅವ್ಯಕ್ತಂ ಅಥವ ಪ್ರಕೃತಿಯಲ್ಲಿ ಅಂತರ್ಗತವಾಗಿ ಉಳಿಯುವವು. ಮತ್ತೆ ಕಲ್ಪಾರಂಭದಲ್ಲಿ, ಮೂಲಗಳು ಪುನಃ ಮೊಳೆತು, ಸೃಷ್ಟಿಯು ಆರಂಭವಾಗುವುದು ಮತ್ತು ಸಮಸ್ತ ವಿಶ್ವವು ಅಭಿವ್ಯಕ್ತ ವಾಗುವುದು.

ಸೃಷ್ಟಿಯು ಯುಗಪತ್ ಸೃಷ್ಟಿ ಮತ್ತು ಕರ್ಮ ಸೃಷ್ಟಿ ಎಂದು ಎರಡು ವಿಧವು. ಯುಗಪತ್ ಸೃಷ್ಟಿಯಲ್ಲಿ ಪಂಚಭೂತಗಳು, ಮಹತ್, ಅಹಂಕಾರ ಮುಂತಾದವು, ಮತ್ತು ವಿಶ್ವದ ಇತರವಸ್ತುಗಳು ಏಕಕಾಲದಲ್ಲಿ ಸ್ಥಿತಿರೂಪಕ್ಕೆ ಬರುವವು. ಕರ್ಮಸೃಷ್ಟಿಯಲ್ಲಿ ತನ್ಮಾತ್ರೆಗಳು ಒಂದಾದಮೇಲೆ ಒಂದರಂತೆ ಬರುವವು. ಅವ್ಯಕ್ತದಿಂದ ಮಹತ್, ಮಹತ್‌ನಿಂದ ಅಹಂಕಾರ ಬರುವಂತೆ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಜಲವು, ಜಲದಿಂದಿ ಪೃಥ್ವಿಯೂ ಹುಟ್ಟುವವು. ಹೀಗೆ ಸೃಷ್ಟಿಯಲ್ಲಿ ಅನುಪೂರ್ವಿಯು (succession) ಇರುವದು.

ಶ್ರೀ ವಸಿಷ್ಠರು ಶ್ರೀರಾಮನಿಗೆ, " ಒಂದು ಕಾಲದಲ್ಲಿ ಶಿವನು ಎಲ್ಲವನ್ನೂ ಸೃಷ್ಟಿಸುವನು. ಇನ್ನೊಂದು ಕಾಲದಲ್ಲಿ ಬ್ರಹ್ಮನು, ಮತ್ತೊಂದು ಕಾಲದಲ್ಲಿ ವಿಷ್ಣುವು, ನಂತರ ಮುನಿಗಳೂ ಈ ವಿಶ್ವವನ್ನು ಸೃಷ್ಟಿಸುವರು. ಕೆಲವು ಸಲ ಬ್ರಹ್ಮನು ಕಮಲದಲ್ಲಿ, ಕೆಲವೊಮ್ಮೆ ಜಲದಲ್ಲಿ ಮತ್ತೆ ಐಹಿಕಾಮುಷ್ಮಿಕದಲ್ಲಿ, ಕೆಲವುವೇಳೆ ಆಕಾಶದಲ್ಲಿ ಉದ್ಭವಿಸುವನು. ಒಂದು ಸೃಷ್ಟಿಯಲ್ಲಿ ಜಗತ್ತಿನ ತುಂಬ ಪ್ರಬಲವಾದ ಸಸ್ಯಗಳು ಇರುವವು. ಇನ್ನೊಮ್ಮೆ ಭೂಮಿಯು ಮಾತ್ರ. ಮತ್ತೊಮ್ಮೆ ಕೇವಲ ಕಲ್ಲುಗಳಿದ್ದರೆ, ಮಗದೊಮ್ಮೆ ಮಾಂಸಮಯವು

ಅಥವಾ ಸುವರ್ಣ ಪೂರ್ಣವಾಗಿರುವುದು. ಹೀಗೆ, ಸೃಷ್ಟಿಯು ಸಾಮ್ಯವಿಲ್ಲದೆ (diverse) ಇರುವುದು. ಪಂಚಭೂತಗಳಲ್ಲಿ ಒಂದೊಂದು ಭೂತವು ಒಂದೊಂದು ಸೃಷ್ಟಿಯಲ್ಲಿ ಪ್ರಧಾನವಾಗಿರುವುದು. ಇಲ್ಲಿ ಬ್ರಹ್ಮದಿಂದಾದ ಒಂದು ಸೃಷ್ಟಿಯನ್ನು ಮಾತ್ರ ವಿವರಿಸಿರುವೆನು. ಯುಗಯುಗಗಳಲ್ಲಿ ಜಗದ್ವಿಕಾಸವು ವೈವಿಧ್ಯವಾಗಿರುವುವು. ಕೃತಾದಿ ಯುಗಗಳು ಪುನಃ ಪುನಃ ತೋರಿಕೊಳ್ಳುವುವು. ಹೀಗೆ ಜಗತ್ತಿನಲ್ಲಿ ಪುನರಾವರ್ತನೆಯ ಸುಳಿಗೆ ಸಿಲುಕದ ವಸ್ತುವೇ ಇಲ್ಲವು" ಎಂದು ಹೇಳಿದರು.

ಜಾಜ್ವಲ್ಯಮಾನವಾದ ಅಗ್ನಿಯಿಂದ ಹೊರಬರುವ ಸಹಸ್ರಾರು ಸ್ಫುಲಿಂಗಗಳಂತೆ (sparks) ಅವಿನಾಶಿಯಾದ (imperishable) ಬ್ರಹ್ಮದಿಂದ ವಿವಿಧ ಜೀವರಾಶಿಗಳು ಹುಟ್ಟಿ ಮತ್ತೆ ಬ್ರಹ್ಮದಲ್ಲೇ ಅಡಗುವವು.

"ಹೇಗೆ ಊರ್ಣನಾಭಿಯು (spider) ದಾರವಾಗಿ ಮುಂದುವರೆಯುವದೋ, ಬೆಂಕಿಯಿಂದ ಸಣ್ಣಕಿಡಿಗಳು ಸಿಡಿಯುವವೋ, ಹಾಗೆಯೇ ಈ ಏಕಾತ್ಮನಿಂದ ಎಲ್ಲಾ ಪ್ರಾಣಿಗಳೂ, ಲೋಕಗಳೂ, ದೇವತೆಗಳೂ ಮತ್ತು ಎಲ್ಲಾ ಭೂತಗಳೂ ಸಿಡಿಯುತ್ತವೆ" (proceed) ಎಂದು ಬೃಹದಾರಣ್ಯಕ (೨. ೧. ೨೦) ಉಪನಿಷತ್ತು ಹೇಳುವದು.

ಗೀ ॥ ಶ್ಲೋ ॥ ಅವಿನಾಶಿತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥

"ಯಾವುದರಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೋ ಅದು ನಾಶವಾಗತಕ್ಕದ್ದಲ್ಲ ಎಂದು ಅರಿತುಕೊ. ಅವ್ಯಯವಾಗಿರುವ ಈ ಬ್ರಹ್ಮದ ನಾಶವನ್ನು ಯಾವನೂ ಮಾಡಲಾರನು" (ಗೀತಾ. ೨. ೧೭) ಎಂದು ಶ್ರೀ ಕೃಷ್ಣನು ಉಪದೇಶಿಸಿರುವನು.

ವಿಶ್ವವು ಯಾವ ಅವಸ್ಥೆಯಲ್ಲಿಯೂ (stages) ಬ್ರಹ್ಮಕ್ಕಿಂತ ಭಿನ್ನವಾಗಿಲ್ಲವು. ತೃಣವು ಪೃಥ್ವಿಯಿಂದಲೇ ಜನಿಸಿ, ಪೃಥ್ವಿಯಲ್ಲೇ ಲಯವಾಗುವಂತೆ, ಈ ವಿಶ್ವವು ಬ್ರಹ್ಮದಿಂದ ಹೊರತೋರಿ, ಬ್ರಹ್ಮದಲ್ಲೇ ವಿರಮಿಸುವುದು. ಆತ್ಮನು ಸಮರೂಪನು (homogeneous). ಕೃತಿಯು (world) ವೈವಿಧ್ಯಮಯವು (heterogeneous). ಆತ್ಮನು ಅದ್ವಿತೀಯನು (secondless). ತೋರಿಕೆಯು ಬಹುರೂಪವು. ಏಕವು ಅನೇಕವಾಗಿ ತೋರುವುದು. ನಿಜ

ವಾಗಿರುವುದು ಅದ್ವೈತವೇ. ಒಂದಕ್ಕಿಂತ ಬೇರೆಯಾದುದು ಮಿಥ್ಯವು (unreal) ಮತ್ತು ಭ್ರಾಂತಿಯು (illusory).

ಪ್ರಬಲ ದೂರದರ್ಶಕದ ಮೂಲಕ ಚಂದ್ರನನ್ನು ಕೇವಲ ೭೫ ಮೈಲಿ ಅಂತರದಲ್ಲಿ ನೋಡಬಹುದು. ೨೦,೦೦೦ ಅಡಿಗಳೆತ್ತರದ ಪರ್ವತ ಪಙ್ತಿ ಗಳ ಛಾಯಾ ಚಿತ್ರವನ್ನು ಛಾಯಾಗ್ರಾಹಿಯಿಂದ (photographic camera) ತೆಗೆಯಬಹುದು. ಇತರ ಗ್ರಹಗಳ ಉಷ್ಣತೆಯನ್ನು ನಿಷ್ಕೃಷ್ಟ ವಾಗಿ ಬರೆಯಬಹುದು. ಈ ಬಗೆಯ ಪ್ರಯೋಗಗಳು ಕುತೂಹಲಕಾರಿಯು. ಖಗೋಳ ಶಾಸ್ತ್ರದ ಅಧ್ಯಯನವು ಮತ್ತು ಪ್ರಾಯೋಗಿಕ ಅವಲೋಕನವು ಸ್ಫೂರ್ತಿದಾಯಕವು. ಅವು ಜಿಜ್ಞಾಸುವನ್ನು ಭಗವಂತ ಅಥವ ಸೃಷ್ಟಿಕರ್ತನ ಸಮೀಪಕ್ಕೆ ಕರೆದೊಯ್ಯುವವು. ಇದಕ್ಕೂ ಪ್ರಭಾವಿತವಾದ ವಿಷಯವೆಂದರೆ ಆತ್ಮದ ಅಥವ ಬ್ರಹ್ಮದ (highest self) ಅರಿವು ಅನುಪಮವಾದುದು.

ಎಲ್ಲ ಗ್ರಹ, ಉಪಗ್ರಹ ಮತ್ತು ತಾರೆಗಳು ಆ ಆತ್ಮದಲ್ಲಿಯೇ ಅದ್ಭುತ ವಾಗಿ ತೇಲಾಡುತ್ತಿವೆ. ಅಥವಾ ಚಲಿಸುತ್ತಿವೆ. ಆತನೇ ಇಡೀ ಸೌರವ್ಯೂಹದ ಯೋನಿಯು (womb) ಅಥವಾ ಜನ್ಮಸ್ಥಾನವು (source). ಆ ದೇವಾಧಿ ದೇವನಿಗೆ ಜಯವಾಗಲಿ! ಜಯವಾಗಲಿ!

ನಿನಗೆ ಆತ್ಮಜ್ಞಾನವು ಲಭಿಸಿದರೆ ಈ ವ್ಯಕ್ತ ಪ್ರಪಂಚದ ಸೃಷ್ಟಿಯ ರಹಸ್ಯಗಳ ಬಗ್ಗೆ ಬರುವ ಕುತೂಹಲಗಳು ಅಸ್ತಮಿಸುವವು. ಈ ವಿಶ್ವವು ಏಕೆ ಮತ್ತು ಹೇಗೆ ಉಂಟಾಯಿತೆಂಬುದು ನಿನಗೆ ಸ್ಪಷ್ಟವಾಗಿ ಅರಿಯುವುದು. ವಸ್ತುಗಳ ರಚನಾ ವಿನ್ಯಾಸದ ವೈಖರಿಯ ಉದ್ದೇಶವು ನಿಸ್ಸಂಶಯವಾಗುವುದು. ಅಂಗೈಯೊಳಗಣ ಸೇಬಿನ ಹಣ್ಣಿನಂತೆ ಎಲ್ಲ ಪಾರಮಾರ್ಥಿಕ (transcendental) ವಿಷಯಗಳು ಗೋಚರವಾಗುವವು.

ಜಗತ್ತು ಹೊರತೋರುವ ಮೊದಲು ಬ್ರಹ್ಮದಲ್ಲಿ ಸ್ಪಂದನ (vibration) ವಾಯಿತು. ಇದನ್ನು ಬ್ರಹ್ಮದ ಸಂಕಲ್ಪ ಎನ್ನುವರು. "ಏಕೋಽಹಂ ಬಹುಸ್ಯಾಂ" — ನಾನು ಒಂದೇ ಆಗಿರುವೆನು, ಅನೇಕವಾಗುವೆನು ಎಂದು (ಅವನು ಇಚ್ಛಿಸಿದನು ಅಥವಾ ಸಂಕಲ್ಪಿಸಿದನು). ಭೂಮಿಯಲ್ಲಿನ ಬೀಜವು ನೀರಿನ ಸಂಪರ್ಕದಿಂದ ಉಬ್ಬುವಂತೆ—ಎಂಬುದಕ್ಕೆ ಈ ಸ್ಪಂದನವು ಹೊಂದಾ ಣಿಕೆಯು. ನಂತರ ಇಡೀ ವಿಶ್ವವೇ ವಿಕಾಸವಾಯಿತು.

ಅಚಿಂತ್ಯವಾದ ಈ ವಿಶ್ವವನ್ನು ತ್ರಿಗುಣಾತ್ಮಕವಾದ ತನ್ನ ಮಾಯಾ ಶಕ್ತಿಯಿಂದ ಕೇವಲ ಲೀಲೆಗಾಗಿ ಬ್ರಹ್ಮನು ಸೃಷ್ಟಿಸುವನು. ಆದರೆ ಈ ಕ್ರಿಯೆಗಳು ಕಿಂಚಿತ್ತೂ ಅವನನ್ನು ಸ್ಪರ್ಶಿಸಲಾರವು. ಆಕಾಶದಂತೆ ಅಸಂಗನೂ, ಹಾಗೂ ನಿರ್ಲಿಪ್ತನು. ಸಾಗರದಲ್ಲಿನ ಮರದ ದಿಮ್ಮಿಯಂತೆ ಅವನಲ್ಲಿ ಈ ವಿಶ್ವವು ತೇಲಾಡುವುದು.

ಅತ್ಯಂತ ಸಾಮಾನ್ಯವಾದ ಮಾಯಾವಿಯು ಮಾವಿನ ಹಣ್ಣುಗಳನ್ನು, ಹಣವನ್ನು, ಸಿಹಿತಿಂಡಿಗಳನ್ನು, ಕಾಲ್ಪನಿಕ ಭವನಗಳನ್ನು ಇಂದ್ರಜಾಲ ಅಥವಾ ಸಮ್ಮೋಹನ ವಿದ್ಯೆಯಿಂದ ತೋರಿಸಬಹುದಾದರೆ ಸರ್ವಜ್ಞನೂ (omniscient), ಸರ್ವ ಶಕ್ತಿವಂತನೂ (omnipotent) ಆದ ಭಗವಂತನು ಕೇವಲ, ತನ್ನ ಲೀಲೆಗಾಗಿ ಈ ಅಲ್ಪವಾದ ಜಗತ್ತನ್ನು ಸೃಷ್ಟಿಸಲಾರನೆ? ಮರ್ತ್ಯನಾದ ರಾಜನೇ ತನ್ನ ಅರಮನೆಯನ್ನು ವೀರೋಪಕರಣಗಳು, ಚಿತ್ರಗಳು, ಅಪೂರ್ವ ವಸ್ತುಗಳು, ಜಲಬುಗ್ಗೆಗಳು ಮತ್ತು ಉಪವನಗಳಿಂದ ಅಲಂಕರಿಸುವಾಗ ಭಗವಂತನು ಈ ವಿಶ್ವವನ್ನು ಸುಂದರ ಭೂ ದೃಶ್ಯಗಳಿಂದ, ಥಳಥಳಿಸುವ ಸೂರ್ಯ, ಚಂದ್ರ ತಾರಾವಳಿಗಳಿಂದ ಮಹತ್ತಾದ ನದೀ, ಸಾಗರಗಳಿಂದ ಸಜ್ಜುಗೊಳಿಸಲಾರನೆ ?

ಸ್ವಪ್ನಕಾಲದಲ್ಲಿ ನೀವು ಅಸಂಖ್ಯಾತ ಚಿತ್ರಗಳನ್ನು ಕಲ್ಪಿಸಿ ಬೆಳಕು, ಪ್ರಾಣಿಗಳನ್ನು ಸೃಷ್ಟಿಸಬಲ್ಲಿರಾದರೆ, ಭಗವಂತನು ಸರ್ವ ಶಕ್ತಿಯನ್ನು ಸರ್ವಜ್ಞತ್ವವನ್ನೂ ಹೊಂದಿರಲಾರನೆ ?

ಹಾರ್ಲೆ ಸ್ಟ್ರೀಟಿನ ಸುಪ್ರಸಿದ್ಧ ಸಂಶೋಧಕ ಪ್ರೊಫೆಸರ್ ಎ. ಎಂ. ಲೋ ಅವರು, ಕಂಡುಹಿಡಿದಿರುವ ದ್ರವವು ಗರ್ಭಸ್ಥ ಶಿಶುವಿನ ಲಿಂಗನಿರ್ಧಾರಣೆ ಮಾಡುವುದು. ಅವರು ಪ್ರಯೋಗಗಳಿಂದ ಶೇ ೯೦ ರಷ್ಟು ಜಯಶೀಲರಾಗಿರುವುದಾಗಿ ಸಾಧಿಸುವರು. ಎಲ್ಲ ಮಾತಾ ಪಿತೃಗಳೂ, ಸ್ತ್ರೀ ಅಥವ ಪುಂಪ್ರತ್ಯುತ್ಪಾದಕ ಪ್ರವೃತ್ತಿಯನ್ನು ಹೊಂದಿರುವುದಾಗಿ ಅವರು ಸಿದ್ಧಾಂತ ಮಾಡಿದ್ದಾರೆ. ಆ ಪ್ರಕಾರ ಅವರು ಕಂಡುಹಿಡಿದಿರುವ ದ್ರವ್ಯವು ಸ್ತ್ರೀ ಪುರುಷರ ಪ್ರವೃತ್ತಿಗಳನ್ನನುಸರಿಸಿ ಹೆಣ್ಣು ಅಥವ ಗಂಡು ಶಿಶುವಿನ ಹುಟ್ಟನ್ನು ಖಚಿತಗೊಳಿಸುವುದು. ಈ ಸಂಶೋಧನೆಗಳು ನಿಜಕ್ಕೂ ಆಶ್ಚರ್ಯಕರವು. ಸಂಶೋಧನೆಗಳು, ನಿರ್ಮಾಣಗಳು, ಸಿದ್ಧಾಂತಗಳು, ಊಹಾ ಪ್ರತಿಜ್ಞೆಗಳು (hypothesis)

ವಿಜ್ಞಾನಿಯ ಶಕ್ತಿ ಹಾಗೂ ಪ್ರಾಣದ ಮೂಲವು, ವಿಶ್ವಶಕ್ತಿಯ ಮೂಲಾಧಾರವೂ ಆದ ನಿತ್ಯವಾದ ಆತ್ಮವು. ಇನ್ನೂ ಆಶ್ಚರ್ಯವಾದುದೆಂದರೆ ಅತಿಶಯೋಕ್ತಿಯಲ್ಲವು. ವಿಜ್ಞಾನಿಯು ತನ್ನ ನಿತ್ಯಾತ್ಮದ ಬೆಳಕಿನಿಂದಲೇ ಪ್ರಯೋಗಶಾಲೆಯಲ್ಲಿ ದುಡಿಯಬಲ್ಲನು. ಈ ಆತ್ಮನಿಲ್ಲದೆ ಅವನ ಮನಸ್ಸು ಉದ್ಯಮಿಸಲಾರದು, ಕಣ್ಣುಗಳು ನೋಡಲಾರವು. ಈ ಆತ್ಮವು ಮನಸ್ಸಿನ ಮನಸ್ಸು, ಪ್ರಾಣದ ಪ್ರಾಣವು, ಕಿವಿಗಳ ಕಿವಿಯು, ಕಣ್ಣುಗಳ ಕಣ್ಣು. ಪ್ರೊಫೆಸರ್ ಲೋ ಅವರು ಈ ನಿತ್ಯಾತ್ಮನನ್ನು ಕಂಡುಕೊಳ್ಳುವಂತಾಗಲಿ.

ಉಪನಿಷತ್ತುಗಳು ಅಥವ ಶೃತಿಗಳು ಪ್ರಮಾಣಗಳು. ಅವು ನಿನ್ನ ಮಾರ್ಗದರ್ಶಕವು, ಸ್ಫೂರ್ತಿದಾಯಕವು ಮತ್ತು ಉದ್ಧಾರಕವು (elevate). ಅವುಗಳ ಉಪದೇಶಗಳಲ್ಲಿ ಅವಿಚಲವಾದ ಶ್ರದ್ಧೆಯನ್ನು ಹೊಂದಿರಿ. ಆಗ ಮಾತ್ರ ಸಾವು ಅಥವ ಮಾಯೆಯ ಹಿಡಿತದಿಂದ (clutches) ರಕ್ಷಿಸಲ್ಪಡುವಿರಿ. ಭ್ರಾಂತಿಜನ್ಯಕುತರ್ಕಗಳಿಂದ (sophisticated) ಅವುಗಳನ್ನು ನಾಶಪಡಿಸಬೇಡಿ. ಬುದ್ಧಿಶಕ್ತಿಯು ಕ್ಷಣಭಂಗುರವು (frail) ಮತ್ತು ಸಾಂತವು (finite). ಕೇವಲ ಬುದ್ಧಿಶಕ್ತಿಯನ್ನೇ ಅವಲಂಬಿಸದಿರಿ. ಹಾಗೆ ಮಾಡಿದ್ದೇ ಆದರೆ ಅಮೃತತತ್ವವನ್ನು ಪಡೆಯುವ ಭರವಸೆಯು ಇಲ್ಲವು.

ಈ ಜಗತ್ತನ್ನು ಭಗವಂತನು ಸೃಷ್ಟಿಸಿದ ಉದ್ದೇಶವಾದರೂ ಏನು? ಇದು ಒಂದು ಅತಿಪ್ರಶ್ನೆ (transcendental question) ಆತ್ಮಾನುಭವವಾದಾಗ ಉದ್ದೇಶವು ತಿಳಿದುಬರುವುದು. ಕಾಲ, ದೇಶ, ಕಾರಣಗಳ ಕಟ್ಟುಪಾಡಿಗೆ ಒಳಪಟ್ಟ ಪರಿಮಿತವಾದ ಮನಸ್ಸು ವಿಷಯಗಳಿಗೆ ಅತೀತವಾದುದಕ್ಕೆ ಸಂಬಂಧಿಸಿದ ಸಮಸ್ಯೆಗೆ ಸಮಾಧಾನವನ್ನು ಪಡೆಯಲಾರದು.

ಈ ಜಗತ್ತನ್ನು ಭಗವಂತನು ಏಕೆ ಸೃಷ್ಟಿಸಿದನು? ಜಗತ್ತು ಸತ್ಯವೋ, ಮಿಥ್ಯವೋ ಎಂಬ ಸಮಸ್ಯೆಯ ಬಗ್ಗೆ ಚರ್ಚಿಸುವುದರಲ್ಲಿ ಶಕ್ತಿ ಮತ್ತು ಕಾಲವನ್ನು ವ್ಯರ್ಥಮಾಡುವಿರಿ. ಈ ಜಗತ್ತು ಸತ್ಯವೋ, ಮಿಥ್ಯವೋ ಎಂಬುದರಿಂದ ನಿಮಗೇನೂ ಬಗೆಹರಿದಂತಲ್ಲ. ಅಂತಹ ವಾಗ್ವಾದಗಳಿಂದ (controversies) ಯಾವ ಸಾರ್ಥಕ್ಯವೂ ಉಂಟಾಗಲಾರದು. ಹೊರಗೆ ಓಡುತ್ತಿರುವ ಮನಸ್ಸು ಮತ್ತು ಇಂದ್ರಿಯಗಳನ್ನು ಒಳಸೆಳೆದು ಹೃದಯ ಗುಹೆಯೊಳಗೆ ಮುಳುಗಿಸಿ। ದಿವ್ಯಾತ್ಮನಲ್ಲಿ ವಿಶ್ರಾಂತಿಪಡೆಯಬೇಕು. ವ್ಯರ್ಥಾಲಾಪಗಳನ್ನು

ತೊರೆದು, ಆತ್ಮನನ್ನು ಹುಡುಕುವುದರಲ್ಲಿ ಮತ್ತು ಅದರ ಸಾಕ್ಷಾತ್ಕಾರದಲ್ಲಿ ತೊಡಗಿರಿ. ವೃಕ್ಷದಲ್ಲಿರುವ ಎಲೆಗಳನ್ನು ಎಣಿಸುತ್ತಿರುವುದಕ್ಕಿಂತ ನೇರವಾಗಿ ಅದರ ಫಲವನ್ನು ಸವಿಯಲು ಪ್ರಯತ್ನಿಸಿರಿ. ಆತ್ಮಸಾಕ್ಷಾತ್ಕಾರದಿಂದ ಶಾಶ್ವತಾನಂದವನ್ನು (eternal bliss) ಅನುಭವಿಸಲು ಯತ್ನಿಸಿರಿ. ಇದೇ ವಿವೇಕವು (wisdom).

ಆತ್ಮಜ್ಞಾನವನ್ನು ಪಡೆದರೆ ಜೀವನ ರಹಸ್ಯದ ಕುತೂಹಲಗಳು ಸ್ತಬ್ಧ ವಾಗುವುದು. ಈ ವಿಶ್ವವು 'ಏಕೆ' ಮತ್ತು 'ಹೇಗೆ' ಇದೆ ಎಂಬುದನ್ನು ಸ್ಪಷ್ಟವಾಗಿ ಅರಿಯುವಿರಿ. ವಸ್ತುಗಳ ಯೋಜನೆಯಲ್ಲಿನ ಉದ್ದೇಶ ಮತ್ತು ವೃದ್ಧಿಗಳು ಸ್ಪಷ್ಟವಾಗುವುವು. ಕ್ರಮಬದ್ಧವಾದ ಆಧ್ಯಾತ್ಮ ಸಾಧನೆಯ ಮೂಲಕ ಆತ್ಮಜ್ಞಾನವನ್ನು ಪಡೆಯಿರಿ.

---

## ೨. ಪ್ರಪಂಚವೆಂದರೇನು ?

ಕಿತ್ತಳೆಯ ಹಣ್ಣಿಗೆ ಆಕಾರ, ಬಣ್ಣ ಮತ್ತು ರುಚಿಯನ್ನು ಕಲ್ಪಿಸುವುದು ಮನಸ್ಸು. ಒಬ್ಬ ವಿಜ್ಞಾನಿಯ ದೃಷ್ಟಿಯಲ್ಲಿ ಕಿತ್ತಳೆಯ ಹಣ್ಣು ಪರಮಾಣು ಗಳ ಅಥವ ವಿದ್ಯುತ್ಕಣಗಳ ರಾಶಿಯು. ವೈಶೇಷಿಕನ ಅಭಿಪ್ರಾಯದಲ್ಲಿ ಅದು ಅಣುಗಳ ಸಮೂಹವು. ಅತೀಂದ್ರಿಯನಿಗೆ (clairvoyant) ಅದು ತನ್ಮಾತ್ರೆ ಗಳ ಸಮೂಹವು. ಜೀವನ್ಮುಕ್ತ ಅಥವ ಋಷಿಗೆ ಅದು ಬ್ರಹ್ಮವೇ. ನಿಮ್ಮ ಕಣ್ಣಿನಲ್ಲಿರುವ ದೃಷ್ಟಿದೋಷದಿಂದಲೇ ಬಾಹ್ಯವಸ್ತುಗಳನ್ನು ನೋಡುವಿರಿ. ನಿಮ್ಮ ಜ್ಞಾನದ ಅಂತರ್ದೃಷ್ಟಿಯು ತೆರೆಯಲ್ಪಟ್ಟರೆ ನೀವು ಆ ಕಿತ್ತಳೆಯ ಹಣ್ಣನ್ನೇ ಬ್ರಹ್ಮವೆಂದು ಅರಿತುಕೊಳ್ಳುವಿರಿ, ಈ ಜಗತ್ತನ್ನು ಬ್ರಹ್ಮವೆಂದು ಅವಲೋಕಿಸುವಿರಿ (cognise). ಈ ಜಗತ್ತೆಂಬುದು ಕೇವಲ ಭ್ರಮೆಯು. ಹಗ್ಗದಲ್ಲಿನ ಹಾವಿನಂತೆ ಅದು ತೋರಿಕೆಯು. ಜಗತ್ತು ನಿಜವಾಗಿಯೂ ಇರುವುದಾದರೆ ಅದು ಸುಷುಪ್ತಿಯಲ್ಲಿಯೂ (deep sleep) ತೋರ ಬೇಕಾಗಿತ್ತು.

ಈ ವಿಶಾಲ ವಿಶ್ವವು ಆತ್ಮಸಂಕಲ್ಪದಂತೆ ಹೊಳೆಯುವುದು. ಮನಸ್ಸಿರುವ ಕಡೆ ಮಾತ್ರ ವಿಶ್ವವಿರುವುದು. ಗಾಢನಿದ್ದೆಯಲ್ಲಿ ಮನಸ್ಸಿಲ್ಲವು. ಆದ್ದರಿಂದ ಅಲ್ಲಿ ವಿಶ್ವವಿಲ್ಲವು. ವಸ್ತುಗಳನ್ನು ನೀನು ಎಷ್ಟೆಷ್ಟು ಚಿಂತಿಸಿದರೆ ಜಗತ್ತು ಅಷ್ಟಷ್ಟು ಸತ್ಯವಾಗಿ ತೋರುವುದು. ಇಂದ್ರಿಯ ಗಮ್ಯವಾದ ವಸ್ತುಗಳನ್ನು (sense objects) ಚಿಂತಿಸಿದರೆ ಜಗತ್ತಿನ ಸತ್ಯತೆಯ ಭಾವನೆಯು (conception) ಬೆಳೆಯುವುದು.

ಈ ಸೃಷ್ಟಿಯನ್ನು ನಮ್ಮ ಮುಂದಿಡುವುದು ಎಚ್ಚರದ ಅವಸ್ಥೆಯು (sta'e) ಮಾತ್ರ. ಎಚ್ಚರದ ಅವಸ್ಥೆಯು ಮನಸ್ಸಿನ ಕೇವಲ ಅಭಿವ್ಯಕ್ತತೆಯಾದುದರಿಂದ ಅದು ಮಾಯೆಯು (transcient).

ಜಗತ್ತು ನಿತ್ಯವಾದರೆ, ಅದು ನಮ್ಮ ಸುಷುಪ್ತಿಯಲ್ಲಿ ಅನುಭವಕ್ಕೆ ಬರಬೇಕಾಗಿತ್ತು. ಮನಸ್ಸು ಸಂಕಲ್ಪರಹಿತವಾದಾಗ ಜಗತ್ತೇ ಇಲ್ಲವು. ಸುಷುಪ್ತಿಯಲ್ಲಿ ಸಂಕಲ್ಪಗಳಿಲ್ಲದಿರುವುದರಿಂದ (ಅಲ್ಲಿ) ಜಗತ್ತಿಲ್ಲವು.

ಸುಷುಪ್ತಿಯಲ್ಲಿ ಮನಸ್ಸಿಲ್ಲದಿರುವುದರಿಂದ ಜಗತ್ತಿನ ಬಗ್ಗೆ ಅನುಭವವಾಗುವುದಿಲ್ಲ. ಮನಸ್ಸಿದ್ದರೇ ಜಗತ್ತು ಇರುವುದೆಂದೂ, ಮತ್ತು ಮನಸ್ಸೇ ಜಗತ್ತನ್ನು ಸೃಷ್ಟಿಸುವುದೆಂದೂ, ಸ್ಪಷ್ಟವಾಯಿತು. ಆ ಕಾರಣದಿಂದಲೇ ಈ ಜಗತ್ತು ಮನೋಮಾತ್ರವೆಂದೂ, ಮನಃ ಕಲ್ಪಿತವೆಂದೂ ಶೃತಿಗಳು ಘೋಷಿಸುವವು.

ಕಾಲವು ಮನಸ್ಸಿನ ಒಂದು ರೀತಿಯು (mode). ಕಾಲವು ಮನಸ್ಸಿನ ಸೃಷ್ಟಿಯು. ಅದು ಮನಸ್ಸಿನ ಮೋಸ ಅಥವ ಠಕ್ಕು. ಅದು ಭ್ರಮೆಯು. ಬ್ರಹ್ಮವು ಕಾಲವನ್ನು ಮೀರಿದುದು. ಬ್ರಹ್ಮವು ನಿತ್ಯವು. ಕಾಲವು ಸ್ಥಳೀಯ ಕಾಲವಷ್ಟೆ. ಮದ್ರಾಸಿನಲ್ಲಿ ೧೨ ಘಂಟೆಯಾದಾಗ, ಕಲ್ಕತ್ತೆಯಲ್ಲಿ ೧೨.೨೩, ರಂಗೂನಿನಲ್ಲಿ ೧.೦೦, ಸಿಂಗಪುರದಲ್ಲಿ ಮಧ್ಯಾಹ್ನ ೧.೩೦, ಲಂಡನ್ನಿನಲ್ಲಿ ಸಂಜೆ ೬.೩೦, ಷಿಕಾಗೋನಲ್ಲಿ ಮಧ್ಯಾಹ್ನ ೧೨.೩೦, ಮತ್ತು ನ್ಯೂಯಾರ್ಕ್‌ನಲ್ಲಿ ಬೆಳಿಗ್ಗೆ ೧.೩೦. ಇದೆಲ್ಲಾ ಏನು? ಒಂದು ಸಮರೂಪತೆಯೇ ಇಲ್ಲ. ಇದರಿಂದ ಕಾಲವು ಮನಸ್ಸಿನ ಸೃಷ್ಟಿ ಎಂದು ತಿಳಿಯುವುದಿಲ್ಲವೆ? ಕಾಲವನ್ನು ಮೀರಿರಿ ಮತ್ತು ಕಾಲಕ್ಕೆ ಮಿಗಿಲಾದ, ಶಾಶ್ವತವೂ ಅವಿನಾಶಿಯೂ ಆದ ಬ್ರಹ್ಮದಲ್ಲಿ ವಿಶ್ರಮಿಸಿರಿ.

ನಾಳೆ ಎಂಬುದು ಇಂದೂ, ಇಂದೆಂಬುದು ನಿನ್ನೆಯೂ ಆಗುವುದು. ಭವಿಷ್ಯವು ವರ್ತಮಾನ ಕಾಲವಾಗುವುದು ಮತ್ತು ವರ್ತಮಾನ ಕಾಲವು ಭೂತಕಾಲವಾಗುವುದು. ಇದೆಲ್ಲಾ ಏನು ? ಇದು ಮನಸ್ಸಿನ ಸೃಷ್ಟಿ ಅಥವಾ ಮಾಯೆ. ಈಶ್ವರನಲ್ಲಿ ಸರ್ವವೂ ವರ್ತಮಾನ ಮಾತ್ರವೇ, ಎಲ್ಲವೂ ಇಲ್ಲಿಯೇ ಇರುವುದು. ಬ್ರಹ್ಮವೊಂದೇ ಕಾಲವನ್ನು ಮೀರಿರುವುದು. ಆದಿತ್ಯ ನಲ್ಲಿ ದಿನವಾಗಲೀ, ರಾತ್ರಿಯಾಗಲೀ, ಇಲ್ಲವು ; ಇಂದು, ನಾಳೆ ಎಂಬುದಿಲ್ಲವು. ಕಾಲ, ದೇಶಗಳನ್ನು ಸೃಷ್ಟಿಸಿರುವುದು ಮನಸ್ಸೇ. ಸಂತೋಷದ ಸ್ಥಿತಿಯಲ್ಲಿ ಕಾಲವು ಶೀಘ್ರವಾಗಿ ಕಳೆದಂತಾಗುವುದು, ದುಃಖದಲ್ಲಿರುವಾಗ ಕಾಲವು ನಿಧಾನವಾಗಿ ನಡೆದಂತಾಗುವುದು. ಇದೊಂದು ಸಾಪೇಕ್ಷಿತ ಜಗತ್ತು. ಐನ್‌ಸ್ಟೀನರ ಸಾಪೇಕ್ಷವಾದವು ಮಾಯೆಯ ಮತ್ತು ಜಗತ್ತಿನ ಸ್ವಭಾವದ ಮೇಲೆ ಹೆಚ್ಚು ಬೆಳಕನ್ನು ಬೀರುವದು.

ಮಾಯಾವಿಯು ಹಗ್ಗವನ್ನು ಆಕಾಶದಲ್ಲಿ ಎಸೆದು, ಅದನ್ನೇ ಹತ್ತಿಕೊಂಡು ಹೋಗಿ ಅದೃಶ್ಯನಾಗುವನು. ಐದು ನಿಮಿಷಗಳ ನಂತರ ನೆಲದ ಮೇಲೆ ಮುರಿದ ಅಂಗಗಳೊಡನೆ ಬಿದ್ದು ಸಾಯುವನು. ಮತ್ತೆ ಐದು ನಿಮಿಷಗಳಲ್ಲಿ ಅದೇ ಮಾಯಾವಿಯು ನಿಮ್ಮ ಮುಂದೆ ಎದ್ದು ನಿಲ್ಲುವನು. ಎಲ್ಲಿ, ಈಗ ಹೇಳಿ, ಆ ಮಾಯಾವಿಯ ಮರಣವು ಸತ್ಯವೊ, ಮಿಥ್ಯವೊ ? ಈ ವಿಚಿತ್ರವನ್ನು ಕಣ್ಣಾರೆ ನೀವೇ ಕಂಡಿರುವಿರಿ. ಹಾಗೆಯೇ ಇಂದ್ರಿಯ ಗಮ್ಯವಾದವು ಮತ್ತು ದ್ರವ್ಯವು ಸುಸ್ಪಷ್ಟವಾಗಿರುವಂತೆ ತೋರುವವು.

ಅಲಹಾಬಾದ್‌ನಲ್ಲಿ ನೀವು ಒಂದು ತಿಂಗಳಿದ್ದರೆ ನಿಮ್ಮ ಸ್ವಂತಸ್ಥಳ ಮದ್ರಾಸ್, ನಿಮ್ಮ ಮಿತ್ರರು, ಮತ್ತು ಬಂಧುಗಳ ಬಗ್ಗೆ ಎಲ್ಲವನ್ನೂ ಮರೆಯುವಿರಿ. ನಿಮ್ಮದೇ ಆದ ಪ್ರಪಂಚವೊಂದನ್ನು ಅಲಹಾಬಾದ್‌ನಲ್ಲಿ ಸೃಷ್ಟಿಸಿಕೊಳ್ಳುವಿರಿ. ಮದರಾಸಿಗೆ ಹಿಂತಿರುಗಿದಮೇಲೆ ಅಲಹಾಬಾದ್‌ಗೆ ಸಂಬಂಧಿಸಿದುದೆಲ್ಲವನ್ನೂ ಮರೆಯುವಿರಿ. ಜಗತ್ತನ್ನು ಕಲ್ಪಿಸುವುದು ಮನಸ್ಸು ಮಾತ್ರವೇ ಭ್ರಮೆಯನ್ನುಂಟುಮಾಡುವ ಈ ಮನಸ್ಸನ್ನು ನೀವು ಕೊಂದರೆ, ನಿಮಗೆ ಜಗತ್ತಿರುವುದಿಲ್ಲ. ಜಗತ್ತು ಮಿಥ್ಯವಾಗುವುದು.

ಮನಸ್ಸಿನ ಚಮತ್ಕಾರದಿಂದ ಒಂದು ಫರ್ಲಾಂಗ್ ಬಹಳ ದೂರ

ಧಂತೆಯೂ, ಮೂರು ವೈಲಿಗಳು ಸ್ವಲ್ಪವೇ ದೂರದಂತೆಯೂ ಕಾಣುವದು. ಇದನ್ನು ನಿಮ್ಮ ದಿನ ನಿತ್ಯದ ಜೀವನದಲ್ಲಿ ಗಮನಿಸುತ್ತಿರಬೇಕು.

ಸಮಾಧಿ (ಅವಸ್ಥೆಯಲ್ಲಿ) ಅಥವ ದಿವ್ಯಾನುಭವ ಸ್ಥಿತಿಯಲ್ಲಿ ಮನಸ್ಸು ನಾಶವಾಗಿರುವುದರಿಂದ ಪ್ರಪಂಚವಿಲ್ಲವು. ಬೆಳಕನ್ನು ತಂದೊಡನೆಯೇ ಹಗ್ಗದಲ್ಲಿ ಆರೋಪಿಸಲ್ಪಟ್ಟ ಹಾವಿನ ಭಾವವು ಅದೃಶ್ಯವಾಗುವಂತೆ, ಆತ್ಮಪ್ರಕಾಶವನ್ನು ಪಡೆದವರಿಗೆ, ಜ್ಞಾನ ಸೂರ್ಯನ ಉದಯವಾದಾಗ, ತೋರಿಕೆಗೆ ಮಾತ್ರ ಕಂಡುಬರುವ ಅಥವ ಆತ್ಮನಲ್ಲಿ ಆರೋಪಿಸಲ್ಪಟ್ಟ ಜಗತ್ತು ಇರುವುದಿಲ್ಲವು.

ಜಗತ್ತೆಂದರೆ ಲಿಂಗ ಮತ್ತು ಅಹಂ ಅಲ್ಲದೆ ಬೇರೇನೂ ಇಲ್ಲವು. ಅಹಂಕಾರವೇ ಪ್ರಮುಖವಾದುದು. ಲಿಂಗವು ಅಹಂಕಾರಕ್ಕೆ ಜೋತುಬಿದ್ದಿರುವುದು. 'ನಾನು ಯಾರು?' ಎಂಬ ವಿಚಾರದಿಂದ ಅಹಂಕಾರವನ್ನು ನಾಶ ಮಾಡಿದರೆ, ಲೈಂಗಿಕ ಭಾವನೆಯು ಓಡಿಬಿಡುವುದು. ವಿಧಿಯ ಒಡೆಯನಾದ ಮಾನವನು ಅವಿದ್ಯೆಯಿಂದ ಲಿಂಗ ಮತ್ತು ಅಹಂಕಾರದ ಗುಲಾಮನಾಗಿ ಅದರ ಉಪಕರಣವಾಗಿ ತನ್ನ ದಿವ್ಯ ಮಹಿಮೆಯನ್ನು ಕಳೆದುಕೊಂಡಿರುವನು. ಆತ್ಮ ಜ್ಞಾನ ಲಾಭದಿಂದ ಈ ಶತ್ರುಗಳು ನಾಶವಾಗುವರು. ಮತ್ತು ಭ್ರಮಾತ್ಮಕತೆಯಿಂದಾದ 'ನಾನು' ಎಂಬ ಭಾವನಾಮಿಥ್ಯವೂ ಅಸಹಾಯಕವೂ, ಅವಿದ್ಯಾಮಯವೂ, ಅಲ್ಪವೂ ಆದ ಜೀವ ಭಾವವನ್ನು ಸೂರೆಗೊಳ್ಳುತ್ತಿರುವ ಈ ಶತ್ರುಗಳು ನಾಶವಾಗುವರು.

ಜಗತ್ತು ಪರಿಣಾಮ ನಿತ್ಯವು (changing eternal). ಬ್ರಹ್ಮವು ಕೂಟಸ್ಥ ನಿತ್ಯವು (unchanging eternal). ಜಗತ್ತುಸಾಪೇಕ್ಷತಾ ಸತ್ಯವು– ಬ್ರಹ್ಮವು ಸತ್ಯದ ಸತ್ಯವು (truth of truths.) ಜಗತ್ತು ವ್ಯಾವಹಾರಿಕ ಸತ್ತೆಯು (empirical reality). ಬ್ರಹ್ಮವು ಪಾರಮಾರ್ಥಿಕ ಸತ್ತೆಯು (absolute reality). ಸ್ವಪ್ನ ಸೃಷ್ಟವಾದವುಗಳು ಪ್ರಾತಿಭಾಸಿಕ ಸತ್ತೆಯು. ಪರಿಚ್ಛಿನ್ನ ವಸ್ತುವು (finite) ಯಾವಾಗಲೂ ಅನಿತ್ಯವು. ಇದು ನಿಮ್ಮ ಪ್ರತಿ ದಿನದ ಅನುಭವದಲ್ಲಿಲ್ಲವೆ ? ಮನಸ್ಸು, ದೇಹ ಮತ್ತು ಇಂದ್ರಿಯಗಳ ತಿರುಳಾದ ಬ್ರಹ್ಮ ಅಥವ ಆತ್ಮವು ಅಪರಿಚ್ಛಿನ್ನವೂ (infinite) ನಿತ್ಯವೂ (eternal) ಆಗಿರುವುದು. ಓಂಕಾರ ಗಾನದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಿರಿ.

ಎಲ್ಲ ತೊಂದರೆಗಳೂ ನಿಲ್ಲುವವು. ನೀವು ದತ್ತಾತ್ರೇಯ ಅಥವ ಶಂಕರ ರಾಗಬಲ್ಲಿರಿ.

ಜಗತ್ತು ಅತ್ಯಂತ ಮಿಥ್ಯವಲ್ಲವು. ಇದು ಮಿಥ್ಯವೆಂದರೇನು ? ಯಾವ ಅರ್ಥದಲ್ಲಿ ಮಿಥ್ಯವು ಎಂದರೆ ಮೊಲದ ಕೊಂಬಿನಂತೆ ಬಂಜೆಯ ಮಗನಂತೆ ಅಥವ ಗಗನ ಪದ್ಮದಂತೆ ಮಿಥ್ಯವೆ ? ಇಲ್ಲ. ಎಂದರೆ ಬ್ರಹ್ಮದಷ್ಟು ಪೂರ್ಣ ಸತ್ಯವಲ್ಲವು. ಬ್ರಹ್ಮದ ಹೋಲಿಕೆಯಿಂದ ಜಗತ್ತು ಮಿಥ್ಯವು. ಅದು ಕೇವಲ ತೋರಿಕೆಯು. ಆದ್ದರಿಂದ ಮಿಥ್ಯವು. ಮುದ್ದು ಚಂದ್ರನೇ ! ನಿನಗೆ ಈಗ ಅರ್ಥವು ಸ್ಪಷ್ಟವಾಯಿತೆ ? ಇನ್ನು ಮುಂದೆ 'ಮಿಥ್ಯೆ' ಎಂಬ ಪದವನ್ನು ತಪ್ಪಾಗಿ ಬಳಸಬೇಡ. 'ಮಿಥ್ಯೆ', ಪದದ ತಪ್ಪು ತಿಳಿವಳಿಕೆ ಯಿಂದ ಹಿಂದುಗಳ ಮನಸ್ಸಿನಲ್ಲಿ ವಿಪರೀತ ಭಾವನೆಗಳು ಬಂದು ಹಾವಳಿ ಗಳುಂಟಾಗಿವೆ. ಭಾರತೀಯರ ಮನದಲ್ಲಿ ಅದರಲ್ಲೂ ಬಹುಪಾಲು ಸಂನ್ಯಾಸಿ ಗಳಲ್ಲಿ ಕೂಡ, ಅದು ಹೇಯವಾದ ಜಡತೆಯನ್ನು ಮತ್ತು ಮಾಲಿನ್ಯವನ್ನೂ ತಂದಿದೆ.

ನೀವು ಜಗತ್ತು ಸತ್ಯವೆಂದು ತೆಗೆದುಕೊಂಡರೂ, ನಿಜವಾಗಿ ನೀವು ಶಂಕರರ ಕೇವಲಾದ್ವೈತ ಸ್ಥಿತಿಯಲ್ಲಿರಬಹುದು. ಕೇವಲ ಅಂಗುಲದಲ್ಲಿನ ಅಲ್ಪಾಂಶದಷ್ಟೂ ವಿಚಲಿತರಾಗಬೇಕಾಗಿಲ್ಲವು. ಮನಸ್ಸಿನಲ್ಲಿ ಇದನ್ನು ಧಾರಣಮಾಡಿ. ಶಾಖ ಮತ್ತು ಬೆಳಕು ಬೆಂಕಿಗೆ ದ್ವೈತವನ್ನು ಹೇಗೆ ಉಂಟು ಮಾಡಲಾರದೋ, ಹಾಗೆಯೇ ಈ ಜಗತ್ತು ಬ್ರಹ್ಮಕ್ಕೆ ದ್ವೈತವನ್ನುಂಟುಮಾಡ ಲಾರದು. ಅಂದಮೇಲೆ, ತೋರಿಕೆಯು ಸತ್ಯವನ್ನು ಹೇಗೆ ಬಾಧಿಸಬಲ್ಲುದು ?

ಈ ಜಗತ್ತು ಅನಾದಿಯು (beginningless). ಕರ್ಮವೂ ಅನಾದಿಯು ಕರ್ಮಮಾರ್ಗವು ವಿಚಿತ್ರವಾದುದು. ಆತ್ಮಜ್ಞಾನವನ್ನು ಪಡೆಯಿರಿ. ಕರ್ಮದ ರಹಸ್ಯವು ನಿಮಗೆ ಅರಿವಾಗುವುದು.

ಬಹಳವಾದ ದುಃಖ, ನೋವು ಮತ್ತು ಪ್ರಲೋಭನೆಗಳಿರುವುದರಿಂದ ಜಗತ್ತು ಹೇಯವಾದುದು ಎಂದು ಕೆಲವರು ಹೇಳುವರು. ಆದರೆ ನೀವು ಒಳ್ಳೆಯ ಕಾರ್ಯಗಳನ್ನು ಮಾಡಿದರೆ, ಜಪ ಮತ್ತು ಧ್ಯಾನದ ಅಭ್ಯಾಸದಿಂದ ನೀವು ಶಾಶ್ವತವಾದ ಆನಂದವನ್ನು ಪಡೆಯುವಿರಿ. ಈ ಹೇಯ ಪ್ರಪಂಚವೇ ನಿಮಗೆ ಮಧುರ, ಮನೋಹರ ಸ್ವರ್ಗವೂ ಆಗುವುದು. ಜಗತ್ತನ್ನು ನಿಂದಿಸಬೇಡಿ,

ನಿಮ್ಮ ಮನಸ್ಸನ್ನು ನಿಂದಿಸಿ. ಮನಸ್ಸನ್ನು ತಿದ್ದಿರಿ, ಪಳಗಿಸಿರಿ. ಈ ಜಗತ್ತಿನ ಬಗ್ಗೆ ನಿಮ್ಮ ದೃಷ್ಟಿಯು ಬದಲಾಯಿಸಲ್ಪಡುವುದು.

ಇರುವುದು ಸತ್ಯವೊಂದೇ — ಅದೇ ದೇವರು, ಮತ್ತೇನೂ ಇಲ್ಲವು. ಈ ಜಗತ್ತು ಆತನ ವ್ಯಕ್ತ ರೂಪವು. ಸರ್ವ ಕ್ರಿಯಾ, ಕಾರಕಗಳೂ, ಚಟುವಟಿಕೆಗಳೂ ಆತನವೇ. ಈ ಜಗತ್ತು ನಶ್ವರವೂ, ಚಂಚಲವೂ, ತೋರಿಕೆಯೂ (appearance) ಆಗಿದೆ. ಅದಕ್ಕೆ ಸ್ವತಂತ್ರ ಸತ್ತೆ ಇಲ್ಲವು. ವ್ಯಕ್ತಿತ್ವವೆಂಬುದೂ ಕಾಲ್ಪನಿಕವು ಹಾಗೂ ಅವಿದ್ಯಾಮಯವಾದ ಮನಸ್ಸಿನ ಒಂದು ಸ್ಥಿತಿಯು.

"ಒಂದು" ಎಂಬುವುದಿರುವುದರಿಂದ ಎರಡನೆ ಸಂಖ್ಯೆಯಿರುವದು. ಕಿರುಬೆರಳಿನಿಂದ ಎಣಿಸಲಾರಂಭಿಸಿದರೆ, ಹೆಬ್ಬೆರಳು ಐದನೆಯದು. ಹೆಬ್ಬೆರಳಿನಿಂದ ಆರಂಭಿಸಿದರೆ, ಅದು ಮೊದಲನೆಯದಾಗಿ, ಕಿರುಬೆರಳು ಸಂಖ್ಯೆಯಲ್ಲಿ ಐದನೆಯದಾಗುವುದು. ಒಂದು ಐದಾಗುವುದು ಮತ್ತು ಐದು ಒಂದಾಗುವುದು. ಒಂದು, ಎರಡು, ಮೂರು ಮುಂತಾದ ಸಂಖ್ಯೆಗಳು ಸಂಬಂಧ ಸೂಚಕವು. ಈ ತೋರಿಕೆಗೆ ಆಧಾರವಾದುದು ನೈಜವೂ, ಶಾಶ್ವತವೂ, ಮತ್ತು ಬದಲಾಯಿಸದ ಅಂತಃಶ್ರೇಣಿಯೂ (substratum) ಆಗಿರಬೇಕು. ಆ ಮೂಲವೇ ಬ್ರಹ್ಮವು-ಅಥವ-ನಿಮ್ಮ ಆತ್ಮವು. ನಿಜಕ್ಕೂ ಎರಡು ಅಥವ ಮೂರಿಲ್ಲವು. ಇರುವುದು ಸತ್ಯ ಅಥವ ಬ್ರಹ್ಮವೊಂದೇ. ಹಗಲು, ರಾತ್ರಿ ಅಥವ, ಕಲ್ಪ ಮತ್ತು ಪ್ರಲಯ ಎಂದು ತಿಳಿಯಲ್ಪಟ್ಟ ನಿಯತಕಾಲಿಕ ಜಡ ಚೇತನಗಳ ಅವಧಿಗೆ ಈ ಜಗತ್ತು ಒಳಪಟ್ಟಿರುವುದು.

ಪ್ರಾಯೋಗಿಕವಾಗಿ ಯಾವುದಕ್ಕೂ ಮೃತ್ಯುವಿಲ್ಲವು. ಒಂದು ಕಲ್ಲಿನ ಚೂರು ಹಾಗೂ ಮರದ ತುಂಡಿನಲ್ಲಿಯೂ ಕಾರ್ಯಶೀಲ ಜೀವವಿರುವದು. ಅಣುಗಳೂ, ಕಣಗಳೂ, (electrons) ವಿದ್ಯುನ್ಮಾನಗಳೂ ಸ್ಪಂದಿಸುವುನಲ್ಲದೆ, ಮಹತ್ತರವಾದ ಪ್ರಚಂಡ ವೇಗದಲ್ಲಿ ಸುತ್ತುತ್ತಿರುವವು.

ನಿರೀಶ್ವರವಾದಕ್ಕೂ ಮತ್ತು ನಾಸ್ತಿಕತೆಗೂ ವ್ಯತ್ಯಾಸವಿರುವದು. ನಿರೀಶ್ವರ ವಾದಿಯು ಈಶ್ವರ ಸತ್ತೆಯನ್ನು ನಿರಾಕರಿಸುವನು. ಇವರು ಕಪಿಲ ಮುನಿಯ ಅನುಯಾಯಿಗಳು. ಆದರೆ ದೇಹಕ್ಕಿಂತ ಪ್ರತ್ಯೇಕವಾದ ಆತ್ಮನನ್ನು ಒಪ್ಪದೆ, ದೇಹವೇ ಆತ್ಮವೆಂದು ಹೇಳುವವನು ನಾಸ್ತಿಕನು. ಅದೂ ಅಲ್ಲದೆ ಎಲೆ, ಅಡಿಕೆ, ಸುಣ್ಣಗಳ ಮಿಶ್ರಣದಿಂದ ಕೆಂಪಾಗುವಂತೆ ಆತ್ಮವಾಗುವದೆಂದು

ಹೇಳುವನು. ಚಾರ್ವಾಕನು ಈ ಪಂಥಕ್ಕೆ ಸೇರಿದವನು. ಸಾವಿನಿಂದ ಅಥವ ಶರೀರ ಶೈಥಿಲ್ಯದಿಂದ ಆತ್ಮವು ನಾಶವಾಗುವದೆನ್ನುವರು.

ಅಜ್ಞೇಯತಾವಾದಿಯು (agnostic) ನಾಸ್ತಿಕನಲ್ಲವು. ದೇವರು ಅಜ್ಞೇಯವೆಂದು ಮಾತ್ರ ಹೇಳುವನು.

ನೀಹಾರಿಕಾ ವಾದದಂತೆ ಪ್ರತಿಯೊಂದು ಸೌರವ್ಯೂಹವೂ ಆರಂಭದಲ್ಲಿ ಆಕಾಶದಲ್ಲೆಲ್ಲಾ ಆವರಿಸಿ ತನ್ನ ಅಕ್ಷದಲ್ಲೇ ಸುತ್ತುತ್ತಿದ್ದ ಅದ್ಭುತ ಅನಿಲ ರೂಪ ದ್ರವ್ಯವಾಗಿದ್ದಿತು. ಕಾಲವು ಕಳೆದಂತೆಲ್ಲಾ ಆ ಅನಿಲ ರೂಪ ವಸ್ತುವು ಘನರೂಪವನ್ನು ಪಡೆಯಿತು. ಮಧ್ಯಭಾಗವು ಸಂಕುಚಿತವಾಯಿತು. ದ್ರವ್ಯರಾಶಿಯು ಅತಿವೇಗವಾಗಿ ತಿರುಗುತ್ತಾ, (ಪಾರ್ಶ್ವಕ್ಕೆ) ಎಸೆದ ಮಂಡಲ ಗಳು ಕ್ರಮವಾಗಿ ತಂಪಾಗಿ ಗ್ರಹರೂಪಗಳನ್ನು ಪಡೆದವು. ಈ ಗ್ರಹಗಳು ಕರಗಿದ ಸ್ಥಿತಿ ಅಥವ ದ್ರವರೂಪದಲ್ಲಿ ಕೆಲವು ಕಾಲವಿದ್ದವು. ಮತ್ತೆ ಕ್ರಮ ಕ್ರಮವಾಗಿ ತಣ್ಣಗಾಗುತ್ತಾ ಬಂದು ಘನರೂಪವನ್ನು ಪಡೆಯಿತು.

ಈ ಜಗತ್ತು ಜ್ಞಾನಿಗೆ ಬ್ರಹ್ಮವು, ಭಕ್ತನಿಗೆ ಭಗನಂತನು. ವಿಜ್ಞಾನಿಗೆ ಶಕ್ತಿಪೂರ್ಣವು ಅಥವ ವಿದ್ಯುನ್ಮಾನಗಳು.

ವಿದ್ಯುತ್ಕಂಪನಗಳು ಹೊರವಲಯದಲ್ಲಿ ಮಾತ್ರ ಇರುವದು. ಈ ಜಗತ್ತಿನಲ್ಲಿ ವಿದ್ಯುನ್ಮಾನಗಳು ಮಾತ್ರ ಇವೆ. ಕಂಪನಗಳ ವಿಭಿನ್ನ ತರಂಗ ದೂರ ಗಳಿಂದಲೂ ಪದೇ ಪದೇ ಸಂಭವಿಸುವುವೆಲ್ಲವೂ ವಿದ್ಯುಚ್ಛಕ್ತಿಯೇ (electricity). ಇದು ವಿಜ್ಞಾನಿಗಳ ವಾದವು.

ಮುಷ್ಟಿಯಷ್ಟರಲ್ಲಿರುವ ಮಣ್ಣಿನ ಕಣಗಳಲ್ಲಡಗಿರುವಷ್ಟು ಶಕ್ತಿಯು, ಮುಕ್ತಗೊಳಿಸಿದಾಗ, ಇಡೀ ಪರ್ವತವನ್ನೇ ಧೂಳೀಪಟ ಮಾಡಬಲ್ಲುದು. ಇದು ಆಧುನಿಕ ವೈಜ್ಞಾನಿಕರ ಅಭಿಪ್ರಾಯವು. ಅದನ್ನು ಪ್ರಯೋಗದ ಮೂಲಕ ಪ್ರದರ್ಶಿಸಲು ಪ್ರಯತ್ನಿಸುತ್ತಿರುವರು.

ವಿಜ್ಞಾನಿಯು ಅಣುಗಳನ್ನು ಸಿಡಿಸುವನು, ಪ್ರಯೋಗಶಾಲೆಯಲ್ಲಿ ವಿದ್ಯುನ್ಮಾನಗಳ ಚಲನವಲನವನ್ನು ವೀಕ್ಷಿಸುವನು, ಮತ್ತು ವಸ್ತು ಹಾಗೂ ಶಕ್ತಿಯ ಸ್ವಭಾವ ಮತ್ತು ರಹಸ್ಯವನ್ನು ಅರಿಯುವುದರಲ್ಲಿ ತನ್ನ ಇಡೀ ಆಯುಷ್ಯವನ್ನೇ ಕಳೆಯುವನು, ಅನೇಕ ವಸ್ತುಗಳನ್ನು ಶೋಧಿಸಿ ತೆಗೆಯುವನು, ಪ್ರಕೃತಿಯ ನಿಯಮಗಳನ್ನು ಅಧ್ಯಯನಮಾಡುವನು. ಆದರೂ ಸೃಷ್ಟಿಯ

ರಹಸ್ಯವನ್ನಾಗಲೀ, ಸೃಷ್ಟಿಕರ್ತನನ್ನಾಗಲೀ ಅಥವ ಬದುಕಿನ ಅರ್ಥವನ್ನಾಗಲೀ ಗ್ರಹಿಸಲು ಸಮರ್ಥನಾಗಿಲ್ಲವು. ಅವನು ತನ್ನನ್ನು ಅರಿಯಲು ಇನ್ನೂ ಆಶಿಸಿಲ್ಲವು. ತನ್ನ ಹೃದಯಾಂತರಾಳದಲ್ಲಿರುವ ದೇವನನ್ನು ಅಥವ ಅಂತರ್ಯಾಮಿಯನ್ನು ಅರಸಲು ಇಚ್ಛಿಸುತ್ತಿಲ್ಲವು. ಇಡೀ ವಿಶ್ವದ ಶಕ್ತಿಯ ತವರು ಮನೆಯಾಗಿ, ಅಣುಗಳಿಗೂ ಚೇತನ ನೀಡುವ, ಹಾಗೂ ಚಲಿಸುವಂತೆ ಮಾಡುವ, ಬ್ರಹ್ಮರ್ಷಿಯಾಗಿ ಅವ್ಯಕ್ತ ಪಾಲಕನಾಗಿ (Unseen Governor) ಮಿಥ್ಯಾಭಿಮಾನದ ಅಥವ ವ್ಯಕ್ತಿತ್ವದ ಹಿನ್ನೆಲೆಯಲ್ಲಿರುವ ದಿವ್ಯಾತ್ಮನನ್ನು (Superman) ಅರಿಯಲು ವಿಜ್ಞಾನಿಯು (scientist) ಅಪೇಕ್ಷಿಸುವುದಿಲ್ಲವು. ಅವನು ಅಣು, ಕಣ, ಇಂದ್ರಿಯ ಮತ್ತು ಬುದ್ಧಿಯು ಬೆಳಗುವಂತೆ ಮಾಡುವ ಜ್ಯೋತಿಯ ಪ್ರತ್ಯಕ್ಷ ದರ್ಶನ ಪಡೆಯುವವರೆವಿಗೂ ಅವನು ಕತ್ತಲೆಯ ಹಾದಿಯಲ್ಲೇ ತಡವರಿಸುತ್ತಿರುವನು (groping).

ವಿಜ್ಞಾನದ ಸಾಧನೆಗಳೂ ಪ್ರಯೋಗದ ಫಲಗಳೂ ಅಮಾನುಷ ಕೃತ್ಯಗಳಿಗೆ ಬಳಸಲ್ಪಡುತ್ತಿವೆ ಮಾನವನ ನಿಜವಾದ ಮನಃಶ್ಶಾಂತಿಗೆ ವಿಜ್ಞಾನವು ಯಾವ ಕೊಡುಗೆಯನ್ನೂ ನೀಡಿಲ್ಲವು. ಜೀವನವನ್ನು ಕ್ಲಿಷ್ಟವೂ, ವೈಭವೋಪೇತವೂ ಆಗಿ ಮಾಡಿದೆ. ಬದುಕಿಗೆ ಹೆಚ್ಚು ತೊಡಕನ್ನೂ, ವಿಷಯಾಸಕ್ತಿಯನ್ನೂ ಕೊಟ್ಟಿರುವದು. ಅನೇಕ ಭೋಗವಸ್ತುಗಳು ಬದುಕಿನ ಅತ್ಯಂತ ಅವಶ್ಯಕತೆಗಳೆನ್ನಿಸಿಬಿಟ್ಟಿವೆ. ಕೇವಲ ಕೆಲವೇ ಆವಶ್ಯಕತೆಗಳನ್ನು ಹೊಂದಿ, ಅಪರಿಮಿತವಾದ ಭಕ್ತಿ ಮತ್ತು ಧ್ಯಾನಮಾಡುವುದರಿಂದ ನಮ್ಮ ಸಹಜ ಸ್ಥಿತಿಗೆ ಹೋಗೋಣ ಮತ್ತು ಶಾಂತಿಮಯವೂ, ತೃಪ್ತಿಯುಕ್ತವೂ ಆದ ಬಾಳನ್ನು ನಡೆಸೋಣ. ಸಾಕು, ಈ ವಿಜ್ಞಾನ. ಸಂಶೋಧನೆಗಳೂ ಸಾಕು. ವಿಜ್ಞಾನಿಗಳೇ ! ಅಂತರ್ಮುಖರಾಗಿರಿ. ಆತ್ಮಶೋಧನೆಮಾಡಿ. ಆತ್ಮದ ಅತ್ಯಮೂಲ್ಯವಾದ ಸಂಪತ್ತನ್ನು ಹೊರತನ್ನಿರಿ.

ಯಾವುದನ್ನು ಅರಿಯವುದರಿಂದ ಉಳಿದುದೆಲ್ಲವೂ ಅರಿಯಲ್ಪಡುವುದು ? ಯಾವುದನ್ನು ಪ್ರಾಪ್ತಿಮಾಡಿಕೊಂಡರೆ ಮತ್ಯಾವ ಬಯಕೆಗಳೂ ಉಳಿಯಲಾರವು ? ಯಾವುದನ್ನು ಸಾಕ್ಷಾತ್ಕರಿಸಿಕೊಂಡುದರಿಂದ ಅಮೃತನೂ, ಅಭಯನೂ, ವೀತರಾಗನೂ ಆಗಿ ಶಾಶ್ವತವಾದ ಸುಖ, ಶಾಂತಿಯಲ್ಲಿ ನಿಲ್ಲುವನ್ನು ? ಬದುಕಿನ ಪರಮಾರ್ಥವೂ, ಪರಮಾರ್ಥ ಸತ್ಯವೂ, ಆತ್ಮವೂ ಆದುದೇ

ಬ್ರಹ್ಮವು. ಅದು ಭೂಮವು, ಬಲು ಹೆಚ್ಚಿನದು, ಯಾವ ನಿರ್ಬಂಧವೂ ಇಲ್ಲದುದು. ಈ ಶ್ರೇಷ್ಠವಾದ ದಿವ್ಯಾತ್ಮನ ಅಥವ ಭೂಮದ ಪ್ರಾಪ್ತಿಯಿಂದ ನಿಮಗೆ ಶಾಶ್ವತ ಸುಖವು ದೊರೆಯುವುದು.

---

## ೩. ಪುನರ್ಜನ್ಮದ ಸಿದ್ಧಾಂತವು

ಮಾನವನನ್ನು ಒಂದು ಸಸ್ಯಕ್ಕೆ ಹೋಲಿಸಬಹುದು. ಸಸ್ಯದಂತೆ ಬೆಳೆಯುವನು, ಪ್ರವರ್ಧಮಾನಕ್ಕೆ ಬರುವನು, ಸಾಯುವನು, ಆದರೆ ಪೂರ್ಣ ವಾಗಿ ಅಲ್ಲ. ಸಸ್ಯವು ಸಾಯುವ ಮುನ್ನ ಹೊಸ ಗಿಡಗಳಿಗೆ ಕಾರಣವಾದ ಬೀಜಗಳನ್ನು ಬಿಡುವುದು. ಮನುಷ್ಯನು ಸಾಯುವಾಗ ತನ್ನ ಒಳ್ಳೆಯ ಹಾಗು ಕೆಟ್ಟ ಕರ್ಮವನ್ನು ಬಿಟ್ಟು ಹೋಗುವನು. ಅವನ ಭೌತಶರೀರವು ಸಾಯಬಹುದು ಮತ್ತು ಪ್ರತ್ಯೇಕ ಭಾಗಗಳಾಗಿ ಒಡೆಯಬಹುದು. ಆದರೆ ಅವನ ಕರ್ಮಗಳು ಅಚ್ಚೊತ್ತಲ್ಪಟ್ಟಿರುವವು (impressions). ಈ ಕರ್ಮ ಗಳ ಫಲಗಳನ್ನು ಅನುಭವಿಸಲು, ಅವನು ಪುನರ್ಜನ್ಮವೆತ್ತಬೇಕು. ಯಾವ ಜನ್ಮವೂ ಮೊದಲನೆಯದಲ್ಲವು. ಅದು ಪೂರ್ವಜನ್ಮದ ಕರ್ಮಫಲವು. ಅದು ಕೊನೆಯ ಜನ್ಮವೂ ಅಲ್ಲ, ಏಕೆಂದರೆ ಈ ಜನ್ಮದ ಕರ್ಮಗಳಿಗೆ ತಕ್ಕ ಫಲವನ್ನು (expiate) ಮುಂದಿನ ಜನ್ಮದಲ್ಲಿ ಅನುಭವಿಸಲೇಬೇಕು. ಆದ್ದರಿಂದ ಸಂಸಾರವು (phenomenal existence) ಆದ್ಯಂತವಲ್ಲದ್ದು. ಸಚ್ಚಿದಾನಂದ ( ಸತ್-ಚಿತ್-ಆನಂದ ) ಸ್ವರೂಪದಲ್ಲಿ ಸ್ಥಿರಗೊಂಡ ಜೀವನ್ಮುಕ್ತನಿಗೆ (liberated soul) ಸಂಸಾರವೇ ಇಲ್ಲವು.

ಮನುಷ್ಯನು ಸಾಯುವಾಗ, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಪ್ರಾಣಗಳು, ಮನಸ್ಸು, ಬುದ್ಧಿ, ಚಿತ್ತ ಅಹಂಕಾರ ಮತ್ತು ಮುಂದಿನ ಜನ್ಮವನ್ನು ಇತ್ಯರ್ಥಮಾಡುವ, ಮಾರ್ಪಾಡಾಗುವ ಕರ್ಮಾಶ್ರಯ (receptacle of works, the actions of the soul) ಯುಕ್ತವಾದ ಶಾಶ್ವತ ಲಿಂಗ ಶರೀರದೊಡನೆ ಹೋಗುವನು.

ಆಲಂದಿಯ ಸುಪ್ರಸಿದ್ಧ ಯೋಗಿಗಳಾದ ಶ್ರೀ ಜ್ಞಾನದೇವರು ತಮ್ಮ ಹದಿನಾರನೆಯ ವಯಸ್ಸಿನಲ್ಲೇ ಜ್ಞಾನೇಶ್ವರೀ ಗೀತೆಗೆ ಭಾಷ್ಯವನ್ನು ಬರೆದರು. ಅವರು ಜನ್ಮಸಿದ್ಧರು. ನೀವು ನಿಜವಾದ ಶ್ರದ್ಧೆಯಿಂದ ಪ್ರಯತ್ನಿಸಿದರೆ, ನೀವೂ ಸಿದ್ಧರಾಗಬಲ್ಲಿರಿ. ಒಬ್ಬರು ಪ್ರಾಪ್ತಿಮಾಡಿಕೊಂಡುದನ್ನೇ ಇನ್ನೊಬ್ಬರೂ ಪಡೆಯಲು ಸಾಧ್ಯವು.

ಆಗತಾನೇ ಹುಟ್ಟಿದ ಮಗುವು ಹೆಚ್ಚು ನೋವಿನಿಂದ ನರಳುತ್ತಿದ್ದರೆ, ಅದು ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಟ ಕರ್ಮದ ಫಲವಾಗಿರಬೇಕು. ಹಿಂದಿನ ಜನ್ಮದಲ್ಲಿನ ಆತನ ಆ ಕೆಟ್ಟ ಕೆಲಸಕ್ಕೆ ಪ್ರಚೋದನೆ ಯಾವುದೆಂದು ಕೇಳಿದರೆ, ಅದರ ಹಿಂದಿನ ಜನ್ಮದ ಫಲವೇ ಇದಕ್ಕೆ ಕಾರಣವಾಗಿರುವುದು.

ಹಲವು ಬುದ್ಧಿವಂತ ತಂದೆಯರಿಗೆ ದಡ್ಡ ಮಕ್ಕಳಿರುವರು. ಪೂರ್ವ ಜನ್ಮದಲ್ಲಿ ನೀನು ಹಸಿವಿನಿಂದ ಸಾಯುವ ಸ್ಥಿತಿಯಲ್ಲಿದ್ದು, ಒಬ್ಬ ಕುರುಬರ ಬಾಲಕನು ನಿನಗೆ ಸ್ವಲ್ಪ ಆಹಾರ ಮತ್ತು ಪಾನೀಯಗಳನ್ನು ನೀಡಿದ್ದರೆ, ಈಗ ಅವನು ನಿನ್ನ ಆಸ್ತಿಯನ್ನು ಅನುಭವಿಸಲು ದಡ್ಡ ಮಗನಾಗಿ ಹುಟ್ಟುವನು.

ಪ್ರಾಣಿಗಳು ಹುಟ್ಟಿದಾಗ, ಸ್ತನ್ಯಪಾನಮಾಡುವ ಆಸಕ್ತಿಯನ್ನು ತೋರುವುನಲ್ಲದೆ, ಭಯದ ಹುಟ್ಟುಗುಣವನ್ನೂ ಪ್ರದರ್ಶಿಸುವವು. ಅದರಿಂದ ತಿಳಿದುಬರುವುದೇನೆಂದರೆ, ಅವು ತಮ್ಮ ಪೂರ್ವಜನ್ಮದಲ್ಲಿ ಅನುಭವಿಸಿದ ನೋವು ಮತ್ತು ಸ್ತನ್ಯಪಾನದ ಸ್ಮೃತಿಯನ್ನು ವ್ಯಕ್ತಗೊಳಿಸುವವು. ಇದರಿಂದ ಪುನರ್ಜನ್ಮವುಂಟೆಂದು ತಿಳಿಯುವುದು.

ಕೇವಲ ಮಗುವೂ ಸಹ, ಹರ್ಷ (exhilaration), ಶೋಕ (grief), ಭಯ, ಕ್ರೋಧ ಸುಖ ಹಾಗೂ ದುಃಖವನ್ನು ಪ್ರದರ್ಶಿಸುವದು. ಈ ಜನ್ಮದ ಧರ್ಮಾಧರ್ಮ ಸಂಸ್ಕಾರಗಳು ಇವಕ್ಕೆ ಕಾರಣಗಳಾಗಲಾರವು. ಪೂರ್ವ ಜನ್ಮದ ಸಂಸ್ಕಾರಗಳು ಅವಕ್ಕೆ ಆಶ್ರಯ (support) ವಾಗಿರಬೇಕು. ಇದರಿಂದ ಜೀವನಿಗೆ ಪೂರ್ವಜನ್ಮ ಮತ್ತು ಪುನರ್ಜನ್ಮಗಳಿರುವವೆಂದೂ ಊಹಿಸಬಹುದು ಮತ್ತು ಜೀವನು ಅನಾದಿಯೆಂದೂ ಕಲ್ಪಿಸಬಹುದು. ಜೀವನು ಅನಾದಿಯೆಂದು ಒಪ್ಪದಿದ್ದರೆ, ಕೃತನಾಶ ಮತ್ತು ಅಕೃತಾಭ್ಯಾಗಮ ಎಂಬ ಎರಡು ದೋಷಗಳು ಪ್ರಾಪ್ತವಾಗುವವು. ಹಿಂದಿನ ಸುಖ, ದುಃಖ ಫಲಕಾರಣಗಳಾದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳು ಅನುಭವಿಸಲ್ಪಡದೆ ಉಳಿದಂತಾಗುವುವು.

ಇದು ಕೃತನಾಶದ ದೋಷವು. ಹಾಗೆಯೇ ಹಿಂದಿನ ಪುಣ್ಯಪಾಪ ಕರ್ಮಗಳ ಫಲವಾದ ಸುಖ, ದುಃಖವನ್ನು ಈಗ ಒಬ್ಬನು ಅನುಭವಿಸಲೇಬೇಕು. ಇದು ಅಕೃತಾಭ್ಯಾಗಮದ ದೋಷವು. ಈ ದೋಷದ್ವಯಗಳನ್ನು ಕಳೆಯಲು ಜೀವನು ಅನಾದಿಯೆಂದು (beginningless) ಒಪ್ಪಲೇಬೇಕು.

ಕೆಲವು ಯೋಗಾಭ್ಯಾಸಿಗಳು ಕೇಳುವರು, " ಕುಂಡಲಿನಿಯನ್ನು ಜಾಗೃತ ಮಾಡಲು ಎಷ್ಟು ಕಾಲ ಶೀರ್ಷಾಸನ, ಪಶ್ಚಿಮೋತ್ಥಾನಾಸನ, ಕುಂಭಕ, ಅಥವ ಮಹಾಮುದ್ರೆಯನ್ನು ಅಭ್ಯಸಿಸಬೇಕು ? ಈ ಅಂಶವನ್ನು ಯಾವ ಯೋಗ ಶಾಸ್ತ್ರ ಗ್ರಂಥದಲ್ಲಿಯೂ ಹೇಳಿಲ್ಲವು ". ವಿದ್ಯಾರ್ಥಿಯು ಹಿಂದಿನ ಜನ್ಮದಲ್ಲಿ ಅಭ್ಯಾಸಮಾಡಿ ಬಿಟ್ಟ ಘಟ್ಟದಿಂದ ಈಗ ಮುಂದುವರಿಸುವನು. ಆ ಕಾರಣದಿಂದಲೇ ಅರ್ಜುನನಿಗೆ ಭಗವಾನ್ ಕೃಷ್ಣನು ಹೇಳುವನು :

" ಶುಚಿಗಳೂ ಶ್ರೀಮಂತರೂ ಆಗಿರುವವರ ಮನೆಯಲ್ಲಿ ಯೋಗಭ್ರಷ್ಟನು ಮತ್ತೆ ಜನಿಸುವನು. ಅಥವಾ ಬುದ್ಧಿಶಾಲಿಗಳಾದ ಯೋಗಿಗಳ ಕುಲದಲ್ಲಿಯೇ ಅವನು ಹುಟ್ಟುವನು. ಯಾವುದು ಇಂತಹ ಜನ್ಮವೋ, ಅದೇ ಲೋಕದಲ್ಲಿ ಅತ್ಯಂತ ದುರ್ಲಭವಾದುದು. ಕುರುನಂದನನೇ ! ಅಲ್ಲಿ ಪೂರ್ವ ದೇಹದಲ್ಲಿ ಆಗಿದ್ದ ಆ ಬುದ್ಧಿ ಸಂಯೋಗವನ್ನು ಪಡೆದುಕೊಳ್ಳುವನು. ಮತ್ತು ಯೋಗದ ಸಂಸಿದ್ಧಿಗಾಗಿ ಮತ್ತೂ ಹೆಚ್ಚಿನ ಪ್ರಯತ್ನವನ್ನು ಮಾಡುವನು. [ಗೀತಾ ೬—೪೧, ೪೨, ೪೩] ಅದೆಲ್ಲವೂ ಶುದ್ಧತೆ, ವೈಶಾಲ್ಯತೆ, ನಾಡಿಗಳ ಶುದ್ಧಿ ಮತ್ತು ಪ್ರಾಣಾಯಾಮ ಕೋಶ, ವೈರಾಗ್ಯ ಮತ್ತು ಮುಕ್ತಿಯ ಹಂಬಲದ (yearning) ತೀವ್ರತೆ ಹಾಗೂ ಅಂತಸ್ತನ್ನು (degree) ಅವಲಂಬಿಸುವವು.

ಕೆಲವರು ತಮ್ಮ ಕಳೆದ ಜನ್ಮದಲ್ಲಿ ಅಭ್ಯಸಿಸಿದ ಸಂಯಮಾದಿಗಳಿಂದ ಆತ್ಮಸಾಕ್ಷಾತ್ಕಾರಕ್ಕೆ ಅವಶ್ಯಕವಾದವುಗಳನ್ನೂ ಪರಿಶುದ್ಧತೆಯನ್ನೂ ಪಡೆದೇ ಜನ್ಮವೆತ್ತುವರು. ಅವರು ಜನ್ಮತಃ ಸಿದ್ಧರು. ಗುರು ನಾನಕ್, ಆಲಂದಿಯ ಜ್ಞಾನದೇವ್, ವಾಮದೇವರು, ಅಷ್ಟಾವಕ್ರನೂ ಬಾಲ್ಯದಲ್ಲೇ ಅಭಿಜ್ಞ (adept) ರಾಗಿದ್ದರು. ಗುರುನಾನಕ್ ಶಾಲಾ ಬಾಲಕನಾಗಿರುವಾಗ ತನ್ನ ಗುರುವನ್ನು ' ಓಂ 'ಕಾರದ ಪ್ರಾಮುಖ್ಯತೆಯ ಬಗ್ಗೆ ಪ್ರಶ್ನಿಸಿದನು. ವಾಮದೇವನು ತಾಯಿಯ ಗರ್ಭದಲ್ಲಿರುವಾಗಲೇ ವೇದಾಂತದಮೇಲೆ ಉಪನ್ಯಾಸ ನೀಡಿದನು.

ಫಲದ ಆಶೆಯಿಂದ ಮನುಷ್ಯನು ಕರ್ಮಗಳನ್ನು ಮಾಡುವನು. ಆ ಕರ್ಮಗಳಿಗೆ ತಕ್ಕ ಫಲಗಳನ್ನು ಅನುಭವಿಸಲು ಜನ್ಮಗಳನ್ನು ಪಡೆಯುವನು. ಹೀಗೆ ಉತ್ತರೋತ್ತರ ಕರ್ಮಗಳಿಂದ ಜನ್ಮಾಂತರಗಳು ಪ್ರಾಪ್ತಿಯಾಗುವವು. ಈ ರೀತಿಯಲ್ಲಿ ಸಂಸಾರಚಕ್ರವು ಅನಾದ್ಯನಂತವಾಗಿ ಪರಿಭ್ರಮಣ ಮಾಡುವುದು. ಆತ್ಮಜ್ಞಾನವನ್ನು ಪಡೆದವನು ಈ ಹುಟ್ಟು ಸಾವುಗಳ ಚಕ್ರದಿಂದ ಮುಕ್ತನಾಗುವನು. ಕರ್ಮವು ಅನಾದಿಯಾಗಿರುವಂತೆಯೇ ಸಂಸಾರವೂ ಅನಾದಿಯು. ನಿಸ್ವಾರ್ಥತೆಯಿಂದ, ಫಲಾಪೇಕ್ಷೆಯಿಲ್ಲದೆ (ನಿಷ್ಕಾಮನಾಗಿ) ಕರ್ಮಗಳನ್ನಾಚರಿಸುವವನು, ಕರ್ಮ ಬಂಧನಗಳನ್ನು ಕಳಚಿಕೊಳ್ಳುವನು.

ಬದುಕುವುದಕ್ಕಾಗಿ ಸಾಯಿ. ಈ ಅಲ್ಪವಾದ 'ನಾನು' ಎಂಬುದನ್ನು ಕೊಂದು ಅಮೃತತ್ವವನ್ನು ಪಡೆದುಕೊ. ಬ್ರಹ್ಮದಲ್ಲಿರು. ನೀನು ನಿತ್ಯನಾಗುವಿ. ಆತ್ಮನನ್ನು ಹೊಂದು. ನೀನು ಶಾಶ್ವತನಾಗುವಿ. ಆತ್ಮದೊಡನೆ ಅನನ್ಯ ಸಂಬಂಧವನ್ನು ಪಡೆಯುವವನಾಗು. ಸಾವು ಅಥವ ಸಂಸಾರವೆಂಬ ಸಾಗರವನ್ನು ದಾಟುವಿ. ಸತ್-ಚಿತ್-ಆನಂದ ಸ್ವರೂಪದಲ್ಲಿ ವಿಶ್ರಾಂತನಾಗು. ನೀನು ಅಮರನಾಗುವಿ.

ಜಿಗಣೆಯು ಗರಿಕೆಯ ಒಂದು ತುದಿಯಿಂದ ಮತ್ತೊಂದರ ತುದಿಯನ್ನು ಹಿಡಿಯುವುದು. ಮೊದಲು ತನ್ನ ಮುಂಭಾಗದಿಂದ ಹುಲ್ಲನ್ನು ಹಿಡಿದು ನಂತರ ಹಿಂಭಾಗವನ್ನು ಸೆಳೆದುಕೊಳ್ಳುವದು. ಹಾಗೆಯೇ ಜೀವಾತ್ಮನು (individual soul). ಈ ದೇಹವನ್ನು ತೊರೆಯುವ ಮುನ್ನ ಇನ್ನೊಂದನ್ನು ಭಾವದಿಂದ ರೂಪಿಸಿಕೊಂಡು ಬಳಿಕ ಹೊಸ ದೇಹವನ್ನು ಪ್ರವೇಶಿಸುವನು.

ಮಹಾಭಾರತದಲ್ಲಿ ಹೇಳಿರುವುದೇನೆಂದರೆ: "ಕರುವು ಸಾವಿರಾರು ಹಸುಗಳ ಪೈಕಿ ತನ್ನ ತಾಯಿಯನ್ನೇ ಹೇಗೆ ಗುರುತಿಸುವುದೋ ಹಾಗೆಯೇ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು, ಮಾಡಿದವನನ್ನು ಈ ಜನ್ಮದಲ್ಲಿ ಹಿಂಬಾಲಿಸುವದು.

ಶ್ಲೋ|| ಯಾದೃಶಂ ಕ್ರಿಯತೇ ಕರ್ಮ ತಾದೃಶಂ ಭುಜ್ಯತೇ ಫಲಮ್ |
ಯಾದೃಶಂ ವ್ಯಾಪ್ಯತೇ ಬೀಜಂ ತಾದೃಶಂ ಪ್ರಾಪ್ಯತೇ ಫಲಮ್ ||

ಬಿತ್ತಲ್ಪಟ್ಟ ಬೀಜಕ್ಕೆ ತಕ್ಕಂತೆ ಹಣ್ಣು ಹೇಗೆ ಹೊಂದಿಕೆಯಾಗುವುದೋ, ಹಾಗೆಯೇ ಕರ್ಮದ ಫಲವು, ನಾವು ಆಚರಿಸಿದ ಕರ್ಮಕ್ಕೆ ತಕ್ಕಹಾಗಿರುವದು.

ಇದು ಪ್ರಕೃತಿಯ ಅಮೋಘವಾದ (infallible) ನಿಯಮವು. ಮಾವಿನ ಬೀಜವನ್ನು ಬಿತ್ತಿದವನು ಹಲಸಿನ ಹಣ್ಣನ್ನು ನಿರೀಕ್ಷಿಸುವುದಿಲ್ಲ. ಜೀವಮಾನ ವೆಲ್ಲ ಕೆಟ್ಟ ಕರ್ಮಗಳನ್ನೆಸಗಿದವನು ಭಾವೀಜನ್ಮದಲ್ಲಿ ಸುಖ, ಶಾಂತಿ, ಮತ್ತು ಅಭ್ಯುದಯವನ್ನು ನಿರೀಕ್ಷಿಸಲಾಗದು.

"ನಾವು ಒಟ್ಟಿಗೆ ಇರುವದೂ, ಪ್ರತ್ಯೇಕವಾಗಿರುವದೂ, ಮತ್ತೆ ಕೂಡು ವದೂ ಹಿಂದೆ ಇದ್ದಂತೆಯೇ ಮುಂದೂ ನಡೆಯುವದು. ಧಾನ್ಯ ರಾಶಿಯಿಂದ ಹಿಡಿ ಕಾಳನ್ನು ತೆಗೆದು ಮತ್ತೊಂದು ಧಾನ್ಯ ರಾಶಿಗಳಲ್ಲಿ ಸೇರಿಸಿದುದರಿಂದ ಹೊಸ ಹೊಸ ರೀತಿಯ ರೂಪಗಳು ಆಗುವಂತೆ ವಿಶ್ವದ ವಿಚಿತ್ರ ರಚನಾ ರೀತಿಯಲ್ಲಿಯೂ ಜೀವರುಗಳ ಸ್ಥಿತಿಯಾಗಿರುವುದು" —ಯೋಗವಾಸಿಷ್ಠ.

---

## ೪. ಸಾವು (ಮರಣ) ಎಂದರೇನು ? ಅದನ್ನು ಜಯಿಸುವುದು ಹೇಗೆ ?

ಮರಣವೆಂದರೆ ರೂಪಾಂತರವು. ಭೌತಶರೀರದಿಂದ ಸೂಕ್ಷ್ಮ ಶರೀರವು ಪ್ರತ್ಯೇಕವಾಗುವದೇ ಮರಣವು. ಪ್ರಿಯ ವಿಶ್ವನಾಥನೇ! ಸಾವಿಗಾಗಿ ಏಕೆ ಅಷ್ಟೊಂದು ಅಂಜುವೆ ?

ಎಚ್ಚರವು ನಿದ್ದೆಯನ್ನು ಹಿಂಬಾಲಿಸುವಂತೆ ಜನನವು ಮರಣವನ್ನು ಹಿಂಬಾಲಿಸುವದು. ಹಿಂದಿನ ಜನ್ಮದಲ್ಲಿ ಪೂರ್ಣಮಾಡದೆ ಬಿಟ್ಟಿದ್ದ ಕರ್ಮ ಗಳನ್ನು ಈ ಜನ್ಮದಲ್ಲಿ ಮತ್ತೆ ಕೈಗೊಳ್ಳುವೆ. ಆದ್ದರಿಂದ ಸಾವಿನಿಂದ ದಿಗಿಲು ಬೀಳಬೇಡ.

ಧರ್ಮ ಮತ್ತು ಧಾರ್ಮಿಕ ಜೀವನದ ಬಲವಾದ ಚಲನ ಪ್ರೇರಕ ಶಕ್ತಿಯು (motive power) ಮರಣದ ಭಾವನೆಯೇ ಆಗಿರುವುದು. ಮನುಷ್ಯನು ಮರಣಕ್ಕೆ ಹೆದರುವನು. ವೃದ್ಧಾಪ್ಯದಲ್ಲಿ ದೇವರನ್ನು ಚಿಂತಿಸಲು ಯತ್ನಿಸುವನು. ಬಾಲ್ಯದಿಂದಲೇ ಭಗವಂತನನ್ನು ಸ್ಮರಿಸುತ್ತಿದ್ದರೆ, ವೃದ್ಧಾಪ್ಯ ದಲ್ಲಿ ಅಮೂಲ್ಯವಾದ ಆಧ್ಯಾತ್ಮಿಕ ಫಲವನ್ನು ಪಡೆಯುವಿರಿ. ಮನುಷ್ಯನಿಗೆ

ಸಾಯಲು ಇಚ್ಛೆಯಿಲ್ಲವು. ಚಿರಕಾಲ ಬಾಳಬೇಕೆಂದು ಅವನಿಗೆ ಅಭಿಲಾಷೆ ಇರುವದು. ಇದೇ ತತ್ತ್ವ ಜಿಜ್ಞಾಸೆಯ ಉಪಕ್ರಮ ಸ್ಥಾನವು (starting point) ತತ್ತ್ವ ಶಾಸ್ತ್ರವು ಜಿಜ್ಞಾಸೆಮಾಡುವುದು ಮತ್ತು ಪರೀಕ್ಷಿಸುವದು. ಅದು ದಿಟ್ಟತನದಿಂದ ಘೋಷಿಸುವದು. "ಮಾನವನೆ! ಸಾವಿಗೆ ಹೆದರ ಬೇಡ. ಶಾಶ್ವತವಾದ ಸ್ಥಾನವೊಂದಿರುವದು. ಅದೇ ಬ್ರಹ್ಮವು. ನಿನ್ನ ಹೃದಯಾಕಾಶದಲ್ಲಿ ನೆಲಸಿರುವದೇ ನಿನ್ನ ಆತ್ಮವು. ಹೃದಯ ಶುದ್ಧಿಯಿಂದ, ಶುದ್ಧವೂ, ಅಮರವೂ, ಪರಿಣಾಮ ರಹಿತವೂ ಆದ ಆತ್ಮನನ್ನು ಧ್ಯಾನಿಸು. ನೀನು ಅಮೃತತತ್ವವನ್ನು ಪಡೆಯುವೆ."

ಸಾವು ಬದುಕಿನ ವಿರೋಧಿಯಲ್ಲವು. ಅದು ಬದುಕಿನ ಒಂದು ಅವಸ್ಥೆಯು (phase). ಹಣ್ಣು ನಾಶವಾಗುವುದು, ಆದರೆ ಬೀಜವು ಸತ್ತ್ವ ಪೂರ್ಣವು. ಬೀಜವು ಸಾಯುವುದು, ಆದರೆ ಆ ಬೀಜದಿಂದ ದೊಡ್ಡ ಮರವು ಬೆಳೆಯುವುದು. ಮರವು ನಾಶವಾಗಿ ಬೆಲೆಯುಳ್ಳ ಕಲ್ಲಿದ್ದಲಾಗುವುದು. ನೀರು ಅದೃಶ್ಯವಾಗಿ ಹೊಸ ಬದುಕಿಗೆ ಕಾರಣವಾದ ಬೀಜ ಭೂತವಾದ, ಅವ್ಯಕ್ತವಾದ, ಆವಿಯಾಗುವದು. ಕಲ್ಲು ಕಣ್ಮರೆಯಾಗುವುದು. ಆದರೆ ಸುಣ್ಣವೆಂಬ ಹೊಸ ಬಾಳನ್ನು ಹೊಂದುವುದು. ಭೌತಶರೀರವು ಬಿದ್ದು ಹೋಗುವುದು, ಆದರೆ ಪ್ರಾಣವು ದೃಢವಾಗಿ ನಿಲ್ಲುವುದು.

"ಈ ಭೂಮಿಯಮೇಲೆ ಸಾವಿಗೆ ಹೆದರದವನು ಯಾರಿದ್ದಾನೆ? ಬಹಳ ಕಷ್ಟದಲ್ಲಿರುವಾಗ, ಬದುಕಿನ ಸಮತೋಲನ ತಪ್ಪಿ ಕಳವಳಗೊಂಡಿರು ವಾಗ, ತೀವ್ರ ಸಂಕಟದಲ್ಲಿರುವಾಗ ಯಾರುತಾನೆ ಭಗವನ್ನಾಮವನ್ನು, ಉಚ್ಚರಿಸುವುದಿಲ್ಲ?" ಹೇಳಬಲ್ಲೆಯಾ, ಮಿತ್ರನೆ! ಸಂದೇಹವಾದಿಗಳೇ! ದೇವರ ಇರುವಿಕೆಯನ್ನು ಹೇಗೆ ನಿರಾಕರಿಸುವಿರಿ? ತೊಂದರೆಯಲ್ಲಿರುವಾಗ ನೀವೇ ಅವನ ಸತ್ಯತೆಯನ್ನು ಒಪ್ಪುವಿರಿ. ವಕ್ರಬುದ್ಧಿ ಹಾಗು ಪ್ರಾಪಂಚಿಕ ಪ್ರಮ ತ್ತತೆಯಿಂದ ನಾಸ್ತಿಕರಾಗಿರುವಿರಿ. ಇದು ಮಹದಪರಾಧವಲ್ಲವೆ? ಅರ್ಥ ಗರ್ಭಿತವಾಗಿ ಆಲೋಚಿಸಿ. ವಾದಿಸಬೇಡಿ. ಭಗವಂತನನ್ನು ಮರೆಯದಿರಿ. ಈಗಲೇ ಅಮರತೆಯನ್ನೂ, ನಿತ್ಯ ಶಾಂತಿಯನ್ನೂ ಪಡೆದುಕೊಳ್ಳಿ. ಸಾವಿನ ಚಳುಕು, ೭೨,೦೦೦ ಚೇಳುಗಳು ಏಕಕಾಲದಲ್ಲಿ ಕಡಿದರೆ ಆಗುವಷ್ಟು ಯಾತನೆಗೆ ಸಮನೆಂದು ಗರುಡ ಪುರಾಣ ಮತ್ತು ಆತ್ಮ ಪುರಾಣಗಳಲ್ಲಿ ವಿವರಿ

ಸಲ್ಪಟ್ಟಿದೆ. ಕೇಳುವವರಿಗೆ ಹಾಗೂ ಓದುವವರಿಗೆ ಭಯವಾಗಲೆಂದು ತಿಳಿಸಿರುವುದು ಮಾತ್ರವಲ್ಲದೆ ಮೋಕ್ಷಕ್ಕೆ ತಕ್ಕ ಪ್ರಯತ್ನವನ್ನು ಮಾಡಲು ಪ್ರೇರೇಪಿಸುವುದು. ಆದರೆ ಅಧ್ಯಾತ್ಮ ಶಾಸ್ತ್ರದಲ್ಲಿನ ಹಲವು ಜ್ಞಾನಿಗಳ ಏಕಾಭಿಪ್ರಾಯದಿಂದ ಸಾವಿನ ಸಮಯದಲ್ಲಿ ನೋವಿನ ಲವಲೇಶವೂ ಇರುವುದಿಲ್ಲವೆಂದು, ಭೌತ ಶರೀರದ ಭಾರವನ್ನು ಕಳಚಿಕೊಳ್ಳುವಾಗ ಪೂರ್ಣವಾದ ಚಿತ್ತಸ್ವಾಸ್ಥ್ಯ ಹಾಗೂ ಶಾಂತಿಯನ್ನು ಅನುಭವಿಸಿದೆವೆಂದು ಅವರು ಸ್ಪಷ್ಟವಾಗಿ ವಿವರಿಸಿದ್ದಾರೆ. ಮಾಯೆಯು ದೇಹದಲ್ಲಿ ಉಂಟುಮಾಡುವ ಸೆಳೆತದ ಸಂಕ್ಷೋಭನೆಗಳಿಂದ (convulsive twitchings) ನೋಡುವವರಿಗೆ ವ್ಯರ್ಥವಾದ ಭಯೋತ್ಪಾದನೆಯಾಗುವುದು. ಅದು ಮಾಯಾಶಕ್ತಿಯ ಸ್ವಭಾವ ಹಾಗು ರೂಢಿಯು (habit). ಸಾವಿನ ಸೆಳೆತಕ್ಕೆ ಅಂಜದಿರಿ. ನೀವು ಅಮರರು (Immortal).

ಜಪ, ಕೀರ್ತನ, ದೀನರ ಸೇವೆ ಮತ್ತು ಧ್ಯಾನದ ಮೂಲಕ ದೇವರಲ್ಲಿ ನಿಲ್ಲಲು ಸಂತತವಾಗಿ ಯತ್ನಿಸಿರಿ. ಆಗ ಮಾತ್ರವೇ ನೀವು ಕಾಲ ಹಾಗೂ ಮೃತ್ಯುವನ್ನು ಜಯಿಸಲು ಸಮರ್ಥರಾಗುವಿರಿ.

ನಿಮ್ಮ ಪ್ರಾಣವನ್ನು ಸೆಳೆದೊಯ್ಯಲು ಯಮದೇವನು ಬಂದಾಗ, ' ಈ ಜನ್ಮದಲ್ಲಿ ಭಗವಂತನನ್ನು ಆರಾಧಿಸಲಾಗಲಿಲ್ಲ ' ಎಂಬ ನಿಮ್ಮ ನೆಪಗಳನ್ನು ಅವನು ಒಪ್ಪುವುದಿಲ್ಲ.

ಬ್ರಹ್ಮಜ್ಞಾನವೊಂದೇ ಅಜ್ಞಾನ ಅಥವ ಮೃತ್ಯುವಿನ ಹಿಡಿತದಿಂದ ನಮ್ಮನ್ನು ಮುಕ್ತಮಾಡಬಲ್ಲುದು. ಈ ಜ್ಞಾನವು ಧ್ಯಾನದ ಮೂಲಕವೇ ಪ್ರತ್ಯಕ್ಷಾನುಭವ (direct realisation) ವಾಗಬೇಕು. ಕೇವಲ ವಿದ್ವತ್ ಅಥವ ಬುದ್ಧಿಶಕ್ತಿ ಅಥವ ಶಾಸ್ತ್ರಗಳ ಅಭ್ಯಾಸವು ಪರಮಾರ್ಥ (summum bonum) ವನ್ನು ಪಡೆಯಲು ನೆರವು ನೀಡಲಾರದು. ಅದು ಪ್ರತ್ಯಕ್ಷಾನುಭವದಿಂದಲೇ (direct experience) ಸಾಧ್ಯವು, ತರ್ಕ ಅಥವ ವಾದದಿಂದಲ್ಲವು.

ದುರವಗಾಹ್ಯವಾದ ಚಿಂತನೆಗಳ ನಿರಂತರ ಅಭ್ಯಾಸದಿಂದ ಮತ್ತೆ ಮನುಷ್ಯನಾಗಿ ಜನಿಸಿ, ಮತ್ತೂ ಅಮೂರ್ತವಾದ ಚಿಂತನ (abstract thinking) ಸಾಮರ್ಥ್ಯವನ್ನು ಗಳಿಸಬಹುದು. ಹುಡುಗಾಟಿಕೆಯ

(flippant) ದುಡುಕಿನ ಭಾವನೆಗಳಿಂದ, ವಸ್ತುವಿನಿಂದ ವಸ್ತುವಿಗೆ ಹಾರಾಡುವ ಚಪಲ ಚಿತ್ತದಿಂದ, ಈ ಜಗತ್ತಿನಲ್ಲಿ ಶಾಂತಿಹೀನವೂ, ನಿಯಮ ರಹಿತವೂ ಆದ ಮನಸ್ಸಿನ ಅನುಸರಣೆಗೆ ತಕ್ಕ (bequeath) ಜನ್ಮವೆತ್ತು ವಂತಾಗುವದು.

ಮಾನವನ ನೋವುಗಳಿಗೆ ಮೂಲಕಾರಣವಾದ ಅಜ್ಞಾನ ಅಥವ ಅವಿದ್ಯೆಯನ್ನು ಆತ್ಮಸಾಕ್ಷಾತ್ಕಾರವು ಕಳೆಯುವದು. ಮತ್ತು ಜಗತ್ತಿನ ಪರಿಭ್ರಮಣ ಅಥವ ಸಂಸಾರದ ಸಹಗಾಮಿಗಳಾದ ಜನನಮರಣದ ಉಗ್ರ ವ್ಯಾಧಿಗಳಾದ, ಶೋಕ, ಮೋಹ, ವಿನಾಶಕ ಸಾಧನವಾದ ಆತ್ಮಜ್ಞಾನೋ ದಯವನ್ನುಂಟುಮಾಡುವುದು.

ನಿತ್ಯಶುದ್ಧನಾದ ಜ್ಞಾನಸೂರ್ಯನು ನಿಮ್ಮ ಹೃದಯಾಕಾಶದಲ್ಲಿ ಬೆಳಗು ತ್ತಿರುವನು. ಈ ಅಧ್ಯಾತ್ಮ ಸೂರ್ಯನು ಸ್ವಯಂಜ್ಯೋತಿಯು (self-luminous). ಎಲ್ಲರ ಆತ್ಮವಾದ ಇದು ವಾಙ್ಮನಸ್ಸುಗಳಿಗೆ ಮೀರಿದುದು (transcends). ಈ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡರೆ ನೀನು ಮತ್ತೆ ಈ ಮರ್ತ್ಯಲೋಕಕ್ಕೆ ಹಿಂತಿರುಗುವುದಿಲ್ಲ.

ಹುಟ್ಟು ಸಾವುಗಳು ಮಾಯೆಯ ತಂತ್ರದಿಂದ ಸೃಷ್ಟಿಯಾದ ಜಗನ್ನಾಟಕ ದಲ್ಲಿನ ಎರಡು ಮಿಥ್ಯಾದೃಶ್ಯಗಳು ಮಾತ್ರವಾಗಿವೆ. ನಿಜವಾಗಿ ಯಾರೂ ಬರುವುದಿಲ್ಲ ಹಾಗೂ ಯಾರೂ ಹೋಗುವುದಿಲ್ಲ. ಆತ್ಮವೊಂದೇ ಎಂದೆಂದಿಗೂ ಇರುವದು. ವಿಚಾರದ ಮೂಲಕ, ಭಯ ಮತ್ತು ಮೋಹವನ್ನು ನಾಶಗೊಳಿಸಿ ಶಾಂತಿಯಲ್ಲಿ ನೆಲಸಿರಿ.

"ಆದಿತ್ಯನಂತೆ ಪರಿಶೋಭಿಸುವ, ಅಂಧಕಾರದ ಆಚೆಗಿರುವ ಆ ಬಲಿಷ್ಠ ಪುರುಷನನ್ನು ನಾನು ಅರಿತಿರುವೆನು. ಅವನೊಬ್ಬನನ್ನು ಅರಿಯುವು ದೊಂದರಿಂದಲೇ, ಮೃತ್ಯುವನ್ನು ಗೆಲ್ಲುವೆನು. ಮೋಕ್ಷಕ್ಕೆ ಬೇರೆಯ ಮಾರ್ಗವೇ ಇಲ್ಲವು.' (ಯಜುರ್ವೇದ XXXI—181)

ಯೋಗಶಾಸ್ತ್ರದಲ್ಲಿನ ಯಾವವೊಂದು ಮಾರ್ಗವೂ ನಿರರ್ಥಕವಲ್ಲ. ಯೋಗದ ಕಿಂಚಿದಭ್ಯಾಸವು ನೀಡುವ ಫಲವನ್ನು ನೀವು ತಿಳಿಯಬಲ್ಲಿರಿ. ಈ ಜನ್ಮದಲ್ಲಿ ಯೋಗದ ಮೂರು ಅಂಗಗಳಾದ ಯಮ, ನಿಯಮ, ಆಸನದ ಅಭ್ಯಾಸದಲ್ಲಿ ಜಯಶಾಲಿಗಳಾದರೆ ಮುಂದಿನ ಜನ್ಮದಲ್ಲಿ ನಾಲ್ಕನೆಯ ಅಂಗ

ವಾದ ಪ್ರಾಣಾಯಾಮದ ಅಭ್ಯಾಸದಿಂದ ಸಾಧನೆಯನ್ನು ಆರಂಭಿಸುವಿರಿ. ವೇದಾಂತಿಯಾದವನು ಈ ಜನ್ಮದಲ್ಲಿ ವಿವೇಕ, ವೈರಾಗ್ಯ ಸಂಪನ್ನನಾದರೆ, ಮುಂದಿನ ಜನ್ಮದಲ್ಲಿ ಶಮ, ದಮಗಳನ್ನು ಅಭ್ಯಾಸಮಾಡಲು ಆರಂಭಿಸುವನು. ಆದ್ದರಿಂದ ಈ ಜನ್ಮದಲ್ಲಿ ಕೈವಲ್ಯ, ಅಥವ ಮುಕ್ತಿ, ಅಥವ ಅಸಂಪ್ರಜ್ಞಾತ ಸಮಾಧಿಯನ್ನು ಪಡೆಯಲಾಗದಿದ್ದರೆ ಸ್ವಲ್ಪವೂ ನಿರಾಶರಾಗಬೇಡಿ. ಸ್ವಲ್ಪ ಕಾಲವೇ ಮಾಡಿದ ಅಲ್ಪವಾದ ಅಭ್ಯಾಸವೂ ನಿಮಗೆ ಹೆಚ್ಚಿನ ಬಲ, ಶಾಂತಿ, ಆನಂದ, ಮತ್ತು ತಿಳಿವಳಿಕೆಯನ್ನು ನೀಡುವುದು.

ನೀವು ಎಂದೂ ಹುಟ್ಟಲಿಲ್ಲವಾದ್ದರಿಂದ ಎಂದಿಗೂ ಸಾಯಲಾರಿರಿ. ನೀವು ಅಮರವಾದ ಆತ್ಮವು. ಜನನ ಮರಣಗಳು ಮಾಯೆಯು ಹೂಡಿದ ಕಾಲ್ಪನಿಕ ನಾಟಕದ ಎರಡು ದೃಶ್ಯಗಳು. ಅವು ಪಂಚಭೂತಗಳಿಂದಾದ ದೇಹಕ್ಕೆ ಸಂಬಂಧಿಸಿವೆ. ಹುಟ್ಟು, ಸಾವಿನ ಭಾವನೆಯು ಕೇವಲ ಮೂಢ ನಂಬಿಕೆಯಾದು.

ಈ ಭೌತ ಶರೀರವು ಭಗವಂತನ ಲೀಲೆಗಾಗಿ ಮಾಡಲ್ಪಟ್ಟಿರುವ ಮೃಣ್ಮಯವಾದ ಬೊಂಬೆಯು. ಭಗವಂತನೇ ಸೂತ್ರಧಾರನು. ಅವನು ಇಚ್ಛಿಸಿದಷ್ಟು ಕಾಲವೂ ಆ ಬೊಂಬೆಯು ಚಲಿಸುವಂತೆ ಮಾಡುವನು. ಪರಿಣಾಮವಾಗಿ, ಆ ಬೊಂಬೆಯನ್ನು ಮುರಿದು, ಚೂರುಪಾರುಗಳನ್ನು ಎಸೆದು ಬಿಡುವನು. ಇಬ್ಬರ ಆಟವು ನಿಲ್ಲುವುದು. ಅಲ್ಲಿರುವುದು ಏಕತ್ವವೇ (oneness). ಜೀವಾತ್ಮವು ಪರಮಾತ್ಮದಲ್ಲಿ ಒಂದಾಗುವದು (merges).

ಆತ್ಮಜ್ಞಾನವು ಸಾವಿನ ಭಯವನ್ನು ಕಳೆಯುವುದು. ಜನರು ವಿನಾ ಕಾರಣ ಸಾವಿನ ಬಗ್ಗೆ ಎಚ್ಚರ ವಹಿಸುವರು. ಸಾವು ನಿದ್ದೆಯಂತಿರುವುದು. ಹುಟ್ಟು, ನಿದ್ದೆಯಿಂದ ಬೆಳಕಿನಲ್ಲಿ ಎಚ್ಚರಗೊಂಡಂತೆ. ಹೊಸ ಬಟ್ಟೆಯನ್ನು ನೀನು ಧರಿಸುವಂತೆ, ಮರಣಾನಂತರ ಹೊಸ ದೇಹವನ್ನು ಧರಿಸುವೆ. ಸಾವು ಸ್ವಾಭಾವಿಕವಾದ ಒಂದು ಘಟನೆ ಮಾತ್ರ. ನಿನ್ನ ವಿಕಾಸಕ್ಕೆ ಅದು ಅವಶ್ಯಕವು. ಭೌತಶರೀರವು ಇನ್ನೂ ಹೆಚ್ಚಿನ ಕಾರ್ಯಕ್ಕೆ ಅನರ್ಹವೂ ಅನುಪಯುಕ್ತವೂ ಆದಾಗ, ಭಗವಾನ್ ರುದ್ರನು, ಅದನ್ನು ಕಳೆದು ಹೊಸ ದೇಹವನ್ನು ಒದಗಿಸುವನು. ಸಾವಿನ ಸಮಯದಲ್ಲಿ ನೋವಿಲ್ಲವು. ಅಜ್ಞಾನಿಗಳಾದವರು ಸಾವಿನ ಬಗ್ಗೆ ಗಾಬರಿಯನ್ನೂ ಭಯವನ್ನೂ ಸೃಷ್ಟಿಸಿದ್ದಾರೆ.

ಇರುವದು ಸತ್ಯವೊಂದೇ—ಬ್ರಹ್ಮ. ಹಗ್ಗದಲ್ಲಿ ಹಾವನ್ನು ಆರೋಪಿಸಿದಂತೆ (superimpose), ಬ್ರಹ್ಮದಲ್ಲಿ ಈ ಜಗತ್ತು ಮತ್ತು ದೇಹವು ಆರೋಪಿಸಲ್ಪಟ್ಟಿವೆ. ಎಲ್ಲಿಯವರೆಗೆ ಹಗ್ಗವೆಂದು ಅರಿಯದೆ, ಹಾವಿನ ಭಾವದ ಪಟ್ಟು ಹಿಡಿದಿದೆಯೋ ಅಷ್ಟು ಕಾಲವೂ ಭಯದಿಂದ ನೀವು ಬಿಡುಗಡೆಯಾಗುವುದಿಲ್ಲ. ಹಾಗೆಯೇ ಬ್ರಹ್ಮವನ್ನು ಅರಿಯುವವರೆವಿಗೂ ಇದು ಜಡವಾದ ಜಗತ್ತಾಗಿಯೇ ತೋರುವುದು. ಬೆಳಕಿನ ಸಹಾಯದಿಂದ, ಹಾವೆಂಬ ಭ್ರಾಂತಿಯು ತೊಲಗಿ, ಹಗ್ಗದ ನಿಶ್ಚಯವಾದ ಜ್ಞಾನದಿಂದ ಭಯವು ಮಾಯವಾಗುವುದು. ಹಾಗೆಯೇ ಬ್ರಹ್ಮವೆಂದು ಅರಿತಾಗ, ಜಗದ್ಭಾವನೆಯು ನಶಿಸಿ, ಹುಟ್ಟು ಸಾವುಗಳ ಅಂಜಿಕೆಯಿಂದ ಮುಕ್ತರಾಗುವಿರಿ.

ನೀವು ಸತ್ತಂತೆಯೂ, ನಿಮ್ಮ ಬಂಧುಗಳು ಅಳುತ್ತಿರುವಂತೆಯೂ ಕೆಲವು ಸಲ ಕನಸು ಕಾಣುವಿರಿ. ಆ ಕಲ್ಪಿತಾವಸ್ಥೆಯಲ್ಲಿಯೂ ಅವರು ಅಳುವುದನ್ನು ಕಾಣುವಿರಿ, ಮತ್ತು ಕೇಳುವಿರಿ. ಈ ತೋರಿಕೆಯ ಸಾವಿನ ನಂತರವೂ ಜೀವವು ಬದುಕಿರುವುದೆಂದು ಈ ಅವಸ್ಥೆಯು ಸ್ಪಷ್ಟವಾಗಿ ತೋರಿಸುವುದು. ಈ ಭೌತಿಕವಾದ ದೇಹವು ಬಿದ್ದುಹೋದರೂ ನೀನು ಇರುವೆ. ಆ ಇರುವಿಕೆಯೇ 'ಆತ್ಮ' ಅಥವ 'ಅಹಂ' ಎಂಬ ದೊಡ್ಡ 'ನಾನು'.

ಹೃದಯದಲ್ಲಿ ಅಡಗಿರುವ ಅಮೃತಾತ್ಮನನ್ನು ಕಂಡುಕೊಂಡರೆ ಈ ಬಂಧತ್ರಯಗಳಾದ ಅವಿದ್ಯಾ, ಕಾಮ, ಕರ್ಮವೆಂಬ ಗ್ರಂಥಿಗಳು ಛಿದ್ರವಾಗುವವು. ಅವಿದ್ಯಾ, ಅವಿವೇಕ, ಅಹಂಕಾರ, ಸಂಕಲ್ಪವಿಕಲ್ಪ, ಕರ್ಮ, ದೇಹವೆಂಬ ಗ್ರಂಥಿಗಳು ಭೇಧಿಸಲ್ಪಟ್ಟಾಗ, ಹುಟ್ಟು ಸಾವುಗಳ ಸುಳಿಯಿಂದ ಬಿಡುಗಡೆಯಾಗಿ ಮೃತ್ಯುರಹಿತವಾದ ನಗರವನ್ನು ಪ್ರವೇಶಿಸುವಿರಿ.

---

## ೫. ಮೋಕ್ಷವು

ಬದುಕಿನಲ್ಲಿ ಮೋಕ್ಷವು ಪರಮ ಪುರುಷಾರ್ಥವು (Summum bonum). ಜೀವನದ ಉದ್ದೇಶಗಳನ್ನು ಪರಿಪೂರ್ಣಗೊಳಿಸುವುದು ಮೋಕ್ಷವು. ಜನನ

ಮರಣದಿಂದ ಬಿಡುಗಡೆಯನ್ನು ಹೊಂದುವದು ಅಥವ ಮೋಕ್ಷವನ್ನು ಪಡೆಯು ವುದು ಎಂದರೆ ಈ ಪೃಥ್ವಿಯಲ್ಲಿ ಬಾಳು ಕೊನೆಗೊಂಡಂತೆಯೇ. ಬಾಳ್ವೆ ಯಲ್ಲಿನ ನಿಜವಾದ ಗುರಿಯು ಸ್ವಾತಂತ್ರ್ಯ ಅಥವ ಮೋಕ್ಷವು. ಮೋಕ್ಷವು ಅಮರತೆಯನ್ನೂ, ಅವ್ಯಯವಾದ ಆನಂದವನ್ನೂ ಸಂತತವಾದ ಸುಖವನ್ನೂ, ಕರುಣಿಸುವದು. ಮೋಕ್ಷವು ಸರ್ವನಾಶವಲ್ಲ. ಮೋಕ್ಷವೆಂದರೆ **ದುರಭಿ ಮಾನದ (arrogating)** ಅಲ್ಪಾಹಂಕಾರದ ನಾಶವು. ಜೀವಾತ್ಮನು ಪರಮಾತ್ಮನಲ್ಲಿ ಐಕ್ಯವಾಗುವ ಜ್ಞಾನವೇ ಮೋಕ್ಷವು. ಅಲ್ಪವಾದ ಅಹಂಕಾರ ವನ್ನು ನಾಶಮಾಡುವುದರಿಂದ, ವಿಶ್ವವ್ಯಾಪಕತೆಯ ಪೂರ್ಣತೆಯ (true universality) ನ್ನು ಪಡೆದು, ನಿತ್ಯ ಚೈತನ್ಯ ಸತ್ತ್ವವನ್ನು ಮುಟ್ಟುವಿ.

ಆತ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯು. ಜ್ಞಾನ ಪ್ರಾಪ್ತಿಗೆ ಏಕಾ ಗ್ರತೆಯು (one pointedness) ಅವಶ್ಯವು. ಏಕಾಗ್ರತೆಯು ಉಪಾಸನೆ ಯಿಂದ ಬರುವುದು. ಚಿತ್ತಶುದ್ಧಿಯಿಂದ ಉಪಾಸನೆಯು, ನಿಷ್ಕಾಮ್ಯ ಕರ್ಮ ಯೋಗದಿಂದ ಚಿತ್ತಶುದ್ಧಿಯೂ (Purity of heart) ಲಭಿಸುವುದು. ನಿಷ್ಕಾಮ್ಯಕರ್ಮವನ್ನು ಮಾಡಲು ಇಂದ್ರಿಯಗಳನ್ನು ಹತೋಟಿಯಲ್ಲಿಡಬೇಕು. ವಿವೇಕ, ವೈರಾಗ್ಯಗಳಿಂದ ಮಾತ್ರ ಇಂದ್ರಿಯ ಸಂಯಮವು ಸಾಧ್ಯವು.

ಮೋಕ್ಷವೆಂದರೆ, ಹಿಂದೆ ಇರದಿದ್ದ, ಈಗ ಹೊಸದಾಗಿ ಉಂಟಾದ ಒಂದು ಸ್ಥಿತಿ ಎಂದು ಅರಿಯಬಾರದು. ಅದು ಆಗಲೇ ಪ್ರಾಪ್ತವಾದುದು. ಸರ್ವವೂ ಆ ಪರಬ್ರಹ್ಮದಲ್ಲಿ (Absolute) ಒಂದಾಗಿರುವುದು. ಈಗ ಮಾಡಬೇಕಾದುದು ಭಿನ್ನ ಭಾವನೆಗಳನ್ನು ನಾಶಗೊಳಿಸುವುದೇ ಆಗಿದೆ. ಅಜ್ಞಾನಾವರಣ ದಿಂದ ಮುಚ್ಚಲ್ಪಟ್ಟಿದ್ದ ಜ್ಞಾನಾತ್ಮನನ್ನು ಪ್ರತ್ಯಕ್ಷಾನುಭವ ಮಾಡಿಕೊಳ್ಳು ವುದೇ ಮೋಕ್ಷವು. ಮೋಕ್ಷವೆಂದರೆ, ಸಮಸ್ತ ವಿಧವಾದ ದುಃಖಗಳನ್ನು ಕಳೆದುಕೊಂಡು ದಿವ್ಯಾನಂದದಿಂದ (Supreme Bliss) ಅಥವ ಅಮರತೆ ಯನ್ನು ಕಂಡುಕೊಳ್ಳುವುದೇ ಆಗಿದೆ. ಹುಟ್ಟುಸಾವುಗಳಿಂದ ಬಿಡುಗಡೆ ಹೊಂದುವುದೇ ಮೋಕ್ಷವು.

ಮುಕ್ತಿಯೇ (freedom) ನಿಮ್ಮ ಸಹಜ ಸ್ವಭಾವವು. ಅದನ್ನು ನಿಮ್ಮ ಅಂತಃಸ್ಫೂರ್ತಿಯ ಪ್ರತ್ಯಕ್ಷಾನುಭವದ (direct intuitive experience) ಮೂಲಕ ಅರಿಯಲ್ಪಡಬೇಕು. ಆತ್ಮಧ್ಯಾನದಿಂದ ಅಜ್ಞಾನದ

ತೆರೆಯನ್ನು (Veil of ignorance) ಕತ್ತರಿಸಿ ತೆಗೆಯಿರಿ ಆಗ ನಿಮ್ಮ ಸಹಜ ಸುಂದರ ಶುದ್ಧತೆ ಹಾಗು ದಿವ್ಯ ಮಹಿಮೆಯಿಂದ ಬೆಳಗುವಿರಿ

ಬ್ರಹ್ಮ, ಆತ್ಮ, ತಾನು, ಪುರುಷ, ಚೈತನ್ಯ, ಅರಿವು, ದೇವ, ಅಮೃತತ್ವ, ಮೋಕ್ಷ, ಪೂರ್ಣತೆ, ಶಾಂತಿ, ಆನಂದ, ಭೂಮ ಅಥವ ನಿರ್ಬಂದವಿಲ್ಲದ್ದು (unconditioned) ಸಮಾನಾರ್ಥಕ (synonymous) ಶಬ್ದಗಳು ಮೋಕ್ಷವು ಪರಮ ಪ್ರಯೋಜನವು, ಜ್ಞಾನವು ಅವಾಂತರ ಪ್ರಯೋಜನದ ಲಾಭವು ಬಾಳೆಯ ಹಣ್ಣು ಪರಮಪ್ರಯೋಜನವಾದರೂ, ಅದು ಬಿಡುವ ಮುನ್ನ ಬಾಳೆ ಎಲೆಯು ಹೇಗೆ ಅವಾಂತರ ಪ್ರಯೋಜನವಾಗಿರುವದೋ ಹಾಗೆಯೇ ಮೋಕ್ಷವು ಪರಮಪ್ರಯೋಜನವು ಮತ್ತು ಜ್ಞಾನವು ಅವಾಂತರ ಪ್ರಯೋಜನವು ಪರಮಾನಂದಪ್ರಾಪ್ತಿಗೆ ಜ್ಞಾನವು ಏಕಮಾತ್ರ ಸಾಧನವು

ಜೀವನು ದೇಹಾಧ್ಯಾಸ (superimpose) ವನ್ನು ಹೊಂದಿ ಅನಾತ್ಮವಾದವುಗಳನ್ನೇ ತಾನೆಂದು ತಪ್ಪಾಗಿ ತಿಳಿಯುವನು ಈ ತಾದಾತ್ಮ್ಯತೆಯೇ (ಅನಾತ್ಮೈಕ್ಯತೆಯೇ) ಬಂಧನವನ್ನುಂಟುಮಾಡುವುದು ಈ ಐಕ್ಯತೆಯಿಂದ ಬಿಡುಗಡೆ ಹೊಂದುವದೇ ಮೋಕ್ಷವು ಅನಾತ್ಮಬಂಧನವು ಅವಿದ್ಯೆಯಿಂದ (nescience) ಆಗುವದು ವಿದ್ಯೆಯು ಅದನ್ನು ಕಳೆಯುವದು ಆತ್ಮವಿದ್ಯಾ ಲಾಭವು ಅವಿದ್ಯೆಯನ್ನೂ ಅದರ ದುಷ್ಪರಿಣಾಮಗಳನ್ನೂ ನಿರ್ಮೂಲ ಮಾಡುವದು ಮೋಕ್ಷದ ಸ್ವರೂಪವು ದಿವ್ಯಾನಂದವನ್ನು ಪ್ರಾಪ್ತಿಮಾಡಿ ಎಲ್ಲ ಬಗೆಯ ದುಃಖಗಳನ್ನೂ ನಿವಾರಿಸುವದು

ತಾನು ಅಥವ ಆತ್ಮ (self) ಒಂದು ಎಂಬ ಜ್ಞಾನವೇ ಬ್ರಹ್ಮದ ಸಮ್ಯಕ್‌ಜ್ಞಾನವು ಜೀವ ಮತ್ತು ಬ್ರಹ್ಮರ ಭೇದವು ಉಪಾಧಿಯಿಂದ ತೋರುವುದು ಜೀವನು ಬ್ರಹ್ಮವೇ ಆಗಿದ್ದರೂ, ಅಂತ ಕರಣ ಚತುಷ್ಟಯದ ಉಪಾಧಿ (limiting adjunct) ಜಗದ್ರೂಪವಾದ ಕೋಟಲೆಗಳಿಗೆಲ್ಲ ಅಧೀನವಾಗಿರುವನು ಪರಮಾರ್ಥವಾಗಿ ಭೇಧವಿಲ್ಲದಿರುವುದರಿಂದ ಬ್ರಹ್ಮವು ಆತ್ಮವೇ ಎಂದು ಅರಿತುಕೊಳ್ಳಬೇಕು ಉಪನಿಷತ್ತಿನ ಮಹಾವಾಕ್ಯಗಳಾದ, 'ನಾನು ಬ್ರಹ್ಮವು,'—'ಈ ಆತ್ಮವು ಬ್ರಹ್ಮವೇ' ಎಂದು ಹೇಳುವ ಸತ್ಯನಿಷ್ಠರಿಗೆ, ಬ್ರಹ್ಮವು ಮತ್ತು ಆತ್ಮವು ಒಂದೇ ಎಂದು ಹೇಳುವರು ತಮ್ಮ ಶಿಷ್ಯರಿಗೂ ಇದೇ ವಾಕ್ಯಗಳನ್ನು "**ತತ್–ತ್ವಂ–ಅಸಿ**—ನೀನು ಅದೇ ಆಗಿರುವೆ"—

ಎಂದು ಉಪದೇಶಿಸಿರುವರು. ಆದ್ದರಿಂದ ಬ್ರಹ್ಮವು ಆತ್ಮದೊಡನೆ ಏಕರೂಪವು ಎಂದು ತಿಳಿಯಬೇಕು.

ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು. ಬದುಕಿರುವಾಗಲೇ ಬ್ರಹ್ಮವಾಗಿರುವುದರಿಂದ ಜನನ, ಮರಣ ಚಕ್ರದಿಂದ ಬಿಡಲ್ಪಟ್ಟಿರುವನು. ಬ್ರಹ್ಮಜ್ಞಾನವೊಂದೇ ಮೋಕ್ಷ ಅಥವ ಬಿಡುಗಡೆಗೆ (emancipation) ಉಪಾಯವು.

---

# 2

## ೧. ಹಿಂದೂ ದರ್ಶನವು

ಹಿಂದೂಸ್ಥಾನದಲ್ಲಿರುವವನು ಹಿಂದುವು. ಇದು ಒಂದು ಬಗೆಯ ವಿವರಣೆಯು. ವರ್ಣಾಶ್ರಮಧರ್ಮ, ವೇದದ ಉಪದೇಶಗಳು, ಆತ್ಮನ ಅಮರತೆ, ಪುನರ್ಜನ್ಮ ಸಿದ್ಧಾಂತ ಹಾಗೂ ಸನಾತನ ಧರ್ಮದಲ್ಲಿ ನಂಬಿಕೆಯುಳ್ಳವನೇ ಹಿಂದುವು. ಹಿಂದುಗಳೆಲ್ಲರ ಸಮಾನವಾದ ಧಾರ್ಮಿಕ ಗ್ರಂಥವು, "**ಗೀತೆ**"ಯು ಮತ್ತು ಸಮಾನ ಮಂತ್ರವು "**ಗಾಯತ್ರಿಯು**". ದೇವರ ಸಮಾನವಾದ ಹೆಸರು, ಬ್ರಹ್ಮ, ಪರಮಾತ್ಮ, ಭಗವಾನ್, ಅಥವ ಈಶ್ವರ.

ನಿಜವಾಗಿ ಹಿಂದೂ ಧರ್ಮವೇ ಆರ್ಯಧರ್ಮ ಅಥವ ಮಾನವ ಧರ್ಮ. ಎಲ್ಲ ಮತಗಳ ಮೂಲವು ಹಿಂದೂ ಧರ್ಮವು. ಹಿಂದೂ ಧರ್ಮದಲ್ಲಿ ಹುಟ್ಟಿ ಬೆಳೆದ ಬುದ್ಧ ದೇವನು, ಅಲ್ಲಲ್ಲೇ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿ ತನ್ನ ಕಾಲದ ಜನರ ಏಳಿಗೆಗೆ ಅವಶ್ಯಕವಾದ ಹೊಸ ಮತವನ್ನು ರೂಪಿಸಿದನು. ಬೌದ್ಧಮತವು ಹಿಂದೂ ಧರ್ಮದ ಒಂದು ಹೊಸ ಶಾಖೆಯು. ಕಾಶಿ ಮತ್ತು ಕಾಶ್ಮೀರಗಳಲ್ಲಿ ತಪಸ್ಸನ್ನು ಮಾಡಿ ಹಿಂದೂ ಧರ್ಮದ ತತ್ತ್ವ ಹಾಗೂ ಉಪದೇಶಗಳನ್ನು ಸಂಗ್ರಹಿಸಿ, ಪ್ಯಾಲೆಸ್ಟೈನಿನ ಜೆಸ್ತುರಿಗೆ ಹೊಂದುವ ಹೊಸ ಮತವನ್ನು ಏಸುದೇವನು ರೂಪಿಸಿದನು ಮತ್ತು ಪ್ರಚಾರ ಮಾಡಿದನು. ಮಹಾವೀರನೂ ಅಲ್ಲಲ್ಲೇ ಅಲ್ಪ ಬದಲಾವಣೆಗಳನ್ನು ಮಾಡಿ ಜೈನಮತವೆಂಬ ಹೊಸ ಮತವನ್ನು ಹೊರಕ್ಕೆ ತಂದನು. ಜರಾತುಷ್ಟ್ರನ ಮತ, ಕ್ರಿಸ್ತ ಮತ ಮುಂತಾದ ಹಲವು ಮತಗಳು ಹಿಂದೂ ಧರ್ಮದಿಂದಲೇ ಹೊರಬಂದ ಶಾಖೆಗಳಾಗಿವೆ.

ಹಿಂದೂ ಧರ್ಮವನ್ನು ಮತವೆನ್ನುವದಕ್ಕಿಂತ ತತ್ತ್ವಶಾಸ್ತ್ರ ಅಥವ ದರ್ಶನ (philosophy) ವೆಂದರೇ ಹೆಚ್ಚು ಸರಿಹೊಂದುವುದು. ಅದೊಂದು ಮಹಾಸಾಗರವಿದ್ದಂತೆ. ಎಲ್ಲ ನದಿಗಳೂ ಸಾಗರವನ್ನೇ ಸೇರುವಂತೆ, ಎಲ್ಲ ಮತಗಳೂ ಹಿಂದೂ ಧರ್ಮವನ್ನೇ ಸೇರುವವು. ಎಲ್ಲ ಪಂಥಗಳೂ ಹಿಂದೂ ಧರ್ಮದಿಂದಲೇ ಹೊರಬಂದುವು. ಯಾರು ಬೇಕಾದರೂ, ಯಾವ ಭಾವದವರಾದರೂ, ಯಾವ ಅಂತಸ್ತಿನವರಾದರೂ ತಮಗೆ ಬೇಕಾದ ರೀತಿಯಲ್ಲಿ ಮೋಕ್ಷವನ್ನು ಪಡೆಯುವ ಮಾರ್ಗವನ್ನು ಹಿಂದೂ ಧರ್ಮದಲ್ಲಿ ಕಾಣಬಲ್ಲರು. ಪ್ರಾಚೀನ (yore) ಋಷಿಗಳ ಉಪದೇಶಗಳು ಹಿಂದುಗಳಿಗೆ ಮಾತ್ರ ಅನ್ವಯಿಸಿ ಹೇಳಿಲ್ಲವು. ಅವು ಸರ್ವಸಮಾವೇಶವೂ (all-embracing), ಸಹಜವೂ ಆಗಿವೆ. ಇಡೀ ಜಗತ್ತಿನ ಜನರಿಗಾಗಿ ಹೇಳಲ್ಪಟ್ಟಿವೆ. ಗೀತೆ ಮತ್ತು ಉಪನಿಷತ್ತುಗಳು ವಿಶ್ವದ ಸಮಸ್ತ ಜನರಿಗಾಗಿ ಇರುವ ಗ್ರಂಥಗಳು.

ಹಿಂದೂ ಧಾರ್ಮಿಕ ಗ್ರಂಥಗಳು ತತ್ತ್ವಶಾಸ್ತ್ರ, ಯಜ್ಞ, ಯಾಗದ ಕ್ರಮ ಮತ್ತು ಪುರಾಣಗಳನ್ನು ಒಳಗೊಂಡಿವೆ. ಇವು ಮೂರೂ ಅವಶ್ಯಕವು. ಧರ್ಮದ ಸತ್ಯತೆಯಲ್ಲಿ ಮನಸ್ಸಿಗೆ ಅಭಿರುಚಿಯುಂಟಾಗಲೆಂಬ ಉದ್ದೇಶದಿಂದ ವೇದಗಳಲ್ಲಿ ಮತ್ತು ಪುರಾಣಗಳಲ್ಲಿ ಕಥೆಗಳು ಹೇಳಲ್ಪಟ್ಟಿವೆ. ಜನಸಾಮಾನ್ಯರಲ್ಲಿ ನೀತಿ, ಮತ್ತು ಧಾರ್ಮಿಕ ಭಾವನೆಗಳನ್ನು ಬೆಳೆಸುವ ಸಲುವಾಗಿ ಹಿಂದೂ ಋಷಿಗಳು ಕಥೆಗಳನ್ನು ಬಳಕೆಗೆ ತಂದರು. ಆಳವಾಗಿ ಚಿಂತಿಸಿ ಸತ್ಯ ಮತ್ತು ಜ್ಞಾನದ ಅಮೂಲ್ಯ ಮುತ್ತುಗಳನ್ನು ಕಪ್ಪೆಚಿಪ್ಪುಗಳಿಂದ ಹೆಕ್ಕಿ ತೆಗೆಯಿರಿ. ಈ ಕಥೆ, ಚರಿತ್ರೆಗಳನ್ನು ಅಲ್ಪಜ್ಞರು ಅರಿಯದೆ, ಚಿಂತಿಸದೆ, ಅಜ್ಞವೂ ಅವಿವೇಕವೂ ಆದ ಟೀಕೆಗಳನ್ನು ಮಾಡುವರು.

ನಿಮ್ಮ ದೃಷ್ಟಿಕೋನವನ್ನು ಸರಿಪಡಿಸಿಕೊಂಡರೆ ಪ್ರತಿಯೊಂದು ಪ್ರಾಪಂಚಿಕ ಕಾರ್ಯವೂ ಕರ್ಮಯೋಗವಾಗುವುದು. ಭಕ್ತಿ ಹಾಗೂ ಸೇವೆಯಿಂದ ಬಡವನೂ ಗುರಿಯನ್ನು ತಲಪುವನು. ಅವನಿಗೆ ಹಣದ ಅವಶ್ಯಕತೆಯಿಲ್ಲವು. ಹಿಂದೂ ಧರ್ಮವು ಎಲ್ಲವನ್ನೂ ಆಲಂಗಿಸಿಕೊಳ್ಳುವುದು. ನಿಷ್ಕಾಮ್ಯ ಭಾವದಿಂದ ತನ್ನ ಕಾರ್ಯವನ್ನೆಸಗುವ ಜಲಗಾರನೂ ಮೋಕ್ಷವನ್ನು ಪಡೆಯಬಲ್ಲನು. ಬುದ್ಧಿವಂತರಾದ ನಮ್ಮ ಪ್ರಾಚೀನ ಋಷಿಗಳು ಭಿನ್ನಭಿನ್ನ ಅಭಿರುಚಿಯುಳ್ಳ, ಭಾವನೆಯುಳ್ಳ, ಮೇಧಾಶಕ್ತಿಯುಳ್ಳವರಿಗೆ ತಕ್ಕಂತೆ ವಿವಿಧ

ಮಾರ್ಗಗಳನ್ನು ರಚಿಸಿದ್ದಾರೆ. ವೇದಾಂತದ ಸರಿಯಾದ ತಿಳಿವಳಿಕೆ, ಮತ್ತು ತತ್ತ್ವಾನುಷ್ಠಾನವು ಇಂದು ಯುದ್ಧ, ಕೋಮುವಾರು ಗಲಭೆ, ಸಣ್ಣಪುಟ್ಟ ಕಲಹಗಳು ಮತ್ತು ಧಾರ್ಮಿಕ ಹೋರಾಟಗಳಿಂದ ವಿಚ್ಛಿನ್ನವಾದ ವಿಶ್ವಕ್ಕೆ ಶಾಂತಿ, ತೃಪ್ತಿ ಮತ್ತು ಸಂತೋಷವನ್ನು ಕೊಡಬಲ್ಲುದು.

---

# ೨. ನಿಜವಾದ ಧರ್ಮ

ಆತ್ಮದೊಳಗಿನ ನಿಜವಾದ ಅಧ್ಯಾತ್ಮಿಕ ಬಾಳು ಧರ್ಮವೆನಿಸುವುದು. ಬಾಳ್ವೆ ಮತ್ತು ಧರ್ಮ ಪ್ರತ್ಯೇಕವಲ್ಲ, ಒಂದೇ. ಲ್ಯಾಟಿನ್ ಭಾಷೆಯಲ್ಲಿ 'Re'— ಪುನಃ, 'ligare'—ಬಂಧಿಸುವುದಕ್ಕೆ ಎಂಬುದರಿಂದ 'Religion' ಎಂಬ ಪದವಾಗಿದೆ. ವಿಷಯವಸ್ತುಗಳಲ್ಲಿ ಸುತ್ತುತ್ತಿರುವ ಮನಸ್ಸನ್ನು ಸೆಳೆದು ಮತ್ತೆ ಸ್ವಸ್ಥಾನವಾದ (abode) ಆತ್ಮದಲ್ಲಿ ಭದ್ರವಾಗಿ ನಿಲ್ಲಿಸಲ್ಪಟ್ಟಿದೆ. ಧರ್ಮವಿಲ್ಲದೆ ನಿಜವಾದ ಬಾಳ್ವೆ ನಡೆಯಲಾರದು. ಧರ್ಮದ ಬಗ್ಗೆ ಮಾತನ್ನು ಕಡಮೆ ಮಾಡೋಣ, ಅನುಷ್ಠಾನವನ್ನು ಹೆಚ್ಚಿಸೋಣ.

ಅಮರವಾದ ಆತ್ಮದಲ್ಲಿನ ಶಾಶ್ವತವಾದ (harmony) ಬದುಕು, ಧರ್ಮವು. ಧರ್ಮವು ಪರಿಪೂರ್ಣವು ಅಥವ ಸಮನ್ವಯವು. ಧರ್ಮವು ಏಕವು ಅಥವ ಐಕ್ಯವು, ಮನಸ್ಸು, ಇಂದ್ರಿಯಗಳಿಗೆ ಮೀರಿದುದು. ಅದು ಆಚಾರ, ಸಂಪ್ರದಾಯಗಳಿಗೆ ಮೇಲಿನದು. ಭಗವಂತನಲ್ಲಿ ಒಂದಾಗುವದು, ದಿವ್ಯಜ್ಞಾನ ಪ್ರಾಪ್ತಿಯಾಗುವುದು, ಅಥವ ದಿವ್ಯಾನುಭವವಾಗುವದು ಧರ್ಮವು. ಅವಿದ್ಯೆ, ಭ್ರಮೆ, ಸಂಶಯ, ಭಯ, ದುಃಖ ಮತ್ತು ಮಾಯೆಯಿಂದ ಮುಕ್ತಗೊಳಿಸುವುದು. ಅಧ್ಯಾತ್ಮಿಕ ರಂಗದಲ್ಲಿ ನ್ಯಾಯವಾದ ಹೋರಾಟಕ್ಕೆ ಕರೆ ನೀಡುವದು, ಆತ್ಮನನ್ನು ವಿಕಾಸಗೊಳಿಸಿ ಶ್ರೇಯಸ್ ಅಥವ ಮೋಕ್ಷ ಅಥವ ನಿತ್ಯಾನಂದವನ್ನು ನೀಡಲು ಸನಾತನ ಧರ್ಮವನ್ನು ಪ್ರತಿಷ್ಠಾಪಿಸುವುದು ಧರ್ಮವು.

ದೇವರನ್ನು ಅರಿಯಲು ಮತ್ತು ಆರಾಧಿಸಲು ಧರ್ಮವು ಒಂದು ಶ್ರದ್ಧೆಯು. ಸಂತೋಷಕೂಟದ ಮೇಜಿನ ಮುಂದೆ ಚರ್ಚಿಸುವ ವಿಷಯ

ವಲ್ಲವು. ಅದು ನಿಜ ಆತ್ಮನ ಸಾಕ್ಷಾತ್ಕಾರಕ್ಕಾಗಿರುವುದು, ಮಾನವನಲ್ಲಿನ ಅಂತರಾಳದ ಆರ್ತನಾದವನ್ನು ಪರಿಪೂರ್ಣಗೊಳಿಸುವುದು.

ಆದ್ದರಿಂದ ನಿಮ್ಮ ಜೀವನದಲ್ಲಿ ಧರ್ಮವು ಅತ್ಯಮೂಲ್ಯವಾದುದೆಂದು ತಿಳಿಯಿರಿ. ಆದರ ಅನುಭವಕ್ಕಾಗಿ ಪ್ರತಿ ನಿಮಿಷವೂ ಯತ್ನಿಸಿರಿ. ಆಚಾರ ವಿಲ್ಲದ ಧರ್ಮವೆಂದರೆ ಅದು ಮೃತ್ಯುವೇ.

ಧರ್ಮವು ಒಂದು. ನಿಜವಾದ ಧರ್ಮವು ಪ್ರಾಯೋಗಿಕವು. ಇಂದ್ರಿಯಾತೀತವಾದ ಆಧ್ಯಾತ್ಮ ಜೀವನವು ನಿಜವಾದ ಧರ್ಮವು. ಆತ್ಮ ಸಾಕ್ಷಾತ್ಕಾರವೇ ಧರ್ಮವು. ಸರಿಯಾದ ಧರ್ಮವೆಂದರೆ ದೇವರನ್ನು ಕಾಣು ವುದು, ದೇವರನ್ನು ಭಾವಿಸುವುದು, ಮತ್ತು ದೇವರೊಡನೆ ಮಾತನಾಡುವುದು.

ಮಿತ್ರರೇ ! ಮತಪರಿವರ್ತನೆ ಮಾಡಲು ಏಕೆ ಯತ್ನಿಸುವಿರಿ ? ಈ ಭೂಮಿಯ ಮೇಲಿರುವುದು ಒಂದೇ ಧರ್ಮ. ಆ ಒಂದು ಧರ್ಮವೆಂದರೆ, ಪ್ರೇಮದ ಧರ್ಮವು. ಮತ ಪರಿವರ್ತನೆಯು ಸಮಾಜಘಾತುಕವು (social evil). ಜಾತೀಯವಾದ ತೊಂದರೆ ಮತ್ತು ಗಲಭೆಗಳಿಗೆ ಇದು ಮೂಲ ಕಾರಣವು. ಅನ್ಯರನ್ನು ಮತಾಂತರಗೊಳಿಸುವವನು ಬುದ್ಧಿಹೀನನು. ದಂಗೆಗಳಿಗೆ (riots) ಬೀಜವನ್ನು ಬಿತ್ತಿ ಮನಸ್ಸಿನ ಶಾಂತಿಯನ್ನು ಕದಡುವವನು.

ಭಿನ್ನಮತಗಳ ಸಣ್ಣಪುಟ್ಟ ಸಿದ್ಧಾಂತದ ಬಗ್ಗೆ ಏಕೆ ಕಾದಾಡುವಿರಿ ? ಎಲ್ಲ ಧರ್ಮಗಳ ತಿರುಳೂ ಒಂದೇ. ಅನಾವಶ್ಯಕವಾದವುಗಳ ಬಗ್ಗೆ ಏಕೆ ಹೋರಾಡುವಿರಿ. ಧರ್ಮದ ಮೂಲವನ್ನು (core) ಮರೆಯದಿರಿ. ರಸವನ್ನು ಹೊಂದಿ, ಸಿಪ್ಪೆಯನ್ನು ಬಗೆಯಿರಿ. ತಿರುಳನ್ನು ತೆಗೆದುಕೊಂಡು, ಹಣ್ಣಿನ ಚಿಪ್ಪನ್ನು ಎಸೆಯಿರಿ. ಶುದ್ಧವಾದ, ಪೂರ್ಣವಾದ ಶಾಂತಿಯನ್ನು ಬೆಳೆಸಿ ಕೊಳ್ಳಿ. ಎಲ್ಲ ಧರ್ಮಗಳನ್ನೂ ಮತಾಚಾರ್ಯರನ್ನೂ, ಎಲ್ಲ ಪಂಥಗಳನ್ನೂ ನಿಮ್ಮ ಬಾಹುಗಳಿಂದ ಆಲಂಗಿಸಿ ಅಪರಿಮಿತವಾದ ಆನಂದ, ಶಾಂತಿ ಮತ್ತು ಶಕ್ತಿಯನ್ನು ಹೊಂದುವಿರಿ.

ಅಹಂಕಾರದ ನಾಶ, ಇಚ್ಛಾ, ದ್ವೇಷಗಳ ಅಳಿವು, ಆತ್ಮಜ್ಞಾನದ ಪ್ರಾಪ್ತಿ, ಸರ್ವ ಪ್ರಾಣಿಗಳಲ್ಲೂ ಪ್ರೇಮ ಮತ್ತು ಆತ್ಮಭಾವದಿಂದ ಮಾಡುವ ನಿಸ್ವಾರ್ಥ ಸೇವೆಯು ಸರಿಯಾದ ಧರ್ಮದ ಸಾರವು. ಧರ್ಮವು ವ್ಯಾವಹಾರಿಕವು,

ನಿಮ್ಮ ಪ್ರತಿದಿನದ ಜೀವನದ ಮೂಲಕ್ಕೆ ಸಂಬಂಧಪಟ್ಟ ಅಂಶವು ಧರ್ಮವು. ಕೇವಲ ಕುತೂಹಲ, ಸಮಯ ಸ್ಫೂರ್ತಿ ಮತ್ತು ಉದ್ವೇಗವು (Bubbling Juvenile enthusiasm) ನಿಮ್ಮ ಅಧ್ಯಾತ್ಮದ ಬೆಳವಣಿಗೆ ಅಥವ ವಿಕಾಸಕ್ಕೆ ಸಹಾಯ ಮಾಡಲಾರದು. ಸತತ ಹೋರಾಟ ಮತ್ತು ಶಾಂತ ಪ್ರಯತ್ನವು ಬೇಕೇಬೇಕು.

ಧರ್ಮವು ಜೀವದ ವಿಜ್ಞಾನವು. ಭಗವಂತನಲ್ಲಿದ್ದು ಅಮೃತತ್ವವನ್ನು ಪಡೆಯುವುದನ್ನು ಬೋಧಿಸುವುದು. ಶಾಶ್ವತವಾದ ಶಾಂತಿ ಮತ್ತು ಆನಂದ ಸಾಮ್ರಾಜ್ಯವನ್ನು ಪ್ರವೇಶಿಸಲು ಸಹಾಯ ಮಾಡುವುದು. ಅದು ಅಜ್ಞಾನದ ಆವರಣವನ್ನು ಕಳಚಿ ಏಕಾತ್ಮನ ದಿವ್ಯ ದರ್ಶನವನ್ನು ಪಡೆಯಲು ನೆರವು ನೀಡುವುದು.

ಧರ್ಮವು ಜೀವನಕ್ಕೆ ಅನವಶ್ಯಕವೆಂದು ಕೆಲವರು ಹೇಳುವರು. ಹಾಗೆ ನುಡಿಯುವವರು ಅಜ್ಞಾನದಲ್ಲಿ ಹಾಗೂ ಪ್ರಪಂಚದಲ್ಲಿ ಮುಳುಗಿರುವವರು. ಧರ್ಮವಿಲ್ಲದೆ ಮಾನವನು ಬದುಕುವುದೆಂತು? ಭ್ರಮೆ, ದುಃಖ, ನೋವು ಮತ್ತು ಸಾವುಗಳನ್ನು ಕಳೆಯಲು ಸಹಾಯ ಮಾಡುವುದು. ಮತ್ತು ಅಮರತೆಯ ಪರಮಪುರುಷಾರ್ಥವನ್ನು ಪಡೆಯಲು ಮಾರ್ಗದರ್ಶನ ಮಾಡಿಸುವುದು. ಧರ್ಮದ ಮೂಲಕವೇ ಮಾನವನು ಪರಿಪೂರ್ಣನೂ, ಪರಿಶುದ್ಧನೂ ಆಗಬಲ್ಲನು.

---

## ೩. ಭಾರತಾಂಬೆಯ ಮಹಿಮೆ

ಭಾರತವು ಧರ್ಮಭೂಮಿ. ಅದು ಎಂದೂ ರಾಜ್ಯಗಳನ್ನು ಆಕ್ರಮಿಸಿಲ್ಲವು. ತನ್ನ ಸೇನೆಯಿಂದ ಇತರ ದೇಶಗಳನ್ನು ಅಧೀನಮಾಡಿಕೊಳ್ಳುವ ಆಕಾಂಕ್ಷೆಯು ಭಾರತಕ್ಕೆ ಎಂದೂ ಇಲ್ಲವು. ತನ್ನ ಮಕ್ಕಳು ಆತ್ಮ ಸ್ವಾರಾಜ್ಯವನ್ನು (absolute independence) ಪಡೆಯಲೆಂದು ಭಾರತಾಂಬೆಯು ಇಚ್ಛಿಸುವಳು. ಅವರು ತಮ್ಮ ಅಂತರ್ಬಾಹ್ಯ ಗುಣಗಳನ್ನು ಜಯಿಸಲೆಂಬುದೇ ಅವಳ ಇಚ್ಛೆಯು. ದೈವೀಗುಣಗಳನ್ನೂ, ನೀತಿಯ ಬಲವನ್ನೂ, ಆತ್ಮಜ್ಞಾನ

ದಿಂದಾಗುವ ಆತ್ಮ ತೇಜಸ್ಸನ್ನೂ ಅವರು ಪಡೆಯಲೆಂದು ಭಾರತಾಂಬೆಯು ಅಪೇಕ್ಷಿಸುವಳು. ಆತ್ಮ ಜಯವನ್ನು ಮತ್ತು ಅನ್ಯರ ಹೃದಯವನ್ನು ಜಯಿಸಲು ತಾನು ಹೊಂದಿರುವ ಏಕಮಾತ್ರ ಅಸ್ತ್ರವೆಂದರೆ ಅಹಿಂಸೆಯು (non-violence).

ಭಾರತೀಯರ ಗುರಿ ಆತ್ಮಸಾಕ್ಷಾತ್ಕಾರ. ಲೌಕಿಕಾಭ್ಯುದಯವನ್ನು ಅವರು ಲಕ್ಷಿಸುವುದಿಲ್ಲ. ಭಗವತ್ಪ್ರಾಪ್ತಿ ಅಥವ ಪರಮಾತ್ಮೈಕ್ಯವನ್ನು ಬಯಸುವರು. ಸತ್ಯ, ಅಹಿಂಸೆ ಮತ್ತು ಬ್ರಹ್ಮಚರ್ಯವನ್ನು ಪರಿಪಾಲಿಸುವರು. ನಿತ್ಯವಾದ ಪರಮಸುಖವನ್ನು ಅನುಭವಿಸಲು ಅಪೇಕ್ಷಿಸುವರು. ಅಂತರಾತ್ಮ ನಾದ ಬ್ರಹ್ಮನನ್ನು ಕಾಣುವುದಕ್ಕೋಸ್ಕರ ಈ ಲೋಕದ ಅನಾತ್ಮ ವಸ್ತುಗಳೆಲ್ಲ ವನ್ನೂ ಪರಿತ್ಯಜಿಸಲು ಸಿದ್ಧರಿರುವರು. ಅಮೃತಾತ್ಮನನ್ನು ಪಡೆಯಲು ಯಾವುದನ್ನಾದರೂ, ಏನನ್ನಾದರೂ ತ್ಯಾಗಮಾಡುವರು. ಅವರು ಸದಾ ಅಧ್ಯಾತ್ಮ ಚಿಂತಕರಾಗಿರುವರು.

ಭಾರತವು ಯೋಗಿಗಳ, ಋಷಿಮುನಿಗಳ, ಸಾಧುಸಂತರ ಬೀಡಾಗಿರು ವುದು. ಉತ್ತುಂಗ ಹಿಮಾಲಯದ ದಿವ್ಯ ದೃಶ್ಯವು ಎಷ್ಟು ಮನೋಲ್ಲಾಸ ಕರವು! ಗಂಗಾಮಾತೆಯು ಎಂಥ ಮಧುರಪೂರ್ಣಳು! ಭಾರತೀಯರ ಚಿಂತನ ಪ್ರಭಾವಗಳು ಎಷ್ಟು ಪ್ರಫುಲ್ಲವೂ, ಪ್ರಭಾವಪೂರ್ಣವೂ, ಪ್ರಸನ್ನ ಮಯವೂ ಆಗಿವೆ! ಋಷಿ ಮುನಿಗಳಿಂದ ತುಂಬಿ, ಗಂಗೆಯಿಂದ ಪರಿವೃತ ವಾಗಿ, ಧೀರಗಂಭೀರವಾಗಿ ನಿಂತಿರುವ ಹಿಮಾಲಯದ ಸಾನು ಪ್ರದೇಶಗಳಿಂದ ಹೃಷೀಕೇಶವು ಎಷ್ಟು ಸುಂದರವೂ, ನಯನಮನೋಹರವೂ ಆಗಿರುವುದು! ಓ ಪಾಶ್ಚಿಮಾತ್ಯ ಅಧ್ಯಾತ್ಮ ಪಿಪಾಸುಗಳೆ! ಯೋಗಾಭ್ಯಾಸ ಮಾಡುವ ಇಚ್ಛೆ ಯಿದ್ದರೆ ಭಾರತಕ್ಕೆ ಬನ್ನಿ, ಹೃಷೀಕೇಶದಲ್ಲಿ ನೆಲಸಿ. ಏಕಾಂತತೆಯ ಸುಖ ವನ್ನನುಭವಿಸಿರಿ. ಆತ್ಮಾನಂದವನ್ನು ಪಡೆಯಿರಿ. ಶಾಂತರಾಗಿ ಧ್ಯಾನಮಾಡಿ ಗಾಢವಾದ ಶಾಂತಿಯನ್ನು ಪ್ರವೇಶಿಸಿ. ನೀವು ಯೋಗಿಗಳಾಗುವಂತಾಗಲಿ!

ವಿಶ್ವದ ವಿವಿಧ ಭಾಗಗಳಲ್ಲಿ ಮಹಾತ್ಮರು ಜನಿಸಿದರು. ಆದರೆ, ವಿಶ್ವದ ಮತ್ಯಾವ ಭಾಗದಲ್ಲಿ ಜನಿಸಿದುದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಮಹಾತ್ಮರು ಭಾರತದಲ್ಲಿ ಜನಿಸಿರುವರು. ಇದು ಭಾರತದ ವೈಶಿಷ್ಟ್ಯವು. ಆದಕಾರಣ ಭಾರತವನ್ನು ಋಷಿಗಳ, ಸಂತರ ನಾಡೆನ್ನುವರು.

ಭಾರತವು, ವೇದಾಂತದ ಉಪದೇಶಕರಾದ ಶಂಕರ, ರಾಮಾನುಜ ರಂಥಹ ಮಹಾ ಆಚಾರ್ಯರಿಗೆ ಜನ್ಮಭೂಮಿಯು. ಕಬೀರ, ರಾಮದಾಸ, ತುಕಾರಾಮ, ಗೌರಾಂಗ ಮಹಾಪ್ರಭುವಿನಂತಹ ಸಂತರಿಗೆ, ಮತ್ತು ಜ್ಞಾನ ದೇವ, ಗೋರಖನಾಥರಂತಹ ಯೋಗಿಗಳಿಗೆ, ಮತ್ತು ದತ್ತಾತ್ರೇಯ, ಸದಾಶಿವ ಬ್ರಹ್ಮೇಂದ್ರರಿಗೆ ಜನ್ಮಭೂಮಿಯು. ಇಂದಿಗೂ ಅನೇಕ ಸಂತರಿಗೆ ಮತ್ತು ಮಹಾತ್ಮರಿಗೆ ಆಶ್ರಯವಾಗಿದೆ.

ಎಲ್ಲ ಕಾಡುಗಳಲ್ಲಿ ಗಂಧದ ಮರವನ್ನು ನೀವು ಕಾಣುವುದಿಲ್ಲ. ಎಲ್ಲ ಸಮುದ್ರಗಳಲ್ಲಿ ಮುತ್ತು ದೊರೆಯುವುದಿಲ್ಲ. ಭೂಮಿಯ ಎಲ್ಲ ಪಾರ್ಶ್ವಗಳಲ್ಲಿ ಚಿನ್ನವು ದೊರೆಯುವುದಿಲ್ಲ. ಹಾಗೆಯೇ ಜಗತ್ತಿನ ಎಲ್ಲಾ ಭಾಗಗಳಲ್ಲೂ ನೀವು ಸಂತರನ್ನು ಕಾಣಲಾರಿರಿ.

ಯೋಗಿ, ಋಷಿ, ಸಂತರುಗಳಿಂದ ತುಂಬಿರುವ, ಗಂಗಾ, ಯಮುನಾ, ಗೋದಾವರೀ, ನರ್ಮದಾ, ಸಿಂಧು, ಕಾವೇರಿ ಮೊದಲಾದ ಪವಿತ್ರ ನದಿಗಳಿಂದ ತೊಳೆಯಲ್ಪಡುವ, ಮಹಿಮಾನ್ವಿತ ಹಿಮಾಲಯವು ನಿಂತಿರುವ ಸುಂದರ ಭಾರತಕ್ಕೆ ಜಯವಾಗಲಿ! ಶ್ರೀರಾಮ, ಕೃಷ್ಣ, ವ್ಯಾಸ, ಶಂಕರ, ದತ್ತಾತ್ರೇಯ, ಪತಂಜಲಿ ಮಹರ್ಷಿ ಮೊದಲಾದವರು ತಮ್ಮ ಪವಿತ್ರ ಪಾದ ಗಳಿಂದ ಮೆಟ್ಟಲ್ಪಟ್ಟ ಭಾರತವರ್ಷಕ್ಕೆ ಜಯವಾಗಲಿ! ಯೋಗ ಮತ್ತು ತಪಶ್ಚರ್ಯದ ತವರುಮನೆಯಾದ ಋಷಿಗಳ ಆರ್ಯಾವರ್ತಕ್ಕೆ ಜಯವಾಗಲಿ! ಜಯವಾಗಲಿ! ದೇವತೆಗಳ ಮತ್ತು ಜೀವನ್ಮುಕ್ತರ ಭೂಮಿಯೂ, ಸುಂದರ ಕಾಡುಗಳಿಂದಲೂ, ನಿಮ್ಸಾರ್, ಝೂಸಿ, ಉತ್ತರ ಕಾಶಿ, ಹೃಷೀಕೇಶ ಮೊದಲಾದ ಶಾಂತಿ ಧಾಮಗಳ ಮತ್ತು ಕೃಷ್ಣ ಭಗವಂತನು ತನ್ನ ಪ್ರೀತಿಪಾತ್ರ ಅರ್ಜುನ ನಿಗೆ ಉಪದೇಶಿಸಿದ ಅಮರಗಾನದ ಗೀತೆಯ ಪವಿತ್ರ ಭೂಮಿ ಕುರುಕ್ಷೇತ್ರ ಮುಂತಾದ ಯಾತ್ರಾ ಸ್ಥಳಗಳಿಂದ ತುಂಬಿರುವ ಮಾತೃಭೂಮಿಗೆ ಜಯ ವಾಗಲಿ! ಹೇ ತಾಯಿ ನಿನ್ನ ಮಕ್ಕಳು ಸರಿಯಾದ ತಿಳುವಳಿಕೆ, ಆತ್ಮಜ್ಞಾನ ಮತ್ತು ಅಧ್ಯಾತ್ಮಿಕ ಬಲವನ್ನು ಪಡೆದು ನಿನಗೆ ಸೇವೆಮಾಡಲು, ನಿನ್ನ ಕೀರ್ತಿ ಧ್ವಜವನ್ನು ಮತ್ತೂ ಏರಿಸಲು ಅವರನ್ನು ಭಗವಂತನು ಆಶೀರ್ವದಿಸಲಿ.

'ನಾಜಿಸಮ್', 'ಫ್ಯಾಸಿಸಂ', 'ಬೋಲ್ಷೆವಿಸಮ್' ಮಂತಾದ ಇಸಂಗಳು ಮಾನವನಿಗೆ ಶಾಂತಿಯನ್ನು ತರುವುದರಲ್ಲಿ ವಿಫಲವಾದುವು. ಪವಿತ್ರ

ಭಾರತದ ಕೇವಲ ' ಸಾಧೂಯಿಸಂ ', ಅಥವ ' ಋಷೀಸಂ ' ಅಥವ ' ಉಪ ನಿಷದಿಸಂ ' ಮಾತ್ರವೇ ಮಾನವನಿಗೆ, ನಿತ್ಯ ಶಾಂತಿಯನ್ನು ಕೊಡಬಲ್ಲುದು.

ಸಾಧುತ್ವ (ಸಾಧೂಯಿಸಂ) ಎಂದರೇನು ? ಸಾಧುತ್ವವೆಂದರೆ, ಆತ್ಮ ಸಂಯಮವನ್ನು ಅಭ್ಯಸಿಸುವುದು ಮತ್ತು ದೇವರಲ್ಲಿ ಬಾಳುವುದು. ಋಷಿತ್ವ ವೆಂದರೆ, ಪರಿಶುದ್ಧತೆ, ನಿಸ್ವಾರ್ಥ ಸೇವೆ, ವಿಶ್ವ ಪ್ರೇಮ, (cosmic love) ಭಕ್ತಿ ಮತ್ತು ಧ್ಯಾನದ ಮೂಲಕ ಆತ್ಮಲಾಭವನ್ನು ಮಾಡಿಕೊಳ್ಳುವುದು. ಉಪನಿಷತ್ತಿನ ತತ್ವವೇನು ? ಆತ್ಮಜ್ಞಾನ, ಅಥವ ಬ್ರಹ್ಮವನ್ನು, ಆತ್ಮಾನಾತ್ಮ ವಿವೇಕ, ವಿಚಾರ, ಶ್ರುತಿಗಳ ಶ್ರವಣ, ಮತ್ತು ಆತ್ಮಚಿಂತನೆಯಿಂದ ಸ್ವಯಂ ಜ್ಯೋತಿಯೂ, ಸರ್ವವ್ಯಾಪಿಯೂ, ಅಭಿನ್ನವೂ, ದೇಶ, ಕಾಲ, ವಸ್ತು ಪರಿಚ್ಛೇದವಿಲ್ಲದ ಉಪನಿಷತ್ತಿನಲ್ಲಿ ಹೇಳಲ್ಪಟ್ಟ ಅಮರವಾದ ಆತ್ಮವನ್ನು ಹೊಂದುವುದು.

ಭಾರತ ಅಥವ ಯಾವ ರಾಷ್ಟ್ರವೇ ಆಗಲಿ ತನ್ನ ರಾಜಕೀಯ ಚಟುವಟಿಕೆ ಗಳೊಡನೆ ಧಾರ್ಮಿಕ ಅನುಷ್ಠಾನಗಳನ್ನೂ ಬೆಳೆಸಿಕೊಂಡರೆ ಮಾತ್ರ ಸ್ವರಾಜ್ಯ ವನ್ನು ಪಡೆದುಕೊಳ್ಳಲು ಸಾಧ್ಯವು. ತಮ್ಮ ಪ್ರತಿಯೊಂದು ಕಾರ್ಯವೂ ಯೋಗವೆಂದು ಮತ್ತು ಭಗವತ್ಸೇವೆಯೆಂದು ಕಾರ್ಮಿಕರು ಪರಿಗಣಿಸಬೇಕು. ಸ್ವಾರ್ಥ, ದುರಾಸೆ, ಕಾಮ, ಮತ್ತು ದ್ವೇಷದಿಂದ ದೂರವಾಗಿ, ಸತ್ಯನಿಷ್ಠೆ, ತಾಳ್ಮೆ, ಆತ್ಮಸಂಯಮ, ವಿಶ್ವಬಾಳ್ವೆ, ಮತ್ತು ಹೃದಯ ವೈಶಾಲ್ಯ ಹಾಗೂ ಸಹನೆಯನ್ನು ಭಗವಂತನಲ್ಲಿ ಪೂರ್ಣವಾದ ಅಚಲ ವಿಶ್ವಾಸವನ್ನು ಹೊಂದಿರ ಬೇಕು.

ಭಾರತವು ಹಲವು ಪವಿತ್ರ ನದಿಗಳಿಂದಲೂ, ಪ್ರಬಲ ಅಧ್ಯಾತ್ಮಿಕ ಕಂಪನಗಳಿಂದಲೂ ಕೂಡಿದ ಪುಣ್ಯಮಯವಾದ ಭೂಮಿಯು. ಮಹಿ ಮಾನ್ವಿತವಾದ ಹಿಮಾಲಯಾಪರ್ವತಗಳು ಇಡೀ ವಿಶ್ವದ ಜನರನ್ನು ಆಕರ್ಷಿಸು ವುದು. ಈ ಭೂಭಾಗವು ಧ್ಯಾನ ಮತ್ತು ಯೋಗಾಭ್ಯಾಸಗಳಿಗೇ ಅನುಕೂಲ ವಾಗುವಂತೆ ವೈಶಿಷ್ಟ್ಯತೆಯನ್ನು ಹೊಂದಿದೆ. ಪ್ರತಿಯೊಂದು ದೇಶವೂ ಆಕರ್ಷಣೀಯವಾದ ಒಂದೊಂದು ಲಕ್ಷಣವನ್ನು ಹೊಂದಿದೆ. ಭಾರತವು ಯೋಗಿಗಳ ಮತ್ತು ಜ್ಞಾನಿಗಳ ಬೀಡು. ಇದೇ ಭಾರತದ ವಿಶೇಷ ಲಕ್ಷಣವು. ಈ ಕಾರಣದಿಂದಲೇ ಇಂಗ್ಲೆಂಡ್, ಅಮೆರಿಕಾ ರಾಷ್ಟ್ರಗಳಿಂದ ಜನರು

ಯೋಗಾಭ್ಯಾಸಕ್ಕಾಗಿ ಭಾರತಕ್ಕೆ ಬರುತ್ತಿರುವರು. ಭಾರತಾಂಬೆಗೆ ಜಯವಾಗಲಿ! ಋಷಿಗಳಿಗೆ, ಜ್ಞಾನಿಗಳಿಗೆ ಜಯವಾಗಲಿ!

ಎಲ್ಲ ದೇಶಗಳಲ್ಲಿ ಭಾರತವು ಸರ್ವೋತ್ತಮವು. ಗಂಗೆಯು ಎಲ್ಲ ನದಿಗಳಿಗಿಂತ ಪವಿತ್ರವು. ಹಿಮಾಲಯವು ಎಲ್ಲ ಪರ್ವತಗಳಲ್ಲಿ ಅತ್ಯುತ್ತಮವು. ಸರ್ವ ಸದ್ಗುಣಗಳಲ್ಲಿ ಸತ್ಯವು ಅತ್ಯಮೂಲ್ಯವು. ಸಾಕ್ಷಾತ್ಕಾರವನ್ನು ಪಡೆದ ಗುರುವು ಎಲ್ಲರಲ್ಲಿ ಅತಿಶ್ರೇಷ್ಠನು. ಆತ್ಮವು ಅತ್ಯಂತ ಪ್ರಿಯವಾದ ವಸ್ತುಗಳಲ್ಲಿ ಉತ್ತಮವು. ಆದ್ದರಿಂದ ಭಾರತದ ಗಂಗಾತೀರದಲ್ಲಿ ವಾಸಿಸಿರಿ. ಸತ್ಯವನ್ನು ನುಡಿಯಿರಿ. ಜ್ಞಾನೀ ಗುರುವಿನಲ್ಲಿ ಆಶ್ರಯಪಡೆದು, ಆತ್ಮಸಾಕ್ಷಾತ್ಕಾರವನ್ನು ಹೊಂದಿ ಮುಕ್ತರಾಗಿ.



# 3

## ೧. ಗುರುವಿನ ಆವಶ್ಯಕತೆ

ಗುರು ಅಥವ ಜ್ಞಾನಿಯ ಅನುಗ್ರಹದಿಂದ ಆತ್ಮಜ್ಞಾನವಾಗುವುದು. ಜ್ಞಾನವು ಗುರುವಿನಿಂದ (Preceptor) ಶಿಷ್ಯನಿಗೆ (disciple) ಅನುಗ್ರಹಿಸಲ್ಪಡುವುದು. ಬ್ರಹ್ಮನಿಷ್ಠ ಗುರುವಿನ ಸೇವೆ, ಚಿತ್ತಶುದ್ಧಿ, ಧ್ಯಾನ ಮತ್ತು ಉಪದೇಶವನ್ನು ಪಡೆಯುವುದರಿಂದ ನೀವು ಬ್ರಹ್ಮವನ್ನು ತಿಳಿಯುವಿರಿ. ವೈದ್ಯ ವಿದ್ಯಾರ್ಥಿಗೆ ತಜ್ಞರಾದ ವಿದ್ವತ್ಪೀಠಾಧಿಕಾರಿಯಾದ ವೈದ್ಯರ ಅವಶ್ಯಕತೆಯಿದೆ. ಕಿರಿಯ ವಕೀಲನಿಗೆ ಅನುಭವಸ್ಥ ವಕೀಲನ ನೆರವು ಅವಶ್ಯಕವು. ಕಿರಿಯನಾದ ಅಡಿಗೆಯವನಿಗೆ ಅನುಭವಸ್ಥನಾದ ಹಿರಿಯ ಅಡಿಗೆಯವನ ಸಹಾಯವು ಬೇಕೇ ಬೇಕು. ಪ್ರಾಪಂಚಿಕ ಲೌಕಿಕವಾದ ವಿಷಯಗಳ ಸ್ಥಿತಿಯೇ ಹೀಗಿರುವಾಗ, ಸೂಕ್ಷ್ಮವಾದ ಆತ್ಮನ ಬಗ್ಗೆ ತಿಳುವಳಿಕೆ ನೀಡಲು, ಅಧ್ಯಾತ್ಮಿಕ ಜ್ಞಾನಶಾಸ್ತ್ರವನ್ನು ಬೋಧಿಸಲು, ಗುರುವಿನ ಆವಶ್ಯಕತೆಯ ಬಗ್ಗೆ ಹೇಳಲೇನಿದೆ? ಸಾಧಕನಿಗೆ ಸನ್ಮಾರ್ಗ ತೋರಿಸುವ, ಆತ್ಮನಿಷ್ಠನಾದ ಗುರುವಿನ ಆವಶ್ಯಕತೆಯು ಅತ್ಯಗತ್ಯವು (imperatively necessary) ಗುರುವಿಲ್ಲದವನು ಅಜ್ಞಾನವೆಂಬ ಅಂಧಕಾರದ ಅರಣ್ಯದಲ್ಲಿ ತಡವರಿಸುತ್ತಿರುತ್ತಾನೆ (groping).

ಅಧ್ಯಾತ್ಮ ಮಾರ್ಗದಲ್ಲಿ ಸಾಧಕನು (aspirant) ಹಲವು ವಿಧವಾದ ಅಡೆತಡೆಗಳನ್ನು (pitfall), ಅಪಾಯಗಳನ್ನು, ತೊಡಕಗಳನ್ನು (snares), ಅನಿರೀಕ್ಷಿತ ಆಪತ್ತುಗಳನ್ನು ಎದುರಿಸಬೇಕಾಗುವುದು. ಸಾಧನದಲ್ಲಿ ಬಹಳ ಎಚ್ಚರಿಕೆಯನ್ನೂ ವಹಿಸಬೇಕಾಗುವುದು. ಆದ್ದರಿಂದ ಆ ಮಾರ್ಗದಲ್ಲಿ ಈಗಾಗಲೇ ನಡೆದು, ಅನುಭವಿಯೂ, ಜಯಶೀಲನೂ ಆದ ಗುರುವಿನ ಮಾರ್ಗದರ್ಶನವು ಬೇಕೇಬೇಕು.

ಅನುಭವವಿಲ್ಲದ ಸಾಧಕರು ಕೆಲವು ಕಾಲ ತಪ್ಪದೆ ಪೂರ್ಣಪ್ರಜ್ಞನಾದ ಗುರುವಿನ ಆಶ್ರಯದಲ್ಲಿರಬೇಕು, ಗುರುವಿನ ಅಧೀನನಾಗಿರಬೇಕು. ವಿನಯ, ವಿಧೇಯತೆಗಳನ್ನು ಚೆನ್ನಾಗಿ ಅರಿತು ನಡೆದುಕೊಳ್ಳಬೇಕು. ಸ್ವೇಚ್ಛಂದ ಪ್ರವೃತ್ತಿಯನ್ನು ಹೊಂದಿದವರು, ಗರ್ವ ಅಥವ ಸೊಕ್ಕಿನಿಂದ ಕೆಡುವರು. ಅಂಥವರು ಆಧ್ಯಾತ್ಮ ಸಾಧನೆಯಲ್ಲಿ ಸ್ವಲ್ಪವೂ (iota) ಮುಂದುವರಿಯು ವುದಿಲ್ಲವು.

ಪ್ರಕೃತಿಯಲ್ಲಿ ಎರಡು ಗಿಡಗಳು, ಎರಡು ಎಲೆಗಳು, ಇಬ್ಬರು ವ್ಯಕ್ತಿಗಳು ಎರಡು ಕಂಪನಗಳು, ಎರಡು ಭಾವಗಳು, ಎರಡು ಮನಸ್ಸುಗಳು ಒಂದೇ ರೀತಿ ಇರುವದಿಲ್ಲ. ಆದ್ದರಿಂದ ಭಿನ್ನವಾದ ಭಾವನೆಗಳುಳ್ಳವರಿಗೆ ಅನುಕೂಲಿಸು ವಂತೆ, ಮನಸ್ಸನ್ನು ಹತೋಟಿಗೆ ತರಲು ಹಲವು ಬಗೆಯ ಮಾರ್ಗಗಳಿವೆ. ಪ್ರತಿಯೊಬ್ಬನೂ ತನಗೆ ಒಗ್ಗುವ ರೀತಿಯ ಸಾಧನೆಯನ್ನು ಮಾಡಬಹುದು. ನಿಮಗೆ ಅನುಕೂಲವಾದ ಮಾರ್ಗವು ತಿಳಿಯದಿದ್ದರೆ, ಒಬ್ಬ ಗುರು ಅಥವ ಆಚಾರ್ಯನಿಂದ ಅದನ್ನು ತಿಳಿದುಕೊಳ್ಳಿ. ಆಗಲೇ ಯೋಗ ಮಾರ್ಗದ ಸೂಕ್ಷ್ಮ (Subtle) ವಿಷಯಗಳನ್ನು ನೀವು ತಿಳಿಯಲು ಸಮರ್ಥರಾಗುವಿರಿ. ನಿರಾಶೆಯಾದಾಗ ನಿಮಗೆ ಗುರುವು ಸ್ಫೂರ್ತಿ ಕೊಡುವರು. ಸಂಶಯಗಳನ್ನು ನಿವಾರಿಸುವರು, ಸನ್ಮಾರ್ಗವನ್ನು ತೋರಿಸುವರು, ಏಕೆಂದರೆ ಅವರು ಆ ಕಠಿಣ ಮಾರ್ಗಕ್ರಮಣ ಮಾಡಿ ಬಂದಿರುವರು. ನೀವು ಶ್ರದ್ಧಾವಂತರೂ, ನಿಷ್ಠರೂ ಆದರೆ ಗುರುಕೃಪೆಯು ತೈಲಧಾರೆಯಂತೆ ವರ್ಷಿಸುವದು. ಗುರುವಿನಲ್ಲಿ ನಿಜ ವಾದ ಶ್ರದ್ಧಾಭಕ್ತಿಗಳಿದ್ದರೆ, ನಿಮಗೆ ಶಕ್ತಿ, ಪ್ರೇಮ, ಜ್ಞಾನ ಹಾಗು ಆತ್ಮಬಲ ವನ್ನು ಕರುಣಿಸುವರು. ಈಗ ಒಂದು ಮಾರ್ಗ ಮತ್ತು ಒಬ್ಬ ಗುರುವನ್ನು ಹಿಡಿಯಿರಿ. ಚಂಚಲರಾಗದಿರಿ, ಸಂಶಯಿಸದಿರಿ, ತಾಳ್ಮೆಯುಳ್ಳವರಾಗಿ ಶ್ರದ್ಧಾ ವಂತರಾಗಿ.

ಸಾಧಕರು ಗುರುವಿನಲ್ಲಿ ಅಥವ ಶೃತಿಗಳಲ್ಲಿ ದೃಢವಾದ ನಂಬಿಕೆಯನ್ನು ಹೊಂದಿಲ್ಲವು. ಅವರು ಅರ್ಧಂಬರ್ಧವಾದ ವಿಶ್ವಾಸವುಳ್ಳವರು. ಈ ಕಾರಣ ದಿಂದಲೇ ಯೋಗ ಅಥವ ಜ್ಞಾನದಲ್ಲಿ ಜಯಗಳಿಸಲಾರರು.

ಈಶ್ವರನೂ ಗುರುವೂ ಒಂದೇ. ನಿಮ್ಮ ಗುರುವಿನಲ್ಲಿ ಈಶ್ವರನನ್ನು ಕಾಣಲು ಪ್ರಯತ್ನಿಸಿರಿ. ಆಗ ಮಾತ್ರ ಅಧ್ಯಾತ್ಮ ಸಾಧನೆಯಲ್ಲಿ ಮುಂದು

ವರೆಯುವಿರಿ. ಆತ್ಮಸಾಕ್ಷಾತ್ಕಾರವನ್ನು ಪಡೆಯುವಿರಿ. ಗುರುವಿನಲ್ಲಿ ದೋಷ ವನ್ನು ಹುಡುಕುವವರು ಕಿಂಚಿತ್ ಲಾಭವನ್ನೂ ಪಡೆಯರು. ಗುರುವೇ ನಿಮ್ಮ ತಂದೆಯು. ಗುರುವೇ ನಿಮ್ಮ ತಾಯಿಯು. ಗುರುವೇ ನಿಮ್ಮ ರಕ್ಷಕನು. ಗುರುವೇ ನಿಮ್ಮ ಪೂರ್ಣ ಉದ್ಧಾರಕನು ಮತ್ತು ಆಶ್ರಯನು. ಆದ್ದರಿಂದ ಗುರುವನ್ನು ದೇವರೆಂದು ಗೌರವಿಸಿರಿ.

ನಿಜವಾದ ಶಿಷ್ಯನು ತನ್ನ ಗುರುವಿನ ಚರಣಾಮೃತವನ್ನು ಕುಡಿಯು ವನು, ಗುರುವಿನ ಉಚ್ಛಿಷ್ಟವನ್ನು ಭುಂಜಿಸುವನು, ತನ್ನ ಗುರುರೂಪವನ್ನು ಬ್ರಹ್ಮವೆಂದೇ ಧ್ಯಾನಿಸುವನು. ತನ್ನ ಗುರು ಮಂತ್ರವನ್ನೇ ಸಂತತವಾಗಿ ಜಪಿಸುವನು. ಆಗ ಆತ್ಮಸಾಕ್ಷಾತ್ಕಾರವನ್ನು ಸುಲಭವಾಗಿ ಹೊಂದುವನು.

ಅಧಿಕಾರಿಯ ಆಜ್ಞೆಗಳನ್ನು ತಪ್ಪದೆ ಪಾಲಿಸುವುದು ಸೈನಿಕನ ಕರ್ತವ್ಯವು. ಯಾವ ಪ್ರಶ್ನೆಯನ್ನೂ ಎತ್ತುವಂತಿಲ್ಲ. ಹಾಗೆಯೇ ಸಚ್ಛಿಷ್ಯನು ಗುರುವಿನ ಆಜ್ಞೆಯನ್ನು ತಪ್ಪದೇ ನಡೆಸಬೇಕು. ಅಧ್ಯಾತ್ಮ ಮಾರ್ಗದಲ್ಲಿ ಆಗ ಮಾತ್ರ ಮುಂದುವರೆಯಲು ಸಾಧ್ಯವು.

ಗುರುವಿಗೆ ವಿಧೇಯನಾಗಿದ್ದು, ಉಪಾಸನೆ ಮಾಡುವವನು ಮಾತ್ರ ವೇದಾಂತದ ಗಹನ ತತ್ತ್ವಗಳನ್ನು ಗ್ರಹಿಸಬಲ್ಲನು (comprehend). "ಯಾರಿಗೆ ದೇವರಲ್ಲಿ ಹೆಚ್ಚು ಪ್ರೇಮವೋ, ಅಷ್ಟೇ ಪ್ರೇಮವನ್ನು ದೇವರಂತಿರುವ ತನ್ನ ಗುರುವಿನಲ್ಲಿಡುವನೋ, ಆ ಮಹಾತ್ಮನಿಗೆ ಇಲ್ಲಿ ಬೋಧಿಸಿದ ಸತ್ಯಗಳೆಲ್ಲವೂ ಪೂರ್ಣವಾಗಿ ಪ್ರಕಾಶಿಸುವವು"—ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿರುವು ದನ್ನು [ಅ ೬. ೨೩] ನೀವು ನೋಡಬಹುದು.

ಈ ಜಗತ್ತಿನಲ್ಲಿ ಮೂರು ಬಗೆಯ ಗುರುಗಳಿರುವರು. ಅವರಲ್ಲಿ ಆಜ್ಞಾ ಪಿಸುವವರು ಒಬ್ಬರು, ಜ್ಞಾನ ನೀಡುವವರು ಒಬ್ಬರು ಮತ್ತು ಶ್ರೇಷ್ಠರಾದವರು ಬಂಧಮುಕ್ತ ಮಾಡುವವರು. ಆಜ್ಞೆ ಮಾಡುವ ಗುರು ಮಾರ್ಗದರ್ಶಕರು, ಜ್ಞಾನಬೋಧೆ ಮಾಡುವ ಗುರು ಶ್ರೇಷ್ಠ ಸ್ಥಾನವನ್ನು ಉಪದೇಶಿಸುವರು. ಮುಕ್ತಿ ನೀಡುವ ಗುರುವು ಶ್ರೇಷ್ಠವಾದ ಪರಮ ಸತ್ಯವನ್ನು ತೋರಿಸುವುದನ್ನು ಅರಿಯುವುದರಿಂದ ಅಮೃತತ್ವವನ್ನು ಪಡೆಯುವಿರಿ. ಒಮ್ಮೆ ನದಿಯನ್ನು ದಾಟಿದ ಹತ್ತು ಪ್ರಯಾಣಿಕರು ಎಲ್ಲರೂ ಬದುಕಿರುವರೇ ಎಂದು ನೋಡಲು ಇಚ್ಛಿಸಿದರು. ಅವರೆ ಪ್ರತಿಯೊಬ್ಬನೂ ತನ್ನನ್ನು ಬಿಟ್ಟು ಇತರ ಒಂಬತ್ತು

ಪ್ರಯಾಣಿಕರನ್ನು ಎಣಿಸುತ್ತಿದ್ದು, ದಶಮನಿಲ್ಲವೆಂದು (ಹತ್ತನೆಯವನಿಲ್ಲ ವೆಂದು) ಅವನ ಮರಣಕ್ಕಾಗಿ ಎಲ್ಲರೂ ಬಹುವಾಗಿ ಅಳಲಾರಂಭಿಸಿದರು. ಅಷ್ಟು ಹೊತ್ತಿಗೆ ಅಲ್ಲಿಗೆ ಬಂದವರೊಬ್ಬರು, ಅವರ ತಪ್ಪುತಿಳಿವಳಿಕೆಯನ್ನು ಕಳೆದರು. ಆ ಹತ್ತನೆಯವನು ' ನೀನೇ ' ಎಂದು ತೋರಿಸಿದರು.

ಅಯಸ್ಕಾಂತದ ಸ್ವಾನ್ನಿಧ್ಯದಿಂದ ಕಬ್ಬಿಣದ ರಜಗಳೂ ಅಯಸ್ಕಾಂತ ವಾಗುವಂತೆ, ಗುರು ಸನ್ನಿಧಿಯಲ್ಲಿರುವ ಶಿಷ್ಯರೂ ಆ ಗುರುಶಕ್ತಿಯನ್ನು ಹೊಂದುವರು. ಕಬ್ಬಿಣವು ಸ್ಪರ್ಶಮಣಿಯನ್ನು ಮುಟ್ಟಿದುದರಿಂದ ಚಿನ್ನ ವಾಗುವಂತೆ, ದುರ್ಗುಣಗಳಿಂದ ಕೂಡಿದ್ದವರೂ ಯೋಗಿಗಳ ಮತ್ತು ಜ್ಞಾನಿಗಳ ಸತ್ಸಂಗದಿಂದ ಅದ್ಭುತವಾದ ಸಂತರಾಗಿಬಿಡುವರು.

ಗುರುವು ದೇಹಧಾರಿಯಾಗಿರುವಾಗ ಸಾಧಕರಿಗೂ ಶಿಷ್ಯರಿಗೂ ಹೆಚ್ಚು ಸಹಾಯ ನೀಡಬಲ್ಲನು. ಶ್ರದ್ಧಾವಂತನಾದ ಶಿಷ್ಯನಿಗೆ, ತನ್ನ ಶರೀರವನ್ನು ಕಿತ್ತು ಒಗೆದಮೇಲೂ ಗುರುವು ನೆರವು ನೀಡುವನು. ಅದ್ವೈತ ತತ್ತ್ವದರ್ಶಿ ಗಳಾದ ಶ್ರೀ ಶಂಕರ ಭಗವತ್ಪಾದರು, ಶ್ರೀದತ್ತಾತ್ರೇಯ, ಮತ್ತು ಆಲಂದಿಯ ಶ್ರೀ ಜ್ಞಾನದೇವರು ತಮ್ಮಲ್ಲಿ ಭಕ್ತಿಯುಳ್ಳ ಶಿಷ್ಯರಿಗೆ ಈಗಲೂ ಅನುಗ್ರಹ ಮಾಡುವರು. ನಿಮ್ಮನ್ನು ಬಿಟ್ಟು ಅವರಿಗೆ ಬೇರೆ ದೇಹವಿಲ್ಲವು, ನಿಮ್ಮನ್ನು ಬಿಟ್ಟು ಅವರಿಗೆ ಬೇರೆ ಕರಗಳಿಲ್ಲವು ಮತ್ತು ಪಾದಗಳಿಲ್ಲವು. ನಿಮ್ಮ ಕಣ್ಣುಗಳ ಮೂಲಕವೇ ಈ ವಿಶ್ವವನ್ನು ಕಾಣುವರು. ನಿಮ್ಮ ಮೂಲಕ ಸಂಚರಿಸಿ ಜಗತ್ತಿಗೆ ಹಿತವನ್ನು ಉಂಟುಮಾಡುವರು.

---

# ೨. ಗುರು ಮತ್ತು ಶಿಷ್ಯ

ವೇದ ಪಾರಂಗತನೂ, ಬ್ರಹ್ಮಜ್ಞಾನಿಯೂ, ಸ್ಥಿತಪ್ರಜ್ಞನೂ, ದಯಾ ಸಾಗರನೂ, ಶಿಷ್ಯರ ಸಂಶಯ, ಭಯ, ಆತಂಕ, ಅಡ್ಡಿ ಮತ್ತು ಆವರಣವನ್ನು ಕಳೆಯುವವನು ನಿಜವಾದ ಗುರುವು.

ನಿಜವಾಗಿಯು ಸದ್ಗುರುವು ಕಾಮ, ಕ್ರೋಧ, ಸ್ವಾರ್ಥ, ಲೋಭ, ದ್ವೇಷ, ಮತ್ತು ಅಹಂಕಾರಗಳಿಂದ ಪೂರ್ಣವಾಗಿ ಬಿಡಲ್ಪಟ್ಟವನು. ಪ್ರಾಪಂಚಿಕ ಪ್ರಲೋಭನೆಗಳನ್ನು ಅವನು ದಾಟಿರುವನು. ಜನರ ಅಜ್ಞಾನ ವನ್ನು ಕಳೆಯಬಲ್ಲವನು. ಯಾವ ಬಗೆಯ ಸಂದೇಹವನ್ನಾದರೂ ನಿವಾರಿಸ ಬಲ್ಲನು. ಮನಸ್ಸು ಮತ್ತು ಇಂದ್ರಿಯಗಳನ್ನು ಗೆಲ್ಲುವ ಸುಲಭಸಾಧ್ಯವಾದ ಶಿಕ್ಷಣವನ್ನು ನೀಡಬಲ್ಲನು. ಅವನ ಉಪದೇಶಗಳು ಮನೋಹರವು ಪರಿಣಾಮ ಕಾರಿಯು. ದುರಭಿಮಾನಿಯೂ, ಅಹಂಕಾರಿಯೂ ಸಹ ಅವನಿಗೆ ತಲೆ ಬಾಗುವನು. ತನ್ನ ಶಿಷ್ಯರನ್ನು ಮೋಕ್ಷದ್ವಾರದವರೆಗೂ ಕರೆದುಕೊಂಡು ಹೋಗು ವಷ್ಟು ಸಮರ್ಥನು. ಅಡಚಣೆಗಳನ್ನು, ದೋಷಗಳನ್ನು, ವಂಚನೆಗೆ ಒಳ ಗಾಗುವುದನ್ನು ತಪ್ಪಿಸಬಲ್ಲನು. ಗುರುವು ವೇದಪಾರಂಗತನು ಪಾಪರಹಿತನು, ದಯಾಸಾಗರನು ಮತ್ತು ಸರ್ವರ ಮಿತ್ರನು.

ಈ ದಿನಗಳಲ್ಲಿ ಕೆಲವು ಸಾತ್ವಿಕ ಮನುಷ್ಯರಿರುವರು, ಆದರೆ ಬ್ರಹ್ಮಾನುಭವ ವುಳ್ಳವರು ವಿರಳರು. ಸಾತ್ವಿಕರು ಅಪರೋಕ್ಷಾನುಭವವನ್ನು ಹೊಂದಿರದಿದ್ದರೂ ಜೀವನ್ಮುಕ್ತರೆಂದು ತಪ್ಪಾಗಿ ತಿಳಿಯಲ್ಪಡುತ್ತಿರುವರು. ಸಾತ್ವಿಕರಾದ ಸಾಧಕರು ಸತ್ಯಮಾರ್ಗದಲ್ಲಿ ನಡೆಯುತ್ತಾ, ಸದ್ಗುಣಗಳನ್ನು ಹೊಂದಿದ್ದರೆ ಅವರೂ ಸಹ ಗೌರವಿಸಲ್ಪಡಬೇಕು. ಏಕೆಂದರೆ ಆ ಬಗೆಯ ಸಾಧಕರೂ ಅಪರೂಪವಾಗುತ್ತಿರುವರು. ಮತ್ತೆ ಕೆಲವು ಸಾತ್ವಿಕರು ಜೀವನ್ಮುಕ್ತರಂತೆ ತೋರಿಸಿಕೊಳ್ಳುವರು. ಇದು ನಿಜಕ್ಕೂ ಶೋಚನೀಯವು (deplorable) ಅವರ ಶಿಷ್ಯರು ಅವರನ್ನು ಪೂಜಿಸಲಾರಂಭಿಸುವರು, ನಂತರ ಅವರ ಗೌರವ, ಮರ್ಯಾದೆ, ಮತ್ತು ಪೂಜೆಗೆ ದಾಸರಾಗುತ್ತಾ, ಕಾಲಾನುಕ್ರಮವಾಗಿ ಅಧಃ ಪತನರಾಗುವರು. ಮಾಯೆಯು ಹಲವು ರೀತಿಯಲ್ಲಿ ಹಾವಳಿಯನ್ನುಂಟು ಮಾಡುವಳು. ಅವಳ ರೀತಿವೈಚಿತ್ರ್ಯವನ್ನು, ಚಟುವಟಿಕೆಗಳನ್ನು ಅರಿಯು ವುದು ಬಲು ಕಷ್ಟವು.

ಸದ್ಗುರುಗಳ ಅಭಾವವಿರುವುದೆಂಬುದು ನಿಸ್ಸಂದೇಹವು. ಹಾಗೆಯೇ ಸಚ್ಛಿಷ್ಯರ ಅಭಾವವಂತೂ ಮತ್ತೂ ಹೆಚ್ಚಾಗಿರುವುದು.

" ಈಚೆಗೆ ನಮಗೆ ಒಳ್ಳೆಯ ಗುರುಗಳನ್ನು ಪಡೆಯುವುದೇ ಕಷ್ಟವಾಗಿದೆ" ಎಂದು ಶಿಷ್ಯರು ಗೊಣಗಿದರೆ, " ಈ ದಿನಗಳಲ್ಲಿ ಒಳ್ಳೆಯ ಶಿಷ್ಯರು ದೊರೆ

ಯುವುದೇ ದುರ್ಲಭ" ಎಂದು ಗುರುಗಳು ಆಕ್ಷೇಪಿಸುವರು. ಯಾರು ಸರಿ? ಯಾರದು ತಪ್ಪು? ಕೆಳಗಿನ ನ್ಯಾಯಾಲಯವು ಈ ವಿಷಯದಲ್ಲಿ ತೀರ್ಪು ಕೊಡುವಂತಿಲ್ಲ. ಆದ್ದರಿಂದ ಜ್ಞಾನಿಗಳ ರಹಸ್ಯವಾದ ಮಂತ್ರಾಲೋಚನಾ ಮಂಡಳಿಯ ಮುಂದೆ ಈ ವಿಷಯವನ್ನು ನಿರ್ಭಯವಾಗಿ ಮಂಡಿಸಬೇಕಾಗಿದೆ. ರೋಗಿಯು (patient) ಸಲಹೆ ಪಡೆಯುವ ಕೋಣೆಯನ್ನು ಪ್ರವೇಶಿಸಿದೊಡನೆಯೇ ವೈದ್ಯನ ಅರ್ಹತೆಯನ್ನು ಅಳೆಯಬಲ್ಲನೆ? ಹೀಗೆ ಅಧ್ಯಾತ್ಮದ ಹಾದಿಯಲ್ಲಿ ಲವಲೇಶವೂ ಅನುಭವವಿಲ್ಲದ ಅಜ್ಞಾನೀ ಶಿಷ್ಯರು ಕೂಡಲೇ ಗುರುಗಳನ್ನು ಪರೀಕ್ಷಿಸಲು ಅಥವ ಒರೆ ಹಚ್ಚಲು ಆರಂಭಿಸುವರು. ಗುರುಗಳ ಬಾಹ್ಯ ಜೀವನದ ಅಥವ ಶರೀರಿಕೆಯ ಬಗ್ಗೆ ತಪ್ಪು ಅಭಿಪ್ರಾಯಗಳಿಂದ, ತಪ್ಪು ಭಾವನೆಯಿಂದ ಕೆಲವರು ದುಡುಕಿ ಪ್ರಬಲವಾದ ಟೀಕೆಗಳನ್ನು ಮಾಡುವರು. ಪರಮಹಂಸರು ವಿವಿಧ ರೀತಿಯ ರಹಸ್ಯಗರ್ಭಿತವಾದ ಬಾಳನ್ನು ಹೊಂದಿರುವರು. ನೀವು ಅವರೊಡನೆ ಎಡೆಬಿಡದೆ ಹನ್ನೆರಡು ವರ್ಷಗಳು ವಾಸಿಸಿದರೂ ಅವರ ಜ್ಞಾನದ ಆಳವನ್ನು ಮತ್ತು ಹೃದಯವನ್ನು ಅರಿಯುವುದು ಕಷ್ಟವು. ಜ್ಞಾನ ಮತ್ತು ಅಧ್ಯಾತ್ಮಿಕ ಅನುಭವಗಳು ಆಂತರಿಕ ಸ್ಥಿತಿಗಳು. ಮೂರ್ಖ ಶಿಷ್ಯರು ಗುರುವಿನಿಂದ ಗುರುವಿಗೆ ಓಡುವರು. ಅವರ ಸ್ಥಿತಿಯು ನಿಜವಾಗಿಯೂ ಶೋಚನೀಯವಾದುದು!

ನೀರನ್ನು ಪಡೆಯಲು ಅಲ್ಲಿ, ಇಲ್ಲಿ, ಎಂದು ಆಳವಿಲ್ಲದ ಗುಂಡಿಗಳನ್ನು ತೆಗೆಯಬೇಡಿ. ಆ ಹಳ್ಳಗಳು ಶೀಘ್ರವೇ ಒಣಗಿಹೋಗುವುವು. ಒಂದೇಕಡೆ ಹೆಚ್ಚು ಆಳವನ್ನು ಮಾಡಿ. ನಿಮ್ಮ ಸರ್ವ ಶಕ್ತಿಯನ್ನು ಇಲ್ಲೇ ಕೇಂದ್ರೀಕರಿಸಿರಿ. ವರ್ಷವೆಲ್ಲಾ ನಿಮಗೆ ಒಳ್ಳೆಯ ನೀರು ದೊರೆಯುವದು. ಹಾಗೆಯೇ ಒಬ್ಬನೇ ಗುರುವಿನಿಂದ ಅಧ್ಯಾತ್ಮಿಕ ಉಪದೇಶಗಳನ್ನು ಪಡೆದು ಸಂಪೂರ್ಣವಾಗಿ ಅಂತರ್ಗತ ಮಾಡಿಕೊಳ್ಳಿ. ಒಬ್ಬರ ಉಪದೇಶಾಮೃತವನ್ನೇ ಚೆನ್ನಾಗಿ ಪಾನ ಮಾಡಿ. ಅವರ ಪಾದಗಳ ಬಳಿ ಕೆಲವು ಕಾಲ ಕುಳಿತುಕೊಳ್ಳಿ. ಕುತೂಹಲದಿಂದ ಒಬ್ಬರಿಂದೊಬ್ಬರ ಬಳಿಗೆ ಅಲೆಯುವುದರಿಂದ, ಸ್ವಲ್ಪಕಾಲದಲ್ಲೇ ನಂಬಿಕೆಯನ್ನು ಕಳೆದುಕೊಳ್ಳುತ್ತಾ ಅಲೆಯುವುದರಿಂದ ಪ್ರಯೋಜನವಿಲ್ಲವು. ಸದಾ ಬದಲಾಯಿಸುವ ವೇಶ್ಯೆಯಂತೆ (prostitute) ಮನಸ್ಸನ್ನು ಹೊಂದದಿರಿ.

ಒಂದು ಜ್ಯೋತಿಯಿಂದ ಅನೇಕ ಜ್ಯೋತಿಗಳನ್ನು ನೀನು ಬೆಳಗಬಲ್ಲೆ. ಹಾಗೆಯೇ ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಗುರುವು, ಉಪದೇಶಿಸಿದುದನ್ನು ಸ್ವೀಕರಿಸಲರ್ಹತೆಯುಳ್ಳ ಹಲವರು ದೇವರನ್ನು ಅರಿಯುವಂತೆ ಮಾಡಬಲ್ಲನು. ಆದ್ದರಿಂದ ನಿಮ್ಮ ಗುರುವನ್ನು ಭಕ್ತಿಯಿಂದ ಸೇವೆ ಮಾಡಿರಿ. ಒಂದಲ್ಲ ಒಂದು ದಿನ ಅನುಕಂಪದಿಂದ ನಿಮಗೆ ಜ್ಞಾನೋದಯವಾಗುವಂತೆ ಮಾಡುವನು. ಅವನು ನಿಮ್ಮನ್ನು ಉದ್ಧಾರಮಾಡುವನು. ಸಹನೆಯಿಂದ ನಿರೀಕ್ಷಿಸಿರಿ. ಸಂಪೂರ್ಣವಾಗಿ ಅವನಿಗೆ ಶರಣಾಗತರಾಗಿರಿ.

ಯಾವನು ಗುರುವಿನ ಪಾದಪದ್ಮಗಳ ಬಳಿ ಕುಳಿತುಕೊಳ್ಳುವನೋ, ಆತ್ಮಜ್ಞಾನವನ್ನು ಹೊಂದಿರುವನೋ, ವೇದಶಾಸ್ತ್ರಗಳ ಜ್ಞಾನವನ್ನೂ ಪಡೆದಿರುವನೋ ಅವನೇ ಸತ್ಯವನ್ನು ಗ್ರಹಿಸಲು ಸಮರ್ಥನು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳುತ್ತಾನೆ:

ಶ್ಲೋ || ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ |
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವ ದರ್ಶಿನಃ || [೪-೩೪]

" ನಮಸ್ಕರಿಸುವುದರಿಂದಲೂ, ಪರಿಪ್ರಶ್ನೆಗಳಿಂದಲೂ, ಗುರುಶುಶ್ರೂಷೆಯಿಂದಲೂ ಅದನ್ನು ಅರಿತುಕೊ. ಆತ್ಮ ತತ್ತ್ವವನ್ನು (knowledge of the self) ಸಾಕ್ಷಾತ್ಕರಿಸಿದ ಜ್ಞಾನಿಗಳು ನಿನಗೆ ಉಪದೇಶಮಾಡುವರು."

ಕಾಮರಹಿತವಾದ ಶಿಷ್ಯನ ಮನಸ್ಸಿನಲ್ಲಿ ಮಾತ್ರ ಉಪದೇಶಿಸಲ್ಪಟ್ಟ ಬ್ರಹ್ಮದ ರಹಸ್ಯಗಳು ಫಲಿಸುವುವು (fructify) ಮತ್ತು ಅವನಲ್ಲಿ ಜ್ಞಾನವನ್ನುಂಟುಮಾಡುವುದು.

ಸೌದೆಯು ಇದ್ದಿಲು ಬೆಂಕಿಯಾಗಲು ಬಹಳ ಕಾಲಬೇಕು, ಆದರೆ ಸಿಡಿಮದ್ದನ್ನು ಕಣ್ಣುಮಿಟುಕಿಸುವುದರೊಳಗೆ ಸಿಡಿಸಬಹುದು (ignited). ಹಾಗೆಯೇ ಕಲ್ಮಷಚಿತ್ತನಾದವನಿಗೆ ಜ್ಞಾನವೆಂಬ ಅಗ್ನಿಯು ಹೊತ್ತಿಕೊಳ್ಳಲು ಬಹಳ ಕಾಲಬೇಕು. ಆದರೆ ಪರಿಶುದ್ಧಚಿತ್ತನಿಗೆ, ರೆಪ್ಪೆಹೊಡೆಯುವುದರೊಳಗೆ, ಅಥವ ಬೆರಳುಗಳಿಂದ ಹೂವನ್ನು ಹಿಸುಕುವುದರೊಳಗೆ, ಆತ್ಮಜ್ಞಾನವು ಲಭಿಸುವುದು.

ನೀನು ಶುದ್ಧನಾದ ಹೊರತು ಮುಕ್ತನಾದ ಜ್ಞಾನಿಯ ನಿಜವಾದ ಮಹಿಮೆಯನ್ನು ತಿಳಿಯಲಾರೆ. ಅವನು ನಿನ್ನ ಮುಂದೆ ಬಂದಾಗ್ಯೂ,

ಅವನನ್ನು ಸಾಮಾನ್ಯನೆಂದು ತಿಳಿಯುವುದರಿಂದ, ನಿನಗೆ ಪ್ರಯೋಜನವಿಲ್ಲವು. ನಿನ್ನ ದೋಷದೃಷ್ಟಿಯಿಂದ ಅವನಲ್ಲಿ ದೋಷಗಳನ್ನು ಕಂಡುಹಿಡಿಯಲು ಪ್ರಯತ್ನಿಸುವೆ. ಆತ್ಮೋಪದೇಶಗಳನ್ನು ಸ್ವೀಕರಿಸಲು ನೀನು ಸಿದ್ಧನಾಗದ ಹೊರತು, ನಿನ್ನೊಡನೆಯೇ ಶ್ರೀಕೃಷ್ಣ ಅಥವ ಶ್ರೀ ಶಂಕರರು ಇದ್ದರೂ, ಅವರನ್ನು ನೀನು ಬರಮಾಡಿಕೊಳ್ಳದಿದ್ದರೆ, ಅವರು ನಿನಗೆ ಏನನ್ನೂ ಮಾಡುವುದಿಲ್ಲ. ಯಾವುದನ್ನೂ ಹೇಳುವುದಿಲ್ಲ.

ಗುರುವಿನ ಕೇವಲ ಕೃಪೆಯು (grace), ಅವನ ಸ್ಪರ್ಶವು (touch), ದೃಷ್ಟಿಯು (sight) ಅಥವ ಸಂಕಲ್ಪವು (will), ಪವಾಡಗಳನ್ನು ಮಾಡಬಲ್ಲುದೆಂಬುದು ನಿಜವು. ಆದರೆ ಶಿಷ್ಯನು ಸೋಮಾರಿಯಾಗಿ ಕುಳಿತಿರಬೇಕೆಂದು ಅದರ ಅಭಿಪ್ರಾಯವಲ್ಲ. ಶಿಷ್ಯನು ಯೋಗವೆಂಬ ಏಣಿಯ ಮೆಟ್ಟಿಲುಗಳನ್ನು ಹತ್ತಲು ಸಿದ್ಧನಿರಬೇಕು. ಗೀತೆಯಲ್ಲಿ,

"ಉದ್ಧರೇತ್ ಆತ್ಮನ ಆತ್ಮಾನಂ ನ ಆತ್ಮಾನಂ ಅವಸಾದಯೇತ್" ಎಂದರೆ ತನ್ನ ಉದ್ಧಾರವನ್ನು ತನ್ನಿಂದಲೇ ಮಾಡಿಕೊಳ್ಳಬೇಕು. ತನ್ನನ್ನು ತಾನೇ ತಗ್ಗಿಸಿಕೊಳ್ಳಬಾರದು" [೬–೫] ಎಂದು ಹೇಳಲ್ಪಟ್ಟಿದೆ.

ಶಿಷ್ಯನಿಗೆ ಗುರುಕೃಪೆಯು ಬೇಕಾಗಿದೆ. ಅಂದಮೇಲೆ ಸೋಮಾರಿಯಾಗಿರಬಾರದು ಮತ್ತು ಸಮಾಧಿಸ್ಥಿತಿಗೆ ಸರಕ್ಕನೆ ನೂಕುವಂಥ ಪವಾಡವನ್ನು ಗುರುವಿನಿಂದ ನಿರೀಕ್ಷಿಸಬಾರದು. ಶಿಷ್ಯನಿಗಾಗಿ, ಗುರುವು ಸಾಧನೆಯನ್ನು ಮಾಡಬೇಕಾಗಿಲ್ಲವು. ಶಿಷ್ಯನಿಗೆ ದಾರಿ ತೋರಿಸಬಲ್ಲನು, ಸಂಶಯ ನಿವಾರಿಸಬಲ್ಲನು, ಪಥವನ್ನು ನಿರ್ಮಿಸುವನು, ಪಾಶವನ್ನು ಕತ್ತರಿಸುವನು ಬೀಳದಂತೆ ನೋಡಿಕೊಳ್ಳುವನು, ಆತಂಕವನ್ನು ಕಳೆಯುವನು ಮತ್ತು ಹಾದಿಯಲ್ಲಿ ಬೆಳಕು ಬೀರುವನು. ಅಧ್ಯಾತ್ಮದ ಹಾದಿಯಲ್ಲಿ ಶಿಷ್ಯನು ತಾನೇ ಪ್ರತಿಯೊಂದು ಹೆಜ್ಜೆಯನ್ನೂ ಇಡಬೇಕು ಮತ್ತು ಯೋಗಮಾರ್ಗದಲ್ಲಿ ಮುಂದುವರೆಯಬೇಕು.

ನಿರ್ವಿಕಲ್ಪಸಮಾಧಿಯೊಳಕ್ಕೆ ನಿನ್ನನ್ನು ನೂಕಲು ಯಾವ ಪವಾಡವೂ ನಡೆಯುವುದಿಲ್ಲವು. ಗುರುಗಳು ಸ್ಫೂರ್ತಿಯನ್ನು ತುಂಬಬಲ್ಲರು. ಪರೀಕ್ಷಿಸಿಕೊಳ್ಳಿ, ದೌರ್ಬಲ್ಯವನ್ನು ಕಂಡುಕೊಳ್ಳಿ ಮತ್ತು ಅವುಗಳನ್ನು ತೆಗೆದು ಹಾಕಿರಿ. ಧ್ಯಾನದಲ್ಲಿ ಕ್ರಮಬದ್ಧರಾಗಿ, ಗುರಿಯನ್ನು ಶೀಘ್ರವಾಗಿ ಮುಟ್ಟಿರಿ.

ಗುರುವಿನಿಂದ ಮಾಡಲ್ಪಟ್ಟ ಪವಾಡದಂತೆ, ಆಕಸ್ಮಿಕವಾಗಿ ಶಿಷ್ಯನಿಗೆ ಆತ್ಮಜ್ಞಾನವು ಲಭಿಸದು. ಭಗವಾನ್ ಬುದ್ಧ, ಭಗವಾನ್ ಕ್ರಿಸ್ತ, ರಾಮ ತೀರ್ಥರೇ ಮೊದಲಾದವರೂ ಆತ್ಮವಿಷಯಕ ಸಾಧನೆಯನ್ನು ಮಾಡಿದರು. 'ವೈರಾಗ್ಯವನ್ನು ಹೊಂದು, ಅಭ್ಯಾಸವನ್ನು ಮಾಡು' ಎಂದು ಶ್ರೀಕೃಷ್ಣನು ವಿಧಿಸಿದ್ದಾನೆ. ಆದರೆ, "ನಾನು ನಿನಗೆ ಮುಕ್ತಿಯನ್ನು ನೇರವಾಗಿ ಕೊಡುವೆನು" ಎಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿಲ್ಲವು.

ಅಧ್ಯಾತ್ಮ ಮಾರ್ಗದಲ್ಲಿ ನಿಶ್ಚಿತವಾದ ಹೆಜ್ಜೆಯನ್ನಿಡುವ ತೀವ್ರವಾದ ಆಂತರಿಕ ಪ್ರೇರಣೆಯು (urge) ಇರುವಾಗ, ಕೂಡಲೇ ಕಠಿಣವಾದ ಸಾಧನೆಯನ್ನು ನೀವು ಆರಂಭಿಸಬೇಕು. ಆದರೆ ಸಾಧನೆಯು ಚೆನ್ನಾಗಿ ಕ್ರಮಬದ್ಧ (regulated) ವಾಗಿರಬೇಕು. ವಿಷಮಶೀತಜ್ವರದಲ್ಲಿ ಉಷ್ಣಾಂಶವು ಏರುವಂತೆ ಯೋಗವೆಂಬ ಏಣಿಯಲ್ಲಿನ ಮೆಟ್ಟಿಲುಗಳಮೇಲೆ ಹತ್ತಿರಿ.

ಗುರು ಮತ್ತು ಶಿಷ್ಯನಿಗೆ ಇರುವ ಅಂತರವು ಏನನ್ನೂ ಮಾಡಲಾರದು. ಹೃದಯಗಳ ಸಾಮೀಪ್ಯವನ್ನೇ ಗಮನಿಸಬೇಕು. ಗುರು ಮತ್ತು ಶಿಷ್ಯನ ಮಧ್ಯೆ ಪೂರ್ಣ ಸಂಬಂಧವಿರಬೇಕು. ಆಗ ಮಾತ್ರ ಶಿಷ್ಯನು ಬಹಳವಾಗಿ ಜನವನ್ನು ಹೊಂದುವನು.

ಸೂರ್ಯನು ಬಹುದೂರದಲ್ಲಿರುವನು, ಆದರೂ ಅವನನ್ನು ಕಂಡೊಡನೆಯೇ ಕಮಲವು ಆನಂದಪಡುವುದು. ಚಂದ್ರನು ಬಹುದೂರದಲ್ಲಿರುವನು, ಆದರೂ ಚಂದ್ರನನ್ನು ದರ್ಶಿಸಿದ ಕೂಡಲೇ ನೈದಿಲೆಗೆ (lady of the lake) ಮಿಗಿಲಿಲ್ಲದ ಆನಂದವಾಗುವುದು. ಮೇಘಗಳು ದೂರದಲ್ಲಿದ್ದರೂ, ಕಂಡೊಡನೆಯೇ ನವಿಲು ನಲಿದು ಕುಣಿಯುವುದು. ಹಾಗೆಯೇ, ಸ್ನೇಹಿತರು ಬಹುದೂರದಲ್ಲಿದ್ದರೂ, ಸ್ನೇಹ ಮತ್ತು ಪ್ರೇಮದಿಂದ ಚೆನ್ನಾಗಿ ಬಂಧಿಸಲ್ಪಡಬಲ್ಲರು. ಅಂತರವು ಅಡ್ಡಿಯೇನಲ್ಲವು. ಗುರು, ಶಿಷ್ಯರು ದೂರದ ಪ್ರದೇಶಗಳಲ್ಲಿ ವಾಸಿಸುತ್ತಿದ್ದರೂ ಅವರಿಗೆ ತಮ್ಮ ಪ್ರಬಲವಾದ ಆತ್ಮಚಿಂತನ ಶಕ್ತಿಯ ಪ್ರವಾಹದಿಂದ (spiritual thought currents) ಸಹಾಯ ನೀಡಬಹುದು.

ಇದು ಒಂದು ವಿಚಿತ್ರವಾದ ಪ್ರಪಂಚವು. ನಾವು ಅನೇಕ ಪಾಠಗಳನ್ನು ಕಲಿಯಬೇಕಾಗಿದೆ. ಯಾವ ಗುರುವಿಗೆ ಒಂದು ಕಾಲದಲ್ಲಿ ಭಕ್ತಿಯಿಂದ ನಡೆದುಕೊಂಡನೋ, ಅವನೇ ಸ್ವಲ್ಪಕಾಲಾನಂತರ ತನ್ನ ಪ್ರೀತಿಯ ಗುರುವನ್ನೇ

ನಾಶಮಾಡಲು ಯತ್ನಿಸುವನು. ಮುಂದುವರೆಯುತ್ತಿರುವ ಸಾಧಕನಿಗೆ ಅಡಿಗಡಿಗೆ ಅಡ್ಡಿಯಾಗಿ ಬರುವ ತೊಂದರೆಗಳು, ಅವನ ಆತ್ಮಬಲವನ್ನು, ಆಂತರಿಕ ಶಕ್ತಿಯನ್ನು ಮತ್ತು ಸಹನಶಕ್ತಿಯನ್ನು ಬೆಳೆಸುವವು. ಪ್ರತಿರೋಧಶಕ್ತಿ (adverse) ಗಳನ್ನು ಎದುರಿಸುವ ಸಾಮರ್ಥ್ಯವನ್ನು ತೋರಿಸಲೇಬೇಕು. ಏನೂ ಆಗೇ ಇಲ್ಲವೆಂದು ಭಾವಿಸಬೇಕು ಮತ್ತು ಚಿಂತಿಸಬೇಕು.

ನೀವು ಗುರುವನ್ನು ಪಡೆದುಕೊಂಡಿಲ್ಲವಾದರೆ, ದೇವರು, ಕೃಷ್ಣ, ರಾಮ, ಶಿವನನ್ನು ಗುರುವಾಗಿಟ್ಟುಕೊಳ್ಳಿ. ಅವನನ್ನು ಪ್ರಾರ್ಥಿಸಿರಿ. ಅವನನ್ನೇ ಚಿಂತಿಸಿರಿ. ಅವನ ಸಂಕೀರ್ತನೆಯನ್ನು ಮಾಡಿ. ಅವನನ್ನು ಸ್ಮರಿಸಿ. ಯೋಗ್ಯನಾದ ಗುರುವನ್ನು ನಿಮ್ಮ ಬಳಿಗೆ ಕಳುಹಿಸುವನು. ಆರಂಭದಲ್ಲಿ ವೈಯಕ್ತಿಕವಾದ (personal) ಗುರುವು ಬೇಕೇಬೇಕು. ಗುರುಗಳ ಗುರುವಾದವನು ಮಾತ್ರವೇ ದೇವರನ್ನು ಕಾಣುವ ದಾರಿಯನ್ನು ತೋರಿಸುವನು ಮತ್ತು ಮಾರ್ಗದಲ್ಲಿನ ಎಲ್ಲ ಎಡರು ತೊಡರುಗಳನ್ನು ಕಳೆದು ಸರಿಪಡಿಸುವನು.

---

## ೩. ಆತ್ಮತತ್ತ್ವಾಕಾಂಕ್ಷಿಯ ಅರ್ಹತೆಗಳು

ಅಮೃತತತ್ವವನ್ನು ಪಡೆಯಲು ಅರ್ಹನಾದ ಅಧಿಕಾರಿ ಯಾರು? ಪ್ರಾಪಂಚಿಕವಾದ ವಿಷಯಗಳನ್ನು ಕೊಡವಿಬಿಟ್ಟಿರುವ, ಪ್ರಾಪಂಚಿಕತೆಯನ್ನು ಬಿಟ್ಟಿರುವ, ಮತ್ತು ಪ್ರಾಪಂಚಿಕವಾದ ಮೋಹಗಳನ್ನು ಕತ್ತರಿಸಿರುವವನೇ ಯೋಗ ಮಾರ್ಗದಲ್ಲಿ ನಡೆಯಲು ಅರ್ಹನು. ಅವನು ಜೀವನದಲ್ಲಿ ಶುಚಿಯನ್ನೂ, ನಿರ್ಮಲವಾದ ಸ್ವಭಾವವನ್ನೂ ಹೊಂದಿರಬೇಕು.

ಬಹಳವಾಗಿ ತಪಸ್ಸನ್ನು ಮಾಡಿ ತನ್ನ ಪಾಪಗಳನ್ನು ತೊಳೆದುಹಾಕಿ ಶಾಂತನೂ, ವೀತರಾಗನೂ, ಸಂಸಾರದಿಂದ ಹುಟ್ಟು ಸಾವುಗಳ ಚಕ್ರದಿಂದ ಮುಕ್ತನಾಗಲು ಬಯಸುವವನು ಮಾತ್ರವೇ ವೇದಾಂತ ಶಾಸ್ತ್ರವನ್ನು ಮತ್ತು ಆತ್ಮಜ್ಞಾನದ ಗ್ರಂಥಗಳನ್ನು ಅಧ್ಯಯನಮಾಡಲು ಅಧಿಕಾರಿಯು.

ಇಂದ್ರಿಯಗಳನ್ನು ಜಯಿಸಿ, ಗುರು ಮತ್ತು ಶೃತಿಯಲ್ಲಿ ಹೆಚ್ಚಿನ ನಂಬಿಕೆ ಇಟ್ಟಿರುವ ಮತ್ತು ಮೋಕ್ಷಾಕಾಂಕ್ಷಿಯಾದವರೇ ಆತ್ಮಜ್ಞಾನಕ್ಕೆ ಅರ್ಹರು. ಇವರೇ ಬ್ರಹ್ಮನಿಷ್ಠ ಗುರುವಿನಿಂದ ಉಪದೇಶಗಳನ್ನು ಪಡೆಯುವುದಕ್ಕೆ ಅಧಿಕಾರಿಗಳು.

ಜಗತ್ತು ಮತ್ತು ಅದರ ವಸ್ತುಗಳಲ್ಲಿ ವೈರಾಗ್ಯವನ್ನು ಹೊಂದಿ. ದೇವರು ಮತ್ತು ಆಧ್ಯಾತ್ಮ ಸಾಧನೆಯಲ್ಲಿ ಪ್ರೇಮವನ್ನಿಡಿ.

ಜ್ಞಾನೀ ಸಂನ್ಯಾಸಿಯ (enlightened sage) ಮಾರ್ಗವು ಪವಿತ್ರವು. ಮನಸ್ಸು ಮತ್ತು ಹೃದಯದ ಪರಿಶುದ್ಧತೆ, ಹಾಗೂ ಮನಸ್ಸನ್ನು ಹಿಡಿತದಲ್ಲಿಟ್ಟು ಆತ್ಮಸಂಯಮದಿಂದ ಮಾಡುವ ಪ್ರತಿಯೊಂದು ಕರ್ಮದಿಂದಲೂ ಮತ್ತು ಪರಿಶುದ್ಧವೂ ಸ್ವಯಂಜ್ಯೋತಿಯೂ ಅಪರಿಚ್ಛಿನ್ನವೂ ಸರ್ವವ್ಯಾಪಿಯು ಆದ ಆತ್ಮನನ್ನು ಕುರಿತು ಮಾಡುವ ಧ್ಯಾನದಿಂದಲೂ ದೊರೆಯುವ ಪೂರ್ಣಾನಂದ ಮತ್ತು ಶಾಂತಿಯು ಮುಕ್ತಿಗೆ ಮಾರ್ಗಗಳಾಗುವುವು.

ಯುವತಿಯ ಮುಖದಮೇಲಿನ ಬಿಳಿಯ ಮಚ್ಚೆಯು ಅವಳ ಸೌಂದರ್ಯವನ್ನು ಕೆಡಿಸುವಂತೆ, ಅಧಿಕಾರಿಯಲ್ಲಿರುವ ಅತ್ಯಲ್ಪವಾದ ದೋಷವೂ ಅವನ ನಡತೆ ಹಾಗೂ ಜೀವನವನ್ನು ನಿಶ್ಚಯವಾಗಿ ಕೆಡಿಸುವದು. ಸಾಧಕನು ಎಲ್ಲ ವಿಧವಾದ ದೌರ್ಬಲ್ಯ ಮತ್ತು ದೋಷಗಳಿಂದ ಪೂರ್ಣವಾಗಿ ಮುಕ್ತನಾಗಿರಬೇಕು, ಸಮಸ್ತ ಸದ್ಗುಣಗಳಿಗೆ ಆಶ್ರಯನಾದ ಆದರ್ಶವ್ಯಕ್ತಿಯಾಗಿರಬೇಕು.

ಆತ್ಮನನ್ನು ನೇರವಾಗಿ ಅರಿತುಕೊಳ್ಳುವುದೇ ಮುಕ್ತಿಗೆ ಸಾಧನವು. ಸಾಧನ ಚತುಷ್ಟಯ ಸಂಪನ್ನನಾದವನು ಆತ್ಮನನ್ನು ಕಾಣಬಲ್ಲನು. ವಿವೇಕ, ವೈರಾಗ್ಯ, ಷಟ್ಸಂಪತ್ತಿ ಮತ್ತು ಮುಮುಕ್ಷುತ್ವವನ್ನು ತನ್ನ ವರ್ಣಾಶ್ರಮ ಧರ್ಮಕ್ಕೆ ತಕ್ಕ ಆಚರಣೆಯಿಂದ ತಪಸ್ಸು ಮತ್ತು ನಿಷ್ಕಾಮ್ಯ ಸೇವೆಯಿಂದ, ತನ್ನ ರಕ್ಷಕ ಅಥವ ಇಷ್ಟದೇವರನ್ನು (tutelary deity) ಅರ್ಚಿಸುವುದರಿಂದ ಮತ್ತು ಗುರು ಸೇವೆಯಿಂದ ಪಡೆಯಬಹುದು.

ಕತ್ತರಿ, ಸೂಜಿ ಮತ್ತು ದಾರವಿಲ್ಲದೆ ನೀನು ಬಟ್ಟೆಯನ್ನು ಹೊಲೆಯಲಾರೆ. ಗುದ್ದಲಿಯಿಲ್ಲದೆ ಭೂಮಿಯನ್ನು ಅಗೆಯಲಾರೆ. ಸಾಧನ ಚತುಷ್ಟಯ ಸಂಪನ್ನನಾಗದೆ ಬ್ರಹ್ಮಜ್ಞಾನವನ್ನು ಹೊಂದಲಾರೆ. ನಿಷ್ಕಾಮ್ಯ ಕರ್ಮಯೋಗವನ್ನು (selfless service) ಆಚರಿಸುವುದರಿಂದ ಚಿತ್ತಶುದ್ಧಿಯನ್ನು ಹೊಂದಿದವನು ವೇದಾಂತೋಪದೇಶಗಳನ್ನು ಅರಿತಕೊಳ್ಳಬಲ್ಲನು.

ಶಾಂತ, ವೀತರಾಗ, ನಿಸ್ಪೃಹ, ಸರ್ವಸಂಗಪರಿತ್ಯಾಗಿಯು ಆಸ್ತಿಕನು ಸದಾಚಾರನು, ಜಿತೇಂದ್ರಿಯನೂ ಆಗಿ ನಿಜವಾದ ವೈರಾಗ್ಯವನ್ನು ಹೊಂದಿ, ಸ್ಥಿರವೈರಾಗ್ಯ, ತಾಳ್ಮೆ, ದೈವಾನುಗ್ರಹಸ್ಥಿತಿಯಲ್ಲಿ ನೆಲೆ, ವಿಧೇಯತೆ, ನಮ್ರತೆ ಮುಂತಾದ ಅರ್ಹತೆಗಳನ್ನು ಪ್ರಾಪ್ತಿಮಾಡಿಕೊಳ್ಳುವವರೆಗೂ, ಭಗವಂತನ ಅವತಾರಶಕ್ತಿಯೂಸಹ ನಿನಗೆ ಸಹಾಯವಾಗುವುದಿಲ್ಲ.

ವೇದಾಂತದ ವಿದ್ಯಾರ್ಥಿಯು ಪೂರ್ವಭಾವಿಯಾಗಿ (preliminary) ಸತ್ಯಾನ್ವೇಷಣೆಗೆ ಮನಃಪೂರ್ವಕವಾದ ಆಸಕ್ತಿಯನ್ನು ಹೊಂದಿರಬೇಕು, ಜಾಗೃತನಾಗಿರಬೇಕು. ಈ ಒಂದು ಅರ್ಹತೆಯಿಂದ ಉಳಿದೆಲ್ಲ ಗುಣಗಳೂ ತಾವಾಗಿಯೇ ಲಭಿಸುವವು. ಸಮಸ್ತ ಸದ್ಗುಣಗಳೂ ಬರುವವು. ಆಗಲೇ ಸತ್ಯಪಥದಲ್ಲಿ ನಡೆಯಬಲ್ಲೆ.

ಮನುಷ್ಯತ್ವ ಮುಮುಕ್ಷುತ್ವ, ಸತ್ಸಂಗ, ಗುರುಸೇವಾ, ಶೃತಿಗಳ ಶ್ರವಣ, ಚಿಂತನ ಮತ್ತು ಸಂತತವಾದ ಮತ್ತು ಗಾಢವಾದ (protracted and profound) ಧ್ಯಾನವು ಮೋಕ್ಷ ಪ್ರಾಪ್ತಿಗೆ ಅವಶ್ಯಕವು.

ನಂಬಿಕೆ, ನಿಷ್ಕಾಮ, ಆತ್ಮಸಂಯಮ, ಏಕಾಗ್ರಚಿತ್ತ, ಶುದ್ಧ ಹೃದಯ, ಭಕ್ತಿ, ಮೋಕ್ಷಾಪೇಕ್ಷೆ, ಮತ್ತು ಧ್ಯಾನವು ಸಾಧಕನ ಬಿಡುಗಡೆಗೆ ಅವ್ಯವಹಿತ ವಾದ ಅಂಶಗಳು. ಈ ಗುಣಗಳಿಂದ ಪರಿಶೋಭಿಸುವವನು ಅಮೃತತ್ವವನ್ನು ಮತ್ತು ಜ್ಞಾನವನ್ನು ಹೊಂದುವನು.

ನಿರಹಂಕಾರ, ಸದ್ಗುಣಾಭಿವೃದ್ಧಿ, ಉಲ್ಲಾಸ, ಆತ್ಮಸಮರ್ಪಣೆ, ನಿಷ್ಕಾಮ ಭಾವ, ಅಕ್ರೋಧ, ಸ್ಥಿತಪ್ರಜ್ಞತೆ, ಮಾನಾವಮಾನದಲ್ಲಿ ಸಮದೃಷ್ಟಿ, ಇಂದ್ರಿಯ ಚಾಪಲ್ಯಗಳಿಂದ ವಿಮುಖತೆ, ಶೀತೋಷ್ಣಗಳಲ್ಲಿ ಸಮತೆ ಮೊದಲಾದವು ಸಾಕ್ಷಾತ್ಕಾರದ ಹಾದಿಯಲ್ಲಿರುವವರ ಕೆಲವು ಲಕ್ಷಣಗಳು. ಇವುಗಳನ್ನು ಒಂದೆರಡು ದಿನಗಳಲ್ಲಿ ಪಡೆಯಲಾರೆವು. ಒಂದೇ ಸಮನಾಗಿ ಹಲವು ವರ್ಷಗಳು ಆಳವಾಗಿ ಅಭ್ಯಾಸಮಾಡಿದರೆ ಸಾಧನವು ಸಾರ್ಥಕವಾಗುವುದು.

ಅಧ್ಯಾತ್ಮ ಪಥದಲ್ಲಿ. ಪದವೀಧರರು, ಪಂಡಿತರು, ಪ್ರಾಧ್ಯಾಪಕರು, ವೇದಾಂತ ನಿಷ್ಣಾತರು ಎಂಬ ತಾರತಮ್ಯವಿಲ್ಲ. ಕಠಿಣವಾದ ಸತ್ಯದ ಮಾರ್ಗ ದಲ್ಲಿರುವ ಸಾಧಕರಿಗೆ ವಿದ್ಯಾಲಯಗಳ ಅರ್ಹತಾಪತ್ರಗಳು (qualifications) ಪ್ರಯೋಜನಕಾರಿಯಲ್ಲವು. ವೀತರಾಗ, ವಿವೇಚನೆ, ಸವಿನಯ, ಭಕ್ತಿ ಮತ್ತು

ತಾಳ್ಮೆಯ ಶಕ್ತಿ, ಮನಸ್ಸು ಮತ್ತು ಇಂದ್ರಿಯಗಳ ಸಂಯಮವನ್ನುಳ್ಳವರೇ ಅರ್ಹರು. ನೀವು ಅತಿಯಾಗಿ ವಾದಿಸಿದರೆ, ನಿಮಗೆ ನಿಲುವಿಲ್ಲದೆಹೋಗುವುದು. ಆಧುನಿಕ ವಿದ್ಯಾಭ್ಯಾಸವು ಮನುಷ್ಯನನ್ನು ಅನಾವಶ್ಯಕವಾದ ಚರ್ಚೆಗಳಲ್ಲಿ, ವಾಗ್ಯುದ್ಧಗಳಲ್ಲಿ ತೊಡಗಿಸುವುದು. ಅವನು ಗುರಿ ತಪ್ಪುವನು, ಶುಷ್ಕ ಪಾಂಡಿತ್ಯದ ವಾಗ್ಮಿಯಾಗುವನು.

ಮೋಕ್ಷಕ್ಕಾಗಿ ಹಂಬಲಿಸುವ, ಶಾಸ್ತ್ರ ವಾಕ್ಯಗಳಂತೆ ನಡೆಯುವ, ಇಂದ್ರಿಯ ಮತ್ತು ಮನೋವಿಕಾರಗಳನ್ನು ನಿಗ್ರಹಿಸಿದ, ಶಾಂತಮನಸ್ಕನಾದ, ಸದ್ಗುಣಗಳಾದ ದಯೆ, ವಿಶ್ವಪ್ರೇಮ, ತಾಳ್ಮೆ, ವಿನಯ, ಸಹನೆ, ಕಷ್ಟಸಹಿಷ್ಣುತೆ ಮುಂತಾದುವುಗಳನ್ನುಳ್ಳ ಸಾಧಕನಿಗೆ ಮಾತ್ರ ಗುರುವು ಅಧ್ಯಾತ್ಮವನ್ನು ಬೋಧಿಸುವನು.

ಉತ್ತಮಾಧಿಕಾರಿಗಳು ಮೂರೇ ಮೂರು ದಿನಗಳೊಳಗೆ ಆತ್ಮಸಾಕ್ಷಾತ್ಕಾರವನ್ನು ಹೊಂದಬಲ್ಲರು. ಮಧ್ಯಮಾಧಿಕಾರಿಗಳು ದೀರ್ಘಕಾಲ ಕಠಿಣವಾದ ಸಾಧನವನ್ನು ಮಾಡಬೇಕು.

ಸಾಧಕನು ಮೇರುವಿನಂತೆ ಅಚಲನಾಗಿ, ಆಕಾಶದಂತೆ ಸುಲಭವಾಗಿ, ಮಲ್ಲಿಗೆಯಂತೆ ಮಧುರನಾಗಿ ಗಗನದಂತೆ ವಿಶಾಲನಾಗಿ, ಭೂಮಿಯಂತೆ ಕ್ಷಮಾವಂತನಾಗಿ, ಮಾತಾಪಿತೃಗಳಂತೆ ಕರುಣಿಯಾಗಿ, ಆದಿತ್ಯನಂತೆ ಪ್ರಕಾಶಮಾನನಾಗಿ, ಕೇಸರಿಯಂತೆ ಭಯವರ್ಜಿತನಾಗಿ, ರಂತಿದೇವನಂತೆ ಉದಾರಿಯಾಗಿರಬೇಕು.

'ನಾನು' ಎಂಬ ಅಹಂಭಾವ ಮತ್ತು ಮೋಹವಿಲ್ಲದೆ ಬಾಳಿರಿ. ಇಂದ್ರಿಯಗಳನ್ನು ನಿಗ್ರಹಿಸಿ. ಸದ್ಗುಣಗಳ ಸದ್ವರ್ತನೆಯ ನಿಯಮಗಳನ್ನು ಪಾಲಿಸಿರಿ. ಸತ್ಯವನ್ನು ಆಲಿಸಿರಿ. ಆತ್ಮನಲ್ಲಿ ನಿಲ್ಲಿ. ಸಂತೋಷವಾಗಿರಿ.

ಸ್ವಾರ್ಥಿಯು ಅಧರ್ಮಿಯಾಗಿರುವನು (unrighteous). ಅಭಿಮಾನ ಮತ್ತು ಪ್ರತ್ಯೇಕತಾಭಾವವು ಅವನಲ್ಲಿ ಗಣನೀಯ ಪ್ರಮಾಣದಲ್ಲಿರುವವು. ಯೋಗಕ್ಕೆ ಬೇಕಾದ ಗುಣಗಳನ್ನು ಅವನು ಬೆಳೆಸಿಕೊಳ್ಳಲಾರನು. ಸ್ವಾರ್ಥರಹಿತನೂ, ಧಾರ್ಮಿಕನೂ ಮತ್ತು ಧಾರ್ಮಿಕವ್ಯವಸ್ಥೆ ಮಾಡುವವನಿಗೆ, ಯೋಗಿಯಾಗಬೇಕೆಂಬ ಆಸಕ್ತಿಯಿಂದ ಯೋಗಾಭ್ಯಾಸ ಮಾಡಬೇಕೆಂಬ ಬಯಕೆಯಾಗುವುದು. ಸ್ವಾರ್ಥವು ಹೃದಯವನ್ನು ಕುಗ್ಗಿಸಿ, ಇತರರಿಗೆ ತೊಂದರೆ

ಗಳನ್ನು ಮಾಡಿಸುವುದಲ್ಲದೆ, ಅನ್ಯಾಯಮಾರ್ಗದಿಂದ ಅವರ ಆಸ್ತಿಪಾಸ್ತಿಗಳನ್ನು ಅಪಹರಿಸುವಂತೆ ಮಾಡುವದು. ಪಾಪಕೃತ್ಯಗಳಲ್ಲಿ ತೊಡಗಿಸುವುದು ಸ್ವಾರ್ಥವೇ.

"ಕ್ರಿಯಾಯೋಗವೆಂದರೆ, ತಪಸ್ಸು, ಧಾರ್ಮಿಕ ಗ್ರಂಥಗಳ ಅಧ್ಯಯನ, ಮಂತ್ರದ ಜಪ, ಭಗವಂತನಲ್ಲಿ ಪ್ರೇಮ ಮತ್ತು ಶರಣಾಗತಿಯು" ಎಂದು ಪತಂಜಲಿ ಮಹರ್ಷಿಗಳು ತಿಳಿಸಿರುವರು. ಯೋಗಸೂತ್ರಗಳ ಸಾಧನಪಾದದ, ಎರಡನೆಯ ಅಧ್ಯಾಯದಲ್ಲಿ ಇದು ಮೊದಲನೆಯ ಸೂತ್ರವು. ಇದು ಯೋಗ ಶಿಕ್ಷಣವು. ಕ್ರಿಯಾಯೋಗದ ಅಭ್ಯಾಸವು ಸಮಾಧಿಯನ್ನು ಪ್ರವೇಶಿಸಲು ಸಾಧಕನನ್ನು ತಯಾರುಮಾಡುವುದು. ಅದು ಹೃದಯವನ್ನು ಶುದ್ಧಿಗೊಳಿಸುವುದಲ್ಲದೆ, ಪಂಚಕ್ಲೇಶಗಳಾದ (five afflictions) ಅವಿದ್ಯಾ, ಅಸ್ಮಿತ, ರಾಗ, ದ್ವೇಷ ಮತ್ತು ಅಭಿನಿವೇಶಗಳನ್ನು ನಿಸ್ಸಾರಮಾಡುವುದು. ಪರಿಶುದ್ಧನೂ ನಿಸ್ವಾರ್ಥಿಯೂ ಆದವನು ಮಾತ್ರ ದಿವ್ಯಜ್ಯೋತಿಯನ್ನು ಸ್ವೀಕರಿಸಲು ಮತ್ತು ಅಮೃತವನ್ನು ಪಾನಮಾಡಲು ಸಮರ್ಥನು.

ನಿಮಗೆ ತಿಳಿಯದಿರುವುದನ್ನು ಜ್ಞಾನಿಗಳಲ್ಲಿ ಕೇಳದಿದ್ದರೆ, ನಿಮ್ಮ ಜೀವಮಾನವೆಲ್ಲಾ ಮೂರ್ಖರಾಗಿ ಸೋಲನ್ನು ಅನುಭವಿಸುವಿರಿ.

ನಿಮ್ಮ ಗುರುದೇವನ ಪಾದಪದ್ಮದ ಬಳಿ ಶ್ರದ್ಧೆಗಳಿಂದ ಕುಳಿತುಕೊಳ್ಳಿ. ವಿನಯ, ಮತ್ತು ಪ್ರೇಮದಿಂದ ಶುಶ್ರೂಷೆಮಾಡಿರಿ. ಬೆಳಿಗ್ಗೆ ಮತ್ತು ಸಂಜೆ ನಮಸ್ಕರಿಸಿರಿ. ಸಂಶಯಗಳನ್ನು ನಿವಾರಿಸಿಕೊಳ್ಳಿ. ಅವನಿಂದ ಶ್ರುತಿಗಳನ್ನು ಕೇಳಿರಿ. ಚಿಂತಿಸಿ. ಧ್ಯಾನಿಸಿ. ಜ್ಯೋತಿಗಳ ಜ್ಯೋತಿಯಾದ ಪರಂಜ್ಯೋತಿಯನ್ನು ನೋಡಿರಿ. ಜ್ಞಾನಾಮೃತವನ್ನು ಧೀರ್ಘಕಾಲ ಪಾನಮಾಡಿ ಅಮೃತತ್ವವನ್ನು ಪಡೆಯಿರಿ.

ಯೋಗದ ವಿದ್ಯಾರ್ಥಿಯು ಆಹಾರದಲ್ಲಿ ಮಿತವಿಡಬೇಕು. ಆತನು ಆಲಸ್ಯ, ವಿಶ್ರಾಂತಿ, ಅಶಕ್ತಿ ಮತ್ತು ಅತಿಯಾದ ನಿದ್ದೆಯನ್ನು ತ್ಯಜಿಸಬೇಕು. ಆಗಿಂದಾಗ್ಗೆ ಮೌನ ಹಾಗೂ ಉಪವಾಸಗಳನ್ನು ಆಚರಿಸುವುದರಿಂದ ದೇಹಸ್ಥಿತಿಯು ಬಲವಾಗುವುದು, ಉತ್ತಮಗೊಳ್ಳುವುದು. ಸದಾಚಾರಗಳನ್ನು ಅಭ್ಯಸಿಸಬೇಕು. ವಿಚಾರ, ವಿವೇಕ, ಮತ್ತು ಆಲೋಚನೆಯ ಮೂಲಕ, ದುರಾಸೆ ಮೊದಲಾದ ಕೀಳು ಭಾವಗಳನ್ನು ತಡೆಯಬೇಕು. ಮೋಸಪಡಿಸುವ

ಮನಸ್ಸಿಗೆ ಹೇಳಿರಿ : "ಎಲೈ ಮನಸ್ಸೆ ! ನಿನ್ನ ವಂಚನೆಯು ನನಗೆ ಗೊತ್ತಿದೆ. ನಾನು ಈಗ ಕಾಮರಹಿತನೂ, ವಿವೇಕಿಯೂ ಆಗಿರುವೆನು. ನಿನ್ನ ಚೇಷ್ಟೆಯನ್ನು ನಿಲ್ಲಿಸದಿದ್ದರೆ, ಕತ್ತರಿಸಿಬಿಡುವೆನು. ಹಲವು ಪಾಠಗಳನ್ನು ಕಲಿತಿರುವೆನು. ಶಾಶ್ವತವಾದುದಕ್ಕಿಂತ ಅಲ್ಪಸುಖದ ಕಡೆಯೇ ನೀನು ಓಡುವೆ. ನನಗೆ ಮತ್ತೆ ಇಂದ್ರಿಯ ಸುಖವು ಬೇಕಿಲ್ಲವು. ಅವು ವಮನಮಾಡಿದಂತಿವೆ. ಯೋಗದ ನಿತ್ಯಫಲಗಳಾದ ಶಾಶ್ವತ ಶಾಂತಿ, ಪೂರ್ಣ ಸುಖ ಮತ್ತು ದಿವ್ಯಾನಂದವನ್ನು ಪ್ರಾಪ್ತಿಮಾಡಿಕೊಳ್ಳಲು ತೀರ್ಮಾನಿಸಿರುವೆನು.

ನೀರಿನಿಂದ ಮೀನೊಂದನ್ನು ಹೊರಕ್ಕೆ ತೆಗೆದು ತೀರದಲ್ಲಿ ಹಾಕಿದರೆ, ಅದು ಅತೀವವಾದ ವೇದನೆಯಿಂದ ಒದ್ದಾಡುವುದು. ಮತ್ತೆ ನೀರಿನೊಳಕ್ಕೆ ಹೋಗಲು ಚಡಪಡಿಸುವುದು. ಹಾಗೆಯೇ ಒಬ್ಬ ಹುಡುಗನನ್ನು ಗಂಗೆಯ ಕೊರೆಯುವ ನೀರಿನಲ್ಲಿ ಬಿಟ್ಟರೆ ಅವನಿಗೆ ಅಸಾಧ್ಯವಾದ ಕಳವಳವಾಗುವುದು, ಅವನು ಅರಚಲು ಆರಂಭಿಸುವನು, ನೀರಿನಿಂದ ಹೊರಬರಲು ಆತಂಕಪಡುವನು. ಒಬ್ಬನ ಮನೆಗೆ ಬೆಂಕಿಬಿದ್ದರೆ, ಅದನ್ನು ಆರಿಸಲು ಅಗ್ನಿಶಾಮಕ ದಳವನ್ನು ಸಹಾಯಕ್ಕೆ ಬೇಡುತ್ತಾನೆ. ಕೂಡಲೇ ಸೂಕ್ತ ಕ್ರಮವನ್ನು ಕೈಗೊಳ್ಳುತ್ತಾನೆ. ಇದರಂತೆಯೇ ನಿನಗೆ ಮುಕ್ತಿಯ ಇಚ್ಛೆಯೂ ಶ್ರದ್ಧೆಯು ಇರಬೇಕು.

ಕೇವಲ ಕೆಲವು ತಿಂಗಳ ಅಭ್ಯಾಸದಿಂದ ಯೋಗಿಯಾಗಬೇಕೆಂಬ ಆತುರವನ್ನು ಬಿಡಿ. ಶ್ರದ್ಧಾಪೂರ್ಣ ಸಾಧನ, ಬ್ರಹ್ಮಚರ್ಯ ಮತ್ತು ಅಹಿಂಸೆಯನ್ನು ಅನೇಕ ವರ್ಷಗಳು ಅಭ್ಯಸಿಸಬೇಕು. ಪದವೀಧರನಾಗಲು ಅಥವ ಅಲ್ಪವೇತನ ಪಡೆಯಲು ಅನೇಕ ವರ್ಷಗಳು ಕಷ್ಟಪಡಬೇಕಾಗುವುದು. ಇನ್ನು ಯೋಗಿಯಾಗಲು ಮತ್ತು ಅಮರನಾಗಲು ಮತ್ತೂ ಎಷ್ಟು ಕಷ್ಟವಿರಬೇಕು ?

ಮುಮುಕ್ಷುಗಳೇ, "ನಾನು ಈಗ ದೇವರನ್ನು ಕಾಣುತ್ತೇನೆ. ಇಲ್ಲದಿದ್ದರೆ ಸಾಯುತ್ತೇನೆ" ಎಂಬ ದೃಢ ಪ್ರತಿಜ್ಞೆಯನ್ನು ಮಾಡಿರಿ.

"ಮುಂದಿನ ಜನ್ಮದಲ್ಲಿ ಸಾಕ್ಷಾತ್ಕಾರ ಪಡೆಯುವೆನು" ಎಂದು ಹೇಳಬೇಡಿ. ದೊಣ್ಣೆಯಿಂದ ಹೊಡೆಯುವೆನು. ನನಗೆ ಬಹಳ ಕೋಪಬರುವುದು. ದೇವರನ್ನೇ ಕಾಣುವ ಹಂಬಲವಿದ್ದರೆ, ಉಗ್ರವಾದ ಸಾಧನೆಯನ್ನು ಶ್ರದ್ಧೆಯಿಂದ ಮಾಡಿ. ದೇವರನ್ನು ಈಗಲೇ ನೋಡಬಲ್ಲಿರಿ.

---

# ೪. ಸಂಚಿತ ಪುರುಷಾರ್ಥ ಮತ್ತು ಪ್ರಾರಬ್ಧ ಕರ್ಮಗಳು

ಬಾಣಗಳನ್ನಿಡುವ ಬತ್ತಳಿಕೆಯು ನಮ್ಮ ಸಂಚಿತ ಕರ್ಮಗಳು. ಬಿಡಲು ಸಿದ್ಧವಾಗಿರುವ ಬಾಣಗಳು ಆಗಾಮಿ ಕರ್ಮಗಳು ಮತ್ತು ಧನುಸ್ಸಿನಿಂದ ಬಿಡಲ್ಪಟ್ಟ ಮತ್ತೆ ಹಿಂತಿರುಗಲಾರದ ಆದರೆ ಗುರಿಯನ್ನು ತಪ್ಪದೆ ಮುಟ್ಟುವ ಬಾಣವು ಪ್ರಾರಬ್ಧ ಕರ್ಮವು.

ಸಂಚಿತವು ಉಗ್ರಾಣವು. ಅಂಗಡಿಯಲ್ಲಿ ಮಾರಾಟಕ್ಕಿರುವ ವಸ್ತುಗಳು ಪ್ರಾರಬ್ಧವು. ಪ್ರತಿದಿನ ಮಾರಾಟವಾಗುತ್ತಿರುವವು ಆಗಾಮಿಯು.

ಕೂಡಿಹಾಕಲ್ಪಟ್ಟವು ಸಂಚಿತವೆನಿಸುವದು. ಫಲಕೊಡುವ ಕರ್ಮಗಳು ಪ್ರಾರಬ್ಧವು. ಈಗ ಮಾಡಲ್ಪಡುತ್ತಿರುವುವು ಕ್ರಿಯಮಾಣ ಅಥವ ಆಗಾಮಿ ಕರ್ಮಗಳು.

ಬತ್ತದ ದೊಡ್ಡ ಕಣಜವನ್ನು ಸಂಚಿತ ಕರ್ಮವೆನ್ನುವರು. ಈ ವರ್ಷವೇ ಬಳಸಲು ಮೀಸಲಾಗಿರುವ ಬತ್ತದಂತೆ ಪ್ರಾರಬ್ಧ ಕರ್ಮವು. ಗದ್ದೆಯಲ್ಲಿ ಬೆಳೆಯುತ್ತಿರುವ ಬತ್ತದಂತೆ ಆಗಾಮಿ ಕರ್ಮವು.

ಬ್ರಹ್ಮಜ್ಞಾನದಿಂದ ಸಂಚಿತ ಕರ್ಮಗಳು ನಾಶವಾಗುವವು. ಹೇಗಾದರೂ ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು. ಜ್ಞಾನಿಯು ಅಕರ್ತಾ. ಹಾಗೂ ಸಾಕ್ಷೀಭಾವದವನಾದ್ದರಿಂದ ಕ್ರಿಯಮಾಣ ಕರ್ಮಗಳು ಕರ್ಮವೇ ಅಲ್ಲವು. ದೇವರು ಮತ್ತು ಪುರುಷಾರ್ಥ ಎಂಬಿವು ಸಮಾನಾರ್ಥ ಪದಗಳು. ಅವು ಒಂದೇ ವಸ್ತುವಿನ ಎರಡು ಹೆಸರುಗಳು. ಪುರುಷಾರ್ಥ (Right exertion) ಮತ್ತು ಪ್ರಾರಬ್ಧಗಳ ಸಂಯೋಗದಿಂದ ಫಲಪ್ರಾಪ್ತಿ ಎಂದು ಹೇಳಿರುವುದನ್ನು ಮಹಾಭಾರತದಲ್ಲಿ ನೀವು ನೋಡಬಹುದು.

ಯೋಗವಾಸಿಷ್ಠದಲ್ಲಿ ಮೊದಲಿಂದ ಕೊನೆಯವರೆಗೂ ಶ್ರೀರಾಮನಿಗೆ ಪುರುಷಾರ್ಥದ ವಿಷಯವಾಗಿಯೇ ವಸಿಷ್ಠರು ಉಪದೇಶಿಸಿದ್ದಾರೆ. ಪುರುಷಾರ್ಥದ ಮೂಲಕವೇ ಮಾರ್ಕಂಡೇಯನು ಮೃತ್ಯುವನ್ನು ಗೆದ್ದನು. ಮನುಷ್ಯನು ನಿಜವಾಗಿಯೂ ತನ್ನ ವಿಧಿಗೆ, ಹಣೆಯ ಬರಹಕ್ಕೆ (destiny) ತಾನೇ ಹೊಣೆಗಾರನು.

ಪುರುಷಾರ್ಥವು ವಸ್ತುಸ್ಥಿತಿಯನ್ನು ಬದಲಾಯಿಸಬಲ್ಲುದು. ಮಾರ್ಕಂಡೇಯನು ತನ್ನ ವಿಧಿಯನ್ನು ಸಾಪನ್ನು ತಪಸ್ಸಿನಿಂದ ಬದಲಾಯಿಸಿ ಬಿಟ್ಟನು. ವಿಧಿವಾದ ದೈವಾಯತ್ತವಾದವು (fatalism) ಅತಿಯಾದ ಆಲಸ್ಯ (inertia) ಅಥವ ಬುದ್ಧಿಮಾಂದ್ಯವನ್ನುಂಟುಮಾಡುವುದು. ದುಡಿಯುವವನಿಗೆ ದೇವರೂ ಸಹಾಯ ಮಾಡುವನು. ಏಳಿ, ಎದ್ದು ದುಡಿಯಿರಿ. ಮನುಷ್ಯನು ತನ್ನ ವಿಧಿಗೆ ತಾನೇ ಹೊಣೆಗಾರನು. ನಿಮ್ಮ ಆಲೋಚನೆಗಳು ಮತ್ತು ಕ್ರಿಯೆಗಳ ಫಲವೇ ಪ್ರಾರಬ್ಧವು. ನಿಮ್ಮ ಚಿಂತನ ರೀತಿಯನ್ನು ಬದಲಾಯಿಸಿಕೊಳ್ಳಿ. "ನಾನು ಅಮರನಾದ ಆತ್ಮ" ಎಂದು ಚಿಂತಿಸಿ. ನೀವು ಅಮೃತಾತ್ಮರೇ ಆಗುವಿರಿ ನೀವು ಭಾವಿಸಿದಂತೆಯೇ ಆಗುವಿರಿ. ಇದು ಬದಲಾಯಿಸಲಾಗದ (immutable) ಧರ್ಮವು.

ನಿಮಗೆ "ನಾನು ದೇಹಿ. ನಾನು ಮನಸ್ಸು. ನಾನು ಪ್ರಾಣ. ನಾನು ಇಂದ್ರಿಯ" ಎಂಬ ಭಾವನೆಗಳಿವೆ. ಈ ಬಗೆಯ ಆಲೋಚನೆಗಳನ್ನು ತಿದ್ದಿಕೊಳ್ಳಿ. "ನಾನು ಬ್ರಹ್ಮವು. ಸರ್ವವ್ಯಾಪಿಯಾದ ವಿಚಾರ ಶಕ್ತಿಯು "ಪ್ರಜ್ಞಾಶಕ್ತಿಯು" ಎಂದು ಚಿಂತಿಸಿ ನಿಮ್ಮ ವಿಧಿಯನ್ನು ಗೆಲ್ಲಬಲ್ಲಿರಿ. ಓರೆಯಾಗಿ ಬರೆಯುವ ಅಭ್ಯಾಸವಿದ್ದರೆ ನೇರವಾಗಿ ಬರೆಯುವುದನ್ನು ರೂಢಿ ಮಾಡುವ ಮೂಲಕ ಬದಲಾಯಿಸಬಹುದು. ಹಾಗೆಯೇ ನಿಮ್ಮ ಆಲೋಚನಾ ರೀತಿಯನ್ನೂ ತಿದ್ದಿಕೊಳ್ಳಬಹುದು. ಅಭ್ಯಾಸಜಯವೇ ವಿಧಿಯ ಜಯ.

ನಿಮ್ಮ ಕರ್ಮದ ಮೂಲಕವೇ ನಿಮ್ಮ ವಿಧಿಯನ್ನು ಸೃಷ್ಟಿಸಿಕೊಳ್ಳುವಿರಿ. ನಿಮ್ಮ ವಿಧಿಗೆ ನೀವೇ ಯಜಮಾನರು. ಸರಿಯಾಗಿ ಚಿಂತಿಸಿ. 'ನಾನು' 'ದೇಹಿ' ಎಂಬ ಮೂರ್ಖತೆಯನ್ನು ಬಿಟ್ಟು "ಸರ್ವವ್ಯಾಪಿಯಾದ ಆತ್ಮವು ನಾನು" ಎಂದು ಚಿಂತಿಸಿರಿ.

ಪ್ರಾರಬ್ಧವು ಯಾರನ್ನಾದರೂ ಯಾವ ಮಟ್ಟಕ್ಕಾದರೂ, ಅಷ್ಟೇಕೆ, ದೇವತಾಮಟ್ಟಕ್ಕೂ ಏರಿಸಬಲ್ಲುದು. ಜೇಮ್ಸ್ ರ್‍ಯಾಂಸೇ ಮ್ಯಾಕ್ಡೊನಾಲ್ಡ್‌ನ ಜೀವನವು ಮುಖ್ಯವಾಗಿ ಸೂಚಿಸತಕ್ಕದ್ದು. ಆತನು ದೊಡ್ಡ ಪುರುಷಾರ್ಥ ಸಾಧಕನು. ಆತನು ಬಡತನದಿಂದ ಅಧಿಕಾರ ಪಡೆದನು. ಜಮೀನಿನ ಕೂಲಿಗಾರಿಕೆಯಿಂದ ಬ್ರಿಟನ್ನಿನ ಪ್ರಧಾನಿ ಪಟ್ಟಕ್ಕೆ ಏರಿದನು. ಆತನು ಆರಂಭದಲ್ಲಿ ವಾರಕ್ಕೆ ೧೦ ಷಿಲ್ಲಿಂಗ್‌ಗೆ ಕವರುಗಳಿಗೆ ವಿಳಾಸ ಬರೆಯುತ್ತಿದ್ದನು.

ಟೇ ಕೊಳ್ಳಲಾರದೆ ಕೇವಲ ನೀರನ್ನು ಕುಡಿಯುತ್ತಿದ್ದನು. ಹಲವು ತಿಂಗಳುಗಳ ವರೆಗೆ ಪ್ರತಿದಿನದ ಆಹಾರ ಕೇವಲ ಮೂರು ಪೆನ್ನಿಗೆ ಮೊಂನದ ತುಂಡಿನ ಇಡ್ಲಿಯಾಗಿತ್ತು. ಆತನು ಶಿಷ್ಯೋಪಾಧ್ಯಾಯನಾಗಿದ್ದನು (pupil-teacher) ರಾಜಕೀಯ ಹಾಗೂ ವಿಜ್ಞಾನದಲ್ಲಿ ಆತನಿಗೆ ಬಹಳ ಅಭಿರುಚಿಯು. ಪತ್ರಿಕೋದ್ಯಮಿಯಾದನು. ಅನುಕ್ರಮವಾಗಿ, ಪುರುಷಾರ್ಥ ಸಾಧನೆಯಿಂದ ಈಗಿನ ಪ್ರಧಾನಿಯ ಅಂತಸ್ತನ್ನು ಪ್ರಾಪ್ತಿ ಮಾಡಿಕೊಂಡನು.

ನಿಮ್ಮ ಆಲೋಚನೆಗಳ ಬಗ್ಗೆ ಎಚ್ಚರಿಕೆ ವಹಿಸಿರಿ. ನಂತರ ಕರ್ಮಗಳು ತನ್ಮಷ್ಟಕ್ಕೆ ತಾವೇ ಸರಿಹೋಗುವುವು. ಕ್ರಿಯೆಗಳು ಚಿಂತನೆಗಳನ್ನು ಭಾವನೆ ಗಳನ್ನು ಅನುಸರಿಸುತ್ತವೆ. ಕರ್ಮಗಳು ಅಭ್ಯಾಸವನ್ನುಂಟುಮಾಡುತ್ತವೆ. ಅಭ್ಯಾಸವು ಗುಣವನ್ನು ರೂಪಿಸುತ್ತವೆ. ನಡತೆಗಳು ವಿಧಿಯನ್ನು ಸೃಷ್ಟಿಸುತ್ತವೆ. ಆದ್ದರಿಂದ ನಿಮ್ಮ ಗತಿಯು ನಿಮ್ಮ ಮತಿಯನ್ನು ಅವಲಂಬಿಸಿದೆ. ಅದು ನಿಮ್ಮ ಕೈಯೊಳಗಿದೆ. ಎಲ್ಲ ದುಷ್ಪ್ರವೃತ್ತಿಗಳನ್ನು (evil thoughts) ದೂಡಿರಿ. ಸದ್ಭಾವನೆಗಳಿಗೆ ಅವಕಾಶಕೊಡಿರಿ. ನಮ್ಮ ಆಲೋಚನೆಗಳಂತೆ ನಾವಿದ್ದೇವೆ ಮತ್ತು ಅವು ಮಾಡಿದಂತೆ ನಾವು ಇರುತ್ತೇವೆ.

ನೀವು ಬಂಧಿಸಲ್ಪಟ್ಟಿಲ್ಲ. ನಿಮಗೆ ಸ್ವತಂತ್ರವಾದ ಸಂಕಲ್ಪವಿದೆ. ನಿಮ್ಮ ಪ್ರಾರಬ್ಧದ ಅನುಭವಗಳನ್ನು ನೀವು ಬದಲಾಯಿಸಲಾರಿರಿ, ಆದರೆ ಸರಿಯಾದ ಆಲೋಚನೆ, ನ್ಯಾಯವಾದ ಕರ್ಮ, ಪರಿಶುದ್ಧವಾದ ಮತ್ತು ನಿರ್ಬಾಧಿತವಾದ ಸಂಕಲ್ಪಶಕ್ತಿಯಿಂದ ನಿಮ್ಮ ಭವಿಷ್ಯವನ್ನು ಸರಿಪಡಿಸಿಕೊಳ್ಳಬಹುದು. ಆತ್ಮ ಸಾಕ್ಷಾತ್ಕಾರವನ್ನು ಸಂಕಲ್ಪಬಲದಿಂದ (dynamic will) ಪಡೆದುಕೊಳ್ಳ ಬಲ್ಲಿರಿ.

ಅಕ್ಕಿಗೆ ಹೊಟ್ಟು ಮತ್ತು ತಾಮ್ರಕ್ಕೆ ಕಿಲುಬು ಸಹಜವಾದರೂ, ಪ್ರಯತ್ನದಿಂದ ಅವು ಅದೃಶ್ಯವಾಗುವವು. ಹೀಗೆಯೇ ಜೀವನಿಗೆ ಅಂಟಿ ಕೊಂಡಿರುವ ಅಜ್ಞಾನವು ಸಂತತವಾದ ಆತ್ಮ ವಿಚಾರದಿಂದ ನಾಶವಾಗುವಂತೆ ಮಾಡಬಹುದು. ಅವಿದ್ಯೆಯನ್ನು ನಾಶಮಾಡಿರಿ. ನಿಮ್ಮ ಆತ್ಮದಲ್ಲೇ ಭದ್ರವಾಗಿ ಅನುಪಮವಾದ ವಿಶ್ರಾಂತಿಯನ್ನು ನೀವು ಹೊಂದುವಂತಾಗಲಿ.

ಪುರುಷಾರ್ಥವಾದವನ್ನು ಮಂಡಿಸುವವನು ಹೇಳುತ್ತಾನೆ : " ಅಲ್ಲಿಂದಿಲ್ಲಿಗೆ ಅಲುಗಾಡಿಸಲು ನಾನೇನು ಒಣಹುಲ್ಲೆ ? ನನ್ನ ಪ್ರಾರಬ್ಧವನ್ನು

ಬದಲಾಯಿಸಬಲ್ಲೆನು. ವೇದಾಂತದ ಅಭ್ಯಾಸದಿಂದ ಅದು ಇಲ್ಲದಂತೆ ಮಾಡುವೆನು. ನನ್ನದೇ ಆದ ಸ್ವತಂತ್ರ ಇಚ್ಛೆಯನ್ನು ಹೊಂದಿರುವೆನು. ಅದನ್ನು ಬಲಯುತವಾಗಿ ಅಡ್ಡಿಪಡಿಸಲಾಗದಂತೆ ಶುದ್ಧಮಾಡುವೆನು. ನನ್ನ ಮುಕ್ತಿ ಮಾರ್ಗವನ್ನು ನಾನೇ ಮಾಡಿಕೊಳ್ಳುವೆನು. ನನಗೆ ನಾನೇ ಸ್ವತಂತ್ರ ನಾಗುವೆನು".

ಮತ್ತೊಬ್ಬ ವೇದಾಂತಿಯು ಹೇಳುತ್ತಾನೆ: "ಪ್ರತಿಯೊಂದೂ ಭವ್ಯವಾದ ಯೋಜನೆಗಳಿಂದ ಪೂರ್ವಭಾವಿಯಾಗಿ ಸಿದ್ಧಪಡಿಸಲಾಗಿದೆ: ಖನಿಜಜೀವನದಿಂದ ಮನುಷ್ಯಜೀವನದವರೆಗಿನ ಎಲ್ಲ ರೀತಿಯ ವಿಕಾಸವೂ ಮತ್ತು ಜೀವನ್ಮುಕ್ತನ ಸ್ಥಿತಿಯೆಲ್ಲವೂ ಆ ದೇವರಿಗೇ ಗೊತ್ತು. ಸತ್ಯವಾಗಿ ಎಲ್ಲವೂ ಪ್ರಾರಬ್ಧವೇ. ಸನ್ಮಾರ್ಗದಲ್ಲಿ ಮಾನವನು ಬದುಕಲು ನಾವು ಪುರುಷಾರ್ಥವನ್ನು ಬೋಧಿಸಬೇಕು. ಇಲ್ಲವಾದರೆ ಮಾನವನು ಸೋಮಾರಿಯೂ, ಮಂಕನೂ ಆಗುವನು."

ಒಬ್ಬನು ತನ್ನ ಪ್ರಯತ್ನದಲ್ಲಿ ಜಯಶೀಲನಾದರೆ ಅವನು ಅದನ್ನು ಪುರುಷಾರ್ಥವೆಂದು ಹೇಳುವನು. "ನಾನು ನಿಜವಾಗಿ ಕಷ್ಟಪಟ್ಟೆ ಮತ್ತು ಜಯಶೀಲನಾದೆ" ಎಂದು ಹೇಳುತ್ತಾನೆ. ವಿಫಲನಾದರೆ, ಅದೇ ಮನುಷ್ಯನು "ಮಿತ್ರನೆ, ಏನುಮಾಡಲು ಸಾಧ್ಯ? ಅದೆಲ್ಲಾ ನನ್ನ ಪ್ರಾರಬ್ಧ. ಭಗವಂತ ನಿಲ್ಲದೆ ಏನನ್ನೂ ಮಾಡಲಾಗುವುದಿಲ್ಲ. ಭಗವದಿಚ್ಛೆಯಿಲ್ಲದೆ ಒಂದು ಕಣವೂ ಚಲಿಸಲಾರದು, ಗಾಳಿಯಲ್ಲಿ ಎಲೆ ಅಲ್ಲಾಡದು" ಎಂದು ಹೇಳುವನು.

ಪೂರ್ವಜನ್ಮದ ಪುರುಷಾರ್ಥವೇ ಈಗ ಪ್ರಾರಬ್ಧ ಎನ್ನಿಸುವುದು. ವಿಧಿ ಎಂದರೇನು ಮಹಾ? ಅದು ಒಬ್ಬನ ಕರ್ಮ. ಅದು ಅವನವನೇ ಮಾಡಿ ಕೊಂಡದ್ದು, ನೀವೂ ಕೆಲವನ್ನು ಮಾಡಿದ್ದೀರಿ. ನೀವೇ ಅದನ್ನು ನಾಶ ಮಾಡಬಹುದು ಅಥವ ಮಾಡದಿದ್ದರೂ ಆಯಿತು.

ನೀವು ಒಂದು ರೀತಿಯಲ್ಲಿ ಆಲೋಚಿಸುವಿರಿ, "ನಾನು ಈ ಹೆಸರಿನವನು. ನಾನು ಬ್ರಾಹ್ಮಣನು. ನಾನು ವೈದ್ಯನು. ನಾನು ದಪ್ಪವಾಗಿರುವೆನು. ನಾನು ಗೃಹಸ್ಥ" ಇದು ಒಂದು ರೀತಿಯ ಪ್ರಾರಬ್ಧ. ಈ ಬಗೆಯ ಚಿಂತನೆ ಯನ್ನು ನೀವು ಬದಲಾಯಿಸಬಹುದು. "ನಾನು ಬ್ರಹ್ಮವು, ನಾನು ಸರ್ವ ಶಕ್ತಿವಂತನು. ನಾನು ಸಾಕ್ಷಿಯು, ನಾನು ದೇವರು. ನಾನು ದೇಹವಾಗಲೀ,

ಮನಸ್ಸಾಗಲೀ ಅಲ್ಲವು. ಸರ್ವವ್ಯಾಪಿಯಾದ ಸತ್ಯವು ಅಥವ ಶುದ್ಧಜ್ಞಾನವು" ಎಂದು ಭಾವಿಸಿ. ಇದು ಪುರುಷಾರ್ಥವು. ಓರೆಯಾಗಿ ಬರೆಯುವ ಅಭ್ಯಾಸವು ಪ್ರಾರಬ್ಧವು. ನೇರವಾಗಿ ಬರೆಯಲು ಬದಲಾಯಿಸಿಕೊಳ್ಳಬಹುದಾದುದನ್ನೆ ಪುರುಷಾರ್ಥವೆನ್ನಬಹುದು.

ಒಂದು ಕ್ರಿಯೆಯನ್ನು ಬಿತ್ತಿ ಮತ್ತು ಒಂದು ಪ್ರವೃತ್ತಿಯನ್ನು ಬಿಡಿಸಿ ಒಂದು ಪ್ರವೃತ್ತಿಯನ್ನು ಬಿತ್ತಿ. ಒಂದು ಅಭ್ಯಾಸವನ್ನು ಪಡೆಯಿರಿ. ಒಂದು ಅಭ್ಯಾಸವನ್ನು ಬಿತ್ತಿದರೆ ಒಂದು ನಡತೆಯನ್ನು ಕಾಣುವಿರಿ. ನಡತೆಯನ್ನು ಬಿತ್ತಿರಿ, ಮತ್ತು ಪ್ರಾರಬ್ಧವನ್ನು ಬಿಡಿಸಿಕೊಳ್ಳಿ. ಆದ್ದರಿಂದ ಪ್ರಾರಬ್ಧವು ನಿಮ್ಮ ಕರ್ಮಗಳಿಂದಾದುದು. ನಿಮ್ಮ ಅಭ್ಯಾಸಗಳನ್ನು ಬದಲಾಯಿಸಿಕೊಂಡರೆ ನಿಮ್ಮ ಪ್ರಾರಬ್ಧಗಳಿಗೆ ನೀವು ಒಡೆಯರಾಗಬಹುದು.

ದೇವರು ಎಂದಿಗೂ ಶಿಕ್ಷಿಸುವುದಿಲ್ಲ ಅಥವ ಬಹುಮಾನಿಸುವುದಿಲ್ಲ. ಜನರನ್ನು ಶಿಕ್ಷಿಸುವ ಸಲುವಾಗಿ ದೇವರು ದಂಡಧಾರಿಯಾಗಿ ಕುಳಿತಿಲ್ಲವು. ಪ್ರಧಾನವೂ ಶ್ರೇಷ್ಠವೂ ಆದ ನಿಯಮಗಳಿಂದ ಜೀವಿಗಳು ಆಳಲ್ಪಡುತ್ತಿವೆ. ಧರ್ಮವು ಕರ್ಮರೂಪ ತಾಳುವುದು ಮತ್ತು ಮನುಷ್ಯನು ತನ್ನ ಕರ್ಮದ ಫಲಗಳನ್ನು ಅನುಭವಿಸುವನು.

ಯಾರೂ ಕ್ಷಣಕಾಲ ಸುಮ್ಮನಿರಲಾರರು ಯಾವನೂ ಅದೃಷ್ಟವಾದಿಯಾಗನು. ಕಾರ್ಯಮಾಡಲು ಒಳಗಿನಿಂದ ಒತ್ತಾಯ ಬರುತ್ತಲೇ ಇರುವುದು. ಈ ಕಾರಣದಿಂದಲೇ ಗೀತೆಯಲ್ಲಿ, "ಕರ್ಮಗಳನ್ನು ಮಾಡದೆ ಯಾವನೂ ಕ್ಷಣಕಾಲ ಎಂದಿಗೂ ಇರುವುದಿಲ್ಲ. ಏಕೆಂದರೆ ಪ್ರಕೃತಿಯಿಂದುಂಟಾದ ಗುಣಗಳಿಂದ ಪ್ರತಿಯೊಬ್ಬನೂ ಅಸ್ವತಂತ್ರನಾಗಿ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ." ಪ್ರಾರಬ್ಧವಾದವು ಯಾರನ್ನೂ ವಿಧಿವಾದಿಯಾಗಿ (fatalist) ಮಾಡಲಾರದು.

ನಿಮ್ಮ ದೇಹಗಳ ಹೊರಗಡೆ ಬಂದು ಬಾಳಿರಿ. ಪಕ್ಕಕ್ಕೆ ಸರಿದು ಮನಸ್ಸು ಮತ್ತು ದೇಹದ ಚಟುವಟಿಕೆಗಳನ್ನು ಗಮನಿಸಿರಿ. ಫುಟ್‌ಬಾಲ್ ಆಟದ ನಿರ್ಣಯಕಾರ (umpire) ನಂತೆ ದ್ರಷ್ಟಾ ಅಥವಾ ಸಾಕ್ಷಿಯಾಗಿರಿ (**witnessee**) ಇದು ಜ್ಞಾನವು. ಎಲ್ಲ ಕಾಲಗಳಲ್ಲೂ ನಿಮಗೆ ಅಧೀನವಾಗಿರುವಂತೆ ನಿಮ್ಮ ಭೌತಶರೀರಕ್ಕೆ ಶಿಕ್ಷಣ ನೀಡಿರಿ. ಅದನ್ನು ಆರೋಗ್ಯವಾಗಿ

ಮತ್ತು ದೃಢಕಾಯವಾಗಿ ಇಟ್ಟುಕೊಳ್ಳಿ. ಮೂರ್ಖ ಮಾಯಾವಾದಿಗಳಾಗ ಬೇಡಿ. ಮಾಯಾವಾದವನ್ನು ಸರಿಯಾಗಿ ಅರ್ಥಮಾಡಿಕೊಳ್ಳಿ. ದೇಹದ ಮೇಲೆ ಮೋಹವನ್ನಿಡಬೇಡಿ. ಅದನ್ನು ಯಾವ ಘಳಿಗೆಯಲ್ಲಾದರೂ ತ್ಯಾಗ ಮಾಡಲು ಸಿದ್ಧರಿರಿ. ದಿವ್ಯವಾದ ಕರೆಯು (divine call) ಬಂದಾಗ ಆದರ್ಶ ಕಾರಣಕ್ಕಾಗಿ ದೇಹತ್ಯಾಗ ಮಾಡಿರಿ. ಸಂಸಾರವೆಂಬ ಸಾಗರವನ್ನು ದಾಟುವುದಕ್ಕೆ ಸಹಾಯಕವಾದ ಒಂದು ದೋಣಿ ಅಥವ ಕುದುರೆ ಎಂದರೆ ಈ ದೇಹವು.

ಭಕ್ತನಿಗೆ ಅದೊಂದು ಪ್ರಾರಬ್ಧ ಮಾತ್ರ. ಕಾರಣ, ಅವನೊಬ್ಬ ಶರಣಾಗತನು. ಅವನು ಭಗವಂತನ ಶಕ್ತಿಯನ್ನು ಕೊಂಡಾಡ (glorify) ಬೇಕಾಗಿದೆ. ವೇದಾಂತಿಗೆ ಅವೆಲ್ಲವೂ ಪುರುಷೋತ್ತಮನೇ. ತನ್ನ ಆತ್ಮ ಬಲದ (strong will) ಶಕ್ತಿಯ ವೈಭವವನ್ನು ತೋರಿಸಬೇಕಾಗಿದೆ. ಅವರವರ ನಿಲುವಿನ ದೃಷ್ಟಿಯಿಂದ (stand point) ಅವರೀರ್ವರೂ ಸರಿಯೆ.

ಪ್ರತಿಯೊಂದು ಆತ್ಮವೂ ದಿವ್ಯಜ್ಞಾನ ಪ್ರಾಪ್ತಿಗಾಗಿ ದಿವ್ಯಕರ್ಮವನ್ನು ಪೂರ್ಣಗೊಳಿಸಬೇಕು. ಪ್ರತಿಯೊಂದು ಆತ್ಮವೂ ಮುಕ್ತಿಯ ಬಾಗಿಲಿನ ಬಳಿ ತಾನೇ ಕುಳಿತು ಯತ್ನಿಸಬೇಕು. ಯಾರೂ ಅವನನ್ನು ಒಳಕ್ಕೆ ತಳ್ಳಲಾರರು. ಗುರು ಒಬ್ಬನೇ ಬಾಗಿಲಿನವರೆಗೂ ಮಾರ್ಗವನ್ನು ತೋರಿಸಬಲ್ಲನು. ಪ್ರತಿ ಯೊಬ್ಬನೂ ತನ್ನ ಪಾಲಿನ ಆತ್ಮಶುದ್ಧಿ, ಚಿತ್ತೈಕಾಗ್ರತೆ ಮತ್ತು ಮನೋ ನಿಗ್ರಹವನ್ನು ಮಾಡುವುದರಲ್ಲಿ ಹೋರಾಟ ನಡೆಸಲೇಬೇಕು.

ಒಬ್ಬ - ಜಿಜ್ಞಾಸುವಿನ ಪ್ರಶ್ನೆ : "ಪುರುಷಾರ್ಥವು ಹೇಗೆ ಫಲ ಗಳನ್ನುಂಟುಮಾಡುವುದು ? ಪ್ರಾರಬ್ಧವು ಹೇಗೆ ಕರ್ಮವನ್ನುಂಟುಮಾಡು ವುದು ?" ಇದನ್ನು ಹೇಳುವುದೇ ಬಹು ಕಠಿಣ.

ಜನರು ಕೇಳುತ್ತಾರೆ : "ಒಳ್ಳೆಯವನು ಕಷ್ಟಗಳನ್ನೇ ಅನುಭವಿಸು ತ್ತಿರುವುದೂ ಹಾಗೂ ದುಷ್ಟನು ಈ ಜಗತ್ತಿನಲ್ಲಿ ಸಂಪತ್ಸಮೃದ್ಧನಾಗಿರುವುದೂ ಹೇಗೆ ?" ಇದಕ್ಕೆ ಉತ್ತರ : ಪೂರ್ವ ಜನ್ಮದಲ್ಲಿನ ಒಳ್ಳೆಯ ಮತ್ತು ಕೆಟ್ಟ ಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವು (expiated) ನಡೆಯುತ್ತಿರುವುದು.

ಪ್ರತಿಯೊಬ್ಬ ವ್ಯಕ್ತಿಗೂ ಹೇಗೆ ಪ್ರಾರಬ್ಧವಿರುವುದೋ ಹಾಗೆಯೇ ಪ್ರಪಂಚಕ್ಕೂ ಒಂದು ಪ್ರಾರಬ್ಧವಿರುವುದು. ಇದು ಸಾಮೂಹಿಕ ಪ್ರಾರಬ್ಧವು.

ಭೂಮಿಯಲ್ಲಿ ಕ್ಷೋಭೆ ಮತ್ತು ಗಲಾಟೆಯನಂತರ ಶಾಂತಿ ಮತ್ತು ಅಭ್ಯುದಯವು ನೆಲೆಸುವುದು. ನಿಮಗೆ ಪ್ರಕೃತಿಯ ಧರ್ಮಗಳು ತಿಳಿಯದಿರುವುದರಿಂದ, ಜಗತ್ತಿನ ಧರ್ಮದ ಕೃತಿಗಳನ್ನು ನೀವು ವಿಂಗಡಿಸಿ ತಿಳಿಯುವ ಸ್ಥಿತಿಯಲ್ಲಿಲ್ಲವು. ಜನಸಂಖ್ಯೆಯು ಜಾಸ್ತಿಯಾದಾಗ, ಜನರ ಅವಶ್ಯಕತೆ ಇರುವಷ್ಟು ಆಹಾರ ದೊರೆಯದಿರುವಾಗ ಕ್ಷಾಮ, ಅಂಟುರೋಗಗಳು, ಹಾನಿಕಾರಕಗಳು ಸಾವುತರುವ ಭೂಕಂಪನಗಳು, ಜ್ವಾಲಾಮುಖಿಗಳ ಸಿಡಿತ, ಮತ್ತು ಯುದ್ಧಗಳ ಮೂಲಕ ಆ ಹೆಚ್ಚಿನವರಿದ ಜನರನ್ನು ದಿವ್ಯಶಕ್ತಿಯು (divine power) ತೆಗೆದುಬಿಡುವುದು.

---

# 4

# ದೇವರು ಮತ್ತು ಅವತಾರ

## ೧. ಭಗವಂತನ ಸಗುಣ ಮತ್ತು ನಿರ್ಗುಣ ರೂಪವು

ಉಪನಿಷತ್ತುಗಳಲ್ಲಿ ಕರೆಯಲ್ಪಡುವ ಬ್ರಹ್ಮನನ್ನು ಸ್ಮೃತಿಗಳಲ್ಲಿ ಹೇಳಲ್ಪಟ್ಟ ಪರಮಾತ್ಮನನ್ನು ಭಾಗವತದಲ್ಲಿ ಭಗವಂತನೆಂದು ಕರೆಯಲ್ಪಟ್ಟಿದೆ.

ಹರಿಯನ್ನೇ ಹೃದಯವಾಗುಳ್ಳ ನನ್ನ ಪ್ರಭುವಾದ ಶಿವನು ಉಪನಿಷತ್ತುಗಳ ನಿರ್ಗುಣ ಬ್ರಹ್ಮದ ತದ್ರೂಪನು (identical).

ನಿರಾಕಾರವಾದ ವಾಯುವು ಹೇಗೆ ಸಾಕಾರವಾದಿ ಸುಂಟರಗಾಳಿಯಾಗುವುದೊ ಹಾಗೆಯೇ ನಿರಾಕಾರ ಬ್ರಹ್ಮವು ಸಾಕಾರವನ್ನು ಧರಿಸುವುದು.

ಭಗವಂತನು ಭಕ್ತನಿಗೆ ಮಂಜುಗಡ್ಡೆಯಂತೆ ಸಾಕಾರನೂ ಹೌದು ಹಾಗು ಜ್ಞಾನಿಗೆ ಆವಿಯಂತೆ ನಿರಾಕಾರನೂ ಹೌದು.

ಹೇಗೆ ನೀರು ಎರಡು ಸ್ಥಿತಿಗಳಲ್ಲೂ ಎಂದರೆ $H_2O$ ರೂಪದಲ್ಲಿ ನಿರಾಕಾರವೋ (formless) ಮತ್ತು ಮಂಜಿನ ರೂಪದಲ್ಲಿ ಸಾಕಾರವೋ, ಹಾಗೆಯೇ ಬ್ರಹ್ಮವು ನಿರಾಕಾರವು ಮತ್ತು ಸಾಕಾರವು. ಅವನು ಅವತಾರದ ಹಾಗೆ ಒಂದೇ ರೂಪವನ್ನು ಧರಿಸಬಲ್ಲನು.

ಸೂಕ್ಷ್ಮಜಗತ್ ಅಥವ ಅತಿ ಸೂಕ್ಷ್ಮರೂಪದ ಪಿಂಡ ಶರೀರವು (microcosm) ಮತ್ತು ವಿಶಾಲವಾದ ವಿಶ್ವವು ಬ್ರಹ್ಮಾಂಡ (macrocosm). ಸಮಷ್ಟಿ ಎಂದರೆ ಒಟ್ಟುಲೆಖ್ಖ. ವ್ಯಷ್ಟಿ ಎಂದರೆ ವ್ಯಕ್ತಿಭಾವ (individual) (ವ್ಯಕ್ತಿ ವೈಲಕ್ಷಣ್ಯ). ಒಂದು ಗಿಡವು ವ್ಯಷ್ಟಿಯು, ಆದರೆ ಮರಗಳ ತೋಪು ಸಮಷ್ಟಿಯು. ಒಂದು ಬೆಂಕಿಯ ಕಡ್ಡಿ ವ್ಯಷ್ಟಿಯಾದರೆ ಬೆಂಕಿಕಡ್ಡಿಗಳ

ಪ್ರೊಟ್ಟಣವು ಒಂದು ಸಮಷ್ಟಿಯು. ಸಮಸ್ತ ಕಾರಣ ಶರೀರವಾದ ಬ್ರಹ್ಮಾಂಡ ದೊಡನೆ ಅನನ್ಯ ಸಂಬಂಧವುಳ್ಳವನು ಈಶ್ವರನು. ವಿಶ್ವದ ಸೂಕ್ಷ್ಮ ಶರೀರ ದೊಡನೆ ಎಡಬಿಡದೆ ಹೊಂದಿಕೊಂಡಿರುವವನು ಹಿರಣ್ಯಗರ್ಭ ಅಥವ ಸೂತ್ರಾತ್ಮನು. ಸೂಕ್ಷ್ಮವಾದ ವ್ಯಕ್ತಿ ವ್ಯಕ್ತಿ ಸಂಬಂಧವುಳ್ಳವನು ತೈಜಸನು. ವಿಶ್ವದೊಡನೆ ತಾದಾತ್ಮ್ಯವುಳ್ಳವನು ವಿರಾಟ್ ಅಥವ ವೈಶ್ವಾನರನು. ಸತ್ವ, ರಜಸ್ ಮತ್ತು ತಮಸ್ಸಿನ ಮೂಲಕ ಬ್ರಹ್ಮ, ವಿಷ್ಣು, ರುದ್ರರೆಂಬ ರೂಪಗಳನ್ನು ಈಶ್ವರನೇ ಧರಿಸಿ ವಿಶ್ವದ ಸೃಷ್ಟಿ ಸ್ಥಿತಿ ಮತ್ತು ಲಯ ಕರ್ತೃವಾಗುವನು. ಬ್ರಹ್ಮನು ವಿರಾಟ್‌ನಲ್ಲಿ, ವಿಷ್ಣುವು ಹಿರಣ್ಯಗರ್ಭದಲ್ಲಿ ಮತ್ತು ರುದ್ರನು ಈಶ್ವರನಲ್ಲಿ ಅಂತರ್ಗತರು.

ಭಗವಾನ್ ಕೃಷ್ಣನು ಜ್ಞಾನಿಗಳಿಗೆ ಪರಬ್ರಹ್ಮನಾಗಿಯೂ, ಯೋಗಿಗಳಿಗೆ ದಿವ್ಯ ತತ್ತ್ವವಾಗಿಯೂ, ಗೋಪಿಗಳಿಗೆ ಸೌಂದರ್ಯದ ನಾಯಕನಾಗಿಯೂ, ವೀರರಿಗೆ ವೀರಪುಂಗವನಾಗಿ, ವಸುದೇವ, ಯಶೋದೆಯರಿಗೆ ಮುದ್ದಿನ ಮಗು ವಾಗಿ, ಕಂಸನಿಗೆ ಯಮಧರ್ಮನಾಗಿ, ರಾಜಮಹಾರಾಜರಿಗೆ ಸಾಮ್ರಾಟನಾಗಿ, ಋಷಿ, ಮುನಿ, ಜ್ಞಾನೀ, ಸಿದ್ಧರಿಗೆ ಅವರವರ ತಿಳಿವಳಿಕೆ ಮತ್ತು ಭಾವನೆಗೆ ತಕ್ಕಂತೆ ಕಾಣಿಸಿಕೊಂಡನು. ತಿಳಿಯುವವರ ದೃಷ್ಟಿಗೆ ತಕ್ಕಂತೆ ಅದು ನಾನಾ ರೂಪವಾಗಿ ತೋರಿಕೊಳ್ಳುವುದು.

ಪಾಶ್ಚಾತ್ಯ ತತ್ತ್ವ ಜ್ಞಾನಿಗಳ "ವಿಶ್ವಾತ್ಮ"ವು (oversoul) ಉಪ ನಿಷತ್ತುಗಳ ಬ್ರಹ್ಮ ಅಥವ ವೇದಾಂತಿಗಳ ಆತ್ಮ. ಜೀವಾತ್ಮನಿಗೆ ಆಶ್ರಯನಾದ ಪರಮಾತ್ಮನೇ "Oversoul". ಈ ವಿಶ್ವಾತ್ಮವು Spinoza ನ "ಆಧಾರವು" (substance) ಮತ್ತು Kant ನ "ತಾನೇತಾನಾದ ವಸ್ತು" (thing in itself) ವೇದಾಂತಸಾರವು. ಪಾಶ್ಚಿಮಾತ್ಯರ ಮನಸ್ಸನ್ನು ಮೆಲ್ಲನೆ ವ್ಯಾಪಿಸಿ ಮನಸ್ಸು ಮತ್ತು ದೇಹಕ್ಕಿಂತ ಭಿನ್ನವಾದ ಶಾಶ್ವತ ಧರ್ಮವಾದ ಅಮೃತಾತ್ಮ ವೊಂದೇ ಇರುವುದೆಂಬುದನ್ನು ಅರಿಯುವಂತೆ ಮಾಡಿರುವುದು.

ಶ್ರೀ ರಾಮಾನುಜರ ಸವಿಶೇಷ ಬ್ರಹ್ಮನು ಉದ್ಯಮಿಸುವನು. ಆತನು ದಯಾಪೂರ್ಣನು. ಸದ್ಗುಣಿಗಳಿಗೆ ಮೆಚ್ಚುಗೆ ಕೊಡುವನು. ಆದರೆ ಶಂಕರರ ನಿರ್ವಿಶೇಷ ಬ್ರಹ್ಮನು ಉದಾಸೀನನು (indifferent). ಉದಾಸೀನನಾಗಿರು ವುದು ಅತ್ಯುತ್ಕೃಷ್ಟವಾದ ಸ್ಥಿತಿಯು.

"ನಾನು ನಿನ್ನವನು, ಓ ಪ್ರಭುವೆ! ನೀನು ನಾನಾಗಿಲ್ಲ. ತರಂಗಗಳು ಸಾಗರಕ್ಕೆ ಸೇರಿದವು, ಆದರೆ ಸಾಗರವು ತರಂಗಗಳಿಗೆ ಸೇರಿದುದಲ್ಲ." ಇದು ರಾಮಾನುಜರ ಉಪದೇಶವು. ಇದು ವಿಶಿಷ್ಟಾದ್ವೈತವು (qualified non-dualism).

ಮಹಮ್ಮದೀಯರ ಭಗವದ್ಭಾವನೆಯು "ಭಗವಂತನನ್ನು ಮಾನವ ರೂಪು ಮತ್ತು ಗುಣಗಳುಳ್ಳಂತೆ (anthropomorphic conception) ಭಾವಿಸುವ" ರೀತಿಯದು.

ಸ್ವರೂಪರಹಿತವಾದ ನಿರಾಕಾರ, ನಿರ್ಗುಣ (impersonal aspect) ವನ್ನು ವೇದಾಂತಿಗಳು ಬ್ರಹ್ಮವೆಂದು ಹರ್ಬರ್ಟ್ ಸ್ಪೆನ್ಸರ್ "ಅಜ್ಞೇಯ" (unknowable) ವೆಂದೂ, ಷೋಪನ್ ಹೌರ್ "ಸಂಕಲ್ಪ ಅಥವ ಇಚ್ಛಾ ಶಕ್ತಿ" (will) ಎಂದೂ, ಕೆಲವರು "ಶುದ್ಧ ಅಂತಸ್ತತ್ತ್ವ" (absolute Noumenon) ವೆಂದು ಮತ್ತು ಸ್ಪಿನೋಜಾ 'ಸದ್ವಸ್ತು' (substance) ವೆಂದೂ ಕರೆದಿರುವರು.

ಆ ಪರಾತ್ಪರ ವಸ್ತುವಿನ ಸಾಕಾರವನ್ನೇ (personal aspect) 'ಈಶ್ವರ' ಅಥವ 'ಅಲ್ಲಾಹ್', 'ಹರಿ', 'ಜೆಹೋವಾ', 'ಸ್ವರ್ಗದಲ್ಲಿನ ತಂದೆ' 'ಬುದ್ಧ' 'ಶಿವ' ಮುಂತಾಗಿ ಕರೆಯಲ್ಪಟ್ಟಿದೆ.

ಆವಿಯು ಹೇಗೆ ರೂಪರಹಿತವೋ ಹಾಗಾಯೇ ದೇವರು ಅವ್ಯಕ್ತ ಸ್ಥಿತಿ ಯಲ್ಲಿ ನಿರಾಕಾರನು. ತನ್ನ ಭಕ್ತರನ್ನು ಸಂತೋಷಪಡಿಸಲು ಪವಿತ್ರವಾದ ಅರ್ಚನೆಗಾಗಿ ಅವನು ಆಕಾರವನ್ನು ಧರಿಸುವನು. ಅವರು ಧ್ಯಾನಿಸುವ ರೂಪಕ್ಕೆ ತಕ್ಕಂತೆ ದರ್ಶನ ನೀಡುವನು. ಪ್ರೇಮನಿಷ್ಠನಾದ ಭಕ್ತನಿಗೆ ಒಂದು ಆಕೃತಿಯು ಅತ್ಯವಶ್ಯಕವು. ಅವನು ಪರಾಭಕ್ತಿಯನ್ನು ಮೈದುಂಬಿಸಿಕೊಂಡಾಗ, ರೂಪವು ಅದೃಶ್ಯವಾಗುವುದಲ್ಲದೆ ಸರ್ವವ್ಯಾಪಿಯಾದ (all pervading) ಶುದ್ಧ ಸಚ್ಚಿದಾನಂದ (pure-consciousness) ದಲ್ಲಿ ಒಂದಾಗುವನು.

ಭಗವಂತನ ಅಥವ ಈಶ್ವರನ ಪ್ರೇಮ ತತ್ತ್ವವೇ ಭಗವಾನ್ ಶ್ರೀ ಕೃಷ್ಣನು. ಈಶ್ವರನ ಸರ್ವಜ್ಞ ತತ್ತ್ವವೇ ಭಗವಾನ್ ಸದಾಶಿವನು. ಈಶ್ವರನ ಶಕ್ತಿ ತತ್ತ್ವವು ದೇವಿಯು. 'ವಿರಾಟ್' ಎಂಬುದು ಈಶ್ವರನ ವ್ಯಕ್ತರೂಪವು. ಹಿರಣ್ಯಗರ್ಭನು, ಈಶ್ವರನ ಅಮೂರ್ತ ಸ್ಥಿತಿಯು. ಭಗವಾನ್ ಶಿವನ ರುದ್ರ

ತತ್ತ್ವವೇ ಹನುಮಾನ್. ಈಶ್ವರನ ತ್ರಿಗುಣ ಅಥವ ತ್ರಿಮೂರ್ತಿ ರೂಪವೇ (trinity) ದತ್ತಾತ್ರೇಯ. ಈಶ್ವರನ ಸೃಷ್ಟಿ ಶಕ್ತಿಯು ಬ್ರಹ್ಮನು, ಸ್ಥಿತಿ ರೂಪವು ವಿಷ್ಣುವು ಮತ್ತು ವಿನಾಶಕ ಶಕ್ತಿಯು ಶಿವನು. ಇವುಗಳಲ್ಲಿ ಯಾವ ಒಂದು ರೂಪವನ್ನಾದರೂ ಧ್ಯಾನಿಸಿ, ಭಗವಂತನಲ್ಲಿ ಐಕ್ಯತೆಯನ್ನು ಹೊಂದಿ ಮತ್ತು ಈ ಸಂಸಾರ ಸಾಗರವನ್ನು ದಾಟಿರಿ.

ವಿಮಲಕುಮಾರಿಯು ತನ್ನ ಗಂಡನ ಮನೆಗೆ ಮೊದಲಬಾರಿ ಬಂದಿದ್ದಳು. ಅವಳ ಸಹೋದರನ ಹೆಸರು ಚಂದ್ರ. ಅವಳ ಗಂಡನ ನೆರೆಮನೆಯ ನಾಯಿಯ ಹೆಸರೂ ಚಂದ್ರ. ಅವಳ ಗಂಡನು ಸಾಕಿದ್ದ ನಾಯಿಯ ಹೆಸರು ಮೋತಿ. ಆದರೆ ವಿಮಲ ಕುಮಾರಿಯ ಸಹೋದರನ ಶತ್ರುವಿನ ಹೆಸರೂ ಮೋತಿ. ಚಂದ್ರ ಮತ್ತು ಮೋತಿ ಎಂಬ ನಾಯಿಗಳು ಕಾದಾಡುತ್ತಿದ್ದವು. ವಿಮಲಕುಮಾರಿಯ ಪತಿಯು ಚಂದ್ರ ಎಂಬ ನಾಯಿಯನ್ನು ತೆಗಳುವುದು, ತನ್ನ ನಾಯಿ ಮೋತಿಯನ್ನು ಹೊಗಳುತ್ತಿದ್ದನು. ತನ್ನ ಸಹೋದರನನ್ನು ಪತಿಯು ಬಯ್ಯುತ್ತಿರುವನೆಂದೂ ಅವನ ಶತೃವನ್ನು ಹೊಗಳುತ್ತಿರುವನೆಂದೂ ವಿಮಲಕುಮಾರಿಯು ಭಾವಿಸಿದಳು. ಗಂಡನ ಮೇಲೆ ಸ್ವಲ್ಪ ಸಿಟ್ಟಾದಳು. ಗಂಡನನ್ನು ಸರಿಯಾಗಿ ತಿಳಿದುಕೊಳ್ಳದಿದ್ದುದರಿಂದ ಹೃದಯದಲ್ಲಿ ವೇದನೆಯಾಯಿತು. ಕೇವಲ ಹೆಸರುಗಳಿಂದ ಭ್ರಮೆಗೊಂಡಿದ್ದಳು. ಹಾಗೆಯೇ ಶೈವರು ಮತ್ತು ವೈಷ್ಣವರು ಶಿವ ಮತ್ತು ವಿಷ್ಣು ಪುರಾಣಗಳಲ್ಲಿರುವ ಟೀಕೆಗಳನ್ನು ಓದಿದಾಗ ತಮ್ಮ ಹೃದಯದಲ್ಲಿ ಕಳವಳಗೊಳ್ಳುವರು. ಶಿವಪುರಾಣದಲ್ಲಿ ಹರಿಯನ್ನು ಟೀಕಿಸಿರುವುದು ಶಿವನ ಭಕ್ತರಿಗೆ ಭಗವಾನ್ ಶಿವನಲ್ಲಿ ಭಕ್ತಿ ಹೆಚ್ಚಲೆಂದು. ಬೇರಾವ ಕಾರಣವೂ ಇಲ್ಲವು. ಹೀಗೆ ಹೆಸರು ಅಥವ ಶಬ್ದಗಳಿಗಾಗಿಯೇ ತಪ್ಪು ತಿಳಿವಳಿಕೆಯಿಂದ ಜಗತ್ತಿನಲ್ಲಿ ದಿನವೂ ಕಲಹಗಳಾಗುತ್ತಿವೆ. ಜ್ಞಾನಿಯು ಈ ಶಬ್ದಗಳು ಅಥವ ಹೆಸರುಗಳನ್ನು ಮೀರಿ ಶಬ್ದಕ್ಕೂ, ನಾಮಕ್ಕೂ ಮೀರಿದ ಬ್ರಹ್ಮದಲ್ಲಿ ವಿಶ್ರಮಿಸುವನು.

ನೀವು ಸಗುಣ ಬ್ರಹ್ಮದೊಡನೆ ತಾದಾತ್ಮ್ಯವನ್ನು ಹೊಂದಿದರೆ, ನೀವು ಜಗತ್ತನ್ನು ನಿಮ್ಮೊಳಗೇ ನೋಡಬಹುದು. ಪರಮಾತ್ಮನಿಗೆ ಅನ್ಯವಾಗಿ ಹೊರಗೆ ಏನೂ ಇಲ್ಲವು. ಅಹಂಕಾರದಿಂದ ಜೀವನು ತನ್ನನ್ನು ಪ್ರತ್ಯೇಕಿಸಿ

ಕೊಂಡುದರಿಂದ ಪ್ರಪಂಚವು ಅವನಿಗೆ ಹೊರಗಡೆ ತೋರುವುದು. ನೀವು ಹೊರಗಡೆ ನೋಡುವಿರಾದ್ದರಿಂದ ನಿಮಗೆ ಎಲ್ಲ ವಸ್ತುಗಳಲ್ಲಿ ನಿಜವಾಗಿ ಆಕರ್ಷಣೆಯಿದೆ. ಯಾರು ಜಗತ್ತನ್ನು ತಮ್ಮೊಳಗೆ ನೋಡುವರೋ ಅವರಿಗೆ ಎಲ್ಲ ವಸ್ತುಗಳಿಂದಾಗುವ ಆಕರ್ಷಣೆಯು ನಾಶವಾಗುವುದು.

ಶುಷ್ಕಪಾಂಡಿತ್ಯದಿಂದ ವೇದಾಂತಿ ಎನ್ನಿಸಿಕೊಂಡವನು ಭಕ್ತಿಯನ್ನು ಕಡೆಗಣಿಸುವನು. ಭಕ್ತಿಯ ವಿಷಯದಲ್ಲಿ ಕೀಳಾಗಿ ಮಾತನಾಡುವನು. ಅವನು ಹೇಳುವುದು, "ಭಕ್ತಿಯು ಮನುಷ್ಯನ ಕಷ್ಟಗಳನ್ನು ಕಳೆಯಲಾರದು. ಭಕ್ತಿಯು ಮುಕ್ತಿಯನ್ನು ಕೊಡಲಾರದು." ಇದು ಒಂದು ಘೋರವಾದ ತಪ್ಪು. ಭಕ್ತಿಯು ಮಾನವನ ಎಲ್ಲ ಕೋಟಲೆಗಳನ್ನು ನಾಶ ಮಾಡಬಲ್ಲದು. ಮತ್ತು ಕ್ರಮ ಮುಕ್ತಿಯನ್ನು ಕೊಡಬಲ್ಲದು. ಪಂಥಾಭಿಮಾನಿಯಾಗಿ ಭಕ್ತನೆನ್ನಿಸಿಕೊಂಡವನು (sectarian bhakta) ಅದ್ವೈತ–ನಿರ್ಗುಣ–ನಿರಾಕಾರ ಬ್ರಹ್ಮವನ್ನು ನಿರಾಕರಿಸುವನು. ಅವನು ಜ್ಞಾನದ ಬಗ್ಗೆ ದೂಷಣೆ ಮಾಡುವನು. ಅವನು ಹೇಳುತ್ತಾನೆ. "ರಸಹೀನವಾದ ಶುಷ್ಕಬ್ರಹ್ಮವು ನನಗೆ ಬೇಕಿಲ್ಲವು. ನನಗೆ ಲೀಲಾಕೃಷ್ಣನು ಮಾತ್ರಬೇಕು. ಗೋಲೋಕಕ್ಕೆ ಮೀರಿ ಏನೂ ಇಲ್ಲವು." ಇದೂ ಸಹ ಪ್ರಬಲವಾದ ದೋಷವು. ಇಬ್ಬರೂ ಸಣ್ಣ ಮನಸ್ಸಿನವರು (petty minded). ಗೋಲೋಕ ಮತ್ತು ಲೀಲಾ ಕೃಷ್ಣನನ್ನು ಮೀರಿರುವದು ನಿರ್ಗುಣ–ಅದ್ವೈತಬ್ರಹ್ಮವು. ಅವನೇ ಗೋಲೋಕ ಮತ್ತು ಲೀಲಾ ಕೃಷ್ಣನಿಗೆ ಆಧಾರವು. ವಿಶ್ವದ ಆತ್ಯಂತಿಕ ಪ್ರಲಯದಲ್ಲಿ ಲೀಲಾ ಕೃಷ್ಣನು ನಿರ್ಗುಣ ಬ್ರಹ್ಮದಲ್ಲಿ ಐಕ್ಯವಾಗುವನು.

ಶ್ರೀ ಶಂಕರರು ಅತ್ಯುನ್ನತವಾದ ಅದ್ವೈತ ನಿರ್ಗುಣ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದಿದ್ದರೂ ಅವರು ಎತ್ತರದ ಧ್ವನಿಯಲ್ಲಿ ಹೇಳಿರುವುದೇನೆಂದರೆ : "ಕೃಷ್ಣ ಭಗವಂತನ ದಿವ್ಯ ಪಾದಪದ್ಮಗಳಲ್ಲಿ ನನ್ನ ಮನಸ್ಸನ್ನು ಸ್ಥಿರಪಡಿಸಲು ನನ್ನ ಆಸಕ್ತಿಯು ಮತ್ತು ಆ ಭಗವಂತನ ಕರುಣಾಮಯ ಚರಣಗಳನ್ನು ನನ್ನ ಕಣ್ಣುಗಳಿಂದ ಹರಿಯುವ ನೀರಿನಿಂದ ತೊಳೆಯುವ ಹಂಬಲವು ನನಗೆ ಇನ್ನೂ ಹೋಗಿಲ್ಲವು."

ಗೂಬೆಯು ಬೆಳಕಿನ ಇರುವಿಕೆಯನ್ನು ಒಪ್ಪಲಿ ಬಿಡಲಿ, ಬೆಳಕಂತೂ ಸದಾ ಬೆಳಗುತ್ತಲೇ ಇರುವುದು. ನೀವು ಒಪ್ಪಿ ಅಥವ ಬಿಡಿ, ಭಗವಂತನಂತೂ

ಸರ್ವದಾ ಇದ್ದೇ ಇರುವನು. ತ್ರಿಕಾಲಗಳಲ್ಲೂ ಸ್ವಯಂ ಬೆಳಗುತ್ತಲೇ ಇರುವನು. ನೀವು ಹುಡುಕುವ ಮೊದಲೂ ಇದ್ದನು. ನಿಮಗೆ, ನಿಮ್ಮ ಪ್ರಾಣಕ್ಕಿಂತಲೂ ಕೈಕಾಲುಗಳಿಗಿಂತಲೂ ಅತ್ಯಂತ ಸಮೀಪವರ್ತಿಯಾಗಿರುವನು.

ಗುತ್ತಿಗೆದಾರನು ಮಹಾರಾಜನನ್ನು ನೋಡಿರದಿದ್ದರೂ, ಇಡೀ ರಾಜ್ಯವನ್ನು ಸುವ್ಯವಸ್ಥಿತವಾಗಿ ಆಳುವ ಮಹಾರಾಜನು ಇರುವನೆಂಬುದು ಅವನಿಗೆ ತಿಳಿದಿದೆ. ಹಾಗೆಯೇ ನೀವು ಭಗವಂತನನ್ನು ಪ್ರತ್ಯಕ್ಷವಾಗಿ ನೋಡಿಲ್ಲವಾದರೂ, ವಿಶ್ವದಲ್ಲಿನ ಸಮರ್ಪಕವಾದ ವ್ಯವಸ್ಥೆಯನ್ನು ನೋಡುವುದರಿಂದ ಅವನ ಇರುವಿಕೆಯನ್ನು ತಿಳಿಯಬಲ್ಲಿರಿ.

ಮನಸ್ಸು, ಮಾತು, ಕಿವಿಗಳು, ಕಣ್ಣುಗಳು ಮತ್ತು ಇತರ ಇಂದ್ರಿಯಗಳು ನಿದ್ರಿಸುತ್ತಿರುವಾಗಲೂ ಪ್ರಾಣವು ಮಾತ್ರ ಎಚ್ಚರಗೊಂಡಿರುವುದು. ಪ್ರಾಣದ ಸ್ಪಂದನವನ್ನುಂಟುಮಾಡುವವರಾರು ? ಈ ಪ್ರಾಣದ ಆಧಾರವು ಯಾರು ? ಅದು ಬ್ರಹ್ಮವೇ ! ಅವನು ಯೋನಿಯು (womb) ಅಥವ ಎಲ್ಲಕ್ಕೂ ಕಾರಣನು.

ಈ ಭೌತಶರೀರವನ್ನು ಸೃಷ್ಟಿಸುತ್ತಿರುವವರು ಯಾರು ?— ಮಣ್ಣಿನಿಂದಾದ ಬೊಂಬೆಯೊಂದು ವಿಚಿತ್ರ ರೀತಿಗಳಲ್ಲಿ ನರ್ತಿಸುವುದು. ಈ ದೇಹದ ಸೂತ್ರಧಾರಿಯು ( wire puller ) ಯಾರು ? ಅವನನ್ನು ಕಂಡುಹಿಡಿಯಿರಿ.

" ನಾನು ಇರುವೆನು " (exist) ಎಂದು ಭಾವಿಸುವಿರಿ. ಇದರಿಂದಲೇ ದೇವರಿರುವನೆಂದು ಸ್ಪಷ್ಟವಾಗಿ ಗೋಚರವಾಗುವುದು. ಇರುವಿಕೆಯು ದೇವರು ಅಥವ ಬ್ರಹ್ಮವು. ನಿಮ್ಮಲ್ಲಿರುವ ಎಲ್ಲ ವಸ್ತುಗಳ ಬಗ್ಗೆ ಒಂದು ವಿಧವಾದ ತಿರಸ್ಕಾರವು ಮತ್ತು ಏನೋ ಒಂದು ಕೊರತೆ ಇದೆ ಎಂಬುದನ್ನು ಚಿಂತಿಸುತ್ತಿರುವಿರಿ. ಪೂರ್ಣತೆಯ ಭಾವವೇ ಇಲ್ಲವು. ನಿಮ್ಮೊಡನೆ ಪರಿಪೂರ್ಣನಾದ ಭಗವಂತನನ್ನು ಕೂಡಿಸಿಕೊಂಡರೆ ನಿಮಗೆ ಪೂರ್ಣತ್ವವು ಬರುವುದು. ನೀವು ಪಾಪ ಕರ್ಮವನ್ನು ಮಾಡಿದಾಗ ನಿಮಗೆ ಭಯವಾಗುವುದು. ನಿಮ್ಮ ಅರಿವು ನಿಮಗೆ ಚುಚ್ಚುವುದು. ಇದೂ ಸಹ ದೇವರಿರುವುದನ್ನು ಮತ್ತು ನಿಮ್ಮೆಲ್ಲ ಚಿಂತನೆ ಮತ್ತು ಕ್ರಿಯೆಗಳಿಗೆ ಅವನು ಸಾಕ್ಷಿ (witness) ಎಂಬುದನ್ನು ಸಿದ್ಧಮಾಡುವುದು.

ಮಥುರಾ ಬಳಿಯಲ್ಲಿ ದಫೇಟಾ ಎಂಬ ಒಂದು ಹಳ್ಳಿಯಿದೆ. ೧೯೩೪ ರ ಅಕ್ಟೋಬರ್ ೧೦ ರಂದು ಸ್ವಾಮಿ ಕೃಷ್ಣಾನಂದ, ಒಂದು ರಾತ್ರಿ ಅಲ್ಲಿ ಕೀರ್ತನೆ ನಡೆಸುತ್ತಿರುವಾಗ, ಕೀರ್ತನೆಯಲ್ಲಿ ಹೆಚ್ಚು ಆಸಕ್ತಿಯುಳ್ಳ ಮಹಿಳೆಯೊಬ್ಬಳು ತನ್ನ ಪುಟ್ಟ ಮಗಳನ್ನು ಸಣ್ಣ ಕೋಣೆಯಲ್ಲಿ ಬಿಟ್ಟು ಬೀಗ ಹಾಕಿ ಭಕ್ತಿಯಿಂದ ಕೀರ್ತನೆಗೆ ಹೋದಳು. ಮಗುವಿನೊಡನೆ ಮನೆಯಲ್ಲಿ ಮತ್ತ್ಯಾರೂ ಇರಲಿಲ್ಲವು. ಮನೆಗೆ ಹಿಂತಿರುಗಿದಾಗ ಮಗುವು ನಗುತ್ತಿರುವುದನ್ನೂ ಆಡುತ್ತಿರುವುದನ್ನೂ ಕಂಡಳು. ತಾಯಿ, ಮಗುವನ್ನು ಕೇಳಿದಳು, 'ಕಂದ! ನೀನು ಯಾರೊಡನೆ ಆಟವಾಡುತ್ತಿರುವೆ?' ಮಗು ಹೇಳಿತು, "ನಾನು ಈ ತಾತನೊಡನೆ ಆಡುತ್ತಿರುವೆನು. ಅವನನ್ನು ನೀನು ನೋಡುತ್ತಿಲ್ಲವೆ?" ಮಗುವು ಇದೇ ಮಾತುಗಳನ್ನು ಮೂರು ಬಾರಿ ನುಡಿಯಿತು. ಮಾತೆಯು ಆ ಮುದುಕನನ್ನು ಕಾಣಲಾಗಲಿಲ್ಲ. ತಾಯಿಯ ಕಣ್ಣಿಗೆ ಮರೆಯಾಗಿದ್ದ ವೃದ್ಧನು ಕೃಷ್ಣ ಭಗವಂತನಲ್ಲದೆ ಮತ್ತಾರೂ ಅಲ್ಲವು. ಎಲ್ಲಿ ಭಕ್ತಿ ಮತ್ತು ಶ್ರದ್ಧೆಯು ಇರುವುದೋ ಅಲ್ಲಿ ಸದಾ ಭಗವಂತನಿರುವನು. ಎಲ್ಲಿ ಕಾಮವಿರುವುದೋ ಅಲ್ಲಿ ರಾಮನಿಲ್ಲವು.

ಮೀರತ್‌ನಲ್ಲಿ ಸನ್ಯಾಸಿಗಳು ತಂಗುವ ಶಂಕರಕುಟಿಯ ಮುಂದೆ, ಅಡ್ವೊಕೇಟ್ ಶಂಕರದಯಾಳರ ಭವ್ಯವಾದ ಭವನವಿದೆ. ಶಂಕರದಯಾಳರಿಗೆ ಒಬ್ಬ ಮಗಳಿದ್ದಾಳೆ. ಅವಳು ಪುಟ್ಟ ಭಕ್ತಳು. ಪ್ರತಿದಿನ ಆ ಮಗುವು ಶ್ರೀಕೃಷ್ಣನನ್ನು ಅರ್ಚಿಸುವದು. ಇವೆಲ್ಲವೂ ಅವಳ ಪೂರ್ವ ಜನ್ಮದ ಒಳ್ಳೆಯ ಸಂಸ್ಕಾರವು. ತೋಟದಲ್ಲಿ ದಿನಂಪ್ರತಿ ಪೂಜೆಗಾಗಿ ಹೂವುಗಳನ್ನು ಬಿಡಿಸುವಳು. ಒಂದು ದಿನ ಬೆಳಗಿನ ಝಾವ ಅವಳು ಹೂವನ್ನು ಬಿಡಿಸುವಾಗ, ಶಿಖೆಯಲ್ಲಿ ನವಿಲುಗರಿಯನ್ನು ಧರಿಸಿದ್ದ ಮುದ್ದು ಬಾಲಕನು ಅವಳ ಬಳಿ ಬಂದು ಹೇಳಿದನು, 'ಮಗು, ಈ ಮಂತ್ರವನ್ನು ಹೇಳು'— ಜಪಕ್ಕಾಗಿ ಒಂದು ಮಂತ್ರವನ್ನುಚ್ಚರಿಸಿ ಮಾಯವಾಗಿಬಿಟ್ಟನು. ಆ ಬಾಲಕನು ಭಗವಾನ್ ಶ್ರೀಕೃಷ್ಣನೇ. ಈ ಘಟನೆಯು ೧೯೩೪ ರ ಅಕ್ಟೋಬರ್ ೫ ನೇ ತಾರೀಖು ನಡೆಯಿತು. ಈ ಕಲಿಯುಗದಲ್ಲಿಯೂ ಕೂಡ, ಒಂದೇ ಒಂದು ನಿಮಿಷ ಭಕ್ತಿ ಮತ್ತು ಶ್ರದ್ಧೆಯನ್ನು ಹೊಂದಿದರೆ, ಭಗವಂತನು ನಿಮಗೆ ದರ್ಶನ ನೀಡಲು ಸದಾ ಸಿದ್ಧನಿರುವನು.

ಶಿಕೋಹಾಬಾದ್ ರೈಲ್ವೆ ನಿಲ್ದಾಣದ ಮಾರ್ಗದಲ್ಲಿರುವ ಫರೂಕಾಬಾದಿನಲ್ಲಿ ೧೯೩೪ ರ ನವೆಂಬರ್ ೧೪ ರಂದು, ೧೯ ವರ್ಷದ ಒಬ್ಬ ಹುಡುಗನನ್ನು ನಾನು ಭೇಟಿಮಾಡಿದೆ. ಅವನು ಶಿವಭಗವಾನನ ಭಕ್ತನು. ಆತನು ಕೆಲವು ತಿಂಗಳು ' ಓಂ ನಮಶ್ಶಿವಾಯ ' ಮಂತ್ರವನ್ನು ಉಚ್ಚರಿಸುತ್ತಿದ್ದನು. ಅವನಿಗೆ ಶಿವನ ದರ್ಶನವಾಗಲಿಲ್ಲ. ಇದರಿಂದ ಬಹಳವಾಗಿ ಖೇದಗೊಂಡನು. ಒಂದಲ್ಲ ಒಂದು ವಿಧದಲ್ಲಿ ಪ್ರಾಣಬಿಡಲು ಆತನು ಒಂದು ದಿನ ಇಚ್ಛಿಸಿದನು. ಅದಕ್ಕಾಗಿ ಯಾವುದೊ ಒಂದು ಹಿಂಸಾಮಾರ್ಗವನ್ನು ಹಿಡಿದನು. ತಕ್ಷಣವೆ ಭಗವಾನ್ ಶಿವನು ಜಾಜ್ವಲ್ಯಮಾನವಾದ ನೀಲಿಯ ಜ್ಯೋತಿಯ ಮಧ್ಯೆ ಕಾಣಿಸಿಕೊಂಡನು. ಆ ಕೂಡಲೇ ಕಣ್ಮರೆಯೂ ಆದನು. ಆತನಿಗೆ ಒಂದು ಧ್ವನಿಯು ಕೇಳಿತು. " ಬಾಲಕಾ ಯಾವ ವರವನ್ನು ನೀನು ಬಯಸುವೆ ?" ಹುಡುಗನು, ' ನನಗೆ ಎರಡನೆಯ ಬಾರಿ ನಿನ್ನ ದರ್ಶನವು ಬೇಕು " ಎಂದನು. ಆದರೆ ಭಗವಾನ್ ಶಿವನು ಎರಡನೆಯ ಬಾರಿ ಕಾಣಿಸಿಕೊಳ್ಳಲಿಲ್ಲ. ಈಗಲೂ ನೀವು ಆತನನ್ನು ಫರೂಕಾಬಾದ್‌ನಲ್ಲಿ ನೋಡಬಹುದು. ಭಕ್ತರಾದ ಡೆಪ್ಯುಟಿ ಕಲೆಕ್ಟರ್ ಶ್ರೀ ಭಗವತ್ಪ್ರಸಾದರು ಆ ಬಾಲಕನನ್ನು ಸರಸ್ವತೀ ಭವನದಲ್ಲಿ ನನ್ನ ಬಳಿಗೆ ಕರೆತಂದಿದ್ದರು.

ಭಾಗವತರಲ್ಲಿ ಎರಡು ವಿಧ ೧. ಅಪ್ರತೀಕಾಲಂಬನರು : ಯಾವ ಸಂಜ್ಞೆಯನ್ನೂ ಅರ್ಚಿಸುವವರಲ್ಲ ಮತ್ತು ಸಂಜ್ಞೆಯ ಸಹಾಯವನ್ನಪೇಕ್ಷಿಸುವವರಲ್ಲ. ೨. ಪ್ರತೀಕಾಲಂಬನರು : ಸಂಜ್ಞೆಯ ಸಹಾಯ ಪಡೆಯುವವರು. ಮೊದಲನೆಯವರು ದೇವತೆಗಳಿಂದ ಕೂಡಿದವರು. ಇತರರು ಭಗವಂತನು ಸರ್ವವ್ಯಾಪಿ ಎಂದು ಕಾಣುವವರು. ಎಲ್ಲ ದೇವತೆಗಳೂ ಋಷಿಗಳ ಪೈಕಿ ನೂರು, ಗಂಧರ್ವರ ಪೈಕಿ ನೂರು ಈ ಅಧಿಕಾರಿವರ್ಗಕ್ಕೆ ಸೇರಿದವರು, ಪ್ರತೀಕಾಲಂಬನರಲ್ಲಿ ಎರಡು ಪಂಗಡ. ೧. ದೇಹಾಲಂಬನ ಮತ್ತು ೨. ಪ್ರತಿಮಾಲಂಬನ. ತಮ್ಮ ದೇಹದೊಳಗೆ ದೇವರನ್ನು ಕಾಣುವವರು ದೇಹಾಲಂಬನರು. ಮಧ್ಯಮ ಅಧಿಕಾರಿಗಳಾದ ಋಷಿಗಳೆಲ್ಲರೂ ಈ ವರ್ಗಕ್ಕೆ ಸೇರಿದವರು. ಅವರು ಆತ್ಮನನ್ನು ದೇಹದಲ್ಲಿ ನೋಡುವರು. ಪ್ರತಿಮಾಲಂಬನರು ದೇವರನ್ನು ಒಂದು ಮೂರ್ತಿಯಲ್ಲಿ ಕಾಣುವರು, ಪ್ರತಿಮೆಯಿಲ್ಲದೆ, ರೂಪವಿಲ್ಲದೆ ಭಗವಂತನನ್ನು ತಿಳಿಯರು. ಸಾಮಾನ್ಯ ಜನರು ಈ ವರ್ಗಕ್ಕೆ ಸೇರಿದವರು.

ಭಗವಾನ್ ಶ್ರೀಕೃಷ್ಣನಿಗೆ, ನೀಲಿಯ ದೇಹವೇಕೆ? ನೀಲಿಯ ವರ್ಣವು ಭಗವಂತನ ಸಹಜವಾದ ಸರ್ವವ್ಯಾಪಕತೆಯನ್ನು ಸೂಚಿಸುವುದು. ನೀಲಿಯ ವರ್ಣವು ವ್ಯಾಪಕವು. ಶ್ರೀಹರಿಯು ಏಕೆ ಚತುರ್ಭುಜಧಾರಿಯು? ಅವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವನ್ನು ಸೂಚಿಸುವವು. ಎಲ್ಲ ದಿಕ್ಕುಗಳಿಂದ ಎಲ್ಲರನ್ನೂ ಆಕರ್ಷಿಸುವನು. ಆತನು ಎಲ್ಲರನ್ನೂ ಅಪ್ಪಿಕೊಳ್ಳುವ ಸ್ವಭಾವದವನು.

ಸದಾಶಿವನ ಲಿಂಗವು, ಬ್ರಹ್ಮವು ನಿರಾಕಾರವು ಎಂಬ ಪ್ರಾಮುಖ್ಯತೆಯನ್ನು ತೋರಿಸುವುದು. ಬ್ರಹ್ಮನು ಅದ್ವಿತೀಯನು ಎಂದು ಒಂದೇ ಬೆರಳಿನಿಂದ ತೋರಿಸುತ್ತಿರುವಂತಿರುವದು.

ಶಕ್ತಿ ಅಥವ ದೇವಿಯ ಅರ್ಚನೆಯು ಬ್ರಹ್ಮನ ಆರಾಧನೆಯೇ. ಶಕ್ತಿ ಮತ್ತು ಶಕ್ತನು ಒಂದೇ. ಬ್ರಹ್ಮ ಮತ್ತು ದೇವಿ ಅಭಿನ್ನರು (Inseperable). ಅವರು ತದ್ರೂಪರು. ಶ್ರೀರಾಮನ ಪೂಜೆಯು ಸೀತಾಮಾತೆಯನ್ನೂ ಸೇರಿಸಿ ಒಳಗೊಂಡಿರುವದು. ರಾಧೆಯ ಪೂಜೆಯು ಶ್ರೀಕೃಷ್ಣನಿಗೂ ಸಲ್ಲುವುದು. ಕೆಲವರು ಶಿವ ಮತ್ತು ಪಾರ್ವತಿಯನ್ನು ಪೂಜಿಸುವರು.

ಭಗವಂತನೊಡನೆ ಒಂದಾಗುವುದರಿಂದ ಕಣ್ಣುಗಳ ತೆರೆಯುವಿಕೆ, ಮತ್ತು ಮುಚ್ಚುವಿಕೆಯು ನಿಲ್ಲುವುದು. ಶ್ವಾಸೋಚ್ಛ್ವಾಸವು ಸ್ತಬ್ಧವಾಗುವುದು. ಮನಸ್ಸಿನ ಸಂಕಲ್ಪ ವಿಕಲ್ಪಗಳು ಇಲ್ಲವಾಗುತ್ತವೆ. ಇದು ರಾಜಯೋಗಿಗಳ ಶ್ರೇಷ್ಠ ಮಟ್ಟದ ಉನ್ಮನೀ ಅವಸ್ಥೆಯು. ಭಗವಾನ್ ಶ್ರೀರಾಮನ ದಿವ್ಯ ನಾಮವು ಪೂರೈಸಲಾಗದ, ಅಧ್ಯಾತ್ಮಜ್ಞಾನ ಭಂಡಾರವು, ಅನಂತವಾದ ಬಾಳು, ಅಮರವಾದ ಆನಂದ, ಮತ್ತು ನಿತ್ಯ ತೃಪ್ತಿಯು. ರಾಮನಾಮವು ಪವಿತ್ರದಲ್ಲಿ ಪವಿತ್ರವಾದ ಪರಮ ಪವಿತ್ರವು. ಈ ಕಲಿಯುಗದಲ್ಲಿ, ಕಬ್ಬಿಣದ ಕಾಲ (Iron age) ಮನುಷ್ಯರ ಕಲ್ಮಷ ನಾಶಕವು. ಭಗವತ್ಪ್ರಜ್ಞೆ ಅಥವ ಭಗವದೈಕ್ಯತೆಯ ಪ್ರಾಪ್ತಿಗೆ ಅವಶ್ಯವಾದ ಅಧ್ಯಾತ್ಮ ಮಾರ್ಗದಲ್ಲಿ ಹೆಜ್ಜೆ ಹೆಜ್ಜೆಗೂ ದೊರೆಯುವ ಅಧ್ಯಾತ್ಮ ಆಹಾರವು.

ಶ್ರೇಷ್ಠ ಭಗವಂತನೂ, ಗುರುವೂ, ಸರ್ವ ಜಗತ್ಕಾರಣನೂ, ಸಂಸಾರವೆಂಬ ಕತ್ತಲೆಯನ್ನು ಕಳೆಯುವವನೂ ಆದ ಶ್ರೀಹರಿಯನ್ನು ಸ್ಮರಿಸಿರಿ. ಆತನು ಈ ಸಮಸ್ತ ವಿಶ್ವವ್ಯಾಪಿಯು. ತಾನು ಅನಾದಿಯಾದರೂ,

ಜಗತ್ತಿಗೆ ಆದಿಯಾಗಿರುವನು. ಆತನು ಪ್ರಥಮ ಕಾರಣನು. ಸರ್ವರ ಹೃದಯದಲ್ಲಿ ವಿರಾಜಿಸುವವನು ಹರಿಯು. ಹರಿಯು ಶುದ್ಧ ಜ್ಞಾನ ಸ್ವರೂಪನು. ಹರಿಯು ಸತ್ಯನು, ನಿತ್ಯನು, ಪರಿಪೂರ್ಣನು, ಅತೀಂದ್ರಿಯನು, ಅವ್ಯಕ್ತನು, ಸಮಸ್ತ ಜಗತ್ತಿನಲ್ಲಿ ಹಾಸುಹೊಕ್ಕಾಗಿರುವ ಅಂತರ್ಜಲೆಯು. ದಿನವೂ ಹರಿಯನ್ನು ಧ್ಯಾನಿಸಿ. ಹರಿಯ ಕಲ್ಯಾಣಗುಣಗಳನ್ನು ಭಾವಿಸಿ. ಹರಿಯ ದಿವ್ಯನಾಮಗಳನ್ನು ಸ್ತುತಿಸಿರಿ. ನೀವು ಅಮೃತತ್ವವನ್ನು ಮತ್ತು ನಿತ್ಯಾನಂದವನ್ನು ಪಡೆಯುವಿರಿ.

ದೇವರು ಸೃಷ್ಟಿಕರ್ತನು ಹಾಗೂ ವಿಶ್ವದ ದಿಗ್ದರ್ಶಕನು. ಎಲ್ಲ ಜೀವಿಗಳ ಅಂತರ್ಯಾಮಿಯು. ಈ ವಿಶ್ವದ ಆಧಾರನು. ಜಗತ್ತಿನ ಸ್ಥಿತಿಕರ್ತನು ಮತ್ತು ನಾಶಕನೂ ಅವನೇ. ಆತನು ಈಶ್ವರನು ಮತ್ತು ಅಂತರ್ಯಾಮಿಯು. ಆತನು ರಕ್ಷಕನು, ಉದ್ಧಾರಕನು ಮತ್ತು ಮುಕ್ತಿದಾತನು. ದಿವ್ಯವಾದ ಶಾಂತಿ ಮತ್ತು ಅಮರತೆಯನ್ನು ಕರುಣಿಸುವವನು. ಓಜಸ್ (spiritual power), ತೇಜಸ್ (divine splendour), ಬಲ, ಐಶ್ವರ್ಯ, ಯಶಸ್, (spiritual wealth) ಆರೋಗ್ಯ, ದೀರ್ಘ ಆಯುಸ್, ಶ್ರೇಯಸ್, ಪುಷ್ಟಿ (prosperity) ತುಷ್ಟಿ (contentment) ಶಾಂತಿ, ಶ್ರೇಯಸ್ (emancipation), ವಿದ್ಯಾ (divine wisdom), ಮೋಕ್ಷವನ್ನು (liberation) ದಯಪಾಲಿಸುವವನು ದೇವರೇ!

---

## ೨. ಭಗವಂತನ ಗುಣಗಳು

ದೇವರು ಕಾರ್ಯ, ಕಾರಣ, ಕಾಲ, ದೇಶಕ್ಕೆ ಮೀರಿದವನು, ಮತ್ತು ಮಾತು ಮನಸ್ಸು ಮುಟ್ಟಲಾಗದವನು. ಆದರೂ ಸಮೀಪದಲ್ಲೂ ಸಮೀಪನು, ಹೃದಯಾಂತರಾಳದಲ್ಲಿ ನೆಲಸಿರುವನು, ಬದುಕಿರುವ ಹಾಗೂ ಚಲಿಸುವ ಸರ್ವಜೀವಿಗಳ ಪ್ರಾಣವು (ಆತ್ಮವು). ಆತ್ಮಸಾಕ್ಷಾತ್ಕಾರಕ್ಕಾಗಿ ಪ್ರತಿಯೊಬ್ಬ ಸಾಧಕನೂ ತನ್ನ ಹೃದಯಾಕಾಶವನ್ನು ಒಳಹೊಕ್ಕು ಹುಡುಕಬೇಕು.

ದೇವರು ಅಂತರ್ಜ್ಯೋತಿಯು. ದೇವರು ಅಡಗಿಸಲ್ಪಟ್ಟ ಸೌಂದರ್ಯವು. ಬ್ರಹ್ಮನು ದೇವತೆಗಳ ದೇವನು. ಬ್ರಹ್ಮನು ಜ್ಞಾನವು. ರಹಸ್ಯನಾದ ದೇವರಲ್ಲಿ ರಹಸ್ಯವಾಗಿ ಬಾಳಿರಿ.

ದೇವರನ್ನು ವಿವರಿಸುವುದೆಂದರೆ ದೇವರನ್ನು ಒಪ್ಪದಿರುವಂತೆ. ಅಪೂರ್ಣವಾದ ವಸ್ತುಗಳ ವಿವರಣೆಯನ್ನು ಮಾತ್ರ ಕೊಡಬಹುದು.

ಪ್ರತಿಯೊಂದರ ಮೂಲಕಾರಣನೂ, ಆಧಾರನೂ, ಅಮೂರ್ತನೂ, ಪೂರ್ಣನೂ ಆದ ಭಗವಂತನನ್ನು ವಿವರಿಸುವುದು ಹೇಗೆ? ದೇವರನ್ನು ವಿವರಿಸುತ್ತೇನೆಂದರೆ, ಅಮೂರ್ತನನ್ನು ಮೂರ್ತಮಾಡಿದಂತೆ, ಮನಸ್ಸಿನ ಕಲ್ಪನೆಗಳಿಗೆ ಒಳಪಡಿಸಿದಂತೆ. ದೇವರು ಸ್ಥೂಲಮನಸ್ಸಿಗೆ ಮೀರಿದ ವಸ್ತುವು. ಆದರೆ ಪರಿಶುದ್ಧವಾದ, ಸೂಕ್ಷ್ಮವಾದ ಚಿತ್ತೈಕಾಗ್ರತೆಯುಳ್ಳ ಮನಸ್ಸಿನ ಧ್ಯಾನದ ಮೂಲಕ ಭಗವತ್ಸಾಕ್ಷಾತ್ಕಾರವನ್ನು ಹೊಂದಬಹುದು.

ಸತ್ಯವೇ ದೇವರು. ದೇವರು ಪ್ರೀತಿಯು. ದೇವರು ಜ್ಯೋತಿಗಳ ಜ್ಯೋತಿಯು. ದೇವರು ಶಾಂತಿಯು. ದೇವರು ಜ್ಞಾನವು. ದೇವರು ಆನಂದಮಯನು. ದೇವರು ಸತ್-ಚಿತ್-ಆನಂದನು. ದೇವರು ಶಾಶ್ವತನು(ನಿತ್ಯನು). ದೇವರು ಪೂರ್ಣನು. ದೇವರು ಅವಿನಾಶಿಯು, ಶ್ರೇಷ್ಠ ವಸ್ತುವು. ಸರ್ವವಸ್ತುಗಳಲ್ಲಿ ವ್ಯಾಪ್ಯವಾದ ಸಾರವು. ದೇವರೊಬ್ಬನೇ ಸರ್ವವಸ್ತುವು. ದೇವರು ಪೂರ್ಣ ಸುಂದರನು.

ಒಂದು ಮಡಕೆ ಅಥವ ಮೇಜಿಗೆ ಕರ್ತೃವು ಒಬ್ಬನಿರಬೇಕಾದರೆ, ಈ ಅತ್ಯಾಶ್ಚರ್ಯಕರವಾದ ಜಗತ್ತಿಗೆ ಒಬ್ಬ ಸೃಷ್ಟಿಕರ್ತನು ಇದ್ದೇ ಇರಬೇಕು. ಆ ಸೃಷ್ಟಿಕರ್ತನೇ ದೇವರು. ಈ ವಿಶ್ವವನ್ನು ಸ್ವಇಚ್ಛೆಯಿಂದ ಸೃಷ್ಟಿಮಾಡಿ ನಂತರ ತಾನೇ ಅದರೊಳಗೆ ಹೊಕ್ಕಿರುವನು. ಪ್ರತಿಯೊಬ್ಬರ ಮನಸ್ಸು ಮತ್ತು ಹೃದಯದಲ್ಲಿ ಆತನೇ ವ್ಯಕ್ತವಾಗುವನು. ಆತನು ದೇವತೆಗಳಲ್ಲಿ ಪ್ರಥಮನು, ಜಗದ್ರಕ್ಷಕನು.

ಅಪರಾಧವೆಸಗಿದ ದುಷ್ಟನು ಖೈದಿಯಾಗಿ ಸೆರೆಮನೆಯನ್ನು ಸೇರುತ್ತಾನೆ. ಸೆರೆಮನೆಯಲ್ಲಿ ಸ್ವತಂತ್ರವಿಲ್ಲವು. ಅವನು ಗುಲಾಮನು. ಕೆಲವೊಮ್ಮೆ ತನ್ನ ರಾಜ್ಯದ ಸೆರೆಮನೆಗಳನ್ನು, ಖೈದಿಗಳ ಸ್ಥಿತಿಯನ್ನು ಪರಿಶೀಲಿಸಲು ಪ್ರವೇಶಿಸುವನು. ಅವನು ಬಂಧನದೊಳಕ್ಕೆ ಪ್ರವೇಶಿಸುವುದು, ಆ ಖೈದಿಗಳ ದುಃಖ

ಗಳನ್ನು ಕಳೆಯುವುದಕ್ಕಾಗಿ, ಅವರಿಗೆ ಹಿತವನ್ನುಂಟುಮಾಡುವುದಕ್ಕಾಗಿ. ದೊರೆಯು ಎಲ್ಲಿದ್ದಾನೆಂದು ಪ್ರಜೆಗಳು ಕೇಳಿದರೆ, ರಾಜನ ಆಪ್ತ ಕಾರ್ಯ ದರ್ಶಿಯ ಉತ್ತರ " ಈಗ ದೊರೆಯು ಸೆರೆಮನೆಯಲ್ಲಿರುವನು." ಅಪರಾಧಿಯು ಸೆರೆಮನೆಯೊಳಕ್ಕೆ ಹೋದನು ಮತ್ತು ದೊರೆಯೂ ಅದೇ ಸೆರೆಮನೆಯನ್ನು ಪ್ರವೇಶಿಸಿದನು. ಆದರೆ ಇಬ್ಬರಿಗೂ ಜಗತ್ತಿನಷ್ಟು ಅಂತರವಿದೆ. ಅದರಂತೆಯೇ ಅಲ್ಪನಾದ ಜೀವನು ತನ್ನ ಆಸೆ ಮತ್ತು ಕರ್ಮಕ್ಕೆ ತಕ್ಕಂತೆ ಈ ಪ್ರಪಂಚದಲ್ಲಿ ಜನ್ಮವೆತ್ತುವನು. ಅವನು ಅವಿದ್ಯೆಯಿಂದ ಆಳಲ್ಪಡುತ್ತಿರುವನು. ಅವನಿಗೆ ಸ್ವಾತಂತ್ರವಿಲ್ಲ. ಅವನು ದುಷ್ಟದಾಹಗಳಿಗೆ (passion) ಗುಲಾಮನಾಗಿದ್ದಾನೆ, ಅವಿದ್ಯೆಗೆ ಬಲಿಯಾಗಿದ್ದಾನೆ. ರಾಗ, ದ್ವೇಷಗಳೆಂಬ (likes and dislikes) ದ್ವಂದ್ವ ಪ್ರವಾಹಗಳಿಗೆ ಸಿಕ್ಕಿ ಅತ್ತಿಂದಿತ್ತ ಉರುಳಾಡುತ್ತಿರುವನು. ಆದರೆ ಭಗವಂತನು ಈ ಲೋಕದಲ್ಲಿ ಧರ್ಮವನ್ನು ಸ್ಥಾಪಿಸುವುದಕ್ಕೂ, ಸತ್ಯವಂತರನ್ನು ರಕ್ಷಿಸುವುದಕ್ಕೂ, ದುಷ್ಟರನ್ನು ಶಿಕ್ಷಿಸುವುದಕ್ಕೂ ಸ್ವಸಂಕಲ್ಪದಂತೆ ಅವತರಿಸುವನು. ದೇವರು ಸಂಪೂರ್ಣ ಸ್ವತಂತ್ರನು. ಮಾಯೆಯು ಚೆನ್ನಾಗಿ ಅವನ ಹಿಡಿತದಲ್ಲಿರುವುದು. ಅವನು ಸರ್ವಜ್ಞನು ಮತ್ತು ಸರ್ವಶಕ್ತನು. ಅವನು ಸತ್ಯಕಾಮನು ಮತ್ತು ಸತ್ಸಂಕಲ್ಪನು.

ಈ ದೇಹವು ಒಂದು ಕ್ಲಿಷ್ಟವಾದ ಯಂತ್ರವು (complicated machine). ದೇಹದ ವಿವಿಧ ಅಂಗಗಳ ಕ್ರಿಯೆಯನ್ನು ಸಂಪೂರ್ಣವಾಗಿ ತಜ್ಞರೆನಿಸಿದ ಸುಪ್ರಸಿದ್ಧರಾದ ವೈದ್ಯರು ಸಹ ಅರಿಯದವರಾಗಿದ್ದಾರೆ. ಸುಮಾರು ಮುವ್ವತ್ತು ವರ್ಷಗಳ ಹಿಂದೆ ಅನೇಕ ನಿರ್ನಾಳ ಗ್ರಂಥಿಗಳ (endocrine glands) ಕ್ರಿಯೆಯ ತಿಳುವಳಿಕೆಯೇ ಆ ವೈದ್ಯರಿಗೆ ಇರಲಿಲ್ಲ. ಪ್ರಕೃತಿಯ ಉಳಿತಾಯದ ಭಾಗದಲ್ಲಿ ಈ ನಿರ್ನಾಳ ಗ್ರಂಥಿಗಳು ಪ್ರಧಾನ ಪಾತ್ರವನ್ನು ಹೊಂದಿವೆ ಎಂದು ಈಗ ಅವರು ಹೇಳುತ್ತಿರುವರು. ಆದರೂ ಈ ಸಂಕೀರ್ಣ ಯಂತ್ರದ (complex machine) ಕಾರ್ಯ ಮತ್ತು ಸ್ವಭಾವದ ಬಗ್ಗೆ ವೈದ್ಯರು ಸಂಶೋಧನೆಗಳನ್ನೂ ಪ್ರಯೋಗಗಳನ್ನೂ ಮಾಡುತ್ತಿರುವರು. ಈ ಯಂತ್ರದ ಚಾಲಕನಾದ ಪರಮಾತ್ಮನ ತಿಳಿವಳಿಕೆಯು ನಿಮಗೆ ಇದ್ದರೆ ಮಾತ್ರ ನೀವು ಈ ಮಾನವ ಯಂತ್ರದ ಪೂರ್ಣಜ್ಞಾನವನ್ನು ಗಳಿಸಬಹುದು. ಆ ಚಾಲಕನು ಅಂತರ್ಯಾಮಿಯಾದ ದೇವರು (Inner Ruler).

ಸತ್ಯವೇ ದೇವರು. ಅದು ಸತ್ಯವಸ್ತುವು. ಅದು ಸತ್ಯವು, ನಿತ್ಯವು, ಅವಿನಾಶಿಯು (Imperishable), ನಿರ್ವಿಕಾರವು, ಏಕ ರಸವು (one homogeneous essence). ಅದು ಸ್ವಯಂಭುವು (self existent) ಸ್ವಯಂ ಜ್ಯೋತಿಯು (self luminous), ಸರ್ವಕಾಲದಲ್ಲೂ ಸ್ವತಂತ್ರವು. ಅದು ಅನಾದಿಯು ಮತ್ತು ಅನಂತವು. ಅದು ಹಿಂದೆ, ಇಂದು, ಮುಂದೆ ಇರುವುದು. ಅದು ಚಿತ್, ಸಂವಿತ್, ವಿಜ್ಞಾನ ಮತ್ತು ಪ್ರಜ್ಞಾನವು (self-knowledge). ಅದು ಕಾರಣರಹಿತವು. ಅದು ಕಾರ್ಯ, ಕಾರಣ ಮತ್ತು ಕಾಲವನ್ನು ಮೀರಿದುದು. ಅದು ಏಕವು. ಅದು ಅಖಂಡವು, ಅಪರಿಚ್ಛಿನ್ನವು.

ದೇವರು ಮತ್ತು ಶಾಂತಿಯು ಸಮಾನಾರ್ಥ ಪದಗಳು. ಕಾಮ, ಕ್ರೋಧ, ಲೋಭ, ಸ್ವಾರ್ಥಗಳಿಂದ ಬಿಡಲ್ಪಟ್ಟವರಿಗೆ ದೇವರು ಬಹು ಸಮೀಪನು. ದೇವರಿಗೆ ಬಯಕೆ ಇಲ್ಲವು. ಅವನು ಪರಿಪೂರ್ಣನು (self contained) ಕೇವಲ ಲೀಲೆಗಾಗಿ (sporting) ಅವನು ಜಗತ್ತನ್ನು ಸೃಷ್ಟಿಸುವನು, ಸೃಷ್ಟಿಯು ಅವನ ಸ್ವಭಾವವು. ಜೀವಿ ಹಾಗು ನಿರ್ಜೀವಿಗಳ, ಇಂದ್ರಿಯಾತ್ಮವೂ, ಅತೀಂದ್ರಿಯವೂ ಪ್ರಜ್ಞೆವುಳ್ಳ ಮತ್ತು ಪ್ರಜ್ಞೆ ಇಲ್ಲದ (sentient and insentient) ಎಲ್ಲವುಗಳ ಸಮಷ್ಟಿಯೇ ದೇವರು. ಎಲ್ಲ ವಿಧವಾದ ದುಷ್ಟ ಹಾಗು ಮಿತಿಗಳಿಂದ ಮುಕ್ತವಾದುದು. ಅವನು ಸರ್ವಶಕ್ತನು, ಸರ್ವಜ್ಞನು ಮತ್ತು ಸರ್ವವ್ಯಾಪಿಯು. ಅವನು ಆದಿ, ಮಧ್ಯ ಮತ್ತು ಅಂತವಿಲ್ಲದವನು. ಸರ್ವ ಪ್ರಾಣಿಗಳಲ್ಲಿ ನೆಲಸಿರುವವನು. ಒಳಗಿನಿಂದಲೇ ಎಲ್ಲವನ್ನೂ ಆಳುವವನು. ದೇವರು, ಅಮೃತತ್ವ, ಮುಕ್ತಿ, ಪೂರ್ಣ, ಶಾಂತಿ, ಆನಂದ, ಪ್ರೇಮ ಮುಂತಾದುವು ಸಮಾನಾರ್ಥಕ ಪದಗಳು.

> " ಸ ಪರ್ಯಗಾಚ್ಛುಕ್ರಮಕಾಯಮವ್ರಣಮ್
> ಅಸ್ನಾವಿರಗ್ಂ ಶುದ್ಧಮಪಾಪವಿದ್ಧಮ್ ।
> ಕವಿರ್ಮನೀಷೀ ಪರಿಭೂಃ ಸ್ವಯಂಭೂಃ
> ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀ
> ಭ್ಯಃ ಸಮಾಭ್ಯಃ " ॥

—ಈಶೋಪನಿಷತ್ತು. ಮಂತ್ರ, ೮

ದೇವರು ಎಲ್ಲವನ್ನೂ ವ್ಯಾಪಿಸಿರುವನು, ಪರಮ ಪ್ರಕಾಶನು (resplendent), ಅಶರೀರಿಯು, ನಿಷ್ಕಲಂಕನು (seathless), ಮಾಂಸ (ಸ್ನಾಯು) ರಹಿತನು, ಶುದ್ಧಮಪಾಪವಿದ್ಧನು (pure unsmitten by sin), ದೂರ ದರ್ಶಿಯು, ಸರ್ವಜ್ಞನು, ಪರಾವರನು (transcendent), ಸ್ವಯಂಭುವು (ಸ್ವಯಂ ಜಾತನು) (self sprung) ಮತ್ತು ನಾನಾ ಸೃಷ್ಟಿಕ್ರಮಗಳನ್ನರಿತು ತಮ್ಮ ಕರ್ತವ್ಯಗಳನ್ನು ಪಾಲಿಸುವ ಪ್ರಜಾಪತಿಗಳಿಗೆ ಕಾರ್ಯಗಳನ್ನು ಹಂಚಿರುವವನು.

ಭಗವಂತನು ಸರ್ವಶಕ್ತಿಮಾನ್. ಅವನು ನಪುಂಸಕನು (impotent) ಎಂದರೆ ತನ್ನ ಇರುವಿಕೆಯನ್ನು ತಾನೇ ವಿರೋಧಿಸಲಾರನು. ಮಹಾ ಸಮ್ರಾಟನು ಸಾಮಾನ್ಯ ಜನರಿಂದ ಅಥವ ರೈತರಿಂದ ನೋಡಲ್ಪಡುವುದಿಲ್ಲ. ಆದರೆ ಅವರು ಪ್ರತಿದಿನ ದಿವಾನ, ತಹಸೀಲ್ದಾರ ಮತ್ತು ಇತರ ಅಧಿಕಾರಿಗಳನ್ನು ನೋಡುವರು. ಇವರುಗಳನ್ನು ನೋಡುವುದರಿಂದ ರಾಜ್ಯದ ಸರ್ವಶ್ರೇಷ್ಠಮಾದ ದೊರೆಯು ಇರುವನೆಂದು ತಿಳಿಯುವರು. ಹಾಗೆಯೇ ಸರ್ವಕ್ಕೂ ಆಧಾರನಾದ ಪುರುಷೋತ್ತಮನು (supreme self) ಸರ್ವಂತರ್ಯಾಮಿಯಾಗಿದ್ದರೂ ನೋಡಲ್ಪಡುವುದಿಲ್ಲ. ಆದರೂ ಸ್ವಯಂಜ್ಯೋತಿಗಳಂತೆ ಜಗತ್ತನ್ನು ಬೆಳಗು ತ್ತಿರುವ, ಸೂರ್ಯ, ಚಂದ್ರ, ನಕ್ಷತ್ರ ಮತ್ತು ಅದ್ಭುತವಾದ ಅನೇಕ ವಸ್ತು ಗಳನ್ನು ನೋಡುವುದರಿಂದ ಆ ಭಗವಂತನಿರುವನೆಂಬುದನ್ನು ಚೆನ್ನಾಗಿ ತಿಳಿಯ ಬಹುದು. ಅವು ದೇವಾಧಿದೇವನ ದಿವ್ಯ ಮಹಿಮೆಯನ್ನೂ ಮತ್ತು ಅನಿರ್ವಚನೀಯವಾದ ತೇಜಸ್ಸನ್ನೂ (ineffable splendour) ಗೊತ್ತು ಮಾಡಿಕೊಡುವವು.

ವರ್ಣ ಮತ್ತು ಸೌಷ್ಠವವು ಶರೀರಕ್ಕೆ ಸೌಂದರ್ಯವನ್ನು ನೀಡುವವು. ದೇಹ ಸೌಂದರ್ಯವು ನಾಶವಾಗುವ ಸ್ವಭಾವವುಳ್ಳದ್ದು. ಆದ್ದರಿಂದ ಅದು ಭ್ರಮೆಯು (ಮಾಯೆ). ಆದರೆ ದಿವ್ಯ ಸೌಂದರ್ಯವು ಅವಿನಾಶಿಯು ಮತ್ತು ನಿತ್ಯ ಸತ್ಯವು, (ಯಥಾರ್ಥವು). ದೇವರು ಸೌಂದರ್ಯಗಳ ಸೌಂದರ್ಯವು. ಅವನು ಸೌಂದರ್ಯಕ್ಕೆ ಮೂಲಾಧಾರನು, (fountain head) ಉಗಮ ಸ್ಥಾನವು. ಅವನು ಸೌಂದರ್ಯದ ಪ್ರತೀಕನು (embodiment) ಅವನು ಸೌಂದರ್ಯವೇ ಆಗಿದ್ದಾನೆ.

ತಲೆಯಮೇಲಿನ ನಿಮ್ಮ ಕೂದಲಿನ ಮೇಲೆ ನಿಮಗೆ ಬಹಳ ಪ್ರೀತಿ. ಅದನ್ನು ಪ್ರತಿದಿನ ಚೆನ್ನಾಗಿ ಬಾಚುವಿರಿ, ಎಣ್ಣೆಯನ್ನು ಹಚ್ಚಿ ಪೋಷಿಸುವಿರಿ, ಆದರೆ ಅದೇ ಕೂದಲು ನಿಮ್ಮ ಹಾಲಿನ ಬಟ್ಟಲಿನಲ್ಲಿ ಬಿದ್ದರೆ, ತಕ್ಷಣ ಹೊರಕ್ಕೆ ಎಸೆಯುವಿರಿ. ಅದನ್ನು ಮುಟ್ಟಲೂ ಸಹ ಇಚ್ಛಿಸುವುದಿಲ್ಲ. ನಿಮ್ಮ ಕೂದಲನ್ನು ಪ್ರೀತಿಸುವುದರಲ್ಲಿ ನಿಮ್ಮನ್ನೇ (ಆತ್ಮನನ್ನೇ) ಪ್ರೀತಿಸುವಿರಿ. ದೇಹದ ಹಿನ್ನೆಲೆಯಲ್ಲಿ ಚೈತನ್ಯ ಮತ್ತು ಜೀವದ ಸಂಗದಿಂದ ಸಹವಾಸದಿಂದ, ರೋಮವು ಸುಂದರವೂ, ಆಕರ್ಷಣೀಯವೂ ಆಗಿ ತೋರಿಕೊಳ್ಳುವುದು. ಒಂದು ಅಂಗಡಿಯಲ್ಲಿರುವ ರೇಷ್ಮೆ ಸೀರೆಯನ್ನು ನೀವು ನೋಡಿದರೆ ಅದು ಅಷ್ಟು ಸುಂದರವಾಗಿ ಕಾಣಿಸದು. ಆದರೆ, ಅದೇ ಸೀರೆಯು ಮಹಿಳೆಯ ಮೈಮೇಲಿರುವಾಗ ಮನೋಹರವಾಗಿ ಕಾಣುವುದು. ಕಾರಣವೇನೆಂದರೆ, ಆ ಸೀರೆಯು ಚೈತನ್ಯದ ಸಂಪರ್ಕವನ್ನು ಪಡೆಯಿತು. ಇದರಿಂದ ದೇವರಿರುವನೆಂದೂ, ಮತ್ತು ಆ ದೇವರೇ ಸೌಂದರ್ಯದ ಪ್ರತೀಕವೆಂದೂ ಸುಳುವು (clue) ತಿಳಿಯುವುದು.

---

# ೩. ಭಗವಂತನ ಕೃಪೆಯು

ಭಕ್ತಿಯನ್ನು ಕರ್ಮ ಅಥವ ಪ್ರಯತ್ನದಿಂದ ಪಡೆಯಲು ಸಾಧ್ಯವಿಲ್ಲ. ಆ ಪ್ರಭುವಿನ (Lord) ದಯೆ ಮತ್ತು ಕೃಪೆಯಿಂದಲೇ (grace) ಸಾಧ್ಯ. ಅದು ಕೃಪಾಸಾಧ್ಯವೇ ವಿನಃ ಕ್ರಿಯಾ ಸಾಧ್ಯವಲ್ಲ.

ಮನುಷ್ಯತ್ವ, ಮುಮುಕ್ಷುತ್ವ ಮತ್ತು ಮಹಾಪುರುಷರ ಸೇವೆಯು ನಿಜವಾಗಿ ವಿರಳವು ಮತ್ತು ಅದಕ್ಕೆ ಭಗವತ್ಕೃಪೆಯೇ ಕಾರಣವು. ಕೇವಲ ಸದ್ಗುಣಿಯಾದ ದಿವ್ಯಜೀವಿಯು ಇವುಗಳನ್ನು ಪಡೆದುಕೊಳ್ಳುವನು. ಸ್ವಾಮಿ ವಿವೇಕಾನಂದ, ಗೋರಖನಾಥ್ ಭರ್ತೃಹರಿ ಮತ್ತು ನಿತ್ಯಾನಂದರು ಇವು ಮೂರನ್ನೂ ಹೊಂದಿದ್ದರು.

ಶ್ಲೋಕ ॥ ದುರ್ಲಭಂ ತ್ರಯಮೇ ವೈತತ್ ದೈವಾನುಗ್ರಹ ಹೇತುಕಂ ।
ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷ ಸಂಶ್ರಯಃ ॥
—ವಿವೇಕಚೂಡಾಮಣಿ

ನೀನು ಕೋಟಿಕೋಟಿ ಕಲ್ಪಗಳು ಪ್ರಯತ್ನಮಾಡಿದರೂ ಭಗವಂತನ ದರ್ಶನವನ್ನು ಪಡೆಯಲಾರೆ. ಅವನ ಕೃಪೆದೊರೆತರೆ, ಕಣ್ಣು ಮುಚ್ಚಿಬಿಡುವುದರೊಳಗೆ ಭಗವಂತನ ದರ್ಶನವನ್ನು ಹೊಂದುವೆ. ಆದ್ದರಿಂದ ಅವನ ಪಾದ ಪದ್ಮಗಳಲ್ಲಿ ಸಂಕಲ್ಪ ಶರಣನಾಗಿ ಶ್ರದ್ಧೆಯಿಂದ ಹೇಳು "ಭಗವಂತ, ನನ್ನಮೇಲೆ ಕೃಪೆತೋರು."

ಭಗವಂತನ ಕೃಪೆಯಿಂದಲೇ ಮುಕ್ತಿಯ ಪ್ರಾಪ್ತಿಗೆ ನಾಲ್ಕುವಿಧವಾದ ಸಾಧನಗಳನ್ನು, ಮಾರ್ಗದರ್ಶನಕ್ಕೆ ಗುರುವನ್ನು ಅಷ್ಟಲ್ಲದೆ, ಆಹಾರ, ವಸತಿ, ವಸ್ತ್ರ ಇತ್ಯಾದಿ ಆವಶ್ಯಕತೆಗಳನ್ನು ಕರುಣಿಸುವನು. ಆದ್ದರಿಂದ ಭಗವದಾರಾಧನೆಯು ಅತ್ಯವಶ್ಯಕವು.

ಭಗವಂತನ ಕಾರುಣ್ಯವು ಎಲ್ಲ ಬಗೆಯ ಭಯಗಳಿಗೆ ಮದ್ದು (anti-dote). ಭಗವಂತನ ನಿರ್ವ್ಯಾಜ ಪ್ರೇಮಪಾತ್ರನಾದವನು ಸಂಸಾರಸಾಗರವನ್ನು ದಾಟಲು ಶಕ್ತನು. ಅಪರಿಮಿತವಾದ ಆನಂದ ಸಾಮ್ರಾಜ್ಯ (illimitable bliss) ಭೂಮವನ್ನು ಪ್ರವೇಶಿಸಲು ಭಗವಂತನ ಕೃಪಾಕಟಾಕ್ಷವು ಒಂದು ರಹದಾರಿಯು (passport). ಆತ್ಮ ಸಮರ್ಪಣೆ, ಶುದ್ಧ ಪ್ರೇಮ ಮತ್ತು ಆರಾಧನೆಯ ಮೂಲಕ ಭಗವಂತನ ದಯೆಯನ್ನು ಸಂಪಾದಿಸು.

ಅತ್ಯಂತ ಕಲ್ಮಷಯುಕ್ತವಾದ ವಸ್ತುವನ್ನು ಬೆಂಕಿಯಲ್ಲಿ ಹಾಕಿದರೆ, ಬೆಂಕಿಯು ಅದನ್ನು ಶುದ್ಧಿಮಾಡಿ ತನ್ನದೇ ಆದ ರೂಪ ಮತ್ತು ಕಾಂತಿಯನ್ನು ಕೊಡುವುದು. ಹೀಗೆಯೇ ದೇವರು ಮಹಾಪಾಪಿಯನ್ನೂ ಶುದ್ಧಗೊಳಿಸಿ ಅವನನ್ನು ತನ್ನಂತೆಯೇ ಮಾಡುವನು. ಇದು ದೇವರ ಸ್ವಭಾವವು.

ಯಾರು ದೇವರನ್ನು ಪ್ರೀತಿಸುವನೋ, ದೇವರಲ್ಲಿಯೇ ಸಂತೋಷಪಡುವನೋ, ಯಾವ ದೇವನಲ್ಲಿಯೇ ಆಸಕ್ತನಾಗಿರುವನೋ, ಯಾವನನ್ನು ಅರ್ಚಿಸುವನೋ ಮತ್ತು ಯಾವನಿಗೆ ಸೇವೆಮಾಡುವನೋ ಅವನೇ ದೇವರ ಮಗು. ಅವನು ನಿಜವಾದ ಭಾಗವತನು. ಎಲ್ಲ ಋದ್ಧಿ ಮತ್ತು ಸಿದ್ಧಿಗಳು ಅವನ ಪದತಲದಲ್ಲಿ ಉರುಳುವವು.

ಶ್ರೀಮಂತನು ಭವ್ಯಭವನವಲ್ಲಿ ವಾಸಿಸುವನು, ಮೋಟಾರ್ ಕಾರುಗಳಲ್ಲಿ ಓಡಾಡುವನು, ಹೇರಳವಾಗಿ ಧಾನ್ಯವಿದೆ, ಆದರೂ ಅವನು ಸಂತೋಷವಾಗಿಲ್ಲ, ಅವನು ಅಜೀರ್ಣವ್ಯಾದಿ (dyspepsia) ಮಧು ಮತ್ತು ಮೂತ್ರ ರೋಗ

(diabetes) ಮತ್ತು ರಕ್ತದ ಒತ್ತಡ (Blood-pressure) ದಿಂದ ನರಳು ವನು. ಅವನ ಮನಸ್ಸು ಯೋಚನೆಗಳಿಂದ, ಕ್ಲೇಷಗಳಿಂದ ವ್ಯಾಕುಲತೆಗಳಿಂದ ತುಂಬಿದೆ. ಅವನು ದುರ್ಬಲನು. ಅವನು ಪುಷ್ಕಳವಾಗಿ ಆಹಾರವನ್ನು ಸೇವಿಸಲಾರನು. ಅವನಿಗೆ ಗೆಣಸಿನ ಗಂಜಿ, ಬಾರ್ಲಿಯ ನೀರು ಮತ್ತು ಹೊರಣ ಮಾಂಸವನ್ನು ಸೇವಿಸುವಂತೆ ವೈದ್ಯರು ವಿಧಿಸಿದ್ದಾರೆ. ಅವನಿಗೆ ಮಕ್ಕಳಿಲ್ಲ. ಒಬ್ಬ ಬಡ ಕಾರ್ಮಿಕನು ಆರೋಗ್ಯವಂತನು, ಜೀರ್ಣಶಕ್ತಿ ಯುಳ್ಳವನು, ಸಹನಶಕ್ತನು ಮತ್ತು ಅನೇಕ ಮಕ್ಕಳೊಂದಿಗನು. ಆದರೆ ಅವನಿಗೆ ವಾಸಕ್ಕೆ ಮನೆ ಇಲ್ಲ, ತಿನ್ನಲು ಬಹಳ ಕಡಿಮೆ ಆಹಾರ, ಚಿಂದಿ ಬಟ್ಟೆ ಗಳನ್ನು ಧರಿಸಿದ್ದಾನೆ. ಇದು ಪ್ರಕೃತಿಯ ಸಂಪತ್ತನ್ನು ಸಮತೋಲನಗೊಳಿ ಸುವ ರೀತಿಯು. ನೀವು ಯಾವುದನ್ನು ಕೇಳಿದರೂ ಭಗವಂತನು ನಿಮಗೆ ಕೊಡುತ್ತಾನೆ. ನಿಮಗೆ ಹಣ ಬೇಕಾದರೆ ಹಣ, ಆರೋಗ್ಯ ಬೇಕಾದರೆ ಅದನ್ನೇ ದೇವರು ಕರುಣಿಸುವನು. ನಿಮಗೆ ಮೋಕ್ಷ ಬೇಕಾದರೆ, ಮೋಕ್ಷವನ್ನು ದಯ ಪಾಲಿಸುವನು.

ಮೀಮಾಂಸಕರ ಅಭಿಪ್ರಾಯದಂತೆ ಕರ್ಮವೇ (work) ಫಲವನ್ನು ಕೊಡುವದು, ಈಶ್ವರನಲ್ಲ. ಇದು ತಪ್ಪು. ಈಶ್ವರನೊಬ್ಬನೇ ಅವರವರ ಕರ್ಮಕ್ಕೆ ತಕ್ಕ ಫಲವನ್ನು ಕೊಡಬಲ್ಲನು. ಕರ್ಮವು ಜಡವು ಮತ್ತು ಅಲ್ಪಾಯು. ಕಾಲಾಂತರದಲ್ಲಿ ಫಲವನ್ನು ತರುವ ಸಾಮರ್ಥ್ಯವು ಅದಕ್ಕೆ ಇಲ್ಲವು. ಅತೀಂ ದ್ರಿಯವಾದ (super-sensuous) ವಿಶೇಷ ಧರ್ಮವೆನಿಸಿದ (extra-ordinary principle) ಯಾವ ಅಪೂರ್ವವು ಕರ್ಮದ ನಾಶಕ್ಕೆ ಮುಂಚಿತ ವಾಗಿ ಉತ್ಪನ್ನವಾಗುವುದೋ ಅದು ಸ್ವಭಾವತಃ ಬುದ್ಧಿಹೀನವು. ಬುದ್ಧಿವಂತ ನಾದ ಈಶ್ವರನ ಪ್ರೇರಣೆ ಇಲ್ಲದೆ ಅದು ಆಚರಿಸಲಾರದು. ಕರ್ಮಗಳಿಗೆ ಕಾರಣಕರ್ತನಾಗಿರುವಂತೆಯೇ ಕರ್ಮಫಲಗಳನ್ನು ಕೊಡುವವನು ಈಶ್ವರನೇ.

ಭಗವಂತನು ತನ್ನ ಭಕ್ತರು ಸಮರ್ಪಿಸುವ ಗೌರವ, ಚಿಂತನೆ ಅಥವ ಪ್ರಾರ್ಥನೆಗಳಿಗಿಂತ ಅವರ ಹೃದಯವನ್ನು ನೋಡುವನು.

ಮಗುವು ತುಂಟತನಮಾಡಿದಾಗ ತಾಯಿಯು ಅವನನ್ನು ಹೊಡೆಯು ತ್ತಾಳೆ. ಅವಳಿಗೆ ಮಗನಮೇಲೆ ಯಾವುದಾದರೂ ದ್ವೇಷವಿದೆಯೆ? ಇಲ್ಲ. ಅವನನ್ನು ತಿದ್ದಲು, ವಿವೇಕಿಯಾಗಿಮಾಡಲು ಹೊಡೆಯುವಳು. ಹಾಗೆಯೇ

ದೇವರು ದುಷ್ಕರ್ಮಿಗಳನ್ನು (evil doers) ತಿದ್ದುವುದಕ್ಕಾಗಿ ಮತ್ತು ತಿಳಿವಳಿಕೆ ನೀಡಲು ಅವರನ್ನು ಶಿಕ್ಷಿಸುವನು. ದೇವರು ಪಕ್ಷಪಾತನೂ ಅಲ್ಲ, ಕ್ರೂರನೂ ಅಲ್ಲ.

ರಾಧೆಯಂತೆ ದೇವರನ್ನು ಪ್ರೀತಿಸಿ. ಇದು ಸರ್ವೋತ್ಕೃಷ್ಟವಾದ ಆರಾಧನೆಯು. ರಾಧೆಯ ಪವಿತ್ರವಾದ ಹಾದಿಯನ್ನು ಅನುಸರಿಸಿ. ರಾಧೆಯಂತೆ ಕೃಷ್ಣನನ್ನು ಚಿಂತಿಸಿ. ಪ್ರೇಮವು ಕ್ರಮವಾಗಿ ಬೆಳೆಯುವದು. ನೀವು ಅಮೃತತ್ವವನ್ನೂ ಆತ್ಮಜ್ಞಾನವನ್ನೂ ಹೊಂದುವಿರಿ.

ಅಹಲ್ಯೆಯು ಹೇಳುತ್ತಾಳೆ : "ಓ ದಯಾಮಯನಾದ ಭಗವಾನ್ ರಾಮ ! ನಿನಗೆ ಪ್ರಣಾಮಗಳು. ನಿನ್ನ ಕೃಪಾಕಟಾಕ್ಷದಿಂದ ನನ್ನ ಸಹಜವಾದ ರೂಪವನ್ನು ಧರಿಸಿದೆನು. ನಿನ್ನ ಅನುಕಂಪದಿಂದಲೇ ಪಾಷಾಣವಾಗಿದ್ದವಳು ಮಾನವಳಾದೆನು. ನೀನು ಪ್ರೇಮ ಮತ್ತು ದಯಾಸಾಗರನು. ಸರ್ವವ್ಯಾಪಿಯಾದ ನಿರ್ಗುಣ ಬ್ರಹ್ಮವು ಒಳ ಹೊರಗೆ ಎಲ್ಲಲ್ಲಿಯೂ ವಿರಾಡ್ರೂಪವಾಗಿದ್ದರೂ ಕಲ್ಲಾಗಿದ್ದ ನನ್ನನ್ನು ನಿಜರೂಪಕ್ಕೆ ತರಲಾರದೆ ಹೋಯಿತು. ನೀನೊಬ್ಬನೇ ಹಾಗೆ ಮಾಡಲು ಸಮರ್ಥನಾದೆ. ಆದಕಾರಣ ನೀನು ವಿರಾಟ್ ಮತ್ತು ನಿರ್ಗುಣಬ್ರಹ್ಮನಿಗಿಂತಲೂ ಶ್ರೇಷ್ಠನು. ನಿನಗೆ ನಮಸ್ಕಾರಗಳು. ಓ ಭಗವಾನ್, ನನ್ನ ಉದ್ಧಾರಕನೇ ಮತ್ತು ರಕ್ಷಕನೇ, ನಿನಗೆ ಜಯವಾಗಲಿ ! ಓ ಭಗವಾನ್ ರಾಮ ನಿನ್ನ ನಾಮಕ್ಕೆ ಜಯವಾಗಲಿ."

ಶ್ರೀರಾಮನಿಲ್ಲದೆ ನೀವು ಶಾಂತಿಯಲ್ಲಿ ನೆಲಸಲಾರಿರಿ. ಶ್ರೀರಾಮಚಂದ್ರನನ್ನು ಸದಾ ಸ್ಮರಿಸುವ ಮತ್ತು ಅವನ ದಿವ್ಯನಾಮಗಳನ್ನು ಗಾನಮಾಡುವವನು ಎಷ್ಟು ಸಂತೋಷಿಯು ! ಎಂಥ ಅದೃಷ್ಟಶಾಲಿಯು ! ಶ್ರೀರಾಮ ಭಕ್ತನು ಎಲ್ಲ ಚಿಂತೆ, ಕಳವಳ, ಯೋಚನೆ, ಭಯ, ದುಃಖ, ನೋವು, ಕ್ಲೇಶಗಳಿಂದ ಮುಕ್ತನಾಗಿರುವನು. ಶ್ರೀರಾಮನು ಅವನ ಶರೀರದ ಎಚ್ಚರಿಕೆವಹಿಸುವನು. ಶ್ರೀರಾಮನು ಅವನ ಭೌತಿಕ ಇಚ್ಛೆಗಳನ್ನೆಲ್ಲ ಪೂರೈಸುವನು. ಏಳಿ ಎಚ್ಚರಗೊಳ್ಳಿ ಮತ್ತು ನೋಡಿ. ಅವನು ಎಷ್ಟು ದಯಾಪೂರ್ಣನು ! ಅವನ ಪಾದಪದ್ಮಗಳನ್ನು ಭದ್ರವಾಗಿ ಹಿಡಿಯಿರಿ (cling).

ರಾವಣನು ಭಗವಾನ್ ಶಿವನನ್ನು ಸ್ತೋತ್ರಗಳಿಂದ ಪ್ರಸನ್ನ ಮಾಡಿಕೊಂಡನು. ಪುಷ್ಪದಂತನು ತನ್ನ ದಿವ್ಯವಾದ '**ಶಿವಮಹಿಮ್ನ ಸ್ತೋತ್ರ**'

ದಿಂದ (ಇದು ಈಗಲೂ ಭಾರತದಲ್ಲೆಲ್ಲಾ ಭಕ್ತರಿಂದ ಹಾಡಲ್ಪಡುತ್ತಿದೆ.) ಎಲ್ಲ ಐಶ್ವರ್ಯಗಳನ್ನೂ, ಸಿದ್ಧಿಗಳನ್ನೂ ಮತ್ತು ಮುಕ್ತಿಯನ್ನೂ ಪಡೆದನು. ಶಿವನ ಸ್ತೋತ್ರಗಳ ಮಹಿಮೆಯಂತೂ ವರ್ಣಿಸಲಸದಳವು. ನೀವೆಲ್ಲಾ ಭಗವಾನ್ ಶಿವನ ಸ್ತೋತ್ರಗಳನ್ನು ಹಾಡಿ ಅವನ ಕೃಪೆಯನ್ನು ಮತ್ತು ಮುಕ್ತಿಯನ್ನು ಇಂದೇ, ಈ ಕ್ಷಣವೇ ಏಕೆ ದೊರಕಿಸಿಕೊಳ್ಳಬಾರದು ? ನೀವು ಶಿವನನ್ನು ಶೀಘ್ರವಾಗಿ ಸಂತೋಷಪಡಿಸಬಲ್ಲಿರಿ. ಶಿವರಾತ್ರಿಯಂದು ಉಪವಾಸ ಮಾಡಿ, ಅದು ಸಾಧ್ಯವಾಗದಿದ್ದರೆ ಹಾಲು ಮತ್ತು ಹಣ್ಣನ್ನು ಮಾತ್ರ ಸೇವಿಸಿರಿ. ರಾತ್ರಿಯೆಲ್ಲಾ ಪೂರ್ಣ ಜಾಗೃತರಾಗಿ ಶಿವನ ಸ್ತೋತ್ರಗಳನ್ನು ಹಾಡಿರಿ. ಭಗವಾನ್ ಶಿವನ ಅನುಗ್ರಹವು ನಿಮ್ಮೆಲ್ಲರ ಮೇಲೆ ಇರಲಿ.

ಕೂರ್ಮಪುರಾಣದಲ್ಲಿ ಹೀಗೆ ಹೇಳಿದೆ : "ಬೆಂಕಿಯನ್ನು ನೀರು ಆರಿಸಬಲ್ಲುದು. ಸೂರ್ಯನು ಕತ್ತಲೆಯನ್ನು ಕಳೆಯಬಲ್ಲನು. ಮತ್ತು ದೇವಿಯ ನಾಮಗಳ ಪುರಶ್ಚರಣೆಯು ಕಲಿಯುಗದಲ್ಲಿ ಬಹುಸಂಖ್ಯಾಕವಾದ ಪಾಪಗಳನ್ನು ನಾಶಮಾಡಬಲ್ಲುದು." ಬ್ರಹ್ಮಪುರಾಣದಲ್ಲಿ, "ಯಾರು ನಿಯಮದಿಂದ ಅಥವ ನಿಯಮವಿಲ್ಲದೆ ದಿವ್ಯಶಕ್ತಿಯಾದ ದೇವಿಯನ್ನು ಪೂಜಿಸುವರೋ ಅವರು ಸಂಸಾರದಲ್ಲಿ ಸಿಕ್ಕಿಕೊಳ್ಳುವುದಿಲ್ಲ. ಅವರು ಮುಕ್ತಾತ್ಮರೆಂಬುದರಲ್ಲಿ ಸಂಶಯವೇ ಇಲ್ಲವು" ಎಂದು ಹೇಳುವುದು.

ಅಧ್ಯಾತ್ಮದ ಹೋರಾಟದಲ್ಲಿ ನಿಮ್ಮನ್ನು ಹಲವು ರೀತಿಗಳಲ್ಲಿ ಪ್ರಕೃತಿಯು ಸಿದ್ಧಗೊಳಿಸುವಳು. ನಿಮ್ಮ ಮನಸ್ಸು ಮತ್ತು ದೇಹವನ್ನು ಅವಳು ತನ್ನ ನಿರಾತಂಕವಾದ ಆಟಕ್ಕೆ ಅರ್ಹವಾದ ಉಪಕರಣವನ್ನಾಗಿ ಮಾಡುತ್ತಿರುವಳು. ಇದನ್ನು ಜಾಗರೂಕತೆಯಿಂದ ಕಂಡುಹಿಡಿಯಿರಿ. ತಾಯಿಗೆ ಎಂದೆಂದೂ ಕೃತಜ್ಞರಾಗಿರಿ.

ದೇವರೊಬ್ಬನನ್ನೇ ಸ್ಮರಿಸಿ ನಿಮ್ಮ ಅತ್ಯಂತ ಪ್ರಿಯನಾದ ದೇವರನ್ನು (ಮತ್ಯಾವುದನ್ನೂ ಅಲ್ಲ) ಮಾತ್ರ ಚಿಂತಿಸಿ. ನಿಮ್ಮ ಇಷ್ಟನಾದ ಪರಮಾತ್ಮನನ್ನು ಬಿಟ್ಟು ಏನನ್ನೂ ನೋಡದಿರಿ. ದೇವರನ್ನು ಮಾತ್ರ ಪ್ರೀತಿಸಿ. ಅವನಿಗಾಗಿಯೇ ಬದುಕಿರಿ. ಎಲ್ಲ ನಾಮ, ರೂಪಗಳ ಮೂಲಕವೂ ಭಗವಂತನಿಗೆ ಸೇವೆಮಾಡಿ. ಮಧುರ ಬೃಂದಾವನವು, ಸುಂದರ ಬೃಂದಾವನವು, ದಿವ್ಯ ಬೃಂದಾವನವು, ಕದಂಬವೃಕ್ಷಗಳ ಪುಷ್ಪಗಳಿಂದ ವನಗಳಿಂದ ಪರಿಶೋಭಿಸುವ

ಯಮುನೆಯು ನಿಮ್ಮೊಳಗೇ ಇರುವುದು. ಒಳಗೆ ನೋಡಿ. ಆತ್ಮದ ಒಳಗಿನ ಸಂಗೀತ, ಎಂದರೆ ಭಗವಾನ್ ಕೃಷ್ಣನ ಅದ್ಭುತ ಕೊಳಲಿನ ನಾದವನ್ನು ಕೇಳಿರಿ. ಮತ್ತು ಕೃಷ್ಣನಲ್ಲಿ ಒಂದಾಗಿ. ಅಭಯವೂ ಅಮೃತವೂ ಆದ ಮತ್ತೊಂದು ತೀರವನ್ನು ಮುಟ್ಟಿಸಲು ಶ್ರೀಕೃಷ್ಣನ ದಿವ್ಯದೃಷ್ಟಿಗಳು ದೋಣಿಯಾಗಿ ನಿರ್ವಹಿಸುವುವು. ನಿಮ್ಮ ಮನಸ್ಸನ್ನು ಅವನ ಕಣ್ಣುಗಳ ಮೇಲೆ ನಿಲ್ಲಿಸಿ.

ಕೃಷ್ಣ ಎಂಬುದು 'ಕೃಷ್'–ಎಂದರೆ 'ಸೆಳೆ' ಎಂಬುದರಿಂದ ಬಂದುದು. ಕೃಷ್ಣ ಎಂದರೆ ಎಲ್ಲವನ್ನೂ ತನ್ನ ಕಡೆಗೆ ಸೆಳೆದುಕೊಳ್ಳುವುದು ಎಂದರ್ಥ. ಅಷ್ಟೊಂದು ಶಕ್ತಿಪೂರ್ಣವಾಗಿ ಆಕರ್ಷಿಸುವುದಲ್ಲದೆ ನಿಗ್ರಹಿಸುವ ನಾಮವು ಏನಾಗಿರಬಹುದು ? ಯಾವ ವಸ್ತುವಾಗಿರಬಹುದು ? ಅದು ಕೇವಲ (ಪರಮ) ಪ್ರೇಮವು. ಕೃಷ್ಣನು ಪರಮ ಪ್ರೇಮಮಯಿಯು.

ಶ್ರೀ ಕೃಷ್ಣನು ಎಷ್ಟು ದಯಾಮಯನು ? ತನ್ನನ್ನು ಕೊಲ್ಲಲು ಬಂದ ಪೂತನಿಯಲ್ಲಿ ಮಾತೃಭಾವವನ್ನು ಹೊಂದಿ ಮೋಕ್ಷವನ್ನು ಕರುಣಿಸಿದನು. ಶ್ರೀಕೃಷ್ಣನ ನಾಮವು ಎಷ್ಟು ಮಧುರವು ! ಎಷ್ಟು ಸಾಮರ್ಥ್ಯವುಳ್ಳದು ! ಶ್ರೀಕೃಷ್ಣನ ನಾಮವು ಅಮೃತವು. ಈ ಭಯಂಕರವಾದ ಸಂಸಾರವನ್ನು ದಾಟಲು ಕೃಷ್ಣನಾಮವು ನೌಕೆಯು. ರಾಕ್ಷಸ–ಮನಸ್ಸನ್ನು ಕೊಲ್ಲಲು ಕೃಷ್ಣ ನಾಮವು ಬಲಿಷ್ಠವಾದ ಶಸ್ತ್ರವು.

ಶ್ರೀಕೃಷ್ಣನು ಸಚ್ಚಿದಾನಂದ ವಿಗ್ರಹನು (embodiment of knowledge and bliss) ಆದ್ಯಂತರಹಿತನು. ಅವನು ಕಾರಣಗಳ ಕಾರಣನು. ಅವನು ಸರ್ವಕ್ಕೂ ಆಶ್ರಯನು, ಆಧಾರನು ಮತ್ತು ಸ್ವಾಮಿಯು.

ಭಗವಾನ್ ಶ್ರೀಕೃಷ್ಣನು ಗೋಪಿಯರಲ್ಲಿ ಪರಮ ಪ್ರೇಮವುಳ್ಳವನಾದ್ದರಿಂದ ಅವರ ಮನೆಗಳಲ್ಲಿ ಬೆಣ್ಣೆಯನ್ನು ಕದ್ದುತಿಂದು ಬೆಣ್ಣೆಯ ಕಳ್ಳನೆನಿಸಿಕೊಂಡಿದ್ದಾನೆ. ಆದರೆ ಅವನು ನಿಜವಾಗಿಯೂ ತನ್ನ ಭಕ್ತರ ಮನಸ್ಸಿನಲ್ಲಿದ್ದ ದುಷ್ಟ ವಾಸನೆಗಳನ್ನು (evil thoughts) ಅಪಹರಿಸಿ ಅವರ ಮನಸ್ಸನ್ನು ದಿವ್ಯ ಭಾವಗಳಿಂದ ತುಂಬುವನು. ತನ್ನ ಭಕ್ತರಾದ ಗೋಪಿಯರ ಹೃದಯದಲ್ಲಿ ಸಂತಸವನ್ನುಂಟುಮಾಡಲು ಬಾಲಕನಾಗಿ ಲೀಲೆಯನ್ನು ತೋರಿದನು. ಗೋಪಿಯರೂ ಇದನ್ನು ಅಪರಿಮಿತವಾಗಿ ಇಷ್ಟಪಟ್ಟರು. ತಮ್ಮ ಮನೆಯ ಬೆಣ್ಣೆಯನ್ನು ಯಾವಾಗ ಬಂದು ಕೃಷ್ಣನು ತಿನ್ನುವನೋ

ಎಂದು ಕಾತುರರಾಗಿ ನಿರೀಕ್ಷಿಸುತ್ತಿದ್ದರು. ಅವನು ನಿಜವಾಗಿಯೂ ಅವರ ಹೃದಯ ಮತ್ತು ಮನಸ್ಸನ್ನು ಅಪಹರಿಸಿ, ಜಗತ್ತನ್ನು ಮರೆಯುವಂತೆ ಮಾಡಿ, ತನ್ನ ಪಾದಪದ್ಮಗಳಲ್ಲಿ ಅವರ ಮನಸ್ಸು ನಿಂತು ನಿತ್ಯವಾದ ಶಾಂತಿ ಮತ್ತು ಆನಂದವನ್ನು ಅನುಭವಿಸುವಂತೆ ಅನುಗ್ರಹಿಸುವನು. ತನ್ನ ಭಕ್ತರ 'ದಾಸೋsಹಂ' ಶಬ್ದದ 'ದಾ' ಅಕ್ಷರವನ್ನು ಅಪಹರಿಸಿ, ಅವರು 'ಸೋsಹಂ' (ನಾನು ಅವನೇ ಆಗಿರುವೆನು) ಎಂಬ ವೇದಾಂತ ಶಬ್ದದ ಪ್ರಾಮುಖ್ಯತೆಯನ್ನು ಅರಿಯುವಂತೆ ಮಾಡುವನು.

ಶ್ಲೋ॥ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ॥
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥

—ಗೀತಾ, ಅ—೧೦—ಶ್ಲೋ॥ ೧೦

ಗೀತೆಯಲ್ಲಿ ಶ್ರೀಕೃಷ್ಣನು ಹೇಳುವುದೇನೆಂದರೆ, "ಸತತ ಪ್ರೀತಿಪೂರ್ವಕವಾಗಿ ಭಜಿಸುವ ಅವರು ನನ್ನನ್ನೇ ಸೇರುವರು. ನನ್ನ ಭಕ್ತರಿಗೆ ನಾನು ಬುದ್ಧಿಯೋಗವನ್ನು ಕೊಡುತ್ತೇನೆ." ಎಂಥ ದಯಾಮಯನು! ಶ್ರೀಕೃಷ್ಣನು. ಶ್ರೀಕೃಷ್ಣನಿಗೆ ಮತ್ತು ಅವನ ದಿವ್ಯನಾಮಗಳಿಗೆ ಜಯವಾಗಲಿ!

ಶ್ರೀಕೃಷ್ಣನ ಸೌಂದರ್ಯವನ್ನು ವರ್ಣಿಸಬಲ್ಲವರಾರು? ಅವನ ಮುಖ ಕಾಂತಿಯು ಕೋಟಿ ಸೂರ್ಯರುಗಳ ಕಾಂತಿಯನ್ನು ಮೀರಿಸಿರುವುದು. ಅವನು ಸೌಂದರ್ಯಗಳ ಸೌಂದರ್ಯವು. ಶ್ರೀಕೃಷ್ಣನು ಸೌಂದರ್ಯದ ಪ್ರತಿಮೂರ್ತಿಯು.

"ಒಂದು ವೃಕ್ಷದ ಬುಡಕ್ಕೆ ನೀರನ್ನು ಎರೆದರೆ, ಅದು ಹೇಗೆ ಕಾಂಡ, ಕೊಂಬೆ,ರೆಂಬೆಗಳಲ್ಲಿ ವ್ಯಾಪಿಸಿ ಚೈತನ್ಯವನ್ನು ಕೊಡುವುದೋ, ಮತ್ತು ಆಹಾರವನ್ನು ಪ್ರಾಣನಿಗೆ ಅರ್ಪಿಸುವುದರಿಂದ ಹೇಗೆ ಇಂದ್ರಿಯಗಳೆಲ್ಲವೂ ಸಂತೋಷಪಡುವವೋ, ಹಾಗೆಯೇ ಭಗವಾನ್ ಶ್ರೀಕೃಷ್ಣ ಅಥವ ಅಚ್ಯುತನನ್ನು ಅರ್ಚಿಸುವುದರಿಂದ ಎಲ್ಲ ದೇವತೆಗಳೂ ಸಂತೋಷಗೊಳ್ಳುವರು." (ಶ್ರೀಮದ್ಭಾಗವತ)

ಶ್ರೀಕೃಷ್ಣನು ಈ ಜಗತ್ತಿನಲ್ಲಿರುವಷ್ಟು ಕಾಲವೂ ವಿವಿಧ ರೀತಿಯಲ್ಲಿ ತನ್ನ ಲೀಲೆಯನ್ನು ತೋರಿಸಿದ್ದಾನೆ. ಅವನು ಅರ್ಜುನನ ರಥವನ್ನು ನಡೆಸಿದನು. ಆತನು ಅತ್ಯುತ್ತಮ ರಾಜಕಾರಿಣಿಯು, ಶ್ರೇಷ್ಠ ಸಂಗೀತ ಶಾಸ್ತ್ರಜ್ಞನು (master

musician) ಅವನ ಕೊಳಲ ನಾದಮಾಧುರ್ಯವು ಎಲ್ಲರ ಮತ್ತು ಗೋಪಿಗಳ ಹೃದಯ ಹೃದಯವನ್ನೂ ಪುಳಕಿತ ಮಾಡಿತು. ಅವನು ಗೋಕುಲ ಮತ್ತು ನಂದಗೋಪದಲ್ಲಿ ಗೋಪಾಲನಾಗಿದ್ದನು. ತಾನು ಮಗು ಮತ್ತು ಬಾಲಕನಾಗಿ ರುವಾಗಲೇ ಹಲವು ಚಾತುರ್ಯಗಳನ್ನು ಪ್ರದರ್ಶಿಸಿದನು. ಕಾಳೀಯನನ್ನು ಕೊಂದುದಲ್ಲದೆ ತಾಯಿಗೆ ವಿಶ್ವರೂಪವನ್ನು ತೋರಿದನು. ಭಕ್ತವರೇಣ್ಯರಾದ ನಾರದ, ಗೌರಾಂಗ, ರಾಧಾ ಮತ್ತು ಗೋಪಿಯರು ಮಾತ್ರ ಅರಿಯಬಲ್ಲ ರಹಸ್ಯ ವಾದ ರಾಸಲೀಲೆಯನ್ನು ತೋರಿದನು. ಅರ್ಜುನ ಮತ್ತು ಉದ್ಧವನಿಗೆ ಯೋಗ, ಮತ್ತು ವೇದಾಂತದ ಪರಮೋಚ್ಚ ಸತ್ಯವನ್ನು ಉಪದೇಶಿಸಿದನು. ಈ ಕಾರಣದಿಂದಲೇ ಶ್ರೀಕೃಷ್ಣನನ್ನು ಷೋಡಶಕಲಾಪೂರ್ಣನಾದ ಅವತಾರಿಯು ಎಂದು ಪರಿಗಣಿಸಿದ್ದಾರೆ.

---

## ೪. ಅವತಾರದ ಉದ್ದೇಶ

ಕಾರ್ಯಬ್ರಹ್ಮ (ಹಿರಣ್ಯಗರ್ಭ) ಅಥವ ಬ್ರಹ್ಮ, ವಿಷ್ಣು, ಶಿವನು ಧರೆಗೆ ಇಳಿಯುವುದೇ ಅವತಾರಗಳು. ಕಾರಣಬ್ರಹ್ಮ (ಈಶ್ವರ) ದಿಂದ ನೇರವಾಗಿ ಅವತಾರದ ಇಳಿಯುವಿಕೆಯು ಸಾಧ್ಯವಿಲ್ಲವು. ಎಲ್ಲ ಅವತಾರಗಳೂ ಬ್ರಹ್ಮ ಅಥವ ವಿಷ್ಣು ಅಥವ ಶಿವನಿಂದ ಬರುವವು. ಅವು ನೇರವಾಗಿ ಈಶ್ವರನಿಂದ ಇಳಿಯುವುದಿಲ್ಲವು.

ಭಕ್ತನು ತನ್ನ ಇಷ್ಟದೇವತೆಯನ್ನು ಮಾನವ ರೂಪಿನಲ್ಲಿ ನೋಡಲು ಇಚ್ಛಿಸುತ್ತಾನೆ. ಇದೇ ಅವತಾರಕ್ಕೆ ಕಾರಣವು. ಆ ಕಾರಣದಿಂದಲೇ ನಿರಾಕಾರ ನಾದ ಬ್ರಹ್ಮನು ತನ್ನ ಭಕ್ತರನ್ನು ಸಂತೋಷಗೊಳಿಸಲು ಮಾನವ ರೂಪವನ್ನು ಧರಿಸುವನು. ಶ್ರದ್ಧಾವಂತರಾದ ಭಕ್ತರ ಕಣ್ಣೀರು ಕೋಡಿಯು ಅವತಾರಕ್ಕೆ ಕಾರಣವಾಗುವುದು.

ಮಾನವನ ಅಭ್ಯುದಯಕ್ಕೆ ಭಗವಂತನ ಅವತಾರವು. ಯಾವಾಗ ಈ ಭೂಮಿಯಲ್ಲಿ ದುಷ್ಪರಿಣಾಮಗಳಾಗುವುವೋ, ಅಧರ್ಮವು ಹೆಚ್ಚುವುದೋ,

ಆಗ ಭಗವಂತನು ಧರ್ಮವನ್ನು ಸ್ಥಾಪಿಸಲು ಭೂಮಿಗೆ ಇಳಿದು ಬರುವನು. ಈ ಭೌತಪ್ರಪಂಚವನ್ನು ಮುಟ್ಟುವಾಗ ಮನುಷ್ಯ ಶರೀರವನ್ನು ಧರಿಸುವನು. ಅವನನ್ನು ಅವತಾರಿ ಎನ್ನುವರು. ವಿಶ್ವೋದ್ಧರಣಕ್ಕಾಗಿ ವಿರಾಟ್‌ಪುರುಷನ ಪೂರ್ಣಾವತಾರ, ಅಂಶಾವತಾರ, ಆವೇಶ ಅವತಾರ ಹಾಗೂ ಲೀಲಾ ಅವತಾರ ಗಳು ಆಗುವವು.

ಭಕ್ತಿಯನ್ನು ಎಲ್ಲೆಡೆಯೂ ಹರಡಲು, ಜನರು ಅಧ್ಯಾತ್ಮಮಾರ್ಗದಲ್ಲಿ ನಡೆಯುವಂತೆ ಮಾಡಲು ಸರ್ವಶಕ್ತನಾದ ಭಗವಂತನು ಆಗಿಂದಾಗ್ಗೆ ತನ್ನ ಪ್ರತಿನಿಧಿಗಳನ್ನು ಭೂಲೋಕಕ್ಕೆ ಕಳುಹಿಸುವನು. ಗೌರಾಂಗ ಪ್ರಭು, ಕಬೀರ್ ದಾಸ್, ರಾಮದಾಸ್, ಗೋಸ್ವಾಮಿ, ತುಳಸೀದಾಸ್ ಇವರೆಲ್ಲಾ ಭಗವಂತನ ಪ್ರಿಯ ಮತ್ತು ಶ್ರದ್ಧಾನ್ವಿತ ಪ್ರತಿನಿಧಿಗಳು. ಪ್ರಭುವು ಎಷ್ಟು ವಾತ್ಸಲ್ಯ ಪೂರ್ಣನೂ, ದಯಾಮಯನೂ ಮತ್ತು ಕೃಪಾಸಾಗರನು ! ಓ ದೇಹಾತ್ಮ ವಾದಿಗಳೇ, ಸಂದೇಹವಾದಿಗಳೇ, ನಾಸ್ತಿಕರೇ ! ಎಂದು ನಿಮ್ಮ ಕಣ್ಣುಗಳನ್ನೂ, ಕಿವಿಗಳನ್ನೂ ತೆರೆಯುವಿರಿ ? ಎಚ್ಚೇಳಿ ! ಒಂದು ಕ್ಷಣವನ್ನೂ ವ್ಯರ್ಥಮಾಡದಿರಿ. ಮೃತ್ಯು ದೇವತೆಯು ನಿಮ್ಮನ್ನು ಕಬಳಿಸಲು ತನ್ನ ಕ್ರೂರ ದವಡೆಗಳನ್ನು ತೆರೆ ಯುತ್ತಿರುವನು. ಜೋಡಿಸಲ್ಪಟ್ಟ ಕೈಗಳಿಂದ ಭಾವಸಹಿತರಾಗಿ ಭಗವಂತನ ಬಳಿಗೆ ಓಡಿರಿ ಮತ್ತು ಬೇಡಿರಿ, "ಓ, ನನ್ನ ಪ್ರಭುವೆ ! ನನ್ನ ಮೇಲೆ ದಯೆ ತೋರು," ಎಂಬುದಾಗಿ.

"ಶ್ರೀಕೃಷ್ಣನನ್ನು ಭಗವಾನ್ ಅಥವ ಪ್ರಭು ಎಂದು ನಾವು ಹೇಗೆ ನಂಬುವುದು ?" ಎಂದು ಕೆಲವರು ಪ್ರಶ್ನಿಸುವರು. "ಅವನೂ ಜನ್ಮವೆತ್ತಿ ಸತ್ತನು. ಅವನು ಮನುಷ್ಯಮಾತ್ರನಲ್ಲವೆ ?" ಇದು ಸುಳ್ಳು ಹೇಳಿಕೆಯು, ಅರಿಯದ ಮಗುವು ಆಡುವ ಮಾತಿದು. ಶ್ರೀಕೃಷ್ಣಭಗವಾನನು ಲೋಕ ಸಂಗ್ರಹ ಕಾರ್ಯವನ್ನು ಮಾಡುವುದಕ್ಕಾಗಿ, ತಾತ್ಕಾಲಿಕವಾಗಿ ಪ್ರಕಟನಾಗಿ ನಂತರ ಅದೃಶ್ಯನಾದನು. ಶ್ರೀಕೃಷ್ಣನು ಶ್ರೀಹರಿಯೇ. ಇದರಲ್ಲಿ ಸಂಶಯ ವಿಲ್ಲ. ಅವನು ಚಿನ್ಮಯ ಶರೀರಿಯಾಗಿದ್ದನು. ಅವನ ದೇಹವು ಮಾಂಸ ದಿಂದಾದುದಲ್ಲವು. ಅವನಲ್ಲಿ ಪೂರ್ಣ ನಂಬಿಕೆಯನ್ನಿಡಿ. ಅವನು ನಿಮ್ಮನ್ನು ಜನನ ಮರಣದ ಸುಳಿಯಿಂದ ಬಿಡುಗಡೆ ಮಾಡುವನು. ಅವನ ನಾಮವಾದ "ಓಂ ನಮೋ ಭಗವತೇ ವಾಸುದೇವಾಯ" ವನ್ನು ಗೌರವಿಸಿ. ಶ್ರೀಕೃಷ್ಣ–

ಗೋವಿಂದ-ಹರೇ-ಮುರಾರೇ ! ಹೇ ನಾಥ ನಾರಾಯಣ ವಾಸುದೇವ ||" ಎಂದು ಗಾನಮಾಡಿರಿ.

ಒಬ್ಬ ದೇವತೆ ಅಥವ ಒಂದು ಶಕ್ತಿಯು ಭೌತಶಕ್ತಿಯಾಗಿ ಮೂರ್ತ ರೂಪವನ್ನು ಧರಿಸಬಹುದು. ಈ ಮೂರ್ತರೂಪವು ಮೂರು ವಿಧವಾದುದು: (೧) ಪೂರ್ಣ ಮೂರ್ತರೂಪ, (೨) ಅರೆ ಮೂರ್ತರೂಪ, ಮತ್ತು (೩) ಅಲ್ಪ ಮೂರ್ತರೂಪ. (೧) ನೀವು ದೇವತೆಯ ದರ್ಶನವನ್ನು ಪಡೆದರೆ, ದೇವತೆಯ ಕಾಲುಗಳು ಭೂಮಿಯನ್ನು ಸ್ಪರ್ಶಿಸದಿರುವುದನ್ನು ಗಮನಿಸಬಹುದು. ಕಣ್ಣು ಗಳು ಚಲಿಸುವುದಿಲ್ಲ. ರೆಪ್ಪೆಗಳು ಹೊಡೆಯುವುದಿಲ್ಲ. (೨) ಇಲ್ಲಿ ರೂಪವು ಸ್ಪೃಶ್ಯವಾಗಬಹುದಾದರೂ ಅದೃಶ್ಯವು. (೩) ರೂಪವು ಸ್ಪೃಶ್ಯವು ಮತ್ತು ದೃಶ್ಯವು. ಉದಾಹರಣೆಗೆ ನಿಮ್ಮನ್ನಗಲಿದ ನಿಮ್ಮ ಮಿತ್ರನ ಆತ್ಮವು ನಿಮ್ಮ ಕೈಗಳನ್ನು ಕುಲುಕಬಲ್ಲುದು.

---

## ೫. ಮೂರ್ತಿ ಪೂಜೆಯು

ಮೂರ್ತಿ, ವಿಗ್ರಹ, ಸೂರ್ಯ, ಅಗ್ನಿ, ಜಲ, ಗಂಗಾ, ಸಾಲಿಗ್ರಾಮ, ಲಿಂಗ ಮುಂತಾದುವು ಸಾಧಕನು ಏಕಾಗ್ರವಾದ ಮನಸ್ಸನ್ನು ಪಡೆಯಲು ಸಹಾಯ ಮಾಡುವ ಭಗವಂತನ ಪ್ರತೀಕಗಳು. ಚಿತ್ತೈಕಾಗ್ರತೆಗೆ ಮೂರ್ತಿ ಅಥವ ಸಂಜ್ಞೆಯು ಅತ್ಯವಶ್ಯಕವು. ಕ್ರಿಶ್ಚಿಯನ್ನರು ಶಿಲುಬೆಯನ್ನು ಪ್ರತೀಕವಾಗಿ ಹೊಂದಿದ್ದಾರೆ. ಸ್ಥೂಲವಾದ ಮನಸ್ಸಿಗೆ ಆಲಂಬನಕ್ಕಾಗಿ ಸ್ಥೂಲವಾದ ಸಂಜ್ಞೆಯು ಬೇಕೇಬೇಕು. ಸೂಕ್ಷ್ಮವಾದ ಮನಸ್ಸಿಗೆ ಭಾವನಾರೂಪವಾದ ಸಂಜ್ಞೆಯು ಅವಶ್ಯಕವು. ಸುತ್ತಾಡುವ ಮನಸ್ಸನ್ನು ಹಿಡಿದು ನಿಲ್ಲಿಸಲು ವೇದಾಂತಿಯೂ ಸಹ 'ಓಂ'ಕಾರವನ್ನು ಸಂಕೇತವಾಗಿ ಹೊಂದಿರುತ್ತಾನೆ. ಆರಂಭದಲ್ಲಿ ಚಿಹ್ನೆಯಿಲ್ಲದೆ ಧ್ಯಾನವು ಸಾಧ್ಯವಾಗದು.

ಭಕ್ತನು ಮೂರ್ತಿಯಲ್ಲಿ ಭಗವಂತನ ಮತ್ತು ಅವನ ದಿವ್ಯ ಗುಣಗಳನ್ನು ಆರೋಪಿಸುವನು. ಅವನು ಭಗವಂತನಿಗೆ, ಪಾದ್ಯ, ಅರ್ಘ್ಯ, ಆಸನ, ಸ್ನಾನ,

ವಸ್ತ್ರ ಸಮರ್ಪಣೆ, ಆಚಮನ, ಗಂಧಧಾರಣೆ, ಪುಷ್ಪಸಮರ್ಪಣೆ, ಧೂಪ, ದೀಪಗಳ ಆಘ್ರಾರ್ಪಣೆ, ಮಹಾನಿವೇದನ ಮುಂತಾದ ಷೋಡಶೋಪಚಾರ ಪೂಜೆಗಳನ್ನು ಮೂರ್ತಿಯ ಮೂಲಕ ಸಮರ್ಪಿಸುವನು. ಈ ಬಗೆಯ ಅರ್ಚನೆ ಯಿಂದ ಭಗವದ್ರೂಪದಲ್ಲಿ ಮನಸ್ಸು ನೆಲಸುವುದು. ಸಾಧಕನು ಭಗವಂತನಿಗೆ ಸಮೀಪವರ್ತಿಯಾಗಿರುವುದನ್ನು ಭಾವಿಸುವನು. ಭಕ್ತನು ಶುದ್ಧವಾದ ಹೃದಯವನ್ನು ಹೊಂದಿ, ನಿದಾನವಾಗಿ ಅಹಂಕಾರವನ್ನು ನಾಶಮಾಡುವನು.

ಒಂದು ಸಣ್ಣ ಮೂರ್ತಿಯನ್ನು ಪೂಜಿಸುವಾಗಲೂ ಭಕ್ತನು ಪುರುಷ ಸೂಕ್ತವನ್ನು ಪಠಿಸಬೇಕು. ಮತ್ತು ಅಸಂಖ್ಯಾತ ಶಿರಸ್ಸುಗಳೂ, ಕಣ್ಣುಗಳೂ, ಕೈಗಳೂ ಈ ವಿಶ್ವವನ್ನೆಲ್ಲ ವ್ಯಾಪಿಸಿದ್ದರೂ ಎಲ್ಲ ಜೀವಿಗಳ ಹೃದಯದಲ್ಲಿ ನೆಲಸಿರುವ ಆತ್ಮ ಅಥವ ದೇವರನ್ನು ವಿರಾಟ್ಪುರುಷನೆಂದು ಭಾವಿಸಬೇಕು.

ಭಕ್ತ ಅಥವ ಜ್ಞಾನಿಗೆ ಜಡಪದಾರ್ಥವೆಂಬುದೇ ಇಲ್ಲವು. ಪ್ರತಿ ಯೊಂದೂ ವಾಸುದೇವ ಅಥವ ಚೈತನ್ಯವು — "ವಾಸುದೇವಃ-ಸರ್ವಂ-ಇತಿ". ಭಕ್ತನು ತನ್ನ ದೇವರನ್ನು ಮೂರ್ತಿಯಲ್ಲಿ ಸಾಕ್ಷಾತ್ತಾಗಿ ಕಂಡುಕೊಳ್ಳುವನು. ಒಬ್ಬ ರಾಜನಿಂದ ನರಸೀಮೆಹ್ತಾ ಪರೀಕ್ಷೆಗೆ ಒಳಪಡಿಸಲ್ಪಟ್ಟನು. "ಎಲೈ ನರಸೀ, ನೀನು ಶ್ರೀಕೃಷ್ಣನ ನಿಜವಾದ ಭಕ್ತನಾದರೆ, ನೀನು ಹೇಳುವಂತೆ ವಿಗ್ರಹವು ದೇವರೇ ಆದರೆ ಎಲ್ಲಿ ಈ ವಿಗ್ರಹವು ಚಲಿಸಲಿ," ಎಂದು ರಾಜನು ಹೇಳಿದನು. ನರಸೀಮೆಹ್ತನ ಪ್ರಾರ್ಥನೆಯಂತೆ ವಿಗ್ರಹವು ಚಲಿಸಲಾರಂಭಿ ಸಿತು. ಶಿವನ ಮುಂದೆ ಕುಳಿತುಕೊಂಡಿರುವ ನಂದಿಯು ತುಳಸೀದಾಸನಿಂದ ಅರ್ಪಿಸಲ್ಪಟ್ಟ ಆಹಾರವನ್ನು ಸೇವಿಸಿತು. ಮೀರಾಬಾಯಿಯೊಡನೆ ಶ್ರೀಕೃಷ್ಣ ಮೂರ್ತಿಯು ಆಟವಾಡಿತು. ಅವಳ ಪಾಲಿಗೆ ಆ ಮೂರ್ತಿಯು ಚೈತನ್ಯ ಪೂರ್ಣವಾಗಿದ್ದಿತು.

ಹಿಂದೂ ಪೂಜಾ ರೀತಿ ಮತ್ತು ತತ್ತ್ವವು ಎಷ್ಟು ದಿವ್ಯವಾದುದು! ಅದು ವಿಗ್ರಹಾರಾಧನೆಯಲ್ಲೇ ಪರ್ಯವಸಾನವಾಗುವುದಿಲ್ಲ. ಸಾಧಕನು ಹಂತ ಹಂತವಾಗಿ ಭಕ್ತಿಯಲ್ಲಿ ಮುಂದುವರೆಯುತ್ತಾ ವಿಗ್ರಹಾರಾಧನೆಯ ಮೂಲಕವೇ ಸಮಾಧಿಯನ್ನು ಹೊಂದಲು ಸಹಾಯವಾಗುವದು. ಮೂರ್ತಿ ಪೂಜೆಯನ್ನು ಮಾಡಿದರೂ ಸರ್ವವ್ಯಾಪಿಯಾದ ಪ್ರಭುವನ್ನು ಒಳಗಣ್ಣಿನ ಮುಂದೆ ನಿಲ್ಲಿಸಿಕೊಂಡಿರಬೇಕು. ಎಲ್ಲ ವಸ್ತುಗಳಲ್ಲಿ, ತನ್ನ ಹೃದಯದಲ್ಲಿ

ಭಗವಂತನ ಸತ್-ರೂಪವನ್ನು ಚಿಂತಿಸಬೇಕು. ಹಿಂದೂಗಳ ಪೂಜಾ ವಿಧಾನವು ಮತ್ತು ಪೂಜಾ ರಹಸ್ಯಗಳು ವಿವರವಾಗಿರುವ ಪವಿತ್ರ ಗ್ರಂಥಗಳು ಬಹಳ ಕ್ರಮಬದ್ಧವೂ, ವೈಜ್ಞಾನಿಕವೂ, ವಿಚಾರಪೂರ್ಣವೂ ಆಗಿವೆ. ಅಜ್ಞಾನೀ ಜನರು ಮಾತ್ರ, ವೇದ ಶಾಸ್ತ್ರಗಳನ್ನು ಓದದೆ, ಸತ್ಸಂಗವನ್ನು ಮಾಡದೆ ಮೂರ್ತಿಪೂಜೆಯನ್ನು ಹಳಿಯುವರು.

ಆಂಗ್ಲ ವಿದ್ಯಾಭ್ಯಾಸ ಮಾಡಿರುವವರನೇಕರು, ಮಹಾತ್ಮನಿಂದ ಪಡೆದ ಪ್ರಸಾದಕ್ಕೆ ಯಾವ ಪ್ರಾಮುಖ್ಯತೆಯನ್ನೂ ನೀಡುವುದಿಲ್ಲ. ಇದೊಂದು ಮಹದಪರಾಧವು. ಪ್ರಸಾದವು ಪವಿತ್ರತೆಯನ್ನುಂಟುಮಾಡುವುದು. ಅವರುಗಳು ಪಾಶ್ಚಾತ್ಯ ರೀತಿಯಲ್ಲಿ ತಮ್ಮ ಜೀವನವು ಬೆಳೆಸಲ್ಪಟ್ಟಿರುವುದರಿಂದ ಪಾಶ್ಚಿಮಾತ್ಯ ಮನೋಭಾವದಿಂದ, ತಾವು ಭಾರತದ ಶ್ರೇಷ್ಠ ಋಷಿಗಳ ಸತ್ಸಂತಾನಕ್ಕೆ ಸೇರಿದವರೆಂಬುದನ್ನು ಮರೆತಿರುವರು. ಬೃಂದಾವನ, ಅಯೋಧ್ಯ, ಕಾಶಿ, ಅಥವ ಪಂಢರಪುರದಲ್ಲಿ ಒಂದು ವಾರ ವಾಸಮಾಡಿರಿ. ಪ್ರಸಾದದ ಅದ್ಭುತ ಮಹಿಮೆಯನ್ನು ಮತ್ತು ಪರಿಣಾಮವನ್ನು ಅರಿತುಕೊಳ್ಳುವಿರಿ. ಗುಣಪಡಿಸಲಾಗದಿದ್ದ ಹಲವು ರೋಗಗಳು ಗುಣವಾಗುವುವು. ಕೇವಲ ಪ್ರಸಾದ ಒಂದರಿಂದಲೇ ಶ್ರದ್ಧಾನ್ವಿತರಾದ ಭಕ್ತರು ಅತ್ಯಾಶ್ಚರ್ಯಕರವಾದ ಆಧ್ಯಾತ್ಮಿಕ ಅನುಭವಗಳನ್ನು ಪಡೆಯುವರು. ಪ್ರಸಾದವು ಸರ್ವರೋಗಾಪಹಾರಿಯು. ಪ್ರಸಾದವು ಆಧ್ಯಾತ್ಮಿಕ ದಿವ್ಯೌಷಧ. ಪ್ರಸಾದವು ಭಗವಂತನ ಕೃಪೆಯು. ಪ್ರಸಾದವು ರಾಜೌಷಧವು ಮತ್ತು ತನ್ನೊಡನೆ ತೆಗೆದುಕೊಂಡು ಹೋಗಬೇಕಾದುದು. ಪ್ರಸಾದವು ಒಂದು ದಿವ್ಯಶಕ್ತಿಯ ಪ್ರತೀಕವು. ಪ್ರಸಾದವು ದಿವ್ಯತೆಯ ಅಭಿವ್ಯಕ್ತತೆಯು.

ಶ್ರೀಕೃಷ್ಣ ಭಕ್ತರು ಪ್ರತಿಯೊಂದು ರೂಪವನ್ನೂ ಕೃಷ್ಣ ರೂಪವೆಂದು ಭಾವಿಸಬೇಕು. ತಮ್ಮ ಮುಂದೆ ಕೊಲೆಗಾರನೊಬ್ಬನು ತಮ್ಮನು ಕೊಲ್ಲುವುದಕ್ಕಾಗಿ ಬಂದು ನಿಂತಿರುವಾಗಲೂ ಈ ದೃಷ್ಟಿ ಅಥವ ಭಾವವನ್ನು ಬದಲಾಯಿಸಬಾರದು. ಈ ಭಾವದಲ್ಲಿ ಸ್ಥಿರವಾದ ಮನಸ್ಸುಳ್ಳವರಿಗೆ, ಕೊಲೆಪಾತಕಿಯ ಸ್ವಭಾವವೇ ಬದಲಾಯಿಸುವುದು ಅಥವ ಇನ್ಯಾವನಾದರೂ ಕೊಲೆಗಡುಕನನ್ನು ಕೊಲ್ಲುವನು. ಭಾವ ಬದಲಾಯಿಸುವಂತಾದರೆ, ಅದನ್ನು ಮೇಲಿಂದ ಮೇಲೆ ಅಭ್ಯಾಸಮಾಡಬೇಕು.

ಭಗವಂತನ ಸಾನ್ನಿಧ್ಯವನ್ನು ಮನಸ್ಸಿಗೆ ತಂದುಕೊಳ್ಳಿ. ಎಲ್ಲೆಲ್ಲಿಯೂ ಅವನ ಇರುವಿಕೆಯನ್ನು ಗುರುತಿಸಿ. ನೀವು ನಡೆದ ಕಡೆಗೆಲ್ಲಾ ಅವನ ರೂಪ ವನ್ನು ಧರಿಸಿ ನಡೆಯಿರಿ. ಸದಾ ಅವನನ್ನು ಸ್ಮರಿಸುತ್ತಿರಿ. ಅವನಲ್ಲಿಯೇ ಬದುಕಿರಿ. ನೀವು ಹಲವು ಗ್ರಂಥಗಳನ್ನು ಓದಬೇಕಾಗಿಲ್ಲವು. ಗುರುಗಳನ್ನು ಹುಡುಕುತ್ತಾ ಅಲೆಯಬೇಕಾಗಿಲ್ಲವು. ಹನ್ನೆರಡು ವರ್ಷಕಾಲ ತಲೆಯ ಮೇಲೆ ನಿಂತಿರುವ ಅವಶ್ಯಕವಿಲ್ಲವು. ಕುಂಡಲಿನಿಯನ್ನು ತೆರೆಯಲು ಅಶ್ವಿನಿ ಮುದ್ರೆ ಯನ್ನು ಮಾಡಬೇಕಾಗಿಲ್ಲವು. ನಾನು ನಿಮಗೆ ಎಲ್ಲ ಸಾಧನೆಗಳ ಸಾರವನ್ನೂ ಕೊಟ್ಟಿರುವೆನು. ಅದು ಎಲ್ಲ ವೇದಗಳ ಸಾರವು. ಅದನ್ನು ಅಭ್ಯಾಸಮಾಡಿ. ನನ್ನನ್ನು ನಂಬಿರಿ. ಅದು ಬಹಳ ಸುಲಭವು. ಅದು ನಿಶ್ಚಯವಾಗಿ ನಿಮಗೆ ಮೋಕ್ಷವನ್ನು ಕೊಡುವುದು. ನಾನು ನಿಮಗೆ ಆಶ್ವಾಸನೆ ಕೊಡುತ್ತೇನೆ.

ಹಿರಣ್ಯಗರ್ಭನ -ಉಪಾಸನೆ ಮಾಡಿದವರು ಬ್ರಹ್ಮಲೋಕ ಅಥವ ಸತ್ಯ ಲೋಕಕ್ಕೆ ಹೋಗುವರು. ಅಲ್ಲಿ ಬ್ರಹ್ಮನ ಆಯುಸ್ಸಿರುವವರೆಗೆ ಕಾಯುವರು. ಮಹಾಪ್ರಲಯಕಾಲದಲ್ಲಿ ಬ್ರಹ್ಮಾಂಡವು ಲಯವಾದಾಗ ಅವರು ಹಿರಣ್ಯಗರ್ಭ ನೊಡನೆ ದಿವ್ಯಾತ್ಮ ಅಥವ ಪರಬ್ರಹ್ಮದಲ್ಲಿ ಒಂದಾಗುವರು. ಆಗಮಾತ್ರ ಅವರ ಜೀವಭಾವವು ನಷ್ಟವಾಗುವುದು. ಹಿರಣ್ಯಗರ್ಭ ಉಪಾಸನೆ ಎಂದರೆ ಈಶ್ವರ ತತ್ತ್ವದ ಉಪಾಸನೆ.

ಸಗುಣ ಬ್ರಹ್ಮೋಪಾಸನೆಯು ದುರಂತಗಳನ್ನು ನಾಶಮಾಡುವುದು. ಭಕ್ತನಿಗೆ ಬೇಡದಿದ್ದರೂ ಸಿದ್ಧಿಗಳು ತಾವಾಗಿ ಪ್ರಾಪ್ತವಾಗುವುವು. ಸಿದ್ಧಿಗಳು ಅವನ ಪದತಲದಲ್ಲಿ ಉರುಳಾಡುವುವು. ಅನುಕ್ರಮವಾಗಿ ಮುಂದುವರೆದು ಬಿಡುಗಡೆಯನ್ನು ಹೊಂದುವನು. ಇದನ್ನು ಕ್ರಮಮುಕ್ತಿ ಎನ್ನುವರು. ಇದು ಜ್ಞಾನಿಯು ಪಡೆಯುವ ಸದ್ಯೋ ಮುಕ್ತಿಗಿಂತ ವಿಲಕ್ಷಣವಾದುದು. ಭಕ್ತನು ಪ್ರಥಮತಃ ಬ್ರಹ್ಮಲೋಕವನ್ನು ಹೊಂದಿ ನಂತರ ನಿರ್ಗುಣ ಬ್ರಹ್ಮ ವನ್ನು ಪ್ರವೇಶಿಸುವನು. ಇದನ್ನು ಕ್ರಮಮುಕ್ತಿ ಎಂದು ಕರೆಯುವರು. ಜ್ಞಾನಿಯು ನಿರ್ಗುಣ ಬ್ರಹ್ಮವನ್ನು ನೇರವಾಗಿ ಪ್ರವೇಶಿಸುವನು. ಇವೆರಡರ ವೈಲಕ್ಷಣ್ಯವು ಇದೇ.

ಭಗವಂತನ ದಿವ್ಯ ಮೂರ್ತಿಯು ಸ್ಪಷ್ಟವಾಗಿ ಗೋಚರಿಸುವವರೆಗೂ ಸಗುಣೋಪಾಸಕರು ತೆರೆದ ಕಣ್ಣಿನಿಂದ ತ್ರಾಟಕವನ್ನು ಅಭ್ಯಾಸಮಾಡುತ್ತಿರ

ಬೇಕು. ಅನಂತರ ಮುಚ್ಚಿದ ಕಣ್ಣಿನಿಂದ ಮೂರ್ತಿಯನ್ನು ದೃಷ್ಟಿಸಬಹುದು. ಮೂರ್ತಿಯು ಕಣ್ಣಿಗೂ, ಮನಸ್ಸಿಗೂ ಸುಂದರವಾಗಿರಬೇಕು. ಅದಕ್ಕೆ ತಕ್ಕುದಾದ ಸುಂದರವಾದ ಹಿನ್ನೆಲೆಯೂ ಅವಶ್ಯಕವು. ನಿಮ್ಮ ಇಷ್ಟದೈವದ ಸುಂದರ ರೂಪವನ್ನು ಭಾವಿಸಿದಮೇಲೆ ಧ್ಯಾನದ ಮೂಲಕ ಆ ಒಂದು ಮೂರ್ತಿಯನ್ನೇ ಧರಿಸಿರಬೇಕು. ಮೂರ್ತಿಯ ರೂಪವನ್ನು ಬದಲಾಯಿಸು ವುದರ ಮೂಲಕ ಚಿತ್ತೈಕಾಗ್ರತೆಗೆ ಭಂಗವನ್ನುಂಟುಮಾಡದಿರಿ. ಒಂದೇ ರೂಪಕ್ಕೆ ಮನಸ್ಸನ್ನು ಚೆನ್ನಾಗಿ ಹತ್ತಿಸಿ, ಸಾಧನೆಯನ್ನು ಬಲಪಡಿಸಿ, ತ್ರಾಟಕ ವನ್ನು ಮೇಲಿಂದ ಮೇಲೆ ಅಭ್ಯಸಿಸುತ್ತಾ ದೃಷ್ಟಿಯ ನಿಲುಗಡೆಯಿಂದ ರೂಪ ಧಾರಣಮಾಡಿರಿ. ಅಭ್ಯಾಸಬಲದಿಂದ ಮಾನಸಿಕ ಮೂರ್ತಿಯು ನಿಮ್ಮ ಮನಸ್ಸಿನಲ್ಲಿ ಸುಲಭವಾಗಿ ತೋರುವದು. ಕೆಲವು ವೇಳೆ ಮಂತ್ರವನ್ನಾದರೂ ಬೇರೆ ಹೇಳಿಕೊಳ್ಳಬಹುದು. ಆದರೆ ಮನಸ್ಸಿಗೆ ಬಳಲಿಕೆ ಎಂದು ಅಥವ ವೈವಿಧ್ಯತೆ ಬೇಕೆಂದು ಮೂರ್ತಿ ಅಥವ ಭಾವವನ್ನು ಬದಲಾಯಿಸಬೇಡಿರಿ. ಕಣ್ಣುಮುಚ್ಚಿದಾಗ ಭಗವದ್ರೂಪವನ್ನು ನೀವು ನೋಡಲಾಗದಿದ್ದರೆ ಚಿಂತಿಸ ಬೇಡಿರಿ. ನೀವು ಸಾಧನೆಯನ್ನು ಕ್ರಮತಪ್ಪದಂತೆ ಸಂತತವಾಗಿ ಮುಂದುವರಿಸಿ. ನೀವು ಜಯಗಳಿಸುವಿರಿ. ಬೇಕಾಗಿರುವ ಏಕಮಾತ್ರ ಸಾಧನವೆಂದರೆ ಭಗವಂತ ನಲ್ಲಿ ಪ್ರೇಮ. ಇದನ್ನು ಹೆಚ್ಚು ಹೆಚ್ಚು ಅಭ್ಯಸಿಸಿ. ಅದು ನಿರಂತರವಾಗಿ, ನೈಜವಾಗಿ ಪ್ರವಹಿಸಲಿ. ಇದು ಭಗವದ್ದರ್ಶನಕ್ಕಿಂತಲೂ ಪ್ರಮುಖವಾದುದು.

ಬರಿಯ ಬಣ್ಣದ ಅಥವ ಬಿಳಿಯ ಕಾಗದಕ್ಕೆ ಯಾವ ಬೆಲೆಯೂ ಇಲ್ಲ. ನೀವು ಅದನ್ನು ಬಿಸಾಡುವಿರಿ. ಆದರೆ ರಾಜನ, ಚಕ್ರವರ್ತಿಯ ಅಥವ ರಾಷ್ಟ್ರದ ಚಿಹ್ನೆಯಿದ್ದರೆ ನಿಮ್ಮ ಹಣದ ಚೀಲ ಅಥವ ಪೆಟ್ಟಿಗೆಯಲ್ಲಿ ಭದ್ರ ಪಡಿಸುವಿರಿ. ಹಾಗೆಯೇ ಸಾಮಾನ್ಯವಾದ ಕಲ್ಲು ನಿಮ್ಮ ದೃಷ್ಟಿಯಲ್ಲಿ ಬೆಲೆ ಯಿಲ್ಲದ್ದು. ಅದನ್ನು ಹೊರಗೆ ಬಿಸಾಡುವಿರಿ. ದೇವಾಲಯಗಳಲ್ಲಿ ನೀವು ಶ್ರೀಕೃಷ್ಣನ ಶಿಲಾಮೂರ್ತಿಯನ್ನು ಅದರಲ್ಲೂ ಪಂಢರಪುರದಲ್ಲಿ ಕಂಡರೆ ಕೂಡಲೇ ಕೈಮುಗಿದು ತಲೆಬಾಗಿಸುವಿರಿ, ಏಕೆಂದರೆ ಶಿಲೆಯಮೇಲೆ ಭಗವನ್ಮುದ್ರೆಯಿರುವುದು. ಭಕ್ತನು ಶಿಲಾಪ್ರತಿಮೆಯಲ್ಲಿ ತನ್ನ ಇಷ್ಟದೈವ ವನ್ನೂ ಆ ದೇವರ ಸದ್ಗುಣಗಳನ್ನೂ ಆರೋಪಿಸುವನು. ಆರಂಭದಲ್ಲಿ ಮೂರ್ತಿ ಪೂಜೆಯು ಸಾಧಕನಿಗೆ ಅವಶ್ಯಕವು.

ಪ್ರತಿಮಾ ಪೂಜೆಯಿಂದಲೂ ಈಶ್ವರನಿಗೆ ಸಂತೋಷವಾಗುವುದು. ಪ್ರತಿಮೆಯು ಪಂಚಭೂತಗಳಿಂದಾದುದು. ಪಂಚಭೂತಗಳು ಭಗವಂತನ ಶರೀರವು. ಮೂರ್ತಿಯು ಮೂರ್ತಿಯಾಗಿಯೇ ಉಳಿಯುವುದು. ಆದರೆ ಅರ್ಚನೆಯು ಭಗವಂತನಿಗೆ ಸೇರುವುದು. ಆರಂಭದಲ್ಲಿ ಮೂರ್ತಿಪೂಜೆಯು ದೋಷಯುಕ್ತವಲ್ಲ. ಪ್ರತಿಮೆಯಮೇಲೆ ಭಗವಂತನನ್ನೂ ಅವನ ಕಲ್ಯಾಣ ಗುಣಗಳನ್ನೂ ನೀವು ಆರೋಪಿಸಬೇಕಾಗುವುದು. ಆದರೆ ಪ್ರತಿಮೆಯಲ್ಲಿ ಅಡಗಿರುವ ಅಂತರಾತ್ಮವನ್ನು ನೀವು ಭಾವಿಸಬೇಕು.

ಭಾವಸಮಾಧಿಯಲ್ಲಿ ಭಕ್ತನ ಮನಸ್ಸು ಉತ್ಸಾಹ ಮತ್ತು ಪ್ರೇಮದಿಂದ ಉನ್ನತಿಗೇರುವುದು. ಅವನು ದೇಹ ಮತ್ತು ಜಗತ್ತನ್ನು ಮರೆಯುವನು. ಅವನ ಮನಸ್ಸು ದೇವರಲ್ಲಿ ಸಂಪೂರ್ಣವಾಗಿ ತನ್ಮಯ ವಾಗಿರುವುದು.

ದಿವ್ಯವಾಣಿಯನ್ನು ಶಾಂತಿಯಿಂದ ಆಲಿಸಿರಿ. ಶ್ರದ್ಧೆಯ ಶಕ್ತಿಯನ್ನು ಕಂಡುಕೊಳ್ಳಿ. ದೇವರು ದಯೆಗೆ ಆಧಾರನೆಂದು ಭಾವಿಸಿರಿ. ಪಾರಾಗುವ ಪಥವನ್ನು ಅರಿತುಕೊಳ್ಳಿ. ನಿಮ್ಮ ಹೃದಯದೊಳಗೆ ಪ್ರೇಮಮಂದಿರವನ್ನು ಅಥವ ಭಕ್ತಿಯ ದೇವಾಲಯವನ್ನು ನಿರ್ಮಿಸಿ, ಶಾಂತಿಯನ್ನು ಪ್ರವೇಶಿಸಿ. ಪರಮಾನಂದವನ್ನು ಅನುಭವಿಸಿ.

ಈ ಜಗತ್ತು, ದೇಹ ಮತ್ತು ಎಲ್ಲವನ್ನೂ ಮರೆಯಿರಿ. ದೇವರನಾಮದ ಮಹಿಮೆಯನ್ನು ಕುರಿತು ಧ್ಯಾನಿಸಿ ಅವನ ನಾಮದಲ್ಲಿ ನೆಲಸಿರಿ ಮತ್ತು ಮುಳುಗಿರಿ. ಅವನ ನಾಮವು ಲಕ್ಷಾಂತರ ಜನರನ್ನು ಜನನ ಮರಣಗಳಿಂದ ರಕ್ಷಿಸುವುದು. ಆದ್ದರಿಂದ ಭಗವನ್ನಾಮದಲ್ಲಿ ರುಚಿಯನ್ನು ಬೆಳೆಸಿಕೊಳ್ಳಿ. ನೀವು ಆಹಾರದಿಂದ ಮಾತ್ರ ಬದುಕಲಾರಿರಿ, ಆದರೆ ಶ್ರೀಕೃಷ್ಣನಾಮದಿಂದ ಬದುಕಬಲ್ಲಿರಿ. ಎಲ್ಲ ವಿಧವಾದ ಶಕ್ತಿಗಳೂ ಅವನ ನಾಮದಲ್ಲಿ ಅಡಕವಾಗಿರು ವವು. ಸಂತತವಾದ ಸಂಕೀರ್ತನೆ ಪುರಶ್ಚರಣೆಯಿಂದ ದೇವರ ನಾಮದಲ್ಲಿ ಅಡಗಿರುವ ಮಂತ್ರ ಚೈತನ್ಯವನ್ನು ಜಾಗೃತಗೊಳಿಸಿರಿ ಮತ್ತು ಅವನೊಡನೆ ಸದಾ ಸಂಪರ್ಕವನ್ನು ಹೊಂದಿರಿ.

ಭಗವಂತನು ನಿಷ್ಪಕ್ಷಪಾತನು. ತಪ್ಪುಮಾಡುವವರನ್ನು ಸನ್ಮಾರ್ಗಕ್ಕೆ ತಂದು, ತಿದ್ದಿ, ವಿವೇಕಿಗಳಾಗಿಮಾಡಲು ಅವರನ್ನು ಶಿಕ್ಷಿಸುವನು. ತನ್ನ

ಮಕ್ಕಳು ಒಂದೇ ತಪ್ಪನ್ನು ಮತ್ತೆ ಮತ್ತೆ ಮಾಡುವುದನ್ನು ಅವನು ಮೆಚ್ಚುವುದಿಲ್ಲ. ಇದು ಭಗವಂತನ ದಯೆಯು ಮತ್ತು ಪ್ರೇಮವು.

ಭಗವಂತನ ರೀತಿಯು ವಿಚಿತ್ರವಾದುವು. ನೋವು, ಕ್ಲೇಷ, ರೋಗ, ನಷ್ಟ, ನಿರಾಸೆ, ಸೋಲು ಮುಂತಾದುವು ದೇವರು ಪರೋಕ್ಷವಾಗಿ ನೀಡುವ ಆಶೀರ್ವಾದಗಳು. ಏಕೆಂದರೆ ಸಹಿಷ್ಣುತೆಯ ಮೂಲಕ ಅವರನ್ನು ಬಲಿಷ್ಠರನ್ನಾಗಿ ಮಾಡಿ ತನ್ನ ಬಳಿಗೆ ಬರಮಾಡಿಕೊಳ್ಳುವನು. ನನ್ನ ಮುದ್ದು ರಾಮುನೇ! ದೇವರ ಸ್ವಭಾವವನ್ನು ಅರಿತು ಬುದ್ಧಿವಂತನಾಗು. ಬಾಳಿನಲ್ಲಿ ಬರುವ ಕ್ಷುದ್ರ ಘಟನೆಗಳಿಂದ ಚಿತ್ತ ಚಾಂಚಲ್ಯವನ್ನು ಹೊಂದಬೇಡ. ಬಲಶಾಲಿಯಾಗು. ವಿಕಸಿತನಾಗು.

ತನ್ನ ಪಾದಪದ್ಮಗಳಿಗೆ ಯಾವನನ್ನು ಬರಮಾಡಿಕೊಳ್ಳಲಿಚ್ಛಿಸುವನೋ ಅವನಿಗೆ ಐಶ್ವರ್ಯ, ಮಡದಿ ಮತ್ತು ಮಕ್ಕಳನ್ನು ಇಲ್ಲದಂತೆ ಮಾಡುವನು. ನನ್ನ ಪ್ರೀತಿಯ ಪ್ರೇಮ್! ಗೊಣಗಬೇಡ. "ನಿನ್ನ ಇಚ್ಛೆಯಿದ್ದಂತಾಗಲೀ, ಸ್ವಾಮಿ!" ಎಂದು ಧೈರ್ಯವಾಗಿ ನುಡಿ ಮತ್ತು ಆನಂದಪಡು. ಭಗವಂತನಲ್ಲಿ ಪೂರ್ಣವಿಶ್ವಾಸವನ್ನಿಡು. ಶ್ರದ್ಧೆಯಿಂದ ದುಡಿ, ಉಳಿದುದನ್ನು ದೇವರಿಗೆ ಬಿಡು.

ಯಾವುದರಿಂದಲೂ ನೀವು ಹತಾಶರಾಗಬೇಡಿ. ತಪಸ್ಸಿನಿಂದ ಏನನ್ನು ಬೇಕಾದರೂ ಸಾಧಿಸಬಹುದು. ಗೀತೆಯ ಒಂಭತ್ತನೇ ಅಧ್ಯಾಯದ ಮುವತ್ತೊಂದನೇ ಶ್ಲೋಕದಲ್ಲಿ ಭಗವಂತನು ನೀಡಿರುವ ಆಶ್ವಾಸನೆಯು ಹೀಗಿದೆ, "ಕೌಂತೇಯ ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ" ಎಂದರೆ "ಕೌಂತೇಯನೆ, ನನ್ನ ಭಕ್ತನು ಎಂದಿಗೂ ನಾಶವಾಗುವುದೇ ಇಲ್ಲವೆಂಬುದನ್ನು ನಿಶ್ಚಯವಾಗಿ ತಿಳಿದುಕೋ." ಸದಾ ಸಂತೋಷಚಿತ್ತದಿಂದಿರು. ನೀವು ಶ್ರೀಕೃಷ್ಣನ ಭಕ್ತರಾದಮೇಲೆ ದುಃಖಕ್ಕೆ ಎಡೆ ಎಲ್ಲಿದೆ? ಅವನು ತನ್ನ ಭಕ್ತರಿಗೆ ಸರ್ವಸ್ವವನ್ನೂ ನೀಡುವನು. ನಿಮ್ಮ ಸಾಧನೆಯನ್ನು ಮಾಡುತ್ತಾ ಇರಿ. ನಿಮ್ಮ ಆಯುಸ್ಸನ್ನು ಸರಿಯಾಗಿ ವಿನಿಯೋಗಿಸಿರಿ. ನಿಮ್ಮ ಆರ್ಜವತೆ ಮತ್ತು ಸರಳತೆಯು ನಿಮ್ಮ ಆಧ್ಯಾತ್ಮಿಕ ಸಂಪತ್ತುಗಳು. ಭವ್ಯವಾದ ಭವಿಷ್ಯವು ನಿಮಗಾಗಿ ಕಾದಿರುವುದು. ವಿರಾಮವಿಲ್ಲದೆ ಕಷ್ಟಪಟ್ಟು ಮುಂದೆ ನಡೆಯಿರಿ. ಧೃಢವಾಗಿ ಪ್ರಯೋಗಿಸಿರಿ. ದಾನವನ್ನು ಹೆಚ್ಚಿಸಿ. ಅಸಂಖ್ಯಾತ ಪಾಪ

ಸಂಕುಲಗಳನ್ನು ದಾನವು ನಾಶಗೊಳಿಸುವುದು. ಅದು ಹೃದಯವನ್ನು ಹೆಚ್ಚು ಶುದ್ಧಿಗೊಳಿಸುವುದು. "ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್"—ಎಂದು ಗೀತೆಯಲ್ಲಿದೆ [ಅಧ್ಯಾಯ ೧೮, ಶ್ಲೋಕ ೫].

ನೀವು ನನ್ನ ಆಧ್ಯಾತ್ಮ ಸೂಚನೆಗಳನ್ನು ಸರಿಯಾಗಿ ಪಾಲಿಸುತ್ತಿಲ್ಲವಾದುದರಿಂದ ನಿಮ್ಮ ಆಧ್ಯಾತ್ಮಿಕ ಮುನ್ನಡೆಯು ದುರ್ಬಲವಾಗಿದೆ. ಶ್ರದ್ಧಾಮಯವಾದ ಪ್ರಯತ್ನದ ಆವಶ್ಯಕತೆಯು ನಿಮಗೆ ಹೆಚ್ಚು ಬೇಕಾಗಿದೆ. ನೀವು ಶ್ರದ್ಧಾವಂತರಾಗಿದ್ದರೆ, ಅಧ್ಯಾತ್ಮ ಸಾಧನೆಯನ್ನು ಮಾಡಿದ್ದರೆ, ಒಂದಲ್ಲ ಒಂದು ರೀತಿಯಲ್ಲಿ ನಿಮಗೆ ಭಗವತ್ಕೃಪೆಯ ದಿವ್ಯಾನುಭವವು ಕಿಂಚಿತ್ತಾದರೂ ಆಗಬೇಕಾಗಿತ್ತು.

ಬೃಂದಾವನದ ಗೋಪಿಯರು ಶ್ರೀಕೃಷ್ಣನ ಪರಮಾಶ್ಚರ್ಯಕರವಾದ ಭಕ್ತರಾಗಿದ್ದರು. ಭಗವಂತನಲ್ಲಿ ತಾವು ಸಂಪೂರ್ಣ ಶರಣಾಗತರಾಗಿದ್ದರು. ಶ್ರೀಕೃಷ್ಣನು ಬೆಳದಿಂಗಳ ರಾತ್ರಿಯಲ್ಲಿ ಕೊಳಲನೂದಿದನು. ಗೋಪಿಯರು ಕೂಡಲೇ ತಮ್ಮ ಪ್ರಿಯತಮನ ಬಳಿಗೆ ಓಡಲಾರಂಭಿಸಿದರು. ಅವರುಗಳ ಮನಸ್ಸು ಕೃಷ್ಣಮಯವಾಗಿದ್ದುವು. ಅವರು ಕೊಳಲನಾದವನ್ನು ಕೇಳಿದೊಡನೆಯೇ ಎಲ್ಲವನ್ನೂ ಮರೆತರು.

ಪ್ರೇಮಪಥವು ನಿಜವಾಗಿ ದುರ್ಗಮವಾದುದು. ಅದು ಎರಡನ್ನು ಒಳಗೊಳ್ಳಲಾರದು. ಎಲ್ಲಿ 'ನಾನು' ಇದೆಯೋ, ಅಲ್ಲಿ 'ಸ್ವಾಮಿ' ಇರನು. ಎಲ್ಲಿ ದೇವರಿರುವನೋ, ಅಲ್ಲಿ 'ನಾನು' ಅದೃಶ್ಯವಾಗುವುದು.

---

## ೬. ಮಾನಸ ಪೂಜೆಯು

ಪುಷ್ಪಗಳಿಂದ ಮೂರ್ತಿಯನ್ನು ಬಾಹ್ಯದಲ್ಲಿ ಆರಾಧಿಸುವುದಕ್ಕಿಂತಲೂ ಮಾನಸಿಕ ಪೂಜೆಯು ಬಲನತ್ತರವಾದುದು. ಭೀಮನು ಯಾವ ಬಗೆಯ ಪೂಜೆಯನ್ನೂ ಮಾಡುತ್ತಿಲ್ಲವೆಂದು ಅರ್ಜುನನು ಭಾವಿಸಿದನು. ತಾನು ನಡೆಸುತ್ತಿದ್ದ ಶಿವನ ಬಾಹ್ಯ ಪೂಜೆಯಿಂದ ಅವನು ಹೆಮ್ಮೆಗೊಂಡಿದ್ದನು.

ಅವನು ಬಿಲ್ವಪತ್ರೆಗಳನ್ನು ಅರ್ಪಿಸುತ್ತಿದ್ದನು. ಆದರೆ ಭೀಮನು ವಿಶ್ವದ ಎಲ್ಲ ಬಿಲ್ವಗಳ ಬಿಲ್ವಪತ್ರೆಯನ್ನೂ ಶಿವನಿಗೆ ಮನಸ್ಸಿನಿಂದ ಅರ್ಪಿಸುತ್ತಿದ್ದನು. ಭೀಮನು ಶಿವಮಾನಸ ಪೂಜೆಯನ್ನು ಮಾಡುತ್ತಿದ್ದನು. ಭೀಮನು ಮನಃಪೂರ್ವಕ ಶಿವನ ಶಿರಸ್ಸಿಗೆ ಅರ್ಚಿಸುತ್ತಿದ್ದ ಬಿಲ್ವ ನಿರ್ಮಾಲ್ಯವನ್ನು ತೆಗೆಯುವುದೇ ಶಿವದೂತರಿಗೆ ಕಷ್ಟವಾಗುತ್ತಿತ್ತು. ಒಂದು ದಿನ ಅರ್ಜುನನು, ಬಿಲ್ವ ಪತ್ರೆಯ ಬುಟ್ಟಿಗಳನ್ನು ಸಾಲಾಗಿ ಹೊತ್ತು ನಡೆಯುತ್ತಿದ್ದವರನ್ನು ಕಂಡನು. ಆ ಬಿಲ್ವಪತ್ರೆಗಳು ತಾನು ಶಿವನಿಗೆ ಅರ್ಚನೆಮಾಡಿದ್ದುವೆಂದು ಭಾವಿಸಿ ಅವರನ್ನು ಪ್ರಶ್ನಿಸಿದನು, "ಸಹೋದರರೇ! ಈ ಬಿಲ್ವ ಪತ್ರೆಗಳನ್ನು ನೀವು ಎಲ್ಲಿಂದ ಹೊತ್ತು ತರುತ್ತಿರುವಿರಿ?" ಆಗ ಅವರು ಹೇಳಿದರು "ಎಲೈ ಅರ್ಜುನ! ಭೀಮನು ತನ್ನ ಶಿವಮಾನಸ ಪೂಜೆಯಲ್ಲಿ ಸಮರ್ಪಿಸಿದ ಬಿಲ್ವಪತ್ರೆಗಳಿವು" ಎಂದರು. ಅರ್ಜುನನಿಗೆ ಅತ್ಯಾಶ್ಚರ್ಯವಾಯಿತು. ಬಾಹ್ಯ ಪೂಜೆಗಿಂತ ಮಾನಸ ಪೂಜೆಯು ಉತ್ತಮವೆಂದೂ, ಭೀಮನು ತನಗಿಂತ ಶ್ರೇಷ್ಠ ಭಕ್ತನೆಂದೂ ಆಗ ಅರ್ಜುನನಿಗೆ ಅರಿವಾಯಿತು.

ಕೆಲವುಕಾಲ ಮನಸ್ಸಿಟ್ಟು ಧೂಪ, ದೀಪ, ಪುಷ್ಪಗಳಿಂದ ಪೂಜಿಸಿದವರು ಮಾನಸಿಕ ಪೂಜೆಮಾಡಬಲ್ಲರು. ಮಾನಸಿಕ ಪೂಜೆಯಲ್ಲಿ ಭಕ್ತನು ಎಲ್ಲವನ್ನೂ ಮರೆತು ಮನಃಪೂರ್ವಕವಾಗಿ ದೇವರನ್ನು ಪೂಜಿಸುವನು. ಇದು ಪೂಜೆಯಲ್ಲಿ ಮುಂದುವರೆದ ಕ್ರಮವು.

ಸಾಧನೆಯಲ್ಲಿ ಮುಂದುವರೆದ ಶಿಷ್ಯರು ಮಾನಸಿಕ ಪೂಜೆಯನ್ನು ಮಾಡಲು ಶಕ್ತರು. ಮಾನಸಿಕ ಪೂಜೆಯಲ್ಲಿ ನೀವು ಹೆಚ್ಚು ಏಕಾಗ್ರತೆಯನ್ನು ಹೊಂದುವಿರಿ. ರತ್ನಖಚಿತವಾದ ಸಿಂಹಾಸನವನ್ನು ಮನಸ್ಸಿನಲ್ಲಿ ಕಲ್ಪಿಸಿರಿ; ನಂತರ ಭಗವಂತನನ್ನು ಅದರಲ್ಲಿ ಕೂಡಿಸಿ. ಅವನ ಹಣೆ ಮತ್ತು ಮೈಗೆಲ್ಲಾ ಸುಗಂಧವನ್ನು ಹಚ್ಚಿರಿ. ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ವಿವಿಧ ಪುಷ್ಪಗಳು, ವಸ್ತ್ರ ಮುಂತಾದವುಗಳನ್ನು ಸಮರ್ಪಿಸಿ. ಧೂಪವನ್ನು ಹಾಕಿರಿ. ದೀಪವನ್ನು ಬೆಳಗಿ. ಕರ್ಪೂರವನ್ನು ಉರಿಸಿ. ನಾನಾವಿಧವಾದ ಹಣ್ಣುಗಳನ್ನು ಭಕ್ಷ್ಯಭೋಜ್ಯಗಳನ್ನು ಮತ್ತು ಮಹಾನೈವೇದ್ಯವನ್ನು ಸಮರ್ಪಿಸಿ. ಇಡೀ ವಿಶ್ವದಲ್ಲಿ ಪ್ರಾಪ್ತಿಯಾಗುವ ಸರ್ವ ಕರ್ಮಫಲಗಳನ್ನೂ ಸರ್ವೇಶ್ವರನಿಗೆ ಸಮರ್ಪಿಸಿ.

ಮಾನಸಿಕ ಪೂಜೆಯಲ್ಲೂ ಲೋಭಿಗಳಾಗಬೇಡಿ. ಅದರಲ್ಲಿ ಒಬ್ಬನು ಒಂದು ಅತ್ಯಂತ ಕಳಿತ ಹಣ್ಣನ್ನು ಹಿಡಿ ಧಾನ್ಯವನ್ನು ಮಾತ್ರ ಅರ್ಪಿಸಿದನು. ಅವನು ಎಂತಹ ಕೃಪಣನು ! ಮಾನಸಿಕ ಪೂಜೆಯಲ್ಲೂ ಅವನು ಧಾರಾಳಿಯೂ, ಉದಾರನೂ ಆಗಲಿಲ್ಲವಲ್ಲ ! ಈ ಜಗತ್ತು ಇಂತಹ ಕೃಪಣರಿಂದಲೇ ಹೆಚ್ಚಾಗಿ ತುಂಬಿದೆ. ಕೊನೆಯಲ್ಲಿ ಮನಸ್ಸಿನಲ್ಲೇ ಉಚ್ಚರಿಸಿ : "ಕಾಯೇನ ವಾಚಾ ಮನಸೇಂದ್ರಿಯೈರ್ವಾ, ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ । ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ" "ದೇಹ, ಮಾತು, ಮನಸ್ಸು, ಇಂದ್ರಿಯ, ಬುದ್ಧಿ ಮತ್ತು ಸ್ವಭಾವದಿಂದ ಮಾಡಿದ ಸಮಸ್ತ ಕರ್ಮಗಳನ್ನು ನಾರಾಯಣನಿಗೆ ಸಮರ್ಪಿಸಿರುವೆನು" ಎಂದೂ ನಂತರ "ಓಂ ತತ್ಸತ್ ಬ್ರಹ್ಮಾರ್ಪಣಮಸ್ತು" ಎಂದೂ ಹೇಳಿರಿ. ಇದು ನಿಮ್ಮ ಹೃದಯವನ್ನು ಪರಿಶುದ್ಧಗೊಳಿಸುವುದಲ್ಲದೆ, ಕರ್ಮಫಲಾಭಿಲಾಷೆಯನ್ನು ಕಳೆಯುವುದು.

---

# 5

# ಭಕ್ತಿಯೋಗವು

## ೧. ಭಕ್ತಿ ಎಂದರೇನು ?

ಭಕ್ತಿಯು 'ಭಜ್' ಎಂಬ ಪದದಿಂದ— ಎಂದರೆ ಭಗವಂತನಿಗೆ 'ಸೇರಿಕೊಂಡಿರು' ಎಂಬುದರಿಂದಾಗಿದೆ. ಅದು ನಿಸ್ವಾರ್ಥ ಪ್ರೇಮವು, ಗೌರವಯುತವಾದುದು. ಭಕ್ತಿಯು ಎಲ್ಲ ಧಾರ್ಮಿಕ ಜೀವನದ ಮೂಲವು. ಭಕ್ತಿಯು ಅಹಂಕಾರ ಮತ್ತು ವಾಸನೆಗಳನ್ನು ನಾಶಗೊಳಿಸುವದು. ಮನಸ್ಸನ್ನು ಶ್ರೇಷ್ಠಮಟ್ಟಕ್ಕೆ ಕೊಂಡೊಯ್ಯುವುದಲ್ಲದೆ ವಿಕಾಸಗೊಳಿಸುವುದು. ಜ್ಞಾನ ಭವನದ ಬಾಗಿಲನ್ನು ತೆರೆಯಲು ಭಕ್ತಿಯು ಭವ್ಯವಾದ ಬೀಗದಕ್ಕೈ. **ಭಕ್ತಿಯು ಜ್ಞಾನದಲ್ಲಿ ಪರಿಸಮಾಪ್ತಿಯನ್ನು ಹೊಂದುವದು.** ಭಕ್ತಿಯು ಎರಡರಿಂದ ಆರಂಭವಾಗಿ ಒಂದರಲ್ಲಿ ಮುಕ್ತವಾಗುವದು. ಈ ವಿಷಯದಲ್ಲಿ— 'ಭಕ್ತಿ, ಮತ್ತು ಜ್ಞಾನದಲ್ಲಿ ಯಾವುದು ಶ್ರೇಷ್ಠ' ಎಂದು ಯಾರು ಚರ್ಚಿಸುವರೋ ಅವರು ಕತ್ತಲೆಯಲ್ಲಿ ತಡಕಾಡುತ್ತಿರುವರು. ಅವರು ನಿಜ ತತ್ತ್ವವನ್ನು ಸರಿಯಾಗಿ ಅರಿತುಕೊಂಡೇ ಇಲ್ಲವು. **ಪರಾಭಕ್ತಿ ಮತ್ತು ಜ್ಞಾನವು ಒಂದೇ.**

ಅನುರಾಗ ರೂಪವಾದ ಭಕ್ತಿಯು ಭಗವತ್ಸಾಕ್ಷಾತ್ಕಾರವನ್ನುಂಟು ಮಾಡುವುದು. ಅನುರಾಗವು ದೃಢವಾದಷ್ಟೂ ಶೀಘ್ರವಾಗಿ ಸಾಕ್ಷಾತ್ಕಾರ ವಾಗುವುದು. ಪ್ರಹ್ಲಾದನ ಪ್ರಾರ್ಥನೆ ಹೀಗಿದೆ: "ಭಗವಾನ್ ಹರಿಯೇ! ಪ್ರಾಪಂಚಿಕರು ನಶ್ವರವಾದ ವಸ್ತುಗಳಲ್ಲಿ ಎಷ್ಟು ಆಸಕ್ತಿವುಳ್ಳವರೋ ಅಷ್ಟೇ

ಗಾಢವಾದ ಪ್ರೇಮವನ್ನು ನಾನು ನಿನ್ನಲ್ಲಿ ಹೊಂದಿರುವಂತೆ ಕರುಣಿಸು. ನಾನು ನಿನ್ನನ್ನು ಚಿಂತಿಸುವಾಗ ಆ ದಿವ್ಯಾನಂದವು ನನ್ನ ಹೃದಯದಿಂದ ಅದೃಶ್ಯವಾಗ ದಿರಲಿ." ಎಷ್ಟು ಸುಂದರವಾದ ಭಕ್ತಿಯ ವಿವರಣೆ! ಪ್ರಹ್ಲಾದನ ಹೃದ ಯಾಂತರಾಳದಿಂದ ಈ ಭಾವನೆಗಳು ಹೊರಬಂದಿವೆ. ಅವು ಭಾವ ಮತ್ತು ಭಕ್ತಿಪೂರ್ಣವಾಗಿವೆ.

ಸುಂದರವಾದ ವಸ್ತುವನ್ನು ಪಡೆಯುವುದು ಸುಲಭವು. ದೇವರು ಸೌಂದರ್ಯಗಳ ಸೌಂದರ್ಯವು. ಅವ್ಯಯವಾದ ಸೌಂದರ್ಯದ ಪ್ರತೀಕವು ಪರಮಾತ್ಮನು. ಆದ್ದರಿಂದ ಪರಮಾತ್ಮನನ್ನು ಪ್ರೀತಿಸುವುದು ಸುಲಭವು.

ಮರ್ತ್ಯರಾದ ಪತ್ನೀಪುತ್ರರಲ್ಲಿ ಅನುರಾಗ ಉಳ್ಳವರಾದರೆ, ಅವರ ಮರಣ ದಿಂದ ನಿಮಗೆ ತೀವ್ರ ದುಃಖವಾಗುವುದು. ನೀವು ಪರಿಪೂರ್ಣನಾದ ಪರಮಾತ್ಮನಲ್ಲಿ ಅನುರಾಗವುಳ್ಳವರಾದರೆ ನಿತ್ಯ, ಪೂರ್ಣ, ಶಾಂತಿಮಯ ಆನಂದ ವನ್ನು ಅನುಭವಿಸುವಿರಿ. ಅವಿನಾಶಿಯೂ, ಪರಿಪೂರ್ಣವೂ ಆದ ಭಗವಂತ ನನ್ನೇ ಪಡೆಯಲು ಭಕ್ತನು ಹಂಬಲಿಸುವನು.

ಪ್ರೇಮವಿಲ್ಲದ ಮನುಷ್ಯನ ಬಾಳು ಶೂನ್ಯ. ಅವನ ಬದುಕು ವ್ಯರ್ಥ. ಪ್ರೇಮವು ಸತ್ತ್ವಪೂರ್ಣವು. ಅದು ಸರ್ವವ್ಯಾಪಿಯು, ಬಹಳ ಬಲಶಾಲಿಯು, ಬದುಕಿನ ಅಂತಸ್ಸಾರವು. ಪ್ರೇಮವನ್ನು ನೀಡಿ, ಪ್ರೇಮವನ್ನು ಪಡೆಯಿರಿ. ಸೇವೆ, ಜಪ, ಸತ್ಸಂಗ ಮತ್ತು ಧ್ಯಾನದ ಮೂಲಕ ಪ್ರೇಮವನ್ನು ಬೆಳಸಿ.

ಮಾನವ ಪ್ರೇಮವು ಟೊಳ್ಳಾದುದು. ಅದು ಹೆಚ್ಚಾಗಿ ಮೃಗಾ ಕಾಂಕ್ಷೆಯು, ಕಾಮವು, ಇಂದ್ರಿಯಲೋಲುಪತೆಯು, ನಿರಂತರ ಬದಲಾಯಿಸು ವಿಕೆಯು, ಕಪಟಾಚರಣೆಯು ಮತ್ತು ತೋರಿಕೆಯು ಮಾತ್ರ. ಪತಿಯು ನಿರುದ್ಯೋಗಿಯಾಗಿರುವಾಗ ಪತ್ನಿಯು ಅವನನ್ನು ಗೌರವಿಸುವುದಿಲ್ಲವು. ಅವನ ಮೇಲೆ ಸಿಡುಕುವಳು. ಪತ್ನಿಯು ತೀವ್ರಖಾಯಿಲೆಯಿಂದ ನರಳುತ್ತಾ ಸೌಂದರ್ಯ ಕಂದಿದವಳಾದರೆ, ಪತಿಯು ಅವಳನ್ನು ಪ್ರೀತಿಸನು. ನಿತ್ಯವೂ ಶುದ್ಧವೂ ಅಮರವೂ ಆದ ಪ್ರೇಮವನ್ನು ದೇವರಲ್ಲಿ ಮಾತ್ರ ನೀವು ಕಾಣ ಬಹುದು. ಭಗವಂತನ ಪ್ರೇಮವು ಎಂದಿಗೂ ಮಾರ್ಪಾಟಾಗುವುದಿಲ್ಲವು.

ಸ್ವಾರ್ಥಿಯು ತನ್ನ ದೇಹವನ್ನು ಮಾತ್ರ ಪ್ರೀತಿಸುವನು. ನಂತರ ಪತ್ನಿ, ಪುತ್ರರು ಮಿತ್ರರನ್ನು ಪ್ರೀತಿಸುವನು. ಇನ್ನೂ ವಿಕಾಸವಾದರೆ ತನ್ನ ಕುಲ

ದವರನ್ನು, ತನ್ನ ಜಿಲ್ಲೆಯವರನ್ನು ಪ್ರೀತಿಸುವನು. ಅನಂತರ ತನ್ನ ಪ್ರಾಂತ್ಯದವರೆಲ್ಲರನ್ನೂ ಪ್ರೀತಿಸುವನು. ಅವನ ಹೃದಯವು ಮತ್ತೂ ವಿಕಸಿತವಾದರೆ, ಸ್ವದೇಶೀಯರನ್ನು ಪ್ರೀತಿಸುವನು. ಬಹುಕಾಲದ ನಂತರ ವಿಶ್ವಭ್ರಾತೃತ್ವವನ್ನು ಬೆಳಸಿಕೊಳ್ಳುವನು. ಆಗ ವಿಶ್ವದ ಯಾವ ಭಾಗದ ಯಾವ ಮನುಷ್ಯನನ್ನಾದರೂ ಪ್ರೀತಿಸಲಾರಂಭಿಸುವನು.

ಭಕ್ತಿಯು ಬೀಜವು, ಶ್ರದ್ಧೆಯು ಬೇರು. ಭಾಗವತರ ಸೇವೆಯು ಮಳೆಯು. ಆತ್ಮಸಮರ್ಪಣೆಯು ಪುಷ್ಪವು. ಭಗವಂತನಲ್ಲಿ ಸೇರುವುದೇ ಫಲವು. ಇದು ಭಕ್ತಿಯೋಗದ ಮಾರ್ಗವು.

ಭಕ್ತಿಯೋಗದಲ್ಲಿ, ಪಾಂಡಿತ್ಯ, ವೇದಪಾಠ ಪ್ರೌಢಿಮೆಯು ಬೇಕಿಲ್ಲವು. ಬೇಕಾಗಿರುವುದು ಭಕ್ತಿ, ಶ್ರದ್ಧೆಯಿಂದ ಕೂಡಿದ ಹೃದಯವು. ಯಾರಾದರೂ ಭಗವನ್ನಾಮ ಸಂಕೀರ್ತನೆ, ಪುನಶ್ಚರಣೆ ಮಾಡಬಹುದು. ತುಕಾರಾಮನು ಅನಕ್ಷರಸ್ಥ ರೈತನು. ತನ್ನ ಹೆಸರನ್ನೂ ಬರೆಯಲಾರದವನು. ಶ್ರೀಕೃಷ್ಣನ ಕೃಪೆಯಿಂದ ದಿವ್ಯಜ್ಞಾನದೃಷ್ಟಿಯು ಅವನಿಗೆ ಲಭಿಸಿತು. ಅವನ ಸುಪ್ರಸಿದ್ಧ ಅಭಂಗಗಳು ಬೊಂಬಾಯಿ ವಿಶ್ವವಿದ್ಯಾಪೀಠದ ಎಂ.ಎ. ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿವೆ. ಶ್ರೀರಾಮಕೃಷ್ಣ ಪರಮಹಂಸರೂ ಸಹ ಅನಕ್ಷರಸ್ಥರೇ. ಅವರು ದಕ್ಷಿಣೇಶ್ವರ ದೇವಾಲಯದಲ್ಲಿರುವಾಗ ಕಾಳೀಮಾತೆಯ ಕೃಪೆ ಮತ್ತು ಅದ್ವೈತ ಗುರು ಸ್ವಾಮಿ ತೋತಾಪುರಿಯ ಅನುಗ್ರಹದಿಂದ ಅವರು ದಿವ್ಯಜ್ಞಾನವನ್ನು ಪಡೆದರು. ಈ ಇಬ್ಬರು ಮಹಾನುಭಾವರ ಭವ್ಯಜೀವನದಿಂದ ಸ್ಪಷ್ಟವಾಗುವುದೇನೆಂದರೆ ಹೃದಯದಲ್ಲಿಯೇ ಜ್ಞಾನದ ಬುಗ್ಗೆಯು ಇರುವುದು. ಶ್ರದ್ಧಾಭಕ್ತಿಗಳಿಂದ ಯಾರು ಬೇಕಾದರೂ ಮೂಲವನ್ನು ಭೇದಿಸಿ ಜ್ಞಾನವನ್ನು ಪಡೆಯಬಹುದು.

"ನಾನು ನಾರಾಯಣನಿಗೆ, ಶಿವನಿಗೆ, ಶ್ರೀಕೃಷ್ಣನಿಗೆ ನಮಸ್ಕರಿಸುವೆನು" ಇದು ಭಕ್ತಿಯೋಗ. "ಎಲ್ಲದರಲ್ಲಿರುವ ಆತ್ಮವು ನಾನು."—ಇದು ಜ್ಞಾನಯೋಗವು.

ಮನುಷ್ಯರು ತಮ್ಮ ಸಮಾಜ ಮತ್ತು ಸಂಸಾರದ ಸಂಬಂಧಿಕರಲ್ಲಿ ಪ್ರೇಮ, ವಿಶ್ವಾಸ, ಆತ್ಮೀಯತೆ, ಪ್ರೀತಿ, ಮೆಚ್ಚುಗೆ, ಗೌರವ, ಆಶ್ಚರ್ಯ ಮತ್ತಿತರ ಮನೋಭಾವನೆಗಳನ್ನು ಬೆಳೆಸಿಕೊಳ್ಳುವರು. ಇದು ಬದುಕಿನ ಉದ್ದೇಶವನ್ನು ಸಾರ್ಥಕಗೊಳಿಸದು. ಭಗವದ್ಭಕ್ತಿಯೊಂದೇ ಬಾಳಿನ ಬೆಳಕಿನ

ಲಾಭಕ್ಕೆ ಸಹಾಯಕವಾದುದು. ಭಕ್ತಿಯು ಮೇಲ್ಕಂಡ ಮನೋಭಾವ ಗಳನ್ನು ಪೂರ್ಣವಾಗಿ ಅಡಗಿಸಿಕೊಳ್ಳುವುದು (consummation). ಪ್ರತ್ಯಾ ಹಾರವು ಉಪಾಸನೆಯ ಸಾಧನೆಯಲ್ಲವೆಂದು ಕೆಲವರ ಅಭಿಪ್ರಾಯ. ಅವನು ಭಗವತ್ಪ್ರೇಮದಲ್ಲಿ ತನ್ಮಯನಾಗುವುದಕ್ಕೆ ಪ್ರಯತ್ನಿಸುವನು. ಭಕ್ತನು ತನ್ನ ಮನಸ್ಸನ್ನು ಭಗವಂತನ ಚರಣ ಕಮಲಗಳಲ್ಲಿ ಅಥವ ಸುಂದರ ವದನಾರವಿಂದ ದಲ್ಲಿ ನಿಲ್ಲಿಸಲು ಪ್ರಯತ್ನಿಸುವನು. ಪರಿಣಾಮವಾಗಿ, ಪ್ರತ್ಯಾಹಾರವು ಸಾಧಕನ ಅರಿವಿಲ್ಲದೆಯೇ ಬರುವುದು. ರಾಜಯೋಗಿಯು ಪ್ರತ್ಯಾಹಾರವನ್ನು ಬುದ್ಧಿ ಪೂರ್ವಕವಾಗಿ ಅಭ್ಯಾಸ ಮಾಡುವನು. ಆದರೆ ಸಮಸ್ತ ವಸ್ತುಗಳಲ್ಲಿ ಅಡಗಿರುವ ಆತ್ಮನನ್ನು ತನ್ನಲ್ಲಿ ತಾದಾತ್ಮ್ಯ ಮಾಡಿಕೊಳ್ಳಲು ಯತ್ನಿಸುವನು. ವೇದಾಂತಿಯು ನಿದಿ ಧ್ಯಾಸನದ ಮೂಲಕ ವಸ್ತುಗಳಲ್ಲಡಗಿರುವ ಆತ್ಮನನ್ನು ಮುಚ್ಚಿರುವ ಮುಸುಕನ್ನು ತೆಗೆದುಹಾಕಲು ಪ್ರಯತ್ನಿಸುವನು. ನಾಮ ರೂಪಗಳನ್ನು ನಿಷೇಧಿಸಿ, ಸರ್ವವ್ಯಾಪಿಯೂ ಅಂತರ್ಯಾಮಿಯೂ ಆದ ಅರಿವಿ ನಲ್ಲಿ ಎಡಬಿಡದೆ ಸಮೀಕರಿಸುವನು (identifies).

ಒಬ್ಬ ಋಷಿಯ ಹೇಳಿಕೆಯಂತೆ: "ಈ ಜಗತ್ತು ಆನಂದದಿಂದ ಬಂದಿದೆ. ಆನಂದದಲ್ಲಿರುವುದು ಮತ್ತು ಆನಂದದಲ್ಲಿಯೇ ಒಂದಾಗುವುದು." ಒಬ್ಬ ಭಕ್ತನ ವಚನದಂತೆ, "ಈ ಜಗತ್ತು ಪ್ರೇಮದಿಂದ ಬಂದಿದೆ. ಪ್ರೇಮದಲ್ಲಿರು ವುದು ಮತ್ತು ಪ್ರೇಮದಲ್ಲಿಯೇ ಲಯವಾಗುವುದು." ಆನಂದದಲ್ಲಿ ಪ್ರೇಮವು ಅಡಗಿರುವುದು. ಋಷಿಯು (ಜ್ಞಾನಿಯು) ತನ್ನ ಆತ್ಮವನ್ನು ಪ್ರೀತಿಸುವನು. ಅವನು ತನ್ನ ಆತ್ಮದಲ್ಲಿ ಪ್ರೇಮವನ್ನು ಕಂಡುಕೊಳ್ಳುವನು. ಭಕ್ತನು ತನ್ನ ಇಷ್ಟದೈವವನ್ನು ಪ್ರೀತಿಸುವನು ಮತ್ತು ಆನಂದದಿಂದ ನರ್ತಿಸುವನು.

ದ್ವೈತ ಮತ್ತು ವಿಶಿಷ್ಟಾದ್ವೈತವು ತತ್ತ್ವಶಾಸ್ತ್ರದ ಏಣಿಯಲ್ಲಿ ಬೇರೆ ಬೇರೆಯ ಮೆಟ್ಟಿಲುಗಳು. ತುಟ್ಟತುದಿಯು ಅದ್ವೈತವು. ದ್ವೈತಿಗಳ ಮತ್ತು ವಿಶಿಷ್ಟಾದ್ವೈತಿಗಳ ಅನುಭವಗಳು ಅವರವರ ನಿಲುವಿನಿಂದ ಅಷ್ಟೇ ಸತ್ಯವು ಮತ್ತು ಸರಿಯಾದುವು. ಇನ್ನೂ ಸ್ವಲ್ಪ ಹೆಚ್ಚಿನ ಸಾಧನೆ ಮತ್ತು ತಿಳಿವಳಿ ಕೆಯು ಶುದ್ಧ ಅದ್ವೈತಾನುಭವದಲ್ಲಿ ಅವರು ನಿಲ್ಲುವಂತೆ ಮಾಡುವುದು.

ಭಕ್ತಿಯೋಗದಲ್ಲಿ ಮೂರು ವಸ್ತುಗಳಿವೆ. ಅವು ಪ್ರೀತಿಸುವವನು, ಪ್ರಿಯತಮ ಮತ್ತು ಪ್ರೇಮ. ಪ್ರೇಮಿಯು ತಾನೂ ತನ್ನ ಪ್ರಿಯತಮನೂ

ಒಂದೆಂದು ಅರಿತೊಡನೆಯೇ ಭಕ್ತಿಯ ಪರ್ಯವಸಾನವಾಗಿ, ಜ್ಞಾನೋದಯ ವಾಗುವುದು. ದ್ವೈತವು ಅದೃಶ್ಯವಾಗುವುದು. ಯಾರು ಯಾರನ್ನು ಈಗ ಪ್ರೀತಿಸಬೇಕು ?

ಅದ್ವೈತ ವೇದಾಂತಿಯ ಪ್ರಕಾರ "ನಾನು ಅವನೇ ಆಗಿದ್ದೇನೆ" ಅಥವ "ನಾನು ಬ್ರಹ್ಮವು" ಎಂಬ ಸೂತ್ರದ ಸಂತತ ಚಿಂತನೆಯೇ ಭಕ್ತಿಯು.

ಭಕ್ತನು ಹೇಳುವುದು : "ಭಗವಂತನ ಬಗ್ಗೆ ಜ್ಞಾನವನ್ನು ಮೊದಲು ಪಡೆದುಕೊ. ನಂತರ ಪ್ರೇಮ, ಪ್ರೀತಿ ಅಥವ ಅವನಲ್ಲಿ ಭಕ್ತಿಯನ್ನು ಪಡೆಯುವಿ." ಜ್ಞಾನಿಯು ಇನ್ನೊಂದು ರೀತಿಯಲ್ಲಿ ಹೇಳುವನು. "ಜ್ಞಾನವು ಭಕ್ತಿಯ ಫಲವು." ಸಂಪೂರ್ಣ ಜ್ಞಾನವು ಸಮಗ್ರ ಪ್ರೇಮವು. ಪರಿಶುದ್ಧ ವಾದ ಪ್ರೇಮವು ಪರಿಪೂರ್ಣ ಜ್ಞಾನವು. ಆಹಾರ ಸೇವನೆಯಿಂದ ತುಷ್ಟಿ ಮತ್ತು ಪುಷ್ಟಿಯುಂಟಾಗುವಂತೆ, ಹಸಿವು ಇಂಗುವಂತೆಯೇ ಭಕ್ತಿಯೂ ಏಕ ಕಾಲದಲ್ಲಿ ಜ್ಞಾನ ವೈರಾಗ್ಯಗಳನ್ನುಂಟುಮಾಡುವುದು.

ಭಕ್ತಿಯು ಅಹಂಕಾರ ಮತ್ತು ವಾಸನೆಯನ್ನು, ಬೆಂಕಿಯು ಮರವನ್ನು ಸುಡುವಂತೆ, ನಾಶಮಾಡುವದು. ಭಕ್ತರು ಮುಕ್ತಿಗೂ ಹೆಚ್ಚು ಗಮನ ಕೊಡು ವುದಿಲ್ಲ. ಭಗವದ್ವಿಷಯ ವಿಚಾರದಲ್ಲಿ, ಮಾತಿನಲ್ಲಿ, ಭಾಗವತರ, ಬಡವರ, ಮತ್ತು ರೋಗಿಗಳ ಸೇವೆ, ಭಗವಂತನ ನಾಮ ಮತ್ತು ವೈಭವಗಳನ್ನು ಸ್ತುತಿ ಸುವುದು, ಅವನಿಗೆ ನಮಸ್ಕರಿಸುವುದು, ಭಗವಂತನಿಗೆ ಸರ್ವಸಮರ್ಪಣೆ ಮಾಡುವುದು, ಭಗವಂತನೇ ತಮ್ಮ ನಿಜವಾದ ಧ್ಯೇಯವು ಮತ್ತು ನಿರು ಪಾಧಿಕವೂ, ಸಂಪೂರ್ಣವೂ ಆದ ಭಗವಂತನಲ್ಲಿ ಆತ್ಮಾರ್ಪಣೆ ಮಾಡಿ ಕೊಳ್ಳುವುದನ್ನು ಭಕ್ತನು ಬಯಸುವನು. ಅವರು ಕೇಳದೆಯೇ ಮುಕ್ತಿಯು ಬರುವುದು. ಮುಕ್ತಿಯು ಅವರ ದಾಸಿಯು. ಅವರು ಬಯಸದಿದ್ದರೂ ಭಗವಂತನ ವಿಭೂತಿಗಳೂ,ಋದ್ಧಿ, ಸಿದ್ಧಿಗಳೂ ಅವರ ವಶವಾಗುವವು.

ದೇವರಲ್ಲಿ ಅನನ್ಯ (unswerving) ಭಕ್ತಿಯು ಮತ್ತು ಭಾಗವತರಲ್ಲಿ ಒಡನಾಟವು, ದಿವ್ಯಾನಂದ ಪ್ರಾಪ್ತಿಗೆ ಸಾಧನಗಳು.

ಪೂಜೆ ಎಂದರೆ ಭಗವಂತನ ಅರ್ಚನೆಯು. ಭಗವಂತನ ಸಮೀಪದಲ್ಲಿ ಕುಳಿತುಕೊಳ್ಳುವುದು ಅಥವ ಅವನಲ್ಲಿ ಅನ್ಯೋನ್ಯ ಸಂಸರ್ಗನಾಗುವುದು ಉಪಾಸನೆಯು. ಅದು ಚಿತ್ತಶುದ್ಧಿಯನ್ನುಂಟುಮಾಡುವುದಲ್ಲದೆ ಮನಸ್ಸನ್ನು

ನಿಶ್ಚಲಗೊಳಿಸುವುದು. ಮನಸ್ಸನ್ನು ಶುದ್ಧಭಾವದಿಂದ ಮತ್ತು ಪ್ರೇಮದಿಂದ ತುಂಬುವುದು. ಮನುಷ್ಯನನ್ನು ಹಂತ ಹಂತವಾಗಿ ಪರಿವರ್ತಿಸಿ ದಿವ್ಯಸ್ವರೂಪ ವನ್ನು ಪಡೆಯುವಂತೆ ಮಾಡುವುದು.

ಶ್ರೀಕೃಷ್ಣ ಭಗವನ್ನಾಮದಲ್ಲಿ ಗಾಢವಾದ ಪ್ರೇಮವನ್ನು ಹೊಂದಿರಿ. ಎಲ್ಲ ಕಷ್ಟಗಳೂ ಕೊನೆಗಾಣುವವು. ಹೆಚ್ಚಿನ ಕಷ್ಟದಲ್ಲಿದ್ದ ದ್ರೌಪದಿಯು ಭಗವನ್ನಾಮವನ್ನು ಆಶ್ರಯಿಸಿದಳು. ಭಗವಂತನು ಅವಳನ್ನು ರಕ್ಷಿಸಿದನು.

ದೇವರು ಪ್ರೇಮವು. ಪ್ರೇಮವು ಮುಕ್ತಮಾಡುವುದು, ಸಂಘಟಿಸುವುದು ಮತ್ತು ಉತ್ಕರ್ಷಿಸುವುದು. ಕೊಡುಗೆಯು ಪ್ರೇಮದ ಪ್ರತಿನಿಧಿಯು ಮತ್ತು ಗಾನವು ಸಂತೋಷದ ಪ್ರತಿನಿಧಿಯು.

ಪ್ರೇಮಕ್ಕಿಂತ ಹಿರಿಯದಾದ ಸದ್ಗುಣವಿಲ್ಲವು, ಬೆಲೆಯುಳ್ಳ ಸಂಪತ್ತಿಲ್ಲವು, ಶ್ರೇಷ್ಠವಾದ ಧರ್ಮವಿಲ್ಲವು, ಉತ್ತಮವಾದ ಮತವಿಲ್ಲವು. ಏಕೆಂದರೆ ಪ್ರೇಮವೇ ದೇವರು ಮತ್ತು ದೇವರೇ ಪ್ರೇಮವು. ಪ್ರೇಮವು ಪರಿಶುದ್ಧಮಾಡುವುದು, ಪರಿವರ್ತಿಸುವುದು, ಮುಕ್ತಗೊಳಿಸುವುದು, ಅಧೀನ ಮಾಡುವುದು, ಆದ್ದರಿಂದ ಎಲೈ ಪ್ರೇಮ ಪ್ರಿಯನೇ ! ನಿನ್ನ ಹೃದಯದಲ್ಲಿ ಪ್ರೀತಿಯ ಜ್ಯೋತಿಯನ್ನು ಬೆಳಗಿಸು.

ಪ್ರೇಮಕ್ಕೆ ಮಿಗಿಲಾದ ಶಕ್ತಿಯಿಲ್ಲವು. ನಿರಾಕಾರನಾದ ಬ್ರಹ್ಮನು ತನ್ನ ಭಕ್ತರನ್ನು ಸಂತೋಷಗೊಳಿಸುವ ಸಲುವಾಗಿ ಪ್ರೇಮದಿಂದ ಚತುರ್ಭುಜ ಧಾರಿಯಾದ ಶ್ರೀಹರಿಯ ರೂಪವನ್ನು ಧರಿಸಿದನು. ತನ್ನ ಭಕ್ತರಿಗಾಗಿ ಅರಣ್ಯಗಳಿಗೂ, ತನ್ನ ಕೈಗಳಲ್ಲಿ ಅನ್ನೋದಕಗಳನ್ನು ಹೊತ್ತು ಹಿಂಬಾಲಿಸು ವನು. ಭಗವಾನ್ ಬುದ್ಧ, ಏಸು, ಏಕನಾಥ ಮತ್ತು ಅನೇಕ ಸಂತರು ಶಾಸ್ತ್ರಗಳ ರಹಸ್ಯವನ್ನು ಉಪದೇಶಿಸಿರುವದೂ ಪ್ರೇಮದ ಒತ್ತಾಯದಿಂದಲೇ. ಪ್ರೇಮವು ಭಕ್ತನ ಅಂಗೈಯೊಳಗಣ ಮಂತ್ರದಂಡವು. ಅದನ್ನು ಗಂಭೀರವಾಗಿ ತಿರುಗಿಸುವುದರಿಂದ ಇಡೀ ಜಗತ್ತನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳುವನು. ಶುದ್ಧ ಪ್ರೇಮವುಳ್ಳವನೇ ನಿಜವಾಗಿ ತ್ರೈಲೋಕ್ಯಾಧಿಪತಿಯು.

ನಿಸ್ವಾರ್ಥವೂ, ಪರಿಶುದ್ಧವೂ, ಆಳವೂ ಆದ ಭಗವಂತನಲ್ಲಿಟ್ಟಿರುವ ಪ್ರೀತಿಯು ಪ್ರೇಮವೆನಿಸುವುದು. ಪ್ರೇಮವೆಂದರೆ ಏಕಾಗ್ರತೆಯ ಪ್ರೀತಿಯು. ಪ್ರೇಮವು ಭಕ್ತನನ್ನೂ, ಭಗವಂತನನ್ನೂ ಎದುರುಬದುರು ಮಾಡುವುದು.

ಭಕ್ತಿಯು ಪ್ರೇಮದಲ್ಲಿ ಪರ್ಯವಸಾನವಾಗುವುದು. ಪ್ರೇಮವು ದಿವ್ಯಾಮೃತವು ದುಃಖ ಮತ್ತು ನೋವನ್ನು ನಾಶಮಾಡುವುದಲ್ಲದೆ, ಪ್ರೇಮವು ಅಮರತೆ, ಆನಂದ ಮತ್ತು ಶಾಂತಿಯನ್ನು ನೀಡುವುದು. ಪ್ರೇಮದ ಸ್ವಭಾವವನ್ನು ವಿವರಿಸುವುದು ಬಹಳ ಕಠಿಣ. ಅದನ್ನು ನೀವೇ ಅನುಭವ ಮಾಡಿಕೊಳ್ಳಬೇಕು. ಜಪ, ಸ್ಮರಣ, ಕೀರ್ತನ, ಸತ್ಸಂಗ, ಪ್ರಾರ್ಥನೆ, ಭಕ್ತರ ಸೇವೆ ಮತ್ತು ರಾಮಾಯಣ, ಭಾಗವತ ಇತ್ಯಾದಿ ಗ್ರಂಥಗಳ ಅಧ್ಯಯನದ ಮೂಲಕ ಪ್ರೇಮವನ್ನು ಬೆಳೆಸಿಕೊಳ್ಳಿರಿ.

ಧರ್ಮದಲ್ಲಿನ ಪ್ರೇಮವು ವಿಜ್ಞಾನವು. ಅದು ಭಗವಂತನಲ್ಲಿ ಭಕ್ತನು ಹೃದಯ ತುಂಬಿ ತೋಡಿಕೊಳ್ಳುವ ರೀತಿಯು. ಹೃದಯದಲ್ಲಿನ ಮಾಲಿನ್ಯವೆಲ್ಲ ನಶಿಸಿ, ಚಿತ್ತಸ್ವಾಸ್ಥ್ಯವುಂಟಾದಾಗ ಭಕ್ತನ ಹೃದಯದಿಂದ ಪ್ರೇಮವು ಸಹಜವಾಗಿ ಹೊರ ಹೊಮ್ಮುವುದು. ಪ್ರೇಮದಲ್ಲಿ ಆನಂದವಿರುವುದು. ಮಾನವನನ್ನು ದಿವ್ಯಾತ್ಮವಾಗಿ ರೂಪಿಸುವ ಅದ್ಭುತವಾದ ಶಕ್ತಿ ಎಂದರೆ ಪ್ರೇಮವು. ಅದು ಭಗವಂತನಲ್ಲಿ ಸತ್ಯವಾದ ಸಂಸರ್ಗವನ್ನುಂಟುಮಾಡುವುದು (communion).

ಪ್ರೀತಿಯ ವೃತ್ತಿಯು ಹೃದಯದಲ್ಲಿ ಸಹಜವಾಗಿ ರೂಢಮೂಲವಾಗಿರುವುದು (implanted). ಪ್ರೀತಿಯ ವೃತ್ತಿಯಿಂದ ವಿಚಲಿತನಾಗದ ಅಥವಾ ಪ್ರೀತಿಯಿಂದ ಪ್ರೇರಿತನಾಗದ ವ್ಯಕ್ತಿಯೇ ಇಲ್ಲವು. ಆದ್ದರಿಂದ ಪ್ರೇಮ ಪ್ರವಾಹವನ್ನು ಸಹಜವಾಗಿ ಒಂದು ಗೊತ್ತಾದ ಮಟ್ಟಕ್ಕೆ ನೀನು ಬೆಳೆಸಬೇಕು. ಎಲ್ಲ ವಿಧವಾದ ಸ್ವಾರ್ಥತೆಗಳನ್ನು ನಾಶಗೊಳಿಸುವುದರಿಂದ ಪ್ರೇಮವನ್ನು ಪರಿಶುದ್ಧಗೊಳಿಸು, ವಿಶ್ವಪ್ರೇಮವನ್ನಾಗಿ ಬೆಳೆಸು.

ಇಂದು ಜಗತ್ತಿಗೆ ಪ್ರೇಮದ ಸಂದೇಶದ ಆವಶ್ಯಕತೆಯಿದೆ. ನಿಮ್ಮ ಹೃದಯದಲ್ಲಿ ಪ್ರೇಮಜ್ಯೋತಿಯನ್ನು ಬೆಳಗಿಸಿ. ಎಲ್ಲರನ್ನೂ ಪ್ರೀತಿಸಿ. ನಿಮ್ಮ ಪ್ರೇಮಾಲಿಂಗನದಲ್ಲಿ ಎಲ್ಲ ಜೀವಜಂತುಗಳನ್ನೂ ಅಡಗಿಸಿರಿ. ಪರಿಶುದ್ಧ ಪ್ರೇಮವೊಂದರಿಂದಲೇ ರಾಷ್ಟ್ರಗಳ ಸಂಘಟನ ಮಾಡಬಹುದು. ಪರಸ್ಪರ ಪ್ರೇಮದಿಂದಲೇ ವಿಶ್ವಸಮರವನ್ನು ಕೊನೆಗಾಣಿಸಬಹುದು. ರಾಷ್ಟ್ರಗಳ ಒಕ್ಕೂಟ ಸಂಸ್ಥೆಯು ಹೆಚ್ಚಿನದೇನನ್ನೂ ಮಾಡಲಾರದು. ಎಲ್ಲರ ಹೃದಯಗಳನ್ನೂ ಒಂದುಗೂಡಿಸುವ ಅದ್ಭುತವಾದ ದಿವ್ಯಜ್ಯೋತಿಯೆಂದರೆ ಪ್ರೇಮವು.

ಅಭೂತಪೂರ್ವ ಶಕ್ತಿಯುಳ್ಳ, ದುಃಖನಿವಾರಕ ಅಂಜನವೆಂದರೆ ದಿವ್ಯಪ್ರೇಮವು. ಎಲ್ಲ ಕ್ರಿಯೆಗಳನ್ನೂ ಶುದ್ಧ ಪ್ರೇಮದಿಂದ ತುಂಬಿರಿ. ಕುಟಿಲತೆ, ದುರಾಸೆ, ಕೋಂಕುತನ ಮತ್ತು ಸ್ವಾರ್ಥತೆಯನ್ನು ಕೊಲ್ಲಿರಿ. ವಿಷವಾಯು ಪ್ರಯೋಗ ದಿಂದ ಹಲವರ ಪ್ರಾಣವನ್ನು ಹರಣ ಮಾಡುವುದು ಮಹಾಪಾಪಕರವು, ಮಹಾಕ್ರೌರ್ಯವು. ಪ್ರಯೋಗಶಾಲೆಯಲ್ಲಿ ಆ ವಿಷಾನಿಲವನ್ನು ತಯಾರಿಸುವ ವಿಜ್ಞಾನಿಯನ್ನು ದೇವರೇ ಶಿಕ್ಷಿಸುವನು. "ನ್ಯಾಯತೀರ್ಮಾನದ ದಿನವನ್ನು ಮರೆಯಬೇಡಿ. ಅಧಿಕಾರ, ರಾಜ್ಯ ಮತ್ತು ಐಶ್ವರ್ಯಗಳಿಗಾಗಿ ಅಡ್ಡಾಡುವ ಹುಲುಮನುಜರೇ! ಭಗವಂತನ ಮುಂದೆ ಅಂದು ಏನು ಹೇಳುವಿರಿ? ಶುದ್ಧ ವಾದ ಭಾವವನ್ನೂ, ಪ್ರೇಮಮಯವಾದ ಹೃದಯವನ್ನೂ ಹೊಂದಿರಿ. ಭಗವಂತನ ಸಾಮ್ರಾಜ್ಯವನ್ನು ನೀವು ಪ್ರವೇಶಿಸುವಿರಿ."

ವಿಶ್ವಪ್ರೇಮವನ್ನು ಬೆಳೆಸಿಕೊಳ್ಳಿ. ಎಲ್ಲ ಮಾನವರೊಡನೆ ಮತ್ತು ಜೀವಿಗಳೊಡನೆ ನೀವು ಶಾಂತರಾಗಿ ಬಾಳಲು ಇದು ಸಹಾಯ ಮಾಡುವುದು. ಪ್ರೇಮ ಮತ್ತು ಶಾಂತಿಯು ಅವಿಭಾಜ್ಯವು. ಎಲ್ಲಿ ಪ್ರೇಮವಿದೆಯೋ ಅಲ್ಲಿ ಶಾಂತಿಯು ಮತ್ತು ಎಲ್ಲಿ ಶಾಂತಿಯೋ ಅಲ್ಲಿ ಪ್ರೇಮವೂ ಇರುವುದು.

ಭಗವನ್ನಾಮಾಮೃತದ ಸವಿಯಿಂದ ಹೃದಯ ಬುಗ್ಗೆಯು ಚಿಮ್ಮಿ ಆನಂದಾಶ್ರುಗಳು ಉದುರುವಂತೆ ವಿಕಸಿತವಾಗಿ ನಿಮ್ಮ ಹೃದಯದಲ್ಲಿ ಪ್ರೇಮ ತರಂಗಗಳು ಎದ್ದೆದ್ದು ನಿರಂತರವಾಗಿ ಹರಿಯಲು ಅವಕಾಶ ಕೊಡಿ. ದಿವ್ಯಾ ಲಿಂಗನದ ಸುಖವನ್ನು ಭಾವಿಸಿರಿ. ದಿವ್ಯಪ್ರೇಮವೆಂಬ ಭಾನುವಿನ ಬೆಳಕಿನಲ್ಲಿ ಹೃದಯವನ್ನು ಕಾಯಿಸಿರಿ. ನಿತ್ಯಾನಂದದ ಸವಿಯನ್ನು ಕಂಡುಕೊಳ್ಳಿರಿ. ದಿವ್ಯಪ್ರೇಮಾಮೃತವನ್ನು ನಿರಂತರವಾಗಿ ಪಾನಮಾಡಿರಿ.

ನೀವು ನಿಜವಾಗಿಯೂ ದೇವರನ್ನು ಬಯಸುವಿರಾ? ಅವನ ಸಂದರ್ಶನಕ್ಕೆ ಸತ್ಯವಾಗಿ ಹಂಬಲಿಸುವಿರಾ? ನಿಮಗೆ ಸಹಜವಾದ ಆಧ್ಯಾತ್ಮಿಕ ಹಸಿವು ಉಂಟಾಗಿದೆಯೇ? ನೀವು ಭಕ್ತಿಯ ವಿಷಯವಾಗಿ ಮೈಮರವಿರೇಳುವಂತಹ ಭಾಷಣ ಮಾಡಬಹುದು. ಭಕ್ತಿಯೋಗದ ವಿಷಯವಾಗಿ ಗ್ರಂಥರಾಶಿಯನ್ನೂ ರಚಿಸಬಹುದಾದರೂ ಒಂದು ಕಣ ಮಾತ್ರದಷ್ಟು ಭಕ್ತಿಯು ನಿಮಗೇ ಇಲ್ಲದಿರ ಬಹುದು. ಭಗವದ್ದರ್ಶನಕ್ಕಾಗಿ ಹಂಬಲಿಸುವವನು ಪ್ರೇಮವನ್ನು ಬೆಳೆಸಿ ಕೊಳ್ಳುವನು. ದೇವರು ಅವನಿಗೆ ಮಾತ್ರವೇ ದರ್ಶನ ನೀಡುವನು. ಬೇಡಿ

ದವರಿಗೆ ಮಾತ್ರ ನೀಡುವವನು ದೇವರು. ದೇವರಿಗಾಗಿ ನಿಜವಾದ ಬೇಡಿಕೆ ಇದ್ದರೆ ಅವನು ಆಕ್ಷಣವೆ ಅವಶ್ಯಕವಾಗಿ ಅವರ ಬೇಡಿಕೆಯನ್ನು ಪೂರೈಸುವನು.

ಭಕ್ತಿಮಾರ್ಗದಲ್ಲಿ ಐದು ವಿಧವಾದ ಸಾಧನೆಗಳು ಅತ್ಯವಶ್ಯಕವು. ೧) ಭಕ್ತಿಯು ನಿಷ್ಕಾಮ್ಯವು ೨) ಅವ್ಯಭಿಚಾರಿಣಿಯು. ೩) ನಿರಂತರವು. ೪) ಸದಾಚಾರಯುಕ್ತವು ಮತ್ತು ೫) ಆಕಾಂಕ್ಷೆಯು ತೀವ್ರತಮವೂ, ಸನ್ಮಾರ್ಗಪೂರಕವೂ ಆಗಿರಬೇಕು. ಹಾಗಿದ್ದರೆ ಮಾತ್ರ ಸಾಕ್ಷಾತ್ಕಾರವು ಕ್ಷಿಪ್ರದಲ್ಲಾಗುವುದು.

ಸಾಗರದಲ್ಲಿ ದಿಕ್ಸೂಚಿ ಅಥವಾ ನಕ್ಷೆಯಿಲ್ಲದೆ ಯಾನ ಮಾಡುವುದು ಕಠಿಣವು. ಹಾಗೆಯೇ ಸಂಸಾರ ಸಾಗರದಲ್ಲಿ ಸಂಯಮಬದ್ಧವೂ, ಸದಾ ಚಾರವೂ, ಭಗವದ್ಭಕ್ತಿಪೂರ್ಣವೂ ಅಲ್ಲದ ಜೀವನವನ್ನು ನಡೆಸುವುದು ಬಹು ಕಠಿಣ.

ಪ್ರೇಮದ ಭಾಷೆಯು ಅಶ್ರುಭಾಷೆಯು. ಭಗವಂತನ ಪಾದಪದ್ಮ ಗಳನ್ನು ಪಶ್ಚಾತ್ತಾಪ, ವಿರಹ ಮತ್ತು ಪ್ರೇಮವೆಂಬ ಅಶ್ರುಗಳಿಂದ ನಿಮ್ಮ ಹೃದಯ ದೇಗುಲದಲ್ಲಿ ಸಂತತವಾಗಿ ತೊಳೆಯಿರಿ. ನಿಮ್ಮ ಪ್ರಿಯತಮನನ್ನು ಸಂಧಿಸುವಿರಿ. ಭಗವಂತನೊಡನೆ ಒಂದಾಗಿ ಆನಂದಿಸುವಿರಿ.

ಕೇವಲ ಕ್ಷಣಕಾಲ ಎಂದರೆ ರೆಪ್ಪೆ ಹೊಡೆಯುವುದರೊಳಗೆ ನಿಮ್ಮ ಮನಸ್ಸು ಭಗವಂತನ ಚರಣಾರವಿಂದದಿಂದ ಚಲಿಸದೆ ಎಂದರೆ ತೈಲಧಾರೆಯಂತೆ ಅವಿಚ್ಛಿನ್ನ ವಾಗಿ ನಿರಂತರ ಭಕ್ತಿಯುಳ್ಳವರಾದರೆ ಲೋಕತ್ರಯಗಳ ಸಂಪತ್ತು ನಿಮ್ಮ ದಾಗುವುದು. ಈ ವಿಷಯದ ಬಗ್ಗೆ ಭಗವಂತನು ಪ್ರಮಾಣಪೂರ್ವಕವಾಗಿ ಮಾತು ಕೊಟ್ಟಿರುವನು. ತನ್ನ ಭಕ್ತನು ಹೋದೆಡೆಯಲ್ಲೆಲ್ಲಾ ಹಿಂಬಾಲಿಸು ವನು. ಆವನ ಚರಣಧೂಳಿಯನ್ನು ಭಗವಂತನು ತನ್ನ ಕೋಮಲವಾದ ಹಣೆಯ ಮೇಲೆ ತಿಲಕವಾಗಿ ಧರಿಸುವನು.

ಸುಧಾಮನು ತನ್ನ ಮಿತ್ರ ಶ್ರೀಕೃಷ್ಣನನ್ನು ಕಾಣಲು ಬಂದನು. ಕೃಷ್ಣ ಭಗವಾನನು ರುಕ್ಮಿಣಿಯೊಡನೆ ಸಂಭಾಷಿಸುತ್ತಿದ್ದನು. ಹರಕು ಬಟ್ಟೆಗಳನ್ನು ಧರಿಸಿದ್ದ ಸುಧಾಮನು ಆ ಅರಮನೆಯನ್ನು ಪ್ರವೇಶಿಸಲು ಸಂಕೋಚಪಟ್ಟನು. ದ್ವಾರಪಾಲಕರು ಭಗವಾನ್ ಕೃಷ್ಣನಿಗೆ: "ಸ್ವಾಮಿ, ಸುಧಾಮನೆಂಬ ಬಡಬ್ರಾಹ್ಮಣನು ಅರಮನೆಯ ಬಾಗಿಲಲ್ಲಿ ತಮಗಾಗಿ ಕಾಯುತ್ತಿರುವನು:

ಎಂದರು. ಶ್ರೀಕೃಷ್ಣನು ಅವರು ಮುಂದೆ ಒಂದು ಮಾತನ್ನೂ ಹೆಚ್ಚಿಗೆ ಆಡಲು ಅವಕಾಶ ಕೊಡಲಿಲ್ಲ. ಅವನಿಗೆ ಸುಧಾಮ ಎಂಬ ಶಬ್ದವಷ್ಟೇ ಸಾಕಾಯಿತು. ಬರಿಗಾಲಿನಲ್ಲೇ ತನ್ನ ಭವನದಿಂದ ಹೊರಕ್ಕೆ ಓಡಿದನು. "ನನ್ನ ಪ್ರೀತಿಯ ಸುಧಾಮ, ನನ್ನ ಆತ್ಮಬಂಧುವೇ" ಎಂದು ಕೂಗಿದನು. ರುಕ್ಮಿಣಿಗೆ ಶ್ರೀಕೃಷ್ಣನು ಏನನ್ನೂ ಹೇಳದೆ ಅವಸರವಾಗಿ ನಡೆದುದು ಅವಳಿಗೆ ಬೇಸರ ವಾಯಿತು. ಕೆಲವೇ ನಿಮಿಷಗಳಲ್ಲಿ ಸುಧಾಮನೊಡನೆ ಶ್ರೀಕೃಷ್ಣನು ರಾಜ ಭವನದೊಳಗೆ ಬಂದನು. ರಾಣಿಯ ದುಃಖಭಾವವನ್ನು ಗಮನಿಸಿದನು. ಅವನಿಗೆ ಕಾರಣವು ತಿಳಿಯಿತು. "ಪ್ರಿಯೆ, ಕ್ಷಮಿಸು. ನಾನು ಭಕ್ತ ಪರಾಧೀನನು. ನನ್ನ ಆತ್ಮಕ್ಕಿಂತ ಅತಿಶಯವಾಗಿ ಅವರನ್ನು ಪ್ರೀತಿಸುವೆನು" ಎಂದು ಹೇಳಿ ತಾನು ಕುಳಿತುಕೊಳ್ಳುತ್ತಿದ್ದ ದಿವ್ಯಪೀಠದಲ್ಲಿ ಸುಧಾಮನನ್ನು ಕೂಡಿಸಿ ಅವನ ಬಳಿ ಇದ್ದ ಹಿಡಿ ಅವಲಕ್ಕಿಯನ್ನು ಕಸಿದುಕೊಂಡನು. ಏಕೆಂದರೆ ತಾನು ತಂದ ಅತ್ಯಲ್ಪವಾದ ಕೊಡುಗೆಯನ್ನು ಕೊಡಲು ಸುಧಾಮನು ಸಂಕೋಚ ಪಡುತ್ತಿದ್ದನು. ಭಗವಾನ್ ಕೃಷ್ಣನು ಸ್ವಲ್ಪ ಅವಲಕ್ಕಿಯನ್ನು ಬಾಯಲ್ಲಿ ಹಾಕಿಕೊಂಡೊಡನೆಯೇ ಆನಂದಾತಿರೇಕದಿಂದ, "ಇಷ್ಟು ರುಚಿಕರವಾದ ವಸ್ತುವನ್ನು ನಾನು ಎಂದೂ ತಿಂದಿರಲಿಲ್ಲ, ರುಕ್ಮಿಣೀ" ಎಂದು ನುಡಿದನು.

ನೀವು ಒಂದೆರಡು ಘಂಟೆಗಳು ಜಪ ಅಥವಾ ಧ್ಯಾನ ಮಾಡಬೇಕೆಂದು ದೃಢವಾಗಿ ತೀರ್ಮಾನಿಸಿದಾಗ ಅದನ್ನು ಭಕ್ತಿಯಿಂದ ಸಾವಧಾನವಾಗಿ ಮಾಡಲೇಬೇಕು. ಗೊಂದಲದ ಮನಸ್ಸಿನಿಂದ, ಅನ್ಯಚಿಂತನೆಗಳಿಂದ ಶ್ರೀಮಂತನ ಭವನವನ್ನು ದುರ್ಬಲವಸ್ತುಗಳಿಂದ ಶೀಘ್ರವಾಗಿ ಕಟ್ಟಿ ಮೋಸಗೊಳಿಸುವಂತೆ ಸಾಧನೆ ಮಾಡಬೇಡಿ. ದೇವರನ್ನು ನೀವು ವಂಚಿಸಲಾರಿರಿ. ನಿಮಗೆ ನೀವೇ ವಂಚಿಸಿಕೊಳ್ಳುವಿರಿ. ಜಪ ಮತ್ತು ಧ್ಯಾನದ ಪೂರ್ಣಪ್ರಯೋಜನವನ್ನು ನೀವು ಪಡೆಯಲಾರಿರಿ.

ಭಗವಂತನ ನಿರಂತರ ಆರಾಧನೆಯನ್ನು ನಿಷ್ಠಾ ಎನ್ನುವರು. ಇದರಿಂದ ಭಕ್ತನು ಭಗವಂತನಲ್ಲಿ ಭಕ್ತಿಯಿಂದ ಸ್ಥಿರವಾಗಿ ನಿಲ್ಲುವನು. ಅವನ ಭಕ್ತಿಯು ಬೆಳೆದಂತೆಲ್ಲಾ ಧ್ಯಾನವು ಆಳವಾಗಿ ಆಸಕ್ತಿಯು ಬೇರೂರುವುದು.

ಭಗವಂತನ ನಾಮಗಳನ್ನು ಹಾಡಿರಿ. ಗುಣಗಳನ್ನು ಕೊಂಡಾಡಿರಿ. ಅವನನ್ನು ಸದಾ ನೆನಪಿನಲ್ಲಿಡಿ. ಅವನ ದಿವ್ಯಗುಣಗಳನ್ನು ಧ್ಯಾನಿಸಿರಿ.

ಇದೇ ಭಕ್ತಿಯೋಗದ ಸಾರವು. ಭಗವಂತನಲ್ಲಿ ಪೂರ್ಣಪ್ರೇಮ ಮತ್ತು ನಿಷ್ಕೃಷ್ಟವಾದ ಭಕ್ತಿಯು ಬೆಳೆದೊಡನೆ ಇಡೀ ವಿಶ್ವವೇ ನಿಮ್ಮ ಹಿಡಿತಕ್ಕೆ ಒಳಪಡುವುದು.

---

## ೨. ಭಕ್ತಿಯ ವೈವಿಧ್ಯತೆ

ಭಕ್ತನು ಸ್ವಲ್ಪಕಾಲ ಭಗವಂತನನ್ನು ಪ್ರೀತಿಸಿ ನಂತರ ತನ್ನ ಸತಿ, ಸುತ, ಧನ, ಮನೆ, ಪಶು, ಸಂಪತ್ತುಗಳನ್ನು ಪ್ರೀತಿಸಿದರೆ ಅದು ವ್ಯಭಿಚಾರಿಣೀ ಭಕ್ತಿಯೆನಿಸುವುದು. ಪ್ರೀತಿಯು ಹಂಚಲ್ಪಡುವುದು. ಮನಸ್ಸಿನ ಒಂದು ಭಾಗ ಮಾತ್ರ ಭಗವಂತನಿಗೆ ಕೊಟ್ಟಂತಾಯಿತು. ಉಳಿದ ಭಾಗವನ್ನು ಸಂಸಾರ ಮತ್ತು ಆಸ್ತಿಗೆ ಮೀಸಲಿಟ್ಟಂತಾಯಿತು.

ಅವ್ಯಭಿಚಾರಿಣೀ ಭಕ್ತಿ ಎಂದರೇನು? ಅದು ಅವಿಭಾಜ್ಯ ಪ್ರೇಮವು. ಭಕ್ತನು, ಭಗವಂತ ಎಂದರೆ, ಭಗವಂತನೊಬ್ಬನನ್ನೇ ಪ್ರೀತಿಸುವನು. ಅವನ ಮನಸ್ಸು ದೇವನ ಚರಣಕಮಲಗಳಲ್ಲೇ ಬೆಸೆದುಕೊಂಡಿರುವುದು. ಮನಸ್ಸು, ಹೃದಯ, ಆತ್ಮವು ಸಂಪೂರ್ಣವಾಗಿ ಸಮರ್ಪಿಸಲ್ಪಟ್ಟಿರುವುದು. ಇದೇ ಅವ್ಯಭಿಚಾರಿಣೀ ಭಕ್ತಿಯು. ಐಶ್ವರ್ಯ, ಮಗ ಅಥವಾ ರೋಗ ಪರಿಹಾರ ಕ್ಕಾಗಿ ಬೆಳೆಸಿಕೊಂಡ ಭಕ್ತಿಯನ್ನು ಸಕಾಮ್ಯಭಕ್ತಿ ಅಥವಾ ಹೇತುಕಭಕ್ತಿ ಅಥವಾ ಗೌಣಾಭಕ್ತಿ (secondary devotion) ಎನ್ನುವರು.

ಭಗವಂತನಿಂದ ಪ್ರೇಮವೊಂದನ್ನು ಬಿಟ್ಟು ಮತ್ತೇನನ್ನೂ ಬಯಸದೆ ಭಕ್ತಿಯಿಂದಿರುವುದು ನಿಷ್ಕಾಮ್ಯಭಕ್ತಿ ಅಥವಾ ಅಹೇತುಕಭಕ್ತಿ ಅಥವಾ ರಾಗಾತ್ಮಿಕಭಕ್ತಿ ಅಥವಾ ಮುಖ್ಯಭಕ್ತಿ (primary devotion) ಎನಿಸು ವುದು. ಭಕ್ತನು ಭಗವಾನ್ ಹರಿ, ಶಿವ, ದೇವಿ, ರಾಮ, ಕೃಷ್ಣನಲ್ಲಿ ಭಕ್ತಿಯನ್ನು ಹೊಂದಿ ಮತ್ತು ಶ್ರೀಹರಿಯೇ ಶಿವ, ರಾಮ, ದೇವಿ ಅಥವಾ ಕೃಷ್ಣನೆಂದು ಭಾವಿಸುವುದು ಸಮರಸ ಭಕ್ತಿಯು. ಆ ಭಕ್ತನಿಗೆ ಸಮದೃಷ್ಟಿ ಇರುವುದು. ಇದು ಮೇಲ್ಮಟ್ಟದ ಭಕ್ತಿಯು. ರಾಮ ಮತ್ತು ಕೃಷ್ಣರಲ್ಲಿ,

ಶಿವ ಮತ್ತು ಹರಿ, ಕೃಷ್ಣ ಮತ್ತು ದೇವಿಯಲ್ಲಿ ಅವನು ಭೇದವನ್ನೆಣಿಸನು. ರಾಧಾ, ಸೀತಾ ಮತ್ತು ದುರ್ಗಿಯು ಶ್ರೀಕೃಷ್ಣ, ರಾಮ ಮತ್ತು ಶಿವನ ಅವಿಭಾಜ್ಯ ಶಕ್ತಿಗಳೆಂದು ತಿಳಿದಿರುವನು ಮತ್ತು ಭಾವಿಸುವನು.

ನಿನ್ನ ಪತ್ನಿಯು ಯುವತಿಯೂ, ಸುಂದರಿಯೂ ಆಗಿರುವಾಗ ಅವಳ ಗುಂಗುರು ಕೂದಲನ್ನೂ, ಗುಲಾಬಿಯ ಕೆನ್ನೆಗಳನ್ನೂ, ನೇರವಾದ ಮೂಗನ್ನೂ, ಥಳಥಳಿಸುವ ಚರ್ಮವನ್ನೂ, ಬೆಳ್ಳಿಯ ಹಲ್ಲುಗಳನ್ನೂ ಹೊಗಳುತ್ತೀಯೆ. ಆದರೆ ಗುಣಪಡಿಸಲಾಗದ ಭಯಂಕರವಾದ ಖಾಯಿಲೆಯಿಂದ ಅವಳು ಸೌಂದರ್ಯವನ್ನು ಕಳೆದುಕೊಂಡಾಗ ನಿನ್ನ ಮನಸ್ಸು ಆಕರ್ಷಿತವಾಗುವುದಿಲ್ಲ. ನೀನು ಎರಡನೆಯ ಮದುವೆಯಾಗುವೆ. ನೀನು ಅವಳನ್ನು ಆತ್ಮಭಾವದಿಂದ ಪ್ರೀತಿಸಿದ್ದರೆ ನಿನ್ನ ಆತ್ಮವೂ, ನಿನ್ನ ಪತ್ನಿಯ ಆತ್ಮವೂ, ಒಂದೇ ಎಂದು ತಿಳಿದಿದ್ದರೆ ಅವಳಮೇಲಿನ ಪ್ರೇಮವು ಪರಿಶುದ್ಧವೂ, ನಿಸ್ವಾರ್ಥವೂ, ಶಾಶ್ವತವೂ, ಅವ್ಯಯವೂ ಮತ್ತು ಅಭಾದಿತವೂ ಆಗುತ್ತಿತ್ತು. ಹಳೆಯ ಕಲ್ಲುಸಕ್ಕರೆಯನ್ನು ಹೆಚ್ಚು ಹೆಚ್ಚು ಪ್ರೀತಿಸುವಂತೆ, ವೃದ್ಧಳಾದರೂ ಆತ್ಮಭಾವ ದಿಂದ ಜ್ಞಾನಿಯಾಗಿ ಅವಳನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದೆ. ಜ್ಞಾನವೊಂದೇ ಪ್ರೇಮವನ್ನು ವರ್ಧಿಸುವುದು ಮತ್ತು ಶುದ್ಧಗೊಳಿಸುವುದು.

ಸಾಧಕನು ಆರಂಭದಲ್ಲಿ ವಿಗ್ರಹಾರಾಧನೆ ಮಾಡುತ್ತ ನಂತರ ಎಲ್ಲೆಲ್ಲಿಯೂ ಭಗವಂತನನ್ನು ಕಾಣುತ್ತಾ ಪರಾಭಕ್ತಿಯನ್ನು ಬೆಳೆಸಿಕೊಳ್ಳು ವನು. ಅವನು ವಿಧಿಭಕ್ತಿಯಿಂದ ರಾಗಾತ್ಮಿಕಾ ಭಕ್ತಿ ಅಥವಾ ಪ್ರೇಮಭಕ್ತಿ ಯನ್ನು ಬೆಳೆಸಿಕೊಳ್ಳುವನು. ಇಡೀ ಜಗತ್ತನ್ನು ಜಗನ್ನಾಥನೆಂದು ತಿಳಿಯು ವನು. ಒಳ್ಳೆಯ, ಕೆಟ್ಟ, ಸರಿ, ತಪ್ಪಿನ, ನೀಚ ಮುಂತಾದ ಭಾವಗಳು ನಶಿಸು ವುವು. ನೀಚನಲ್ಲೂ, ಇರುವೆ, ನಾಯಿ, ಮರ, ಕಳ್ಳ, ಹಾವು, ಚೇಳು, ಮರದ ದಿಮ್ಮಿ, ಕಲ್ಲುಬಂಡೆ, ಸೂರ್ಯ, ಚಂದ್ರ, ತಾರೆಗಳು, ಅಗ್ನಿ, ಜಲ, ಪೃಥ್ವಿ ಮುಂತಾದವುಗಳಲ್ಲಿಯೂ ಅವನು ದೇವರನ್ನೇ ಕಾಣುವನು. ಅವನ ದರ್ಶನ ಅಥವಾ ಅನುಭವವು ವಿವರಣೆಗೆ ಮೀರಿದುದು. ಈ ಭೂಮಿಯ ಮೇಲೆ ದೇವರೂಪಿಗಳಾಗಿ ಸಂಸಾರದ ಕೊಳಚೆ (quagmire) ಯಲ್ಲಿ ಬಿದ್ದವರನ್ನು ಉದ್ಧರಿಸುವ ಮೃತ್ಯುಪಾಶದಿಂದ ಬಿಡುಗಡೆ ಮಾಡುವ ಶ್ರೇಷ್ಠ ಭಕ್ತರಿಗೆಲ್ಲಾ ಜಯವಾಗಲಿ.

ಭಾಗವತ ಧರ್ಮವೆಂದರೇನು? ಭಗವಂತನ ಸಮೀಪಕ್ಕೆ ಕೊಂಡೊಯ್ಯುವ ವಾಸನೆಗಳನ್ನೂ, ಅಹಂಕಾರ ಮತ್ತು ದ್ವಂದ್ವಗಳನ್ನೂ ನಾಶಮಾಡಲು ಸಹಾಯ ಮಾಡುವುದೇ ಭಾಗವತ ಧರ್ಮವು. ಜನನ–ಮರಣ ಸುಳಿಯಿಂದ ಬಿಡಿಸಿ ಅಭಯವೂ, ನಿಷ್ಕಾಮವೂ, ನಿಸ್ವಾರ್ಥವೂ, ಆಗಿ ಮಾಡುವುದೇ ಭಾಗವತಧರ್ಮವು. ಹೃದಯಕಮಲದಲ್ಲಿ ಕೃಷ್ಣಭಕ್ತಿಯನ್ನು ತುಂಬಿ ಏಕ ಮಾತ್ರ ದಿವ್ಯ ತತ್ವವಾದ ಶ್ರೀಕೃಷ್ಣನನ್ನು ಎಲ್ಲೆಲ್ಲಿಯೂ ಕಾಣಲು ಸಹಾಯ ಮಾಡುವುದೇ ಭಾಗವತಧರ್ಮವು. ಸರ್ವತ್ರ ನಾರಾಯಣನನ್ನು ಕಾಣುತ್ತಾ ಎಲ್ಲವನ್ನೂ ನಾರಾಯಣನಲ್ಲಿ ಅಡಗಿಸಿ, ಎಲ್ಲ ವಸ್ತುಗಳನ್ನೂ ನಾರಾಯಣನಲ್ಲಿ ಕಾಣುತ್ತಾ ಸರ್ವತ್ರ ನಾರಾಯಣ ಭಾವದಲ್ಲಿರುವ ಅದ್ವೈತಭಾವವನ್ನು ಹೊಂದಿರುವ, ಭಿನ್ನಭಾವಗಳನ್ನು ಜೀರ್ಣಿಸಿಕೊಂಡು ಅವುಗಳ ಹಿನ್ನೆಲೆಯಲ್ಲಿರುವ ಐಕ್ಯತೆಯನ್ನು ಕಾಣುತ್ತಿರುವವನೇ ಪೂರ್ಣತೆಯನ್ನು ನಿಜವಾಗಿ ಪಡೆದಿರುವನು. ಅವನು ನಿಜವಾದ ಶಾಂತಿ ಮತ್ತು ಆನಂದವನ್ನು ಅನುಭವಿಸುವನು. ಅವನು ಸಹಜವಾದ ಸಿದ್ಧನು ಮತ್ತು ಪರಿಪೂರ್ಣನಾದ ಜೀವನ್ಮುಕ್ತನು.

ಗಿಡ, ಮರಗಳು, ಪುಷ್ಪಗಳು, ಅಗ್ನಿ, ಜಲ, ಭೂಮ್ಯಾಕಾಶವು, ಸೂರ್ಯ, ಚಂದ್ರ, ತಾರೆಗಳು, ಪಶು, ಪಕ್ಷಿ,, ಪರ್ವತಗಳು, ನದಿ, ಸಾಗರ, ಮಾನವಕೋಟಿಯು ಕೂಡಿ ವಿರಾಟ್‌ದೇಹವಾಗಿರುವುದು. ಭಿನ್ನ ಭಾವನೆಯಿಲ್ಲದೆ ಅವೆಲ್ಲವುಗಳಿಗೂ ನೀವು ತಲೆಬಾಗಿರಿ. ಅವು ಭಗವಂತನೇ ಎಂದು ಪರಿಗಣಿಸಿರಿ. ಆಗಮಾತ್ರ ಸಮದೃಷ್ಟಿಯು, ವಿಶ್ವಪ್ರೇಮವು (cosmic love) ನಿಮಗೆ ದೊರೆಯುವುದು, ಶಾಂತಿಯನ್ನು ಕಾಣಬಲ್ಲಿರಿ. ಭೂಮಿಯ ಮೇಲೆ ಸ್ವರ್ಗವನ್ನು ಕಾಣುವಿರಿ. ಶ್ರೀ ತುಳಸೀದಾಸರು ಹೇಳುವರು, " ಶ್ರೀ ಸೀತಾರಾಮನು ಎಲ್ಲೆಲ್ಲಿಯೂ ಇರುವನು. ವಿಶ್ವವು ಸೀತಾರಾಮಮಯವಾಗಿದೆ. ಆದ್ದರಿಂದ ಪ್ರತಿಯೊಂದು ವಸ್ತುವಿಗೂ, ಪ್ರತಿಯೊಬ್ಬರಿಗೂ ಕೈಜೋಡಿಸಿ ಬಾಗಿ ನಮಸ್ಕರಿಸಿರಿ " ಇದೇ ವಿರಾಟ್‌ಪೂಜೆಯು.

ಪ್ರಹ್ಲಾದನು ತನ್ನ ಆತ್ಮವನ್ನೇ ಶ್ರೀಹರಿಯೆಂದು ಧ್ಯಾನಿಸಿದನು. ಇದು ಅಭೇದಭಕ್ತಿಯು. ಭಕ್ತಿಯಲ್ಲಿ ಇದು ಬಹಳ ಮುಂದುವರೆದ ಸ್ಥಿತಿಯು.

---

# ೩. ಭಕ್ತಿಯಲ್ಲಿ ಭಾವ

ಭಕ್ತಿಯೋಗದಲ್ಲಿ ಶಾಂತಭಾವ, ಮಧುರಭಾವ, ವಾತ್ಸಲ್ಯಭಾವ, ದಾಸ್ಯ ಭಾವ ಮತ್ತು ಸಖ್ಯಭಾವ ಎಂದು ಐದು ವಿಧವಾದ ಭಾವಗಳಿವೆ. ಮಧುರ ಭಾವವನ್ನು ಕಾಂತಾಭಾವವೆಂದು ಹೇಳುವರು. ಮತ್ತು ಸಖ್ಯಭಾವವು ಮಧುರ ಭಾವದ ಗುಂಪಿಗೆ ಸೇರಿದುದು. ನಿಮ್ಮ ಅಭಿರುಚಿ ಮತ್ತು ಸ್ವಭಾವಕ್ಕೆ ಹೊಂದುವ ಯಾವುದಾದರು ಒಂದು ಭಾವವನ್ನು ಆರಿಸಿಕೊಳ್ಳಿ. ಮತ್ತು ಭಕ್ತಿ ಯನ್ನು ಪರಮಾವಧಿ ಮಟ್ಟಕ್ಕೆ ಬೆಳೆಸಿರಿ.

ಸನ್ಯಾಸಿ ಭಕ್ತರು ಶಾಂತಭಾವವನ್ನು ಹೊಂದಿರುವರು. ಶಾಂತಭಾವದ ಭಕ್ತನು ಉದ್ವಿಗ್ನತೆಗಳಿಗೆ ಒಳಪಡುವುದಿಲ್ಲ ಮತ್ತು ಹೊರಪಡಿಸುವುದಿಲ್ಲ. ಅವನು ನರ್ತಿಸಲಾರ, ಅಳಲಾರ, ಆದರೂ ಅವನ ಹೃದಯವು ಶ್ರದ್ಧಾಭಕ್ತಿ ಪೂರ್ಣವಾಗಿರುವುದು. ಶ್ರೀ ಅರವಿಂದ ಮಹಾರಾಜರು ಈ ವಿಧದ ಭಾವವನ್ನು ಮೆಚ್ಚಿರುವುದಲ್ಲದೆ ನರ್ತನ ಮತ್ತು ರೋದನವನ್ನು ಮಾನಸಿಕ ದೌರ್ಬಲ್ಯದ ಸ್ಥಿತಿಯೆಂದು ಪರಿಗಣಿಸಿದ್ದಾರೆ.

ಮಧುರಭಾವದಲ್ಲಿ ಭಕ್ತನು ಪ್ರೇಮಿ ಮತ್ತು ಪ್ರಿಯತಮ ಎಂಬ ಭಾವನೆಯನ್ನು ಆಹ್ವಾನಿಸುವನು. ತಾನು ರಾಮ ಅಥವ ಕೃಷ್ಣನ ಪತ್ನಿ ಯೆಂದು ಭಾವಿಸುವನು. ಮಹಮ್ಮದೀಯ ಸೂಫಿಗಳು ಈ ಮನೋ ಧರ್ಮವನ್ನು ಪುರಸ್ಕರಿಸುವರು. ಬೃಂದಾವನ, ಮಧುರಾ ಮತ್ತು ನಾಡಿ ಯಾದಲ್ಲಿ ಮಧುರ ಭಾವದ ಭಕ್ತರನ್ನು ಹೆಚ್ಚು ಸಂಖ್ಯೆಯಲ್ಲಿ ಕಾಣ ಬಹುದು. ಅವರು ಸ್ತ್ರೀಯರಂತೆಯೆ ವೇಷಭೂಷಣಗಳನ್ನು ತೊಡುವುದಲ್ಲದೆ ಅವರಂತೆಯೇ ಸಂಭಾಷಿಸುವರು ಮತ್ತು ವರ್ತಿಸುವರು. ತಮಗೆ ಮೂರ್ಛಾವಸ್ಥೆ ಯುಂಟಾಗುವ ವರೆಗೂ (swoon) ಬಹುವಾಗಿ ನರ್ತಿಸಿ ಬಹಳ ಬಳಲಿ ಬೀಳುವರು.

ಸಖೀಭಾವದಲ್ಲಿ ಭಕ್ತನು ತಾನು ಸೀತ ಅಥವ ರಾಧೆಯ ಸಖಿಯೆಂದು ಭಾವಿಸುವನು. ವಾತ್ಸಲ್ಯಭಾವದಲ್ಲಿ ಭಕ್ತನು ಹತ್ತು ವರುಷದ ಬಾಲಕೃಷ್ಣ ನನ್ನು ತನ್ನ ಮಗನೆಂದು ಭಾವಿಸುವನು. ಈ ಸ್ಥಿತಿಯ ಆಶ್ಚರ್ಯವೆಂದರೆ ತಾನು ಕೃಷ್ಣನ ತಂದೆಯೆಂದು ತಿಳಿದು ಸರ್ವಭಯವರ್ಜಿತನಾಗಿ ಸರ್ವ

ಸ್ವಾರ್ಥಭಾವಮುಕ್ತನಾಗಿ ಬಾಲ ಉಪಾಸನೆಯಿಂದ ನಿರಪೇಕ್ಷಿಕನಾಗಿರುವನು. ವಲ್ಲಭಾಚಾರ್ಯರ ಅನುಯಾಯಿಗಳು ವಾತ್ಸಲ್ಯಭಾವವನ್ನು ಮಾನ್ಯಮಾಡುವರು.

ದಾಸ್ಯಭಾವದಲ್ಲಿ ಶ್ರೀರಾಮ ಅಥವ ಕೃಷ್ಣನನ್ನು ತನ್ನ ಸ್ವಾಮಿಯೆಂದೂ ತಾನು ಅವನ ಭೃತ್ಯನೆಂದೂ ತಿಳಿಯುವನು. ಶ್ರೀ ಹನುಮಾನ್ ಈ ಭಾವವನ್ನು ಹೊಂದಿದ್ದನು. ಅಯೋಧ್ಯೆಯ ಬಹುಸಂಖ್ಯಾತ ಭಕ್ತರು ದಾಸ್ಯ ಭಾವವನ್ನು ಹೊಂದಿರುವರು. ತಮ್ಮ ಹೆಸರನ್ನು, ರಾಮದಾಸ, ಸೀತಾರಾಮ ದಾಸ ಮುಂತಾಗಿ ಇಟ್ಟುಕೊಳ್ಳುವರು.

ಸಖ್ಯಭಾವದಲ್ಲಿ ಶ್ರೀಕೃಷ್ಣನನ್ನು ತನ್ನ ಮಿತ್ರನೆಂದು ಪರಿಗಣಿಸುವನು. ಈ ಭಾವವು ಪರಿಶುದ್ಧತೆ, ಧೈರ್ಯ, ವಿವೇಕ, ಮತ್ತು ಸಾಮರ್ಥ್ಯವನ್ನು ಅಪೇಕ್ಷಿಸುವುದು. ಸಾಮಾನ್ಯರು ಈ ಭಾವವನ್ನು ಹೊಂದಲು ಕಷ್ಟವೆಂದು ಅರಿಯುವರು. ಅರ್ಜುನನಿಗೆ ಈ ಭಾವವಿದ್ದಿತು.

ಈ ಭಾವದಲ್ಲಿ ಪೂಜಿಸುವವನಿಗೂ, ಪೂಜಾರ್ಹನಿಗೂ ಸಮಾನತೆ ಯಿರುವುದು. ಸಖ್ಯಭಾವವು ವೈದಿಕ ಧ್ಯಾನದಲ್ಲಿ ಒಂದು ಶಾಂತರೀತಿಯು. ಅದು ಐಕ್ಯತೆಯಲ್ಲಿ ಪರ್ಯವಸಾನವಾಗುವುದು. ಆಗ ಭಕ್ತನು ಉದ್ಗಾರ ಮಾಡುವನು — " ಗೋಪಾಲೋಽಹಂ " — ನಾನು ಗೋಪಾಲನು, ಎಂದು.

---

# ೪. ಪರಾಭಕ್ತಿ

ಭಗವಾನ್ ಶಿವನ ದರ್ಶನವನ್ನು ನೀವು ಈ ಜನ್ಮದಲ್ಲೇ ಪಡೆಯಬಹುದು. ಅನೇಕರು ಸಾಕ್ಷಾತ್ಕಾರ ಹೊಂದಿರುವರು. ನೀವೂ ಸಾಕ್ಷಾತ್ಕಾರ ಹೊಂದ ಬಹುದು. ಇತರರು ಏನನ್ನು ಪಡೆದರೊ ಅದನ್ನು ನೀವು ಪಡೆಯಬಹುದು. ಆದರಲ್ಲಿ ಸಂಶಯವಿಲ್ಲವು. ಅವನಿಂದ ಯಾವ ವರವನ್ನೂ ಕೇಳಬೇಡಿ. ಯಾವಾಗ ವರದ ಬೇಡಿಕೆ ಇದೆಯೋ ಅಲ್ಲಿ ನಿಜವಾದ ಭಕ್ತಿಯಿಲ್ಲ. ಅದು ಕೇವಲ ಸ್ವಾರ್ಥಮಯವು, ವ್ಯವಹಾರವು. ನೀವು ದೇವರೊಡನೆ ವ್ಯಾಪಾರ ಮಾಡಕೂಡದು. ಅವನನ್ನು ಪ್ರೇಮಕ್ಕಾಗಿ ಪ್ರೇಮಿಸಿರಿ. ನಿಷ್ಕಾಮ್ಯ ಅನನ್ಯ

ಭಕ್ತಿಯನ್ನು ಹೊಂದಿರಿ. ಮುಕ್ತಿಯನ್ನೂ ಬೇಡದಿರಿ. ಮುಕ್ತಿಯು ಭಕ್ತಿ ರಾಣಿಯ ದಾಸಿಯು. ಭಕ್ತಿಯಿಂದ ಮುಕ್ತಿಯು ಲಭಿಸುವುದು.

ಇಷ್ಟದೈವದ ದರ್ಶನಮಾತ್ರವೇ ಸಾಲದು. ಆತ್ಮಜ್ಞಾನವು ಅತ್ಯವಶ್ಯಕವು. ನಾಮದೇವನು ಭಗವಾನ್ ಕೃಷ್ಣನ ದರ್ಶನವನ್ನು ಹಲವುಬಾರಿ ಹೊಂದಿದ್ದನು. ಅವನು ಪೂರ್ಣಜ್ಞಾನಿಯಾಗಿ ವಿಕಾಸವಾಗಿರಲಿಲ್ಲ. ಒಮ್ಮೆ ಗೋರಕುಂಬಾರನು ಭಕ್ತರ ಸಂಗದಲ್ಲಿದ್ದ ನಾಮದೇವನ ತಲೆಯನ್ನು ತಟ್ಟಿ ಅವನನ್ನು ಕಚ್ಚಾ ಅಥವಾ ಅರ್ಧಬೆಂದವನು ಎಂದನು. ನಂತರ ನಾಮದೇವನು ಕೈವಲ್ಯದ ರಹಸ್ಯೋಪದೇಶಕ್ಕಾಗಿ ಮಲ್ಲಿಕಾರ್ಜುನ ದೇವಾಲಯದಲ್ಲಿದ್ದ ವಿಶೋಬಾಕೇಶರನನ್ನು ಸಂಧಿಸಿವನು. ಆ ದೇವಾಲಯದಲ್ಲಿ ವಿಶೋಭಾಕೇಶರನ ವಿಚಿತ್ರವಾದ ಅವಸ್ಥೆಯನ್ನು ಕಂಡನು. ಕೇಶರನು ಧ್ಯಾನಾವಸ್ಥೆಯಲ್ಲಿ ಕೆಳಗೆ ಬಿದ್ದುಕೊಂಡು ತನ್ನ ಕಾಲುಗಳನ್ನು ಶಿವಲಿಂಗದಮೇಲೆ ಚಾಚಿದ್ದನು. ನಾಮದೇವನು ಹೇಳಿದನು—" ಓ ಪೂಜ್ಯ ಸ್ವಾಮಿಜಿ, ತಾವು ಏತಕ್ಕಾಗಿ ಶಿವಲಿಂಗದ ಮೇಲೆ ಕಾಲುಗಳನ್ನು ಇಟ್ಟಿರುವಿರಿ " ಎಂದು ಕೇಳಿದನು. ಆಗ ಕೇಶರನು " ದಯುವಿಟ್ಟು ನನ್ನ ಕಾಲುಗಳನ್ನು ಶಿವಲಿಂಗವಿಲ್ಲದ ಕಡೆ ಇಡು " ಎಂದನು. ನಾಮದೇವನು ಕೇಶರನ ಕಾಲುಗಳನ್ನು ಇಟ್ಟಕಡೆಗಳಲ್ಲೆಲ್ಲಾ ಶಿವಲಿಂಗವು ಉದ್ಭವಿಸುವುದನ್ನು ಕಂಡನು. ನಾಮದೇವನು ಆಶ್ಚರ್ಯದಿಂದ ಗರಬಡಿದಂತಾದನು. ಕೂಡಲೇ ಕೇಶರನ ಪಾದದ್ವಯಗಳಲ್ಲಿ ಬಿದ್ದು ಆತ್ಮೋಪದೇಶವನ್ನು ಮಾಡಬೇಕೆಂದು ಬೇಡಿಕೊಂಡನು. ಆತ್ಮಜ್ಞಾನವನ್ನು ಪಡೆದು ಪಂಢರಪುರಕ್ಕೆ ನಾಮದೇವನು ಹಿಂತಿರುಗಿದನು. ಈಗ ಮಾತ್ರ ಪೂರ್ಣವಾಗಿ ಬೆಂದು ಪಕ್ಕಾ ಜ್ಞಾನಿಯಾದನು.

ದೇವರು, ಜೀವ ಮತ್ತು ಜಗತ್ತು ನಿಜವಾಗಿಯೂ ಒಂದೇ. ಕಾಣುತ್ತಿರುವ ದ್ವಂದ್ವಗಳು ಕೇವಲ ತೋರಿಕೆಯು ಮತ್ತು ಭ್ರಮೆಯು. ತೋರಿಕೆಯ ಭೇದಗಳನ್ನು ನಾಶಮಾಡಿ ಮಾನವ ಮಾನವನಿಗೆ ಅಂತರವನ್ನುಂಟುಮಾಡುವ ಅಡ್ಡಿಗಳನ್ನು ಒಡೆದುಹಾಕಿ ಎಲ್ಲದರ ಅಂತರ್ಯದಲ್ಲಿ ಅಡಗಿರುವ ಏಕತ್ವವನ್ನು ಕಂಡುಕೊಂಡು ಮುಕ್ತರಾಗಿ.

ಪ್ರಹ್ಲಾದನು ತನ್ನ ಹೃದಯಾಂತರಾಳದಿಂದ ಹೀಗೆ ಪ್ರಾರ್ಥಿಸಿದನು : " ಹೇ ಸ್ವಾಮಿ, ನಾನು ಯಾವ ಜನ್ಮವನ್ನೆತ್ತಿದರೂ ನಿನ್ನ ಪಾದಪದ್ಮಗಳಲ್ಲಿ

ನಿರಂತರ ಭಕ್ತಿಯಿರಲಿ.” ಇಂದು ಜಗತ್ತಿನ ಉದ್ಧಗಲಕ್ಕೂ, ಎಲ್ಲೆಡೆಯೂ ಭಕ್ತಿಯನ್ನು ಪ್ರಕಾಶಮಾಡುವ ಅಂತಹ ಭಕ್ತರ ಆವಶ್ಯಕತೆಯಿರುವುದು. ಹೃದಯವು ಶುದ್ಧಿಯಾದಾಗ ಮನಸ್ಸೂ ಸಹಜವಾಗಿ ಭಗವಂತನಕಡೆ ತಿರುಗುವುದು. ಸಾಧಕನು ಭಗವಂತನ ಕಡೆ ಆಕರ್ಷಿಸಲ್ಪಡುವನು. ಶುದ್ಧ ಪ್ರೇಮ, ಆತ್ಮ ಸಮರ್ಪಣೆ ಮತ್ತು ಅರ್ಚನೆಯಿಂದ ಕ್ರಮವಾಗಿ ಭಗವಂತ ನಲ್ಲಿ ತನ್ಮಯನಾಗುವನು. ಈಗ ಭಕ್ತನು ವಿಶ್ವದ ಅಸ್ತಿತ್ವವಾಗುವನು. ಅವನದು ವಿಶ್ವಜೀವನ ಮತ್ತು ಸಂತತ ಬಾಳ್ವೆಯು. ವೈಯಕ್ತಿಕ ಶಕ್ತಿಯು ವಿಶ್ವದ ಸತ್ವವಾಗುವುದು.

ಜ್ಞಾನವೆಂದರೇನು ? ವಸ್ತ್ರದಲ್ಲಿ ನೂಲನ್ನು, ಮಡಕೆಯಲ್ಲಿ ಮಣ್ಣನ್ನು, ಒಡವೆಯಲ್ಲಿ ಚಿನ್ನವನ್ನು, ಶಸ್ತ್ರಗಳಲ್ಲಿ ಕಬ್ಬಿಣವನ್ನು, ಪೀಠೋಪಕರಣಗಳಲ್ಲಿ ಮರವನ್ನೂ ನೋಡುವುದೇ ಜ್ಞಾನ. ಪ್ರತಿಯೊಂದು ಜೀವಿಯಲ್ಲಿಯೂ ದೇವರು ಅಥವ ಆತ್ಮನನ್ನು ಕಂಡು ನಿಮ್ಮ ಮತ್ತು ಎಲ್ಲರ ಹೃದಯಗಳಲ್ಲೂ ಅವನೇ ಕುಳಿತಿರುವನೆಂದು ಭಾವಿಸುವುದೇ ಜ್ಞಾನವು. (ವಾಸುದೇವ—ಸರ್ವಂ —ಇತಿ). ಭಕ್ತಿಯು ಯಾವಾಗ ಪಕ್ವವಾಗುವುದೋ ಆಗ ಜ್ಞಾನವುಂಟಾಗು ವುದು. ಭಕ್ತಿಯು ವರ್ಧಿಸಿದಾಗ ಜ್ಞಾನವು ತಾನಾಗಿ ಉದಯಿಸುವುದು. ಅನನ್ಯ ಭಕ್ತಿಯ ಫಲವೇ ಜ್ಞಾನವು.

ಉಪಾಸನೆಯಲ್ಲಿ ಎರಡು ವಿಧ :— (೧) ಪ್ರತೀಕೋಪಾಸನ (೨) ಅಹಂಗ್ರಹೋಪಾಸನ. ಪ್ರತೀಕ ಅಥವಾ ಮೂರ್ತಿಯನ್ನು ಧ್ಯಾನದಲ್ಲಿ ಬಳಸ ಲಾಗುವುದು. ಎರಡನೆಯ ವಿಧದಲ್ಲಿ ಆತ್ಮವನ್ನು ತನ್ನ ಧ್ಯಾನದಲ್ಲಿ ಧ್ಯೇಯ ವಾಗಿ ಬಳಸುವನು. ಪ್ರತೀಕೋಪಾಸನೆಯು ಭಕ್ತನ ಮಾರ್ಗವು. ಅಹಂಗ್ರಹೋ ಪಾಸನೆಯು ಅದ್ವೈತ ವೇದಾಂತಿಯ ಮಾರ್ಗವು. ಪ್ರತೀಕೋಪಾಸನೆಯು ಸಿದ್ಧಿಸಿದ ನಂತರ ಅಹಂಗ್ರಹೋಪಾಸನೆಯನ್ನು ಆರಂಭಿಸಿ ಧ್ಯಾನದಲ್ಲಿ ತನ್ನ ಶುದ್ಧಾತ್ಮನನ್ನೇ ಚಿಂತಿಸುವನು.

ಜ್ಞಾನವು ಭಕ್ತಿಯ ಫಲವು. ಭಕ್ತಿಯು ದ್ವೇಷ, ಅಸೂಯೆ, ಕಾಮ, ಕ್ರೋಧ ಮತ್ತು ಲೋಭವನ್ನು ನಾಶಮಾಡಿ ಹೃದಯವನ್ನು ದಿವ್ಯಪ್ರೇಮದಿಂದ ತುಂಬಿ ಭಿನ್ನಭಾವನೆಗಳನ್ನು ತೊಲಗಿಸುವುದು. ಇದಾದ ನಂತರ ಭಕ್ತನು ಎಲ್ಲೆಲ್ಲಿಯೂ ಏಕತ್ವವನ್ನು ಕಂಡು ಆತ್ಮೈಕ್ಯವನ್ನು ಹೊಂದಿ ವರ್ಣಿಸಲಸದಳ

ವಾದ ವಿಶ್ವದರ್ಶನದ ಅನುಭವವನ್ನು ಪಡೆಯುವನು. ಅದ್ವೈತ ವೇದಾಂತ ರೀತ್ಯಾ ಆತ್ಮಶ್ರದ್ಧೆಯೇ ಭಕ್ತಿಯು. ಇದು ಶ್ರೇಷ್ಠತಮ ಭಕ್ತಿಯು. ಇದು ಪ್ರೇಮಭಕ್ತಿ, ಪರಾಭಕ್ತಿ ಮತ್ತು ಅಪರಾಭಕ್ತಿಯನ್ನು ಒಳಗೊಳ್ಳುವುದು. ಅದ್ವೈತ ವೇದಾಂತಿಯು ಭಗವಾನ್ ಶಿವ, ಹರಿ, ರಾಮ, ಕೃಷ್ಣ, ದುರ್ಗಾ, ಗಾಯತ್ರಿ, ಅಲ್ಲಾ, ಯಹೋವ ಮುಂತಾದವರ ಆರಾಧಕನು. ಅವನು ಅಂಥ ಸಂಪ್ರದಾಯದ ಭಕ್ತನಲ್ಲ. ಅವನ ಹೃದಯವು ಅನಂತಕಾಲದವರೆಗೆ ವ್ಯಾಪ್ತವಾದುದು.

ಆತ್ಮನಲ್ಲಿ ಶ್ರದ್ಧೆಯು ಅತ್ಯುತ್ತಮವಾದ ಭಕ್ತಿಯು. ಇದನ್ನು ಪಾರಮಾರ್ಥಿಕಭಕ್ತಿ ಎನ್ನುವರು. ಜ್ಞಾನಯೋಗಿಯು ತನ್ನ ಆತ್ಮವನ್ನೇ ಆರಾಧಿಸುವನು, "ನಾನು ಸಚ್ಚಿದಾನಂದ ಅಖಂಡ ಪರಿಪೂರ್ಣ ಬ್ರಹ್ಮನು" ಎಂದು ಅರ್ಚಿಸುವನು. ಇದಕ್ಕಿಂತ ಮಿಗಿಲಾದ ಭಕ್ತಿಯುಂಟೇ? ಹಿರಣ್ಯಕಶಿಪುವಿನ ಸುಪುತ್ರನಾದ ಪ್ರಹ್ಲಾದನು ತನ್ನ ಚಿತ್ತಶುದ್ಧಿಯಿಂದ ಧ್ಯಾನಿಸಿ ಅಭೇಧವಾದ ನಿರ್ವಿಕಲ್ಪ ಸಮಾಧಿಯಲ್ಲಿ ದಿವ್ಯಾನಂದವನ್ನು ಅನುಭವಿಸಿದನು. ನಿರ್ವಿಕಲ್ಪ ಸಮಾಧಿಯಲ್ಲಿ ಐದುಸಾವಿರ ವರ್ಷಗಳವರೆಗೆ ವಿಗ್ರಹದಂತೆ ಕುಳಿತಿದ್ದನು.

ಭಗವಂತನ ಇರುವಿಕೆಯನ್ನು ಎಲ್ಲೆಲ್ಲಿಯೂ ಕಾಣಿರಿ. ಅವನಲ್ಲಿ ನಿಮ್ಮ ಮನಸ್ಸನ್ನು ನಿಲ್ಲಿಸಲು ಸತತವಾಗಿ ಪ್ರಯತ್ನಿಸಿರಿ. ಸದಾ ನಿಮ್ಮ ಪ್ರೇಮ ಮೂರ್ತಿಯನ್ನು ಈ ಎಲ್ಲ ರೂಪುಗಳಲ್ಲೂ ನೋಡಲು ಪ್ರಯತ್ನ ಮಾಡಿ. ಅವನ ದಿವ್ಯನಾಮಗಳನ್ನು ಶಾಂತವಾಗಿ ಪುರಶ್ಚರಣೆ ಮಾಡಿ. ಆಗಿಂದಾಗ್ಯೆ ಅವನ ನಾಮ ಸಂಕೀರ್ತನೆ ಮಾಡಿರಿ. ಶಾಂತವಾಗಿ ಕೀರ್ತನೆ ಮಾಡಿರಿ. ಭಗವಂತನಲ್ಲಿ ಮನೋಲಯ ಮಾಡಿರಿ. ಭಗವಂತನೊಳಗಿನ ಶಾಂತಿಯಲ್ಲಿ ಆನಂದಿಸಿರಿ.

ದೇಹವು ಚಲಿಸುವ ದೇವಾಲಯವೆಂದೂ, ನಿಮ್ಮ ಕಾರ್ಯಾಲಯ, ಅಂಗಡಿ ಮಾಳಿಗೆಯನ್ನು ಒಂದು ದೊಡ್ಡ ದೇವಾಲಯ ಅಥವಾ ಬೃಂದಾವನ ವೆಂದೂ ಮತ್ತು ನಡೆ, ಭೋಜನ, ಉಸಿರು, ದರ್ಶನ, ಶ್ರವಣ, ಪಠಣ, ಮುಂತಾದ ನಿಮ್ಮೆಲ್ಲ ಚಟುವಟಿಕೆಗಳನ್ನೂ ಭಗವಂತನಿಗೆ ಅರ್ಪಿಸಿದೆವೆಂದು ಭಾವಿಸಿರಿ. ದುಡಿಮೆಯೇ ಆರಾದನೆಯು. ಸರಿಯಾದ ರೀತಿಯಲ್ಲಿ ಮಾಡಿದ

ಕೆಲಸವು ಧ್ಯಾನವೇ. ನಾನು ಕರ್ತೃ, ನಾನು ಭೋಕ್ತೃ ಎಂಬ ಭಾವವಿಲ್ಲದೆ, ಫಲಾಪೇಕ್ಷೆಯಿಲ್ಲದೆ ಕರ್ಮಕ್ಕಾಗಿ ಕರ್ಮವನ್ನು ಮಾಡಿರಿ. ನೀವು ಕೇವಲ ನಿಮಿತ್ತಮಾತ್ರರೆಂದೂ, ಭಗವಂತನೇ ನಿಮ್ಮ ಇಂದ್ರಿಯಗಳ ಮೂಲಕ ಕರ್ಮ ಮಾಡುವನೆಂದೂ ಅರಿತುಕೊಳ್ಳಿ. ಈ ಜಗತ್ತು ಭಗವಂತನ ಲೀಲೆಯೆಂದೂ ಅಥವಾ ವಿಶ್ವಬೃಂದಾವನವೆಂದೂ ನಿಮ್ಮ ಸತೀ, ಸುತರು, ಮಾತಾ ಪಿತೃಗಳು, ಬಂಧು, ಬಾಂಧವರೆಲ್ಲರೂ ಭಗವಂತನ ಮಕ್ಕಳೆಂದು ತಿಳಿಯಿರಿ. ಪ್ರತಿಯೊಬ್ಬರ ಮುಖದಲ್ಲಿ, ಪ್ರತಿಯೊಂದು ವಸ್ತುವಿನಲ್ಲಿ ದೇವರನ್ನು ನೋಡಿರಿ. ಹೀಗೆ ಬದಲಾದ ದೃಷ್ಟಿಕೋನವನ್ನು ಬೆಳೆಸಿಕೊಂಡು ಸಂತತ ಅಭ್ಯಾಸದಿಂದ ದಿವ್ಯ ಭಾವವನ್ನು ಹೊಂದಿದರೆ ನಿಮ್ಮೆಲ್ಲ ಕರ್ಮಗಳೂ ಭಗವದಾರಾಧನೆಯಾಗುವುದು. ಇಷ್ಟು ಮಾತ್ರವೇ ಸಾಕು. ನಿಮಗೆ ಕೂಡಲೇ ಭಗವಂತನ ದರ್ಶನವಾಗುವುದು. ಇದು ಕ್ರಿಯಾತ್ಮಕ (dynamic) ಯೋಗವು. ಇದು ಸುಲಭ ಸಾಧನವು. ಇನ್ನು ಮುಂದೆ ನಿಮ್ಮ ಹಳೆಯ ವ್ಯರ್ಥಾಲಾಪಗಳಾದ, "ಸ್ವಾಮಿಜೀ, ಅಧ್ಯಾತ್ಮ ಸಾಧನೆಗೆ ಕಾಲಾವಕಾಶವಿಲ್ಲ" ಎಂದು ನುಡಿಯಬೇಡಿ. ಈ ಶಕ್ತಿಯುತವಾದ ಯೋಗವನ್ನು ಮೂರು ತಿಂಗಳು ಅಭ್ಯಾಸ ಮಾಡಿದರೆ ನೀವು ಸಂಪೂರ್ಣ ಬದಲಾವಣೆ ಹೊಂದಿದ ವ್ಯಕ್ತಿಯಾಗುವಿರಿ. ಇರುವೆ, ನಾಯಿ, ಆನೆ, ಹುಲಿ, ಮುಸ್ಲಿಂ, ಹಿಂದೂ, ಜ್ಯೂ ಮತ್ತು ಕ್ರಿಶ್ಚಿಯನ್ ಮುಂತಾದ ಎಲ್ಲ ಜೀವಿಗಳೊಡನೆ ಆತ್ಮೀಯ ಸಂಬಂಧವನ್ನೂ, ಸರಿಯಾದ ಐಕ್ಯತೆಯನ್ನೂ ಅರಿತುಕೊಳ್ಳಿರಿ. ಸೃಷ್ಟಿ ಮತ್ತು ವಿಕಾಸದಲ್ಲಿ ಕೇವಲ ಅಲ್ಪಾಂಶದಷ್ಟು ವ್ಯತ್ಯಾಸ ತೋರಬಹುದು. ಎಲ್ಲ ರೂಪಗಳೂ ಸಗುಣ ಬ್ರಹ್ಮನಿಗೇ ಸೇರಿದುದು. ನೀವು ಒಂದು ಮರ ಅಥವಾ ಪೊದೆಯನ್ನು, ಒಬ್ಬ ಸಿಖ್ ಅಥವಾ ಮುಸಲ್ಮಾನನನ್ನು ಕಂಡಾಗ ಅಜ್ಞಾನದ ಆವರಣದ ಹಿನ್ನೆಲೆಯಲ್ಲಿ ಅಡಗಿರುವ ನಿಜವಾದ ಜ್ಞಾನವನ್ನು ನೋಡಲು ಪ್ರಯತ್ನಿಸಿರಿ. ಇದನ್ನು ಕೆಲವು ಕಾಲ ಅಭ್ಯಾಸಮಾಡಿದರೆ ನಿಮಗೆ ಅನಿರ್ವಚನೀಯವಾದ ಆನಂದವುಂಟಾಗುವುದು. ಎಲ್ಲ ದ್ವೇಷಗಳೂ ನಿಲ್ಲುವುವು. ನೀವು ವಿಶ್ವಪ್ರೇಮವನ್ನು ಅಥವಾ ಜ್ಞಾನೈಕ್ಯತೆಯನ್ನು ಬೆಳೆಸುವಿರಿ. ಇದೊಂದು ಮಹತ್ತಾದ ಅನುಭವವು. "ಸ್ನಾನ, ಶೌಚಗಳಿಂದೇನು ? ಮಸೀದಿಯಲ್ಲಿ ಮಾಡುವ ನಮಾಜುಗಳಿಂದೇನು ? ಹೃದಯದೊಳಗೆ ಮೋಸವನ್ನು ತುಂಬಿಟ್ಟುಕೊಂಡು ಪ್ರಾರ್ಥನೆಗಳನ್ನು

ಸಲ್ಲಿಸಿದರೇನು ? ಮಕ್ಕಾಕ್ಕೆ ಯಾತ್ರೆಮಾಡಿದರೇನು ? ಹಿಂದೂಗಳು ೨೪ ದಿನ ಏಕಾದಶಿ ಉಪವಾಸ ಮಾಡುವರು. ಮುಸ್ಲಿಮರು ೩೦ ದಿನ ಉಪವಾಸ ಮಾಡುವರು. ಆದರೆ ಕೇಳಿಕೊಳ್ಳುವೆನು, ದಯವಿಟ್ಟು ತಿಳಿಸಿ. ಹನ್ನೊಂದು ತಿಂಗಳುಗಳನ್ನೂ ಕಳೆದು ಒಂದು ತಿಂಗಳನ್ನು ಮಾತ್ರ ತನ್ನದಾಗಿ ಮಾಡಿ ಕೊಂಡವನು ಯಾರು ? ಹರಿಯು ಪೂರ್ವದಲ್ಲಿಯೂ, ಅಲ್ಲಾ ಪಶ್ಚಿಮದಲ್ಲಿಯೂ ವಾಸಿಸುವಂತೆ ಮಾಡಲ್ಪಟ್ಟಿದೆ. ಆದರೆ ನಿಮ್ಮ ಹೃದಯದಲ್ಲಿಯೇ ಭಗವಂತ ನನ್ನು ಹುಡುಕಿರಿ. ಕರೀಮು ಮತ್ತು ರಾಮರಿಬ್ಬರೂ ಅಲ್ಲಿ ಸಿಕ್ಕುವರು. ದೇವರು ಮಸೀದಿಯಲ್ಲಿ ಮಾತ್ರವಿದ್ದರೆ ಆದರ ಹೊರಗಿರುವ ದೇಶವೆಲ್ಲಾ ಯಾರಿಗೆ ಸೇರಿದುದು ? ರಾಮನು ತೀರ್ಥಕ್ಷೇತ್ರಗಳಲ್ಲೂ ಮತ್ತು ಮೂರ್ತಿಗಳಲ್ಲೂ ಇರುವನೆಂದು ಭಾವಿಸುವರು. ಆದರೆ ಅವನನ್ನು ಎಲ್ಲಿಯೂ ಕಂಡಿಲ್ಲ. ವೇದ ಗಳು ಮತ್ತು ಖೋರಾನ್ ಸುಳ್ಳೆಂದು ಯಾರು ಹೇಳಿದರು ? ಚಿಂತಿಸದವರಿಗೆ ಅವು ಹಾಗೆಯೇ. ಎಲ್ಲ ಹೃದಯಗಳಲ್ಲಿಯೂ ಎರಡಿಲ್ಲದ ಒಬ್ಬನೇ ಇರುವನು. ಸ್ತ್ರೀ ಅಥವಾ ಪುರುಷ ನಿನ್ನ ರೂಪವೇ ಆಗಿದೆ. ಕಬೀರನು "ಅಲ್ಲಾ, ರಾಮನ ಮಗುವು. ಅವನಿಗೆ ಗುರುವೂ, ಪೀರನೂ ಒಂದೇ" ಎಂದು ಹೇಳು ವನು. ಮಾನವರಲ್ಲಿರುವ ಅಂತರವನ್ನು ಕಳೆಯಬಲ್ಲದು ಶುದ್ಧಪ್ರೇಮವು. ಎಲ್ಲ ವಿಧವಾದ, ವಿತರ್ಕವಾದ ದ್ವೇಷ, ಅಸೂಯೆ, ಅಸಹನೆಗಳನ್ನು ನಾಶ ಮಾಡಬಲ್ಲದು ಶುದ್ಧ ಪ್ರೇಮವೊಂದೇ. ಒಬ್ಬ ಜ್ಯೂ ಅಥವಾ ಕ್ರಿಶ್ಚಿಯನ್, ಹಿಂದೂ ಮತ್ತು ಮುಸ್ಲಿಮ್, ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟೆಂಟ್, ಬ್ರಾಹ್ಮಣ ಮತ್ತು ಅಬ್ರಾಹ್ಮಣ, ವೈಷ್ಣವ ಮತ್ತು ಶೈವ, ಸಾಮಾಜಿಕ ಮತ್ತು ಸನಾತನಿ, ರಮಾನಂದಿ ಮತ್ತು ಶಾಕ್ತ, ಜರ್ಮನ್ ಮತ್ತು ಇಂಗ್ಲಿಷ್‌ಮನ್, ಸನ್ಯಾಸಿ ಮತ್ತು ಬೈರಾಗಿ, ಚೀಣೀ ಅಥವಾ ಜಪಾನೀಯನು ಒಂದೇ ಸಮಾನ ಪೀಠದಲ್ಲಿ ಒಂದುಗೂಡಿಸುವ ಹೃದಯದ ಏಕಮಾತ್ರ ಶಕ್ತಿ ಎಂದರೆ ಪರಿಶುದ್ಧ ಪ್ರೇಮವೇ.

ಸಾಧಕನು ಕ್ರಮವಾಗಿ ಭಗವಂತನನ್ನು ಮೂರ್ತಿಯಲ್ಲಿ, ನಂತರ ಜೀವ ರಾಶಿಗಳ ಹೃದಯದಲ್ಲಿ, ಆನಂತರ ವಿಶ್ವದ ಎಲ್ಲ ನಾಮರೂಪಗಳಲ್ಲಿ ಕಾಣುವನು. ಭಕ್ತನು ಭಗವಂತನನ್ನು ಎಲ್ಲೆಲ್ಲಿಯೂ ಕಾಣುವನು. ಕೇವಲ ಮೂರ್ತಿಯಲ್ಲಿ ದೇವರನ್ನು ಕಾಣುವವನು ಕೆಳದರ್ಜೆಯ ಭಕ್ತನು. ಭಕ್ತರಲ್ಲಿ ಭಗವಂತನನ್ನು

ಕಾಣುತ್ತಾ, ಅದೇ ಕಾಲದಲ್ಲಿ ಅವನು ಒಳ್ಳೆಯವನು, ಇವನು ಭಕ್ತನಲ್ಲ ಎನ್ನು ವವನು ಮಧ್ಯಮ ದರ್ಜೆಯ ಭಕ್ತನು. ಯಾರು ಎಲ್ಲೆಲ್ಲಿಯೂ ದೇವರನ್ನೇ ಕಾಣುವರೋ, (ವಾಸುದೇವಃ ಸರ್ವಂ ಇತಿ) ಎಂಬಂತೆ ಇಡೀ ಜಗತ್ತನ್ನೇ ಶ್ರೀಕೃಷ್ಣನೆಂದು ಕಾಣುವವರು ಉತ್ತಮನುಟ್ಟದ ಭಕ್ತರು. ಮಿಠಾಯಿಯ ತುಂಬಾ ಸಿಹಿಯು ವ್ಯಾಪಿಸಿರುವಂತೆ ಜಗತ್ತಿನ ತುಂಬಾ ಭಗವಂತನು ವ್ಯಾಪಿಸಿರುವನು, ಭಗವಂತನಲ್ಲಿ ಇಡೀ ವಿಶ್ವವೇ ಇರುವುದು. ಈಶಾವಾಸ್ಯ ಉಪನಿಷತ್ತಿನ ಮೊದಲನೆಯ ಮಂತ್ರವು: "ಈಶಾವಾಸ್ಯಮಿದಮ್ ಸರ್ವಂ— ಎಂದರೆ ಈ ವಿಶ್ವವು ಈಶ್ವರನಿಂದ ವ್ಯಾಪಿತವಾಗಿದೆ" ಎಂದು ಇರುವುದು. ನಾಮರೂಪಾತ್ಮಕವಾದ ದೃಶ್ಯವನ್ನು ತಳ್ಳಿ ಎಲ್ಲೆಲ್ಲಿಯೂ ಶ್ರೀಹರಿಯನ್ನು ನೋಡಿರಿ. ದೇಹವನ್ನು ಮರೆಯಿರಿ. ಸನ್ನಿವೇಶವನ್ನು ಮರೆಯಿರಿ. ಶ್ರೀಹರಿಯ ಏಕಮಾತ್ರಭಾವದಲ್ಲಿ ನಿಲ್ಲಿರಿ. ಇದು ಬದ್ಧ ಸಮಾಧಿಯು.

ಭಗವಂತನು ಎಲ್ಲ ಜೀವಿಗಳಲ್ಲಿಯೂ ಇರುವನು. ಎಲ್ಲ ವಸ್ತುಗಳಲ್ಲಿ, ಎಲ್ಲ ಆಕೃತಿಗಳಲ್ಲಿ ದೇವರನ್ನೇ ಕಾಣಿರಿ. ಉಸಿರು, ಧ್ವನಿ, ಕಣ್ಣುಗಳಲ್ಲಿ ಅವನಿರುವನು. ನಿಮ್ಮಬದುಕಿನ ಬದುಕಾಗಿ, ಆತ್ಮದ ಆತ್ಮವಾಗಿ ಇದ್ದಾನೆ. ಹಿಂದೂ-ಮುಸಲ್ಮಾನ್, ಪ್ರಾಟೆಸ್ಟೆಂಟ್-ಕ್ಯಾಥೋಲಿಕ್, ಶೈವ—ವೈಷ್ಣವ ಎಂಬ ಭೇದವನ್ನು ಮಾಡದಿರಿ.

ಚಿಂದಿಯ ಬಟ್ಟೆಯಲ್ಲಿರುವ ಭಿಕ್ಷುಕನನ್ನು ಕಂಡಾಗ ಎರಡು ಕೈಗಳನ್ನೂ ಜೋಡಿಸಿ ನಮಸ್ಕರಿಸಿರಿ. ರೂಪವು ಎಷ್ಟೇ ವಿಕಾರವಾಗಿದ್ದರೂ ಅದು ಭಗವಂತನ ಪ್ರತೀಕವು.

ರಾಮನು ತನ್ನ ಬಗ್ಗೆ ಹನುಮಂತನ ಅಭಿಪ್ರಾಯವೇನೆಂದು ಕೇಳಿದಾಗ ಹನುಮಂತನು ಹೀಗೆ ನುಡಿದನು, "ದೇಹದೃಷ್ಟಿಯಲ್ಲಿ ಸ್ವಾಮಿ, ನಾನು ನಿನ್ನ ದಾಸನು, ಜೀವಭಾವದಲ್ಲಿ ನಾನು ನಿನ್ನ ಅಂಶವು, ಆತ್ಮಭಾವದಲ್ಲಿರುವಾಗ ನೀನು ಮತ್ತು ನಾನು ಒಂದೇ."

ಮುಂದುವರೆದ ಭಕ್ತರು ತಮ್ಮ ಪ್ರಿಯನಾದ ಪರಮಾಪ್ತನಲ್ಲಿ ಐಕ್ಯರಾಗುವರು. ತನ್ನ ಇಷ್ಟ ದೈವದ ಆರಾಧನೆಯಲ್ಲಿ ತನ್ನ ವ್ಯಕ್ತಿತ್ವವನ್ನು ಮುಳುಗಿಸುವನು. ದಿವ್ಯಸ್ಥಿತಿಯೊಳಗೆ ಧುಮುಕಿ ದಿವ್ಯಾನಂದವೆಂಬ ಸಾಗರದ ಆಳದಲ್ಲಿ ಮುಳುಗುವನು. ತನ್ನ ಸುತ್ತಲೂ ಆತ್ಮನಿಗಿಂತ ಅನ್ಯನಾಗಿ ಏನನ್ನೂ

ಕಾಣನು. ಸಮಸ್ತ ವಿಶ್ವವೂ ವಿಶ್ವನಾಥನಾಗಿ ಕಂಗೊಳಿಸುವುದು. ಮರ, ಪುಷ್ಪ, ಪ್ರಾಣಿಯೊಂದಿಗೆ ಈ ರೀತಿ ಸಂಭಾಷಿಸುವನು : "ಓ ಕೃಷ್ಣ, ಓ ಪ್ರಭು, ಓ ಭಗವಾನ್ ಈ ರೂಪುಗಳೆಲ್ಲೆಲ್ಲಾ ನಾನು ನಿನ್ನನ್ನೇ ನೋಡುತ್ತಿರುವೆನು." ಅವನಿಗೆ ಪ್ರಪಂಚವು ವಿಶ್ವಬೃಂದಾವನವು. ಹರಿಯು ಜಗದಲ್ಲಿರುವನು, ಹರಿಯು ಭೂಮಿಯಲ್ಲಿರುವನು, ಹರಿಯು ಗಾಳಿಯಲ್ಲಿರುವನು, ಹರಿಯು ಬೀಸಣಿಕೆಯಲ್ಲೂ ಇರುವನು, ಹರಿಯು ಮನಸ್ಸಿನಲ್ಲಿರುವನು, ಹರಿಯು ಊರು ಗೋಲಿನಲ್ಲೂ ಇರುವನು, ಹರಿಯು ಹಾಲಿನಲ್ಲಿರುವನು. ಪ್ರಪಂಚವು ಹರಿ ಮಯವಾಗಿರುವುದು. ಆಹ್ಲಾದಕರವಾದ ತಂಗಾಳಿಯು ಸುಮಧುರ ಗೀತ ವನ್ನು ಶುದ್ಧ ಪ್ರೇಮದಿಂದ ನಿನ್ನ ಬಳಿ ಹಾಡುವುದು, ಆದರೆ ಅದನ್ನು ಕೇಳಲು ನೀನು ಕಿವುಡನಾಗಿರುವೆ. ಪ್ರತಿ ಸುಂಟರಗಾಳಿಯೂ ಹರಿ, ಹರಿ ಎಂದು ಘರ್ಜಿಸಿದರೂ ನೀನು ಕೇಳಲಾರದಷ್ಟು ಕಿವುಡನಾಗಿರುವೆ. ಶ್ರೀಕೃಷ್ಣನ ನಿಜಭಕ್ತನು ಕೃಷ್ಣನನ್ನೇ ನೋಡುವನು, ಪ್ರಪಂಚದಲ್ಲೆಲ್ಲಾ ಕೃಷ್ಣನನ್ನೇ ಕಾಣುವನು. ಅವನಿಗೆ ಹೊಸ ಯೋಗದೃಷ್ಟಿ ಇದೆ. ಹೊಸ ಆಧ್ಯಾತ್ಮ ದೃಷ್ಟಿ ಇದೆ.

ನಿಮ್ಮ ಹೃದಯವನ್ನು ಭಗವಂತನ ಪಾದಾರವಿಂದಗಳೆಕಡೆ ತಿರುಗಿಸಿ. ಅಜ್ಞಾನದ ಆವರಣವು ಅತ್ತ ಸರಿಯುವುದು. ವರ್ಣಿಸಲಸದಳವಾದ ದಿವ್ಯ ದೃಷ್ಟಿಯನ್ನು ಪಡೆಯುವಿರಿ. ಅಮೃತ ಪುತ್ರನೇ, ಅಮರನೇ, ಆತ್ಮನ ಅಮರ ಗಾನವನ್ನು ಕೇಳು. ಪ್ರತಿಯೊಂದು ಜೀವಿಯ ಧ್ವನಿಯನ್ನು ಕೇಳು. ಮಿನು ಗುವ ನಕ್ಷತ್ರಗಳ, ನೀಲ ಗಗನದ, ತೇಜೋಮಯ ಭಾನುವಿನ, ಮೊರೆಮೊರೆ ಯುವ ಝರಿಗಳ, ಸಾಗರ ತರಂಗಗಳ, ನಗುಮೊಗದ ಪುಷ್ಪಗಳ, ಹಿಮ ಆಚ್ಛಾಧಿತ ಹಿಮಾಲಯದ ಶೃಂಗಗಳ ಧ್ವನಿಯನ್ನು ಕೇಳು, ದೇವರು ಇಲ್ಲಿಯೇ ಇದ್ದಾನೆ. ವಿಶ್ವದ ಸಮಸ್ತ ವಸ್ತುಗಳ ನಡುವೆ ದಿವ್ಯ ತೇಜಃಪುಂಜದಿಂದ ಬೆಳಗುವುದನ್ನೂ ನೋಡು.

---

## ೫. ವಿಶ್ವಪ್ರೇಮವನ್ನು ಬೆಳೆಸು

ಹೇ ಮಾನವ, ಭಗವಂತನನ್ನು ಎಲ್ಲಿ ಹುಡುಕುವೆ ? ಈ ರೂಪುಗಳೆಲ್ಲವೂ ಆವನ ವ್ಯಕ್ತಸ್ವರೂಪಗಳೇ. ಈ ರೂಪುಗಳಲ್ಲಿ ಭಗವಂತನನ್ನು ನೋಡು. ಎಲ್ಲ ಜೀವಿಗಳನ್ನೂ ನಾರಾಯಣಭಾವದಿಂದ ಸೇವೆಮಾಡಿದರೆ ಭಗವಂತನಿಗೇ ಸೇವೆಮಾಡಿದಂತೆ. ಜನಸೇವೆಯೇ ಜನಾರ್ದನನ ಸೇವೆಯು. ಮಾನವತಾ ಸೇವೆಯು ನಿಜವಾಗಿಯೂ ನಿನ್ನ ಇಷ್ಟದೇವತೆಯ ಆರಾಧನೆಯು. ವ್ಯಕ್ತ ವಾಗುವ ದೇವತೆಗಳಾದ ಭಗವಂತನ ಈ ಬಾಹ್ಯರೂಪಗಳನ್ನು ಪ್ರೇಮದಿಂದ ಸೇವೆ ಮಾಡದೆ ಹೋದರೆ, ಅವ್ಯಕ್ತವನ್ನು ನೀನು ಪ್ರೀತಿಸಲು ಮತ್ತು ಸೇವೆ ಮಾಡಲು ಹೇಗೆ ಸಾಧ್ಯವು ?

ಅದ್ವಿತೀಯ ಆತ್ಮನ ಶ್ರೇಷ್ಠಾನಂದವನ್ನು ಅನುಭವಿಸಲು ಇಚ್ಛೆ ಇದ್ದರೆ, ನಿಜವಾದ ಅದ್ವೈತ ವೇದಾಂತಿಯಾಗಲು ಇಚ್ಛೆಯುಳ್ಳವನಾದರೆ, ಅಥವಾ ಋಷಿಯಾಗುವ ಆಕಾಂಕ್ಷೆಯಿದ್ದರೆ ದುಃಖಿಗಳನ್ನು ಸಮಾಧಾನಪಡಿಸಲು, ದೀನರಿಗೆ ಸಹಾಯ ಮಾಡಲು ಮತ್ತು ರೋಗಿಗಳಿಗೆ ಸೇವೆ ಸಲ್ಲಿಸಲು ಪ್ರಯತ್ನಿಸು. ಎಲ್ಲೆಲ್ಲಿಯೂ, ಎಲ್ಲರಲ್ಲಿಯೂ ಅದ್ವಿತೀಯ ಆತ್ಮನನ್ನು ಕಾಣುವ ಹಂಬಲವುಳ್ಳವರು ಮಾನವ ಸೇವೆಯನ್ನು ಮಾಡದೆ ಸುಮ್ಮನಿರಲು ಸಾಧ್ಯವೇ ? ಎಲ್ಲ ಆಕೃತಿಗಳೂ ಒಬ್ಬನೇ ಶ್ರೇಷ್ಠ ಭಗವಂತನ ವ್ಯಕ್ತರೂಪಗಳು. ಎಲ್ಲ ದೇಹಗಳೂ ಅವನವೇ. ರೋಗಿಯ ಕಾಲುಗಳನ್ನು ನೀನು ಒತ್ತುತ್ತಿರುವಾಗ ಸಗುಣಬ್ರಹ್ಮ ಅಥವಾ ವಿರಾಟ್‌ಪುರುಷನ ಕಾಲುಗಳನ್ನು ಒತ್ತುತ್ತಿರುವುದಾಗಿ ಭಾವಿಸು. ಪ್ರಾಣಿಗಳಿಗೂ ಸೇವೆ ಸಲ್ಲಿಸು. ಎಲ್ಲ ಜೀವಿಗಳಲ್ಲೂ ದಯೆ ಮತ್ತು ಪ್ರೇಮವನ್ನು ಬೆಳೆಸಿಕೊ.

ಪ್ರತಿಯೊಬ್ಬರನ್ನೂ ಗೌರವಿಸದೆ ಸರ್ವಾಂತರ್ಯಾಮಿಯಾದ ಭಗವಂತ ನನ್ನು ಹೇಗೆ ಅರ್ಚಿಸುವೆ ? ಎಲ್ಲರನ್ನೂ ಗೌರವಿಸು. ಎಲ್ಲವನ್ನೂ ಸಮದೃಷ್ಟಿ ಯಿಂದ ನೋಡು. ಸತ್ಕರ್ಮಗಳನ್ನು ಆಚರಿಸು. ಎಲ್ಲೆಲ್ಲಿಯೂ ಭಗವಂತನನ್ನು ಕಾಣು. ಎಲ್ಲಕ್ಕೂ ನಮಸ್ಕರಿಸು. ಭಗವಂತನಲ್ಲಿ ಪೂರ್ಣವಾದ, ನಿಶ್ಚಲವಾದ ಭಕ್ತಿಯನ್ನಿಡು. ನಿನ್ನ ಆಲೋಚನೆಗಳನ್ನೆಲ್ಲಾ ಅವನಲ್ಲಿ ಕೇಂದ್ರೀಕರಿಸು. ಏನನ್ನೂ, ಎಂದರೆ ಮೋಕ್ಷವನ್ನೂ ಬಯಸದಿರು. ಶೀಘ್ರವೇ ಸಾವನ್ನು ಗೆದ್ದು

ಅಭಯವೂ, ಶಾಶ್ವತ ಆನಂದವೂ ಮತ್ತು ಶ್ರೇಷ್ಠ ಶಾಂತಿಮಯವೂ ಆದ ಸ್ಥಿತಿಯನ್ನು ಹೊಂದುವೆ.

ಬ್ರಹ್ಮನು ಸೂರ್ಯನಂತೆ, ಗಂಗೆಯಂತೆ ಮತ್ತು ಆಮ್ರವೃಕ್ಷದಂತೆ. ಸೂರ್ಯನು ಸಾಧು ಮತ್ತು ಕ್ರೂರಿಗಳಮೇಲೆ ಸಮಾನವಾಗಿ ಬೆಳಕನ್ನು ನೀಡುವನು. ಸಂತನೂ, ಪಾಪಿಯೂ ಗಂಗಾಜಲವನ್ನು ಪಾನಮಾಡಬಹುದು. ಹಾಗೆಯೇ ಆಮ್ರವೃಕ್ಷವು ಫಲಗಳನ್ನು ತನ್ನ ರಕ್ಷಕನಿಗೂ ಮತ್ತು ನಾಶಕನಿಗೂ ಸಮಾನವಾಗಿ ನೀಡುವುದು. ಆದ್ದರಿಂದ ಅವುಗಳಂತೆ ಸಮದೃಷ್ಟಿಯನ್ನು ಬೆಳೆಸಿಕೊ.

ನಾಮರೂಪಗಳು ಬೇರೆಬೇರೆಯಾದರೂ ಅವುಗಳು ಅಡಗಿರುವ ಆಧಾರವು, ಸಾರಭೂತವೂ, ತಿರುಳೂ ಒಂದೇ ಆಗಿರುವುದು, ಏಕರಸವಾಗಿರುವುದು. ಈ ನಾಮರೂಪಗಳು ಏಕಸೂತ್ರದ ಮೇಲೆ ತೂಗಾಡುತ್ತಿವೆ ಅಥವಾ ತೇಲಾಡುತ್ತಿವೆ. ಆದ್ದರಿಂದ ಸಮತಲವಾದ ಒಂದು ಆಧಾರದ ಮೇಲೆ ನಾವೆಲ್ಲ ಒಂದಾಗಿದ್ದೇವೆ. ವಿಶ್ವಭ್ರಾತೃತ್ವವು ಈ ಐಕ್ಯತೆಯನ್ನು ಸಾಧಿಸುವ ಗುರಿಯನ್ನು ಹೊಂದಿದೆ. ಅದೇ ವ್ಯಕ್ತಿಯನ್ನು ಅದ್ವೈತ ಸ್ಥಿತಿಗೆ ಉತ್ಕರ್ಷಗೊಳಿಸಿ ಬ್ರಹ್ಮಾನುಭವ (Brahmic consciousness) ವನ್ನುಂಟುಮಾಡುವುದು. ನಿಮ್ಮ ನೆರೆಯವರನ್ನು ಪ್ರೀತಿಸಿ ಮತ್ತು ಸೇವೆಮಾಡಿ. ನಿಮಗೇ ಹೆಚ್ಚು ಅಪೇಕ್ಷಿತವಾದುದನ್ನು ಇತರರಿಗೆ ಸಂತೋಷವಾಗಿ, ಮನಃಪೂರ್ವಕವಾಗಿ ಕೊಡಿ. ಇದರಿಂದ ವಿಶ್ವಪ್ರೇಮ, ಸಂಘಟನೆ ಮತ್ತು ಸಮದೃಷ್ಟಿಯು ಬೆಳೆಯುವುದು, ಬ್ರಹ್ಮಜ್ಞಾನವು (wisdom of the self) ಪ್ರಾಪ್ತಿಯಾಗುವುದು. ಸಮ್ಯಕ್‌ದೃಷ್ಟಿಯಿಂದ ಎಲ್ಲವನ್ನೂ ಆತ್ಮದಲ್ಲಿಯೂ, ಆತ್ಮನನ್ನು ಎಲ್ಲದರಲ್ಲಿಯೂ ಕಾಣುವಂತಾಗುವುದು. ತನ್ನ ಒಂಬತ್ತು ಮಕ್ಕಳನ್ನು ಕಳೆದುಕೊಂಡವಳು ಹೇಗೆ ಒಬ್ಬ ಮಗನನ್ನು ಹೆಚ್ಚು ಪ್ರೀತಿಸುವಳೊ, ಹಾಗೆಯೇ ಎಲ್ಲ ಪ್ರಾಣಿಗಳಲ್ಲೂ ಅಪರಿಮಿತವಾದ ಪ್ರೇಮವನ್ನು ಬೆಳೆಸಿಕೊಳ್ಳಬೇಕು. ಇದು ಸಾಧಕನಿಗೆ ಅತ್ಯವಶ್ಯವಾದ ಅರ್ಹತೆಯು. ಈ ಅಪರಿಮಿತವಾದ ಪ್ರೇಮವನ್ನುಳ್ಳವನ ಶರೀರವು ಅದ್ಭುತವಾದ ಕಾಂತಿಯುತ ವರ್ಣದಿಂದ ಪರಿಶೋಭಿಸುವುದು ಮತ್ತು ಅನಿರ್ವಚನೀಯ ಪ್ರಭಾಮಂಡಲ ವಿರಾಜಿತವಾಗಿರುವುದು.

ಎಲ್ಲರಲ್ಲಿ ದಯೆಯಿರಲಿ. ಎಲ್ಲರನ್ನೂ ಪ್ರೀತಿಸು. ಇತರರ ಮನಸ್ಸನ್ನು ನೋಯಿಸದಿರು. ಎಲ್ಲರೊಡನೆ ಒಂದಾಗಿರು. ವಂಶಾಭಿಮಾನವನ್ನು ಬಿಡು. ಎಲ್ಲರಿಗೂ ಸೇವೆ ಮಾಡು. ಎಲ್ಲರನ್ನೂ ಗೌರವಿಸು. ಕಾಯಕ, ಮಾನಸಿಕ ಮತ್ತು ಆಧ್ಯಾತ್ಮಿಕ ಸಂಪತ್ತನ್ನು ಇತರರೊಡನೆ ಹಂಚಿಕೊ. ಇಡೀ ಜಗತ್ತನ್ನು ನಾರಾಯಣರೂಪದಿಂದ ನೋಡು. **"ಅನೇಕ ರೂಪ ರೂಪಾಯ ವಿಷ್ಣವೇ ಪ್ರಭ ವಿಷ್ಣವೇ."** ವಿಶ್ವವನ್ನು ನಮಸ್ಕರಿಸು. ಪ್ರತಿಯೊಬ್ಬರಿಗೂ ಕೈಜೋಡಿಸು. ನಾಯಿಂದ, ಅಗಸ, ಮೋಚಿ ಎಂಬ ಭಾವಗಳನ್ನು ಬಿಡು. ನಾಯಿಂದನೂ ನಾರಾಯಣನೇ, ಮೋಚಿಯೂ ನಾರಾಯಣನೇ. ಜಲಗಾರನನ್ನೂ ನಾರಾಯಣನೆಂದು ತಿಳಿದು ಕೈಮುಗಿಯುವುದನ್ನು ಕಲಿ. ನಾಚಿಕೆಯುಂಟಾದರೆ ಮನಸ್ಸಿನಲ್ಲೇ ಗೌರವಿಸು. ಸಮದೃಷ್ಟಿಗೆ ಬಾಹ್ಯ ಗೌರವಾಚರಣೆಯು ಉತ್ತಮವು. ವೇದಾಂತಜ್ಞಾನ ಸಮದೃಷ್ಟಿತ್ವ ಸಾರದ ಅನುಭವವನ್ನೂ, ಸಮತೆಯ ಬಲವನ್ನೂ ಅನುಭವದಿಂದ ಅರಿಯಬಹುದು.

ಒಂದು ಒಳ್ಳೆಯ ಕಾರಣಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧನಿರಬಹುದು. ಆದರೆ ನಿನ್ನ ಶತ್ರುವಿಗಾಗಿ ನೀನು ಪ್ರಾಣಬಿಡಲು ಸಿದ್ಧನಾದರೆ ಏಕತ್ವದ ಹಿರಿಮೆಯನ್ನು ಅರಿತುಕೊಳ್ಳುವಿ.

ನಿನ್ನನ್ನು ಒಬ್ಬನು ದ್ವೇಷಿಸಿದರೂ ನೀನು ಅವನನ್ನು ಪ್ರೀತಿಸಲೇಬೇಕು. ಕಳ್ಳ, ಕುಡುಕ, ನೀಚ, ದರೋಡೆಕಾರರನ್ನೂ ಪ್ರೀತಿಸಲೇಬೇಕು. ಮಲ್ಲಿಗೆಯಿಂದ ಪರಿಮಳವು ಹೊರಬರುವಂತೆ ಎಲ್ಲ ದಿಶೆಗಳಲ್ಲೂ ನಿನ್ನ ಹೃದಯಾರವಿಂದದಿಂದ ಪ್ರೇಮಶಕ್ತಿಯು ಹರಿಯಬೇಕು. ಆಗ ಮಾತ್ರ ಅದನ್ನು ವಿಶ್ವಪ್ರೇಮವೆಂದು ಕರೆಯಬಹುದು. ನಿನ್ನ ಹೃದಯ ವಿಕಾಸವಾಗಿದೆಯೆಂದು ಹೇಳಬಹುದು.

ಗಂಗೆಯು ಸದಾ ತಂಪಾದ, ಶುದ್ಧವಾದ ಜಲವನ್ನು ನೀಡುವಳು. ಪ್ರತಿಯಾಗಿ ಏನನ್ನೂ ನಿರೀಕ್ಷಿಸಳು. ಯಾವ ಪ್ರತಿಫಲಾಕಾಂಕ್ಷೆಯೂ ಇಲ್ಲದೆ ಸೂರ್ಯನು ಎಲ್ಲರಿಗೂ ಬೆಳಕನ್ನು ಕೊಡುವನು. ಅವರಿಂದ ನೀತಿಗಳನ್ನು ಕಲಿ. ಸರ್ವದಾ ಕೊಡು, ನೀಡು. ಪ್ರತಿಯಾಗಿ ಏನನ್ನೂ ಕೇಳದಿರು, ಯಾವುದನ್ನೂ ನಿರೀಕ್ಷಿಸದಿರು. ಮೆಚ್ಚುಗೆ, ಹೊಗಳಿಕೆ ಅಥವಾ ಒಪ್ಪಿಗೆಯನ್ನೂ ಅಪೇಕ್ಷಿಸದಿರು.

ಎಲ್ಲೆಡೆಯೂ ಸಂತೋಷವು ಸ್ಪಂದಿಸಲಿ. ಆನಂದವು ಉಕ್ಕುತ್ತಿರಲಿ. ಎಲ್ಲರೊಡನೆ ಸಹಬಾಳ್ವೆಯು ವರ್ಧಿಸುತ್ತಿರಲಿ. ಎಲ್ಲರನ್ನೂ ಪ್ರೀತಿಸು. ದಾನ ಮಾಡು. ಹಕ್ಕಿಗಳೊಡನೆ ಹಾಡು. ಸೂರ್ಯನೊಡನೆ ನಗು. ಅಖಂಡ ಬ್ರಹ್ಮನ ವ್ಯಕ್ತಶಕ್ತಿಯಾದ ನೀಲಾಕಾಶದೊಡನೆ ನಗುತ್ತಿರು. ಬೀಸುವ ಗಾಳಿ, ಜುಳುಜುಳೆಂದು ಹರಿಯುವ ಗಂಗೆಯೊಡನೆ ಓಂಕಾರದ ಧ್ವನಿ ಕೂಡಿಸು. ಗುಡುಗಿನೊಡನೆ ಘರ್ಜಿಸು. ಮರಗಳೊಡನೆ ನರ್ತಿಸು. ಫಲ, ಪುಷ್ಪಭರಿತ ತರುರಾಜಿಗಳೊಡನೆ ಉಸಿರಾಡು. ಉಪನಿಷದ್‌ಸೌಂದರ್ಯರಾಶಿಯನ್ನು ಆನಂದಿಸುತ್ತಾ **"ಸರ್ವಂ ಖಲ್ವಿದಂ ಬ್ರಹ್ಮ"**—ಎಲ್ಲವೂ ನಿಜವಾಗಿ ಬ್ರಹ್ಮವೇ ಎಂದು ನುಡಿ. ವರ್ಧಿಸು. ವಿಭುವಾಗು.

ಕರ್ಮದಿಂದ ಅಜ್ಞಾನವನ್ನು ಕಳೆಯಲಾರೆ. ಏಕೆಂದರೆ ಕರ್ಮವು ಅಜ್ಞಾನದ ವಿರೋಧಿಯಲ್ಲ, ಶತ್ರುವಲ್ಲ, ಚಿಕಿತ್ಸೆಯಲ್ಲ. ಅಜ್ಞಾನವನ್ನು ಜ್ಞಾನವೊಂದೇ ಕಳೆಯಬಲ್ಲದು. ಶಾಖವು ಚಳಿಯಿಂದುಂಟಾದ ನಡುಕವನ್ನು ಕಳೆಯುವಂತೆ ಜ್ಞಾನಾಗ್ನಿಯು ಅಜ್ಞಾನವನ್ನು ನಾಶಮಾಡಬಲ್ಲದು. ಆದ್ದರಿಂದ ಅದ್ವಿತೀಯ ಜ್ಞಾನವನ್ನು ಪಡೆಯಲು ಶ್ರಮಿಸು. ಭ್ರಾತೃಭಾವವು ವೇದಾಂತ, ಐಕ್ಯತೆ ಹಾಗೂ ಸಮರಸತೆಯ ಪ್ರಾಪ್ತಿಗೆ ಮಾರ್ಗದರ್ಶಕವು.

ಯಾವ ಒಂದು ಗೋಷ್ಠಿ, ಸಂಘ, ಸಮಾಜದ ಏಳಿಗೆ ಮತ್ತು ಪರಿಶುದ್ಧತೆಗಾಗಿ ಮಾಡುವ ಪ್ರತಿಯೊಂದು ಕರ್ಮವೂ ಇಡೀ ವಿಶ್ವದ ಪ್ರಗತಿಗೆ ಕಲ್ಯಾಣಕಾರಿಯಾದುದರಿಂದ ನಿಜಕ್ಕೂ ಅದನ್ನು ಪ್ರೋತ್ಸಾಹಿಸಬೇಕು.

ಜ್ಞಾನಿಯು ಒಬ್ಬ ಆದರ್ಶ ಕರ್ಮಯೋಗಿಯು. ನಿಷ್ಕಾಮ್ಯ ಭಾವದಿಂದ ಸತ್ಕರ್ಮಗಳನ್ನು ಮಾಡುವ ಸಾಮರ್ಥ್ಯವು ಜ್ಞಾನಿಗೆ ಮಾತ್ರ ಸಾಧ್ಯವು.

ರಾಜಾ ಜನಕನು ಹೇಗೆ ಬಾಳಿದನೆಂಬುದನ್ನು ಚಿಂತಿಸು. ಆತನು ರಾಜ್ಯ ಶಾಸನ ಮಾಡುತ್ತಿದ್ದರೂ ಹೇಗೆ ಅನುಷ್ಠಾನ ವೇದಾಂತಿಯಾಗಿದ್ದನೆಂಬುದನ್ನು ಮರೆಯದಿರು. ರಾಜಾ ಜನಕನಿಗಿಂತ ಚಟುವಟಿಕೆಯಾಗಿ ಆಳಿದ ಮತ್ತೊಬ್ಬ ಅರಸನನ್ನು ಕಾಣಲಾರೆ. ಕೋಟ್ಯಾಂತರ ಪ್ರಜೆಗಳನ್ನು ಆಳುತ್ತಿದ್ದರೂ ಋಷಿಯಾಗಿ, ಗಾಢಚಿಂತಕನಾಗಿ, ತತ್ವಜ್ಞಾನಿಯಾಗಿ ಮೇಲಾಗಿ ಅನುಷ್ಠಾನ ವೇಂದಾಂತಿಯಾಗಿದ್ದನು. ತನ್ನ ಆಸ್ತಿ, ದೇಹ ಅಥವಾ ಸಂಸಾರದಲ್ಲಿ ಅವನು

ಅಸಂಗನಾಗಿದ್ದನು. ತನ್ನಲ್ಲಿದ್ದುದನ್ನು ಇತರರೊಡನೆ ಹಂಚಿಕೊಳ್ಳುತ್ತಿದ್ದನು. ಎಲ್ಲರೊಡನೆ ಸಂಚರಿಸುತ್ತಿದ್ದನು. ಆತನಿಗೆ ಸಮದೃಷ್ಟಿಯೂ, ಸಮಚಿತ್ತವೂ ಇದ್ದಿತು. ವೈಭವದ ನಡುವೆ ಚಟುವಟಿಕೆಯಿಂದ ದುಡಿಯುವ, ಆದರೆ ಬಾಹ್ಯ ಸನ್ನಿವೇಶಗಳಿಂದ ಕಿಂಚಿತ್ತೂ ವಿಚಲಿತನಾಗದ, ಸಮದೃಷ್ಟಿಯ ಸ್ಥಿತಪ್ರಜ್ಞ ನಾಗಿದ್ದನು. ಶಾಂತಮನಸ್ಕನೂ, ಜ್ಞಾನಿಗಳೊಡನೆ ವಿಚಾರಪರನೂ, ಸೂಕ್ಷ್ಮ ತತ್ವಗಳ ನಿಗೂಢ ರಹಸ್ಯವನ್ನು ಭೇದಿಸುವುದರಲ್ಲಿ ಆಸಕ್ತಿಯುಳ್ಳವನಾದ್ದ ರಿಂದಲೇ ಇಂದಿಗೂ ನಮ್ಮ ಹೃದಯದಲ್ಲಿ ಜನಕನ ಹೆಸರು ಹಚ್ಚಹಸುರಾಗಿದೆ. ಅಷ್ಟೇ ಏಕೆ ? ಈ ಕಲಿಯುಗದಲ್ಲಿಯೂ ನಿಷ್ಕಾಮ್ಯ ಕರ್ಮಯೋಗ ನಿಷ್ಣಾತ, ಸತ್ಯಾನ್ವೇಶಿ ಮಹಾತ್ಮಾ ಗಾಂಧಿಯು ಹೇಗೆ ಬಾಳಿದರೆಂಬುದನ್ನು ತಿಳಿದಿದ್ದೇವೆ ?

ಸೂರ್ಯ, ಪುಷ್ಪಗಳು, ಗಂಗಾ, ಗಂಧ, ಫಲಭರಿತ ತರುಗಳು, ಗೋವು ಗಳು—ಎಲ್ಲವೂ ಜಗತ್ತಿಗೆ ವೇದಾಂತವನ್ನೇ ಉಪದೇಶಿಸುತ್ತಿವೆ. ನಿಸ್ವಾರ್ಥತೆ ಯಿಂದ ಮಾನವರ ಸೇವೆಗಾಗಿ ಅವು ಬಾಳುತ್ತಿವೆ. ಬಡವನ ಗುಡಿಸಿಲಿನ ಮೇಲೂ, ರಾಜನ ರಾಜಭವನದ ಮೇಲೂ, ಸಮಾನವಾಗಿ ಸೂರ್ಯನು ಬೆಳಗುವನು. ನಿರಪೇಕ್ಷಿತವಾಗಿ ಪುಷ್ಪಗಳು ಕಂಪನ್ನು ಹೊರಚೆಲ್ಲುವುವು. ತಂಪಾದ ಆಹ್ಲಾದಕರವಾದ ಗಂಗೆಯು ಎಲ್ಲರಿಂದ ಪಾನಮಾಡಲ್ಪಡುವಳು. ತನ್ನನ್ನು ಕೊಡಲಿಯಿಂದ ಕಡಿಯುತ್ತಿದ್ದರೂ ಗಂಧವು ತಾನು ಮಾತ್ರ ಸುವಾಸನೆಯನ್ನೇ ಅವನಿಗೆ ನೀಡುವುದು. ಹಣ್ಣುಬಿಡುವ ಎಲ್ಲ ಗಿಡಗಳೂ ಹೀಗೆಯೇ ನಡೆದುಕೊಳ್ಳುವುವು. ತಮ್ಮನ್ನು ರಕ್ಷಿಸುವ ವನಪಾಲಕನಿಗೂ ಹಾಗೂ ನಾಶಗೊಳಿಸುವ ಕಟುಕನಿಗೂ ಒಂದೇ ಉಪಕಾರವನ್ನು ಮಾಡುವುವು. ಮಕ್ಕಳು, ಅಬಲರು, ವೃದ್ಧರನ್ನು ಪೋಷಿಸುವುದಕ್ಕಾಗಿಯೇ ಗೋಮಾತೆಯು ಬಾಳುವಳು. ಒಂದಾರು ತಿಂಗಳು ಇಡೀ ಜಗತ್ತಿನಲ್ಲಿ ಹಸುಗಳೇ ಇಲ್ಲದೆ ಹೋದರೆ ಈ ಜಗತ್ತಿನ ಸ್ಥಿತಿ ಏನಾಗುವುದೆಂಬುದನ್ನು ಸ್ವಲ್ಪ ಚಿಂತಿಸು. ನೀನು ಅತಿ ದುರ್ಬಲನೂ, ಕಷ್ಟಜೀವಿಯೂ ಆಗುವೆ. ಜಗತ್ತಿನ ತುಂಬಾ ಕ್ಷಯರೋಗಿಗಳೇ ಹೆಚ್ಚುವರು. ಎಲೈ ಅಜ್ಞಾನೀ ಸ್ವಾರ್ಥ ಮನುಷ್ಯನೇ ಈ ಅನುಷ್ಠಾನ ವೇದಾಂತಗಳಿಂದ ಪಾಠಗಳನ್ನು ಕಲಿತು ಬುದ್ಧಿವಂತನಾಗು, ಜ್ಞಾನಿಯಾಗು.

---

# ೬. ಭಕ್ತನೆಂದರೆ ಯಾರು ?

ಪ್ರಪಂಚದ ವಸ್ತುಗಳಲ್ಲಿ ಅಸಂಗನಾಗಿ, ಅಹಂಕಾರ, ಕಾಮ ಕ್ರೋಧ ವರ್ಜಿತನಾಗಿ ಸದಾ ಭಗವನ್ನಾಮೋಚ್ಚಾರಣೆ ಮಾಡುವ ದೀನರನ್ನೂ, ರೋಗಿಗಳನ್ನೂ ಆತ್ಮಭಾವದಿಂದ ಸೇವೆಮಾಡುವ, ಪ್ರತಿ ದಿನವೂ ಕೀರ್ತನೆ ಮಾಡುವ, ನಾರಾಯಣಭಾವದಿಂದ ಭಕ್ತರಿಗೆ ಸೇವೆಮಾಡುವ, ಎಲ್ಲರನ್ನೂ ಪ್ರೀತಿಸುವವನೇ ಶ್ರೀಹರಿಯ ಭಕ್ತನು.

ಸದ್ಭಕ್ತನು ನಿಜವಾಗಿಯೂ ಮೋಕ್ಷವನ್ನು ಬಯಸುವುದಿಲ್ಲ. ಅವನ ಹೃದಯವು ಪೂರ್ಣವಾಗಿ ಸಹಜ ಪ್ರೇಮದಿಂದ ತುಂಬಿರುವುದು. ಅವನು ಹಗಲು ರಾತ್ರಿಗಳನ್ನು ಭಗವಚ್ಚಿಂತನೆಯಲ್ಲಿ ಕಳೆಯುವನು. ಮುಕ್ತಿಯ ಬಗ್ಗೆ ಲವಲೇಶವೂ ಚಿಂತಿಸನು. ಅವನು ಮುಕ್ತಿಯನ್ನೂ ತ್ಯಾಗಮಾಡಲು ಸಿದ್ಧನು.

ಹರಿಭಕ್ತನು ಸದಾ ವಿನಯನೂ, ನಮ್ರನೂ ಆಗಿರುವನು. ಶ್ರೀಹರಿಯ ನಾಮಾಮೃತವು ಅವನ ನಾಲಿಗೆಯ ಮೇಲೆ ಸದಾ ನಲಿದಾಡುವುದು. ಏಕಾಂತದಲ್ಲಿ ಕಣ್ಣೀರಿನ ಪ್ರವಾಹವನ್ನು ಹರಿಸುವನು. ಅವನು ಧಾರ್ಮಿಕನು. ಎಲ್ಲರ ಮಿತ್ರನು. ಸಮದೃಷ್ಟಿಯುಳ್ಳವನು. ಸರ್ವರ ಹಿತಚಿಂತಕನು. ಇತರರ ಮನಸ್ಸನ್ನು ನೋಯಿಸದಿರುವವನು. ಅವನು ನಿಷ್ಕಳಂಕ ಶೀಲವಂತನು. ಅನ್ಯರ ಆಸ್ತಿಯನ್ನು ಎಂದಿಗೂ ಅಪೇಕ್ಷಿಸನು. ಎಲ್ಲರಲ್ಲಿಯೂ ಶ್ರೀಹರಿಯನ್ನು ಕಾಣುವನು.

ಎಲ್ಲೆಡೆಯೂ ಹೆಚ್ಚು ಮಳೆ ಬೀಳುತ್ತಿದ್ದರೂ ಚಕೋರಿ ನೀರಿಗಾಗಿ ನೋಡುವುದು ಒಂದೇ ಕಡೆ. ಹಾಗೆಯೇ ಭಕ್ತರು ತಮ್ಮ ಸುತ್ತುಮುತ್ತಲೆಲ್ಲಾ ಸುಖಸಂಪತ್ತುಗಳ ರಾಶಿ ಇದ್ದರೂ ತಾವು ಮಾತ್ರ ಭಗವಂತನ ಪಾದಪದ್ಮಗಳನ್ನೇ ಅವಲೋಕಿಸುತ್ತಾ ಆನಂದಿಸುವರು. ಆತ್ಮನ ಹೃದಯದ ಭಾಷೆಯು ಎಲ್ಲಾ ಕಡೆಯೂ ಒಂದೇ. ಪ್ರಪಂಚದ ಭಕ್ತರೆಲ್ಲರೂ ಒಂದೇ ಗುಂಪಿಗೆ ಸೇರಿದವರು, ಒಂದೇ ಭಾಷೆಯಾಡುವರು, ಒಂದೇ ಭಾವವುಳ್ಳವರು ಮತ್ತು ಅನುಭವ ಪಡೆದವರು.

ದಿವ್ಯಭಕ್ತಿಸಂಪನ್ನರೂ, ನಿಷ್ಕಳಂಕರೂ, ಗುಣಶೀಲರೂ, ಶಾಂತರೂ, ಆತ್ಮಸನ್ಯಾಮಿಗಳೂ, ಆಗಿ ಅವಸ್ಥಾತ್ರಯಗಳನ್ನು ಮೀರಿದ ವಾಸುದೇವ

ಅಥವಾ ಶ್ರೀಹರಿಯನ್ನು ನೇರವಾಗಿ ಸೇರುವರು. ಆದರೆ ಶುದ್ಧ ಭಕ್ತಿಯಿಲ್ಲದವರು ಆದಿತ್ಯಮಂಡಲ (*Sun's orb*) ಅನಿರುದ್ಧ, ಪ್ರದ್ಯುಮ್ನ ಮತ್ತು ಸಂಕರ್ಷಣರನ್ನು ದಾಟಿಹೋಗಬೇಕು.

ಭಾಗವತದರೀತ್ಯಾ ಮೂರು ವಿಧವಾದ ಭಕ್ತರಿರುವರು. "ತನ್ನ ಇಷ್ಟ ದೈವವನ್ನೇ ಎಲ್ಲದರಲ್ಲಿಯೂ ಪೂರ್ಣವಾಗಿ ಕಾಣುವ ಅಖಂಡ ಅನುಭವಿಗಳ ಭಕ್ತಿಯು ಶ್ರೇಷ್ಠತಮವಾದುದು. ದೇವರನ್ನೂ, ಭಕ್ತರನ್ನೂ ಪ್ರೀತಿಸುತ್ತಾ ಅಜ್ಞಾನಿಗಳಲ್ಲಿ ದಯೆಯಿಟ್ಟು, ಶತ್ರುಗಳ ಬಗ್ಗೆ ಅನಾಸಕ್ತನಾದವನು ಮಧ್ಯಮ ಭಕ್ತನು. ಸಂಪ್ರದಾಯದಲ್ಲಿ ಶ್ರದ್ಧೆ, ಮೂರ್ತಿಯಲ್ಲಿ ಹರಿಪೂಜೆ ಆದರೆ ಭಗವದ್ಭಕ್ತರಲ್ಲಿ ಗೌರವವಿಲ್ಲದವನು ತಾಮಸ ಭಕ್ತನು".

ಜಗತ್ತಿನ ಜನಾಂಗವನ್ನು ದಿವ್ಯಜ್ಞಾನದ ಕಡೆಗೆ ಜಾಗೃತಗೊಳಿಸುವ ಮಹತ್ತಾದ ಸೇವೆಯಲ್ಲಿ ತೊಡಗಿ ಪರಸ್ಪರ ಪರಿಚಯ, ದರ್ಶನ, ಸಂಭಾಷಣ ವಿಲ್ಲದಿದ್ದರೂ ಅದೃಶ್ಯವಾದ ಸಂಬಂಧದಿಂದ ಭಗವದ್ಭಕ್ತರು ಎಲ್ಲೆಡೆಯೂ, ಎಲ್ಲ ಕಾಲಗಳಲ್ಲಿಯೂ ಇರುವರು. ಜಗನ್ನಾಥನಿಗೆ ಜಯವಾಗಲಿ.

ಭಕ್ತಿ ಮತ್ತು ಭಗವಂತನ ಸಹಯೋಗದಿಂದ ಭಕ್ತರಿಗೆ, ಯಾವ ಮನುಷ್ಯರಿಗೆ ಔಷಧ, ತಪಸ್ಸು (austerities), ಮಂತ್ರ ಮತ್ತು ಜನ್ಮದಿಂದ ದೊರೆಯುವ ಶಕ್ತಿಗಳು, ಅವರಿಗೆ ಅನಾಯಾಸವಾಗಿ ದೊರೆಯುವುದು.

ಭಕ್ತನ ಮಹಿಮೆಯು ಅಸದೃಶವಾದುದು (ineffable). ಭಗವಂತನೂ ಭಕ್ತಪರಾಧೀನನಾಗುವನು. ಶ್ರೀಹರಿಗೆ ಜಯವಾಗಲಿ, ಅವನ ದಿವ್ಯನಾಮಕ್ಕೆ ಜಯವಾಗಲಿ. ಭಗವಂತನನ್ನೂ, ಭಗವನ್ನಾಮವನ್ನೂ ಕೊಂಡಾಡುವ ಭಕ್ತ ವೃಂದಕ್ಕೆ ಜಯವಾಗಲಿ.

---

# 6

## ೧. ಭಕ್ತಿಯನ್ನು ಬೆಳೆಸುವುದು ಹೇಗೆ?

ರಾಜಾಧಿರಾಜ ರಾಜರ್ಷಿ ಖಟ್ವಾಂಗನು ದೇವತೆಗಳಿಗೆ ಸಮರದಲ್ಲಿ ಸಹಾಯ ಮಾಡಿದನು. ದೇವತೆಗಳು, ವರವನ್ನು ಕೇಳುವಂತೆ ರಾಜರ್ಷಿಯನ್ನು ಪ್ರಾರ್ಥಿಸಿದರು. ಆಗ ಆ ವರವನ್ನು ಅನುಭವಿಸಲು ತನಗೆ ಎಷ್ಟು ಆಯುಸ್ಸಿರುವುದೆಂದು ಪ್ರಶ್ನಿಸಲು "ಕೇವಲ ಒಂದು ಮುಹೂರ್ತವು (ಒಂದು ಗಂಟೆಯು)" ಎಂದರು. "ಈ ಒಂದು ಮುಹೂರ್ತದೊಳಗೆ ಬ್ರಹ್ಮಾನಂದವು ಪ್ರಾಪ್ತಿಯಾಗಲಿ" ಎಂದು ಖಟ್ವಾಂಗನು ಪ್ರಾರ್ಥಿಸಿದನು. ದೇವತೆಗಳು ಹಾಗೆಯೇ ಆಗಲಿ ಎಂದರು. ಕೂಡಲೇ ಖಟ್ವಾಂಗನು ಭಕ್ತಿಯಿಂದ ಚಿತ್ತೈಕಾಗ್ರತೆಯಿಂದ ಭಗವಂತನನ್ನು ಚಿಂತಿಸಿ ಆ ಒಂದೇ ಮುಹೂರ್ತದಲ್ಲಿ ಮೋಕ್ಷವನ್ನು ಪಡೆದನು. ಮಿತ್ರರೇ, ನೀವೂ ಸಹ ಒಂದೇ ಮುಹೂರ್ತದಷ್ಟು ತೀವ್ರ ಏಕಾಗ್ರತೆ ಮತ್ತು ಭಕ್ತಿಯಿಂದ ಭಗವಂತನನ್ನು ಚಿಂತಿಸಿದರೆ ನಿಮ್ಮ ಇಷ್ಟವೂ ಕೈಗೂಡುವುದು. ಯಾವುದನ್ನು ಒಬ್ಬರು ಸಾಧಿಸಿದರೋ ಅದನ್ನೇ ನೀವು ಪ್ರಾಪ್ತಿ ಮಾಡಿಕೊಳ್ಳಬಹುದು. ಇದು ಪ್ರಕೃತಿಯ ನಿರ್ವಿಕಾರವಾದ ನಿಯಮವು (immutable law). ಕಟಿಬದ್ಧರಾಗಿ ಭಗವಂತನಲ್ಲಿ ಮನಸ್ಸನ್ನು ಹಿಡಿದು ನಿಲ್ಲಿಸಿ. ಈಗಲೇ, ಈ ಕ್ಷಣವೇ, ಇಲ್ಲಿಯೇ ಪರಿಪೂರ್ಣವಾದ ಶಾಶ್ವತ ಆನಂದವನ್ನು ಅನುಭವಿಸಿ. ತೀವ್ರವಾದ ಸಂಕಲ್ಪ ಮತ್ತು ಸ್ಥಿರಪ್ರತಿಜ್ಞೆಯುಳ್ಳ ಮನುಷ್ಯನಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ನೀವು ನಿಜವಾಗಿಯೂ ದೇವದರ್ಶನಾಕಾಂಕ್ಷಿಗಳಾದರೆ ಅವನನ್ನು ಕೇವಲ ಕೆಲವೇ ನಿಮಿಷಗಳಲ್ಲಿ ಸಂಧಿಸುವಿರಿ. ದೇವರನ್ನು ಸದಾ ಸ್ಮರಿಸಿರಿ. ಅವನ ನಾಮಬಲದಿಂದ ಬಾಳಿರಿ, ಬದುಕಿರಿ, ಅವನ ಮಹಿಮೆಗಳನ್ನು ಕೊಂಡಾಡಿರಿ.

ಹೃದಯಗಳ ಹೃದಯದಲ್ಲಿ ಹುಡುಕಿರಿ. ವಿಶ್ವದ ಪ್ರಭುವೂ, ಹೃದಯೇಶ್ವರನೂ, ಅಂತರ್ನಿಯಾಮಿಕನೂ, ಆತ್ಮದ ಆಧಾರವೂ ಆದವನನ್ನು ಸೇವಿಸುವ ಮತ್ತು ಪ್ರೀತಿಸುವ ಮಾರ್ಗವನ್ನು ಭಕ್ತರಿಂದ ಕಲಿತುಕೊಳ್ಳಿ.

ನಿವೃತ್ತರಾದಮೇಲೆ ವೃದ್ಧಾಪ್ಯದಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳ ಬಹುದೆಂದು ಕೆಲವರು ಹೇಳುವರು. ಅದು ಒಂದು ದೊಡ್ಡ ದೋಷ. ವೃದ್ಧಾಪ ದಲ್ಲೂ ಬದುಕುವಿರೆಂಬ ಯಾವ ಭರವಸೆಯು ನಿಮಗಿರುವುದು ?

ದೇವರ ದ್ವೇಷಿಗಳಾದ, ಶಿಶುಪಾಲ, ಕಂಸ, ರಾವಣನೂ ಸಿದ್ಧಿಗಳನ್ನು ಪಡೆದರು. ಅಂದಮೇಲೆ ಭಗವಂತನ ಪ್ರಿಯರಾದವರ ಬಗ್ಗೆ ಹೇಳುವುದೇನಿದೆ ? ದ್ವೇಷ ಮತ್ತು ಭಯದಿಂದ ಅವರ ಮನಸ್ಸುಗಳು ಭಗವಂತನಿಂದ ತುಂಬಿದ್ದುದ ರಿಂದ ಅವರು ಮೋಕ್ಷವನ್ನು ಪಡೆದರು. ಪ್ರೇಮವೋ, ವಾತ್ಸಲ್ಯವೋ, ಭಕ್ತಿಯೋ, ಭಯವೋ ಅಥವಾ ದ್ವೇಷವೋ ಅಂತೂ ಯಾವುದಾದರೂ ಒಂದು ಭಾವವನ್ನು ನಿರಂತರವಾಗಿ ಭಗವಂತನ ಬಗ್ಗೆ ಬೆಳೆಸಿದರೆ ನೀವು ಭಗವನ್ಮಯ ರಾಗುವಿರಿ. ಮನಸ್ಸು ಶುದ್ಧ ಸತ್ವಪೂರ್ಣವಾಗುವುದು.

ನಿಮಗೆ ಕಣ್ಣಿದ್ದರೂನೀವು ನೋಡುವುದಿಲ್ಲ. ಆಕಾಶದ ಕಡೆ ತಿರುಗಿದರೂ ಆತ್ಮನ ಇರುವಿಕೆಯನ್ನು ತಿಳಿಯಲಾರಿರಿ. ಕಿವಿಗಳಿದ್ದರೂ ದೇವವಾಣಿಯನ್ನು ಕೇಳುವುದಿಲ್ಲ. ಅವನು ತನ್ನ ಪ್ರೀತಿಯ ವಾಣಿಯನ್ನು ಪಿಸುಗುಟ್ಟಿದರೂ, ನಿಮಗೆ ಹಿತವನ್ನು ಉಸುರಿದರೂ ನಿಮ್ಮ ಕಿವಿಗಳು ಅವುಗಳನ್ನು ಕೇಳಲಾರ ದಾಗಿವೆ. ದೇವರು ನಿಮ್ಮನ್ನೇ ದಿಟ್ಟಿಸಿ ನೋಡುತ್ತಿದ್ದರೂ ನಿಮ್ಮ ಕಣ್ಣುಗಳು ಅವನನ್ನು ಕಾಣಲಾರದಷ್ಟು ಕುರುಡಾಗಿವೆ.

ನೀವು ಜ್ಞಾನಮಾರ್ಗಾವಲಂಬಿಗಳಾದರೂ ನಿಮಗೆ ದೇಹಾಧ್ಯಾಸ (identification with the body) ವಿರುವವರೆಗೂ ನೀವು ಭಕ್ತಿಯನ್ನು ಸೇರಿಸಿಕೊಂಡು ಅನುಷ್ಠಾನ ಮಾಡಿರಿ.

ದೇವರು ಸದಾ ನಿಮ್ಮೊಡನಿರುವನು. ಅವನು ನಿಮ್ಮನ್ನು ರಕ್ಷಿಸುವನು ಮತ್ತು ಮುಕ್ತಗೊಳಿಸುವನು. ಅವನನ್ನೇ ಆಶ್ರಯಿಸಿ. ಅವನ ಕೃಪಾಪ್ರವಾಹವು ನಿಮ್ಮ ಬದುಕಿನಲ್ಲಿ ಪ್ರವಹಿಸಿ ನಿಮ್ಮ ಮನಸ್ಸು, ಬುದ್ಧಿಗಳನ್ನು ಪರಿವರ್ತಿಸು ವುದು. ಅಧ್ಯಾತ್ಮಭಾವವನ್ನು ಬೆಳೆಸಿರಿ, ನಿಮ್ಮ ಕ್ರಿಯೆ, ಮಾತು, ಚಿಂತನೆಗಳ ಮೇಲೆ ಹಿಡಿತವನ್ನಿಟ್ಟುಕೊಳ್ಳಲು ಪ್ರತಿದಿನವೂ ವಿಶೇಷ ಪ್ರಯತ್ನ ಮಾಡಿ.

ನಿಮ್ಮ ಕೊಠಡಿಯಲ್ಲಿ ಭಗವಂತನ ಸಾನ್ನಿಧ್ಯವನ್ನು ಭಾವಿಸಿರಿ, ದಿನವೂ ಪ್ರಾರ್ಥಿಸಿ ಮತ್ತು ಧ್ಯಾನಿಸಿ. ಮನುಷ್ಯನು ಆಹಾರ ಮಾತ್ರದಿಂದ ಬದುಕಲಾರನು, ಆದರೆ ಭಗವನ್ನಾಮಾಮೃತದಿಂದ ಬದುಕಬಲ್ಲನು. ನಿಜವಾದ ಸ್ವರಾಜ್ಯವು ಶುದ್ಧಪ್ರೇಮವು, ಮಾನವರಿಗೆ ಮತ್ತು ದೇಶಕ್ಕೆ ಆತ್ಮಭಾವದಿಂದ ಸಲ್ಲಿಸುವ ನಿಸ್ವಾರ್ಥ ಸೇವೆಯಿಂದ ಪಡೆಯುವ ಬ್ರಹ್ಮಜ್ಞಾನವನ್ನೇ ಒಳಗೊಂಡಿದೆ. ಪರಿಶುದ್ಧವೂ, ವ್ಯಾಪ್ಯವೂ ಆದ ಪ್ರೇಮವು ಮಾತ್ರ ಅಭ್ಯಾಸದಿಂದ ಆತ್ಮಸ್ವಾರಾಜ್ಯವನ್ನು ದೊರಕಿಸಿಕೊಡುವುದು, ಪ್ರತಿಯೊಬ್ಬನೂ ಸ್ವಾರ್ಥ, ಅಹಂಕಾರ ಆತ್ಮಪ್ರಶಂಶೆ, ಅಸೂಯೆ, ದ್ವೇಷ ಮತ್ತು ಕಾಮವನ್ನು ಶುದ್ಧಪ್ರೇಮದಿಂದ ಕೊಂದುಹಾಕಲು ಅಭ್ಯಾಸಿಸಬೇಕು. ಭಗವದ್ಭಕ್ತನು ತಾಳ್ಮೆಯನ್ನೂ, ಅನುಕಂಪವನ್ನೂ ಹೊಂದಿರುವನು. ಆತನು ಸರ್ವರ ಮಿತ್ರನು. ತನ್ನ ಭಗವಂತನನ್ನು ಎಲ್ಲೆಲ್ಲಿಯೂ, ಎಲ್ಲ ವಸ್ತುಗಳಲ್ಲಿಯೂ ದರ್ಶಿಸುವನು. ಕಲ್ಲು, ಬಂಡೆ, ಬಳ್ಳಿ, ಮರ, ಸ್ತಂಭ ಮುಂತಾದವುಗಳೊಡನೆ ವಿರಹದಿಂದ ಮಾತನಾಡುವನು. ಅವನಿಗೆ ಶತ್ರುಗಳಿಲ್ಲ. ಎಲ್ಲ ಸ್ತ್ರೀವರ್ಗದಲ್ಲೂ ತನ್ನ ತಾಯಿಯನ್ನು ಕಾಣುವನು. ಅವನ ಭಾಗಕ್ಕೆ ಹೊನ್ನಿನ ರಾಶಿಯು ಕೇವಲ ಕಲ್ಲಿನ ಗುಡ್ಡೆಯು. ಮೋಹ, ಲೋಭ, ಕ್ರೋಧ, ಕಾಮ, ಮದ ಮತ್ತು ಮಮತೆಯಿಂದ ಮುಕ್ತನಾಗಿರುವನು. ಭಕ್ತನು ಮುಗ್ಧನು, ಸರಳನು, ವಿನಯನು ಮತ್ತು ಅಕಾಮನು. ದೃಢವೂ, ಅವ್ಯಯವೂ ಆದ ಭಕ್ತಿಯನ್ನು ಭಗವಂತನಲ್ಲಿ ಉಳ್ಳವನು. ಭಗವಂತನಿಗಾಗಿ ಅವನು ಸರ್ವವನ್ನೂ ತ್ಯಾಗಮಾಡುವನು. ಭಗವಂತ, ಭಾಗವತರು ಮತ್ತು ನೊಂದ ಜೀವಿಗಳ ಸೇವೆಗಾಗಿ ಬಾಳುವನು. ಅವನ ನಾಲಿಗೆಯ ಮೇಲೆ ನಾರಾಯಣನಾಮವು ನಲಿಯುತ್ತಿರುವುದು. ಅವನು ಸದಾ ಸಚ್ಚಿದಾನಂದನ ಮಹಿಮೆಯನ್ನು ಕೊಂಡಾಡುವನು.

ಭಕ್ತನು ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂದು ಇಚ್ಛಿಸಿದರೆ ಶ್ರದ್ಧೆ, ನಿಷ್ಠೆ, ನಮ್ರತೆ, ಆತ್ಮಸಮರ್ಪಣೆ ಮುಂತಾದ ಸದ್ಗುಣಗಳನ್ನು ಹೊಂದಿರಬೇಕು.

ತೈತ್ತಿರೀಯ ಉಪನಿಷತ್ತಿನಲ್ಲಿ ವೇದಾಧ್ಯಯನವನ್ನು ಮುಗಿಸಿದ ಶಿಷ್ಯನಿಗೆ ಗುರುವು ಈ ರೀತಿ ಹೇಳುವನು, "ಸತ್ಯವನ್ನೇ ನುಡಿ. ಧರ್ಮವನ್ನು ಆಚರಿಸು. ವೇದಾಧ್ಯಯನವನ್ನು ಬಿಡಬೇಡ. ಗುರುದಕ್ಷಿಣೆಯನ್ನು ಕೊಟ್ಟ ಮೇಲೆ ಸತ್ಸಂತಾನವನ್ನು ಪಡೆ. ಸತ್ಯವನ್ನು ಬಿಡದಿರು. ಧರ್ಮವನ್ನು

ಬಿಡಬೇಡ. ನಿನ್ನ ಕಲ್ಯಾಣವನ್ನು ಮರೆಯದಿರು. ನಿನ್ನ ಅಭ್ಯುದಯವನ್ನು ಕಡೆಗಣಿಸದಿರು. ವಿದ್ಯೆಯನ್ನೂ, ವೇದೋಪದೇಶಗಳನ್ನೂ ತ್ಯಜಿಸದಿರು.

ಯಾರನ್ನಾದರೂ ನಿಂದಿಸಿದರೆ, ಅವರ ಮನಸ್ಸನ್ನು ನೋಯಿಸಿದರೆ ಆ ನಿಂದೆ ಮತ್ತು ನೋವು ನಿಜವಾಗಿಯೂ ದೇವರಿಗೆ ತಲುಪುವುದು. ಭಕ್ತನು ಸದ್ಗುಣಗಳ ಮೂರ್ತಿಮಂತನು. ಸರ್ವಭೂತ ಹಿತರತನಾಗಿರಬೇಕು. ಗೀತಾಚಾರ್ಯ ಶ್ರೀಕೃಷ್ಣನು " ಸರ್ವಭೂತ ಹಿತೇ ರತಾಃ " (ಅ : ೧೨-೪) ಎಂದಿದ್ದಾನೆ. ಸರ್ವರ ಹಿತಚಿಂತನೆಯಲ್ಲಿ ಸಂತೋಷಪಡುವವನು ಭಗವದ್ದರ್ಶನ ವನ್ನು ಹೊಂದುವನು. ಮೇಲಾಗಿ ಅದ್ವೈತ ಜ್ಞಾನಸಿದ್ಧಿಯನ್ನು ಹೊಂದುವನು.

ನಿಮ್ಮ ಹೃದಯೋದ್ಯಾನದಲ್ಲಿ ದ್ವೇಷ, ಅಸೂಯೆ, ಸಂಶಯ, ಅಹಂಕಾರ, ಸ್ವಾರ್ಥದ ಕಿಚ್ಚೆಂಬ ಕಳೆಗಳನ್ನು ಕಿತ್ತು ಪ್ರೇಮವನ್ನು ಉಳಿಸಿ ಬೆಳೆಸಿರಿ. ಪ್ರೇಮದ ಶಕ್ತಿಯು ವರ್ಣನಾತೀತವು. ಪ್ರೇಮದ ಮೂಲಕವೇ ರಾಷ್ಟ್ರಗಳನ್ನು ಸಂಘಟಿಸಬಹುದು. ಹೃದಯಗಳನ್ನು ಒಂದುಗೂಡಿಸಬಹುದು. ಸ್ವರಾಜ್ಯ ವನ್ನು ಪಡೆಯಬಹುದು. ಆದ್ದರಿಂದ ಪ್ರೇಮಸಂಪತ್ತಿನ ಒಡೆಯರಾಗಿ. ಎಲ್ಲರಿಗೂ ಪ್ರೀತಿಯನ್ನು ತೋರಿ. ಪ್ರಿಯ ಕುಮಾರರೇ, ಧರ್ಮ ಮತ್ತು ಪ್ರೇಮದ ಸತ್ಯಸಹಜತೆಯನ್ನರಿತು ನಿಜವಾದ ಧಾರ್ಮಿಕ, ತ್ಯಾಗಮಯ ಮತ್ತು ಪ್ರೇಮಪೂರ್ಣವಾದ ಜೀವನವನ್ನು ನಡೆಸಿರಿ. ಶಾಸ್ತ್ರಗಳಿಂದ ಅಗ್ನಿ ಹೋತ್ರ, ಪಂಚ ಮಹಾಯಜ್ಞಗಳು ಮುಂತಾಗಿ ವಿಹಿತ ಕರ್ಮಗಳು ವಿಧಿ ಸಲ್ಪಟ್ಟಿವೆ. ನಿಷಿದ್ಧ ಕರ್ಮಗಳಲ್ಲಿ ಸುರಾಪಾನ, ಕಳ್ಳತನವೂ ಸೇರಿವೆ.

ಪಾಪಕರ್ಮವನ್ನು ಮಾಡಿದ್ದೇ ಆದರೆ ಐವತ್ತು ಮಾಲೆಗಳಷ್ಟು ಜಪ ವನ್ನು ಹೆಚ್ಚುಮಾಡಿ. ನಿರ್ಜಲ, ನಿರಾಹಾರ, ಉಪವಾಸ ವ್ರತವನ್ನು ಭಾನು ವಾರ ಆಚರಿಸಿ. ಸ್ಥಿರಪ್ರತಿಜ್ಞೆಯಿಂದಲೂ, ಪಶ್ಚಾತ್ತಾಪದಿಂದಲೂ ಭಗವನ್ನಾಮ ಸ್ಮರಣೆಯನ್ನು ಪುನಃ ಪುನಃ ನಡೆಸಿರಿ. ಭಾನುವಾರದಂದು ಬಡವರಿಗೆ ಅನ್ನ ನೀಡಿ. " ಧರ್ಮವು ಅಸಂಖ್ಯಾತ ಪಾಪಗಳನ್ನು ನಾಶಗೊಳಿಸುವುದು." **ಯಜ್ಞೋದಾನಂತಪಶ್ಚೈವ ಪಾವನಾನಿ ಮನೀಷಿಣಾಂ.** (ಅ ೧೮-೫) ಎಂದರೆ ಬುದ್ಧಿವಂತರು ಯಜ್ಞದಾನ ತಪಸ್ಸುಗಳಿಂದ ಶುದ್ಧರಾಗುವರು.

ಭಕ್ತಿಯನ್ನು ಬೆಳೆಸಿಕೊಳ್ಳಲು ಇಚ್ಛೆಯಿದ್ದರೆ ಕಂಟಕಕಾರಿಗಳನ್ನು ಕಿತ್ತುಹಾಕಬೇಕು. ಕಾಮ, ಕ್ರೋಧ, ದ್ವೇಷ, ಲೋಭ, ವಂಚಕತನ,

ದುರಭಿಮಾನ, ಮೋಸ, ಕುಟಿಲತನಗಳೆಂಬ ಆಂತರಿಕ ಕಂಟಕಗಳನ್ನು ಕಿತ್ತೊಗೆಯಿರಿ. ಬಾಹ್ಯ ಕಂಟಕಗಳೆಂದ ದುಸ್ಸಂಗ, ಅಸಹ್ಯ ಕಾದಂಬರಿಗಳು, ದುಷ್ಟ ದೃಶ್ಯಗಳು, ಹೊಲಸು ಹಾಡುಗಳು, ಚಿತ್ರಗಳು ಇತ್ಯಾದಿಗಳನ್ನು ಬಿಡಿರಿ.

ಸದಾಚಾರಾನುಸಂಧಾನವಿಲ್ಲದೆ ಭಕ್ತಿಯ ಬೆಳವಣಿಗೆಯು ಕಠಿಣವು. ಔಷಧ ಸೇವನೆ, ಆಹಾರದಲ್ಲಿನ ಪಥ್ಯದಿಂದ ರೋಗವು ನಾಶವಾಗುವಂತೆ, ಭಕ್ತಿ ಮತ್ತು ಸದಾಚಾರಗಳಿಂದ ಆತ್ಮಸಾಕ್ಷಾತ್ಕಾರವನ್ನು ಹೊಂದಬಹುದು. ಭಕ್ತಿಯೇ ಔಷಧವು. ಸದಾಚಾರವೇ ಪಥ್ಯವು. ಮೋಕ್ಷಮಾರ್ಗವು ಪರಿಶುದ್ಧತೆಯಿಂದ ಆರಂಭವಾಗಿ ಜ್ಞಾನದಲ್ಲಿ ಪರಿಸಮಾಪ್ತಿಯಾಗುವುದು. ವಿಶ್ವಪ್ರೇಮವೇ ಮೋಕ್ಷದ ಬಾಗಿಲು. ಕ್ರಮವಾಗಿ ಪ್ರೀತಿಯನ್ನು ಬೆಳೆಸಿರಿ. ನಿಸ್ವಾರ್ಥ ಸೇವೆಯು ಮನಸ್ಸಿನ ದುರ್ವಾಸನೆಗಳನ್ನು ನಾಶಗೊಳಿಸಿ ಶುದ್ಧ ಪ್ರೇಮವನ್ನು ಬೆಳೆಸುವುದರಲ್ಲಿ ಸಹಾಯ ಮಾಡುವುದು. ಭಕ್ತಿಯ ಬೆಳವಣಿಗೆಗೆ ಏಕಾದಶಗುಣಗಳ ಅಭ್ಯಾಸವು ಅತ್ಯವಶ್ಯಕವೆಂದು ಶ್ರೀರಾಮಾನುಜರು ಸಮರ್ಥಿಸುವರು. ಅವು ಯಾವುವೆಂದರೆ: ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಸತ್ಯ, ಆರ್ಜವ, ದಯಾ, ಅಹಿಂಸಾ, ದಾನ ಮತ್ತು ಅನವಶದ. ಎಂದರೆ ವಿವೇಚನಾ ಶಕ್ತಿ, ದೇವರ ಹಂಬಲ, ಸಚ್ಚಿಂತನೆ, ಪರಹಿತ, ಸರ್ವಸೌಖ್ಯ, ಸತ್ಯನಿಷ್ಠೆ, ಧೈರ್ಯ ಮಾರ್ಗಾವಲಂಬನೆ, ಕರುಣೆ, ಸದಾ ಸಂತೋಷ ಮತ್ತು ನಿರೀಕ್ಷೆ.

ಕೇವಲ ಸದಾಚಾರಾನುಸಂಧಾನವು ಮುಕ್ತಿಯನ್ನು ಪಡೆಯಲು ಸಾಲದು. ಅದರೊಡನೆ ಶ್ರದ್ಧೆ, ವಿಶ್ವಾಸ ಮತ್ತು ಭಕ್ತಿಯು ಬೆರೆಯಬೇಕು. ಸದಾಚಾರವೆಂಬ ಹಸನಾದ ಭೂಮಿಯಲ್ಲಿ ಭಕ್ತಿಯನ್ನು ಬಿತ್ತಬೇಕು. ಸತ್ಸಂಗ, ಏಕಾಂತತೆ, ಸಾತ್ತ್ವಿಕಾಹಾರವು, ಸಾಧನೆಯ ಆರಂಭದಲ್ಲಿ ಬಹಳ ಅವಶ್ಯಕವು. ಪ್ರಪಂಚದ ಹಳೆಯ ಸಂಸ್ಕಾರಗಳನ್ನು ಇವುಗಳ ನೆರವಿಲ್ಲದೆ ಪರಿವರ್ತಿಸುವುದು ಕಷ್ಟವು. ಉದಾಹರಣೆಯಾಗಿ—

ವಿಷ್ಣುದಾಸನು ಮುಂದುವರೆದ ಸಂತನು. ಅವನು ಚಿತ್ರಕೂಟಕ್ಕೆ ಎರಡು ಮೈಲು ದೂರದ ಅರಣ್ಯದಲ್ಲಿ ವಾಸಿಸುವನು. ಹಾವುಗಳಿಂದ ತುಂಬಿರುವ ಸ್ಥಳದಲ್ಲೇ ನಿದ್ರಿಸುವನು. ಆತನ ಸರಳತೆಯು ಮುಗ್ಧಮಗುವಿನಂತೆ. ಅದು ನಿಜವಾಗಿಯು ಶ್ರೇಷ್ಠ ಭಕ್ತನ ವಿಶಿಷ್ಟ ಚಿನ್ಹೆಯು. ಕಮ್ಮಾರನು ತನಗೆ

ಬೇಕಾದ ಉಪಕರಣವನ್ನು ಮಾಡಲು, ಕಬ್ಬಿಣವನ್ನು ಕಾಯಿಸಿ ಅಡಿಗಲ್ಲಿನ ಮೇಲೆ ಬಡಿದು ಬೇಕಾದ ರೀತಿಯಲ್ಲಿ ಬಾಗಿಸಿ ರೂಪುಕೊಟ್ಟು ತನ್ನ ಇಷ್ಟ ಬಂದಂತೆ ಬಳಸುವನು. ಹೀಗೆಯೇ ಭಗವಂತನು ಜೀವರಿಗೆ ಹಲವು ಬಗೆಯ ಸ್ಥಿತಿಗಳನ್ನೊಡ್ಡಿ ಅನುಭವಗಳನ್ನುಂಟುಮಾಡಿ ಅವರ ವೈಮನಸ್ಸುಗಳಿಂದ ತನ್ನ ಲೀಲೆಗೆ ಬೇಕಾದುದನ್ನೆಲ್ಲಾ ಮಾಡಿಸಿಕೊಳ್ಳುವನು.

ಕುಂತಿಯು, "ಹೇ ಸ್ವಾಮಿ ಕೃಷ್ಣ, ಜಗದ್ಗುರು, ನನ್ನ ಭಾಗಕ್ಕೆ ಆಗಿಂದಾಗ್ಗೆ ತೊಂದರೆಗಳು ಬರುತ್ತಿರಲಿ. ಏಕೆಂದರೆ ಆ ಸಂದರ್ಭಗಳಲ್ಲೆಲ್ಲಾ ನಿನ್ನ ದಿವ್ಯ ದರ್ಶನಗಳನ್ನು ಪಡೆಯುತ್ತಾ ನಾವು ಅಮೃತತತ್ತ್ವವನ್ನೂ ದಿವ್ಯಾ ನಂದವನ್ನೂ ಪಡೆಯಬಹುದು" ಎಂದು ಬೇಡಿದ್ದಾಳೆ. ಭಗವದಿಚ್ಛೆಯಲ್ಲಿ ಪೂರ್ಣ ವಿಶ್ವಾಸವನ್ನು ಹೊಂದಿ ಸುಖ, ದುಃಖ, ಅಭ್ಯುದಯ, ದಾರಿದ್ರ್ಯ, ಜನನ, ಮರಣ, ಮುಂತಾದ ದೈನಂದಿನ ಘಟನೆಗಳಲ್ಲಿ ದೇವರ ಕೈವಾಡವನ್ನು ಕಾಣಿರಿ. ಮೇಲಿರುವ ಭಗವಂತನನ್ನು ಸ್ಮರಿಸುತ್ತ ಹೃತ್ಪೂರ್ವಕವಾಗಿ ದುಡಿಯಿರಿ. ನಿಮಗೆ ಜೀವನದಲ್ಲಿ ಜಯವು ಮತ್ತು ಆತ್ಮಸಾಕ್ಷಾತ್ಕಾರವು ಲಭಿಸುವುದು. ಜಗನ್ಮಾತೆಯು ಸದಾ ಒಂದು ಅಡಿ ಮುಂದಿಡುವಳು. ನಿಮ್ಮ ಆಹಾರ, ಪಾನೀಯಗಳನ್ನು ಮುಂಚಿತವಾಗಿ ಸಿದ್ಧಗೊಳಿಸುವಳು. ನಿಮ್ಮ ದೇಹ ಪೋಷಣೆಯನ್ನು ನೋಡಿಕೊಳ್ಳುವಳು. ಆದ್ದರಿಂದ ಅನ್ನೋದಕಗಳಿ ಗಾಗಿ ಚಿಂತಿಸದಿರಿ. ಸ್ವಸ್ಥವಾಗಿರಿ. ತಾಯಿ ಮತ್ತು ಅವಳ ಅನುಗ್ರಹದಲ್ಲಿ ವಿಶ್ವಾಸವಿಡಿ.

ಸಂತೋಷವಾಗಿರಿ, ನಲಿಯಿರಿ, ನಿರ್ಭಯರಾಗಿ, ಸರಳತೆಯಿಂದಿರಿ, ಧೀರರಾಗಿ, ಶುದ್ಧರಾಗಿ, ಉದಾರಿಗಳಾಗಿ, ಈಗ ಮೋಕ್ಷದ ಬಾಗಿಲು ನಿಮಗೆ ವಿಶಾಲವಾಗಿ ತೆರೆಯುವುದು.

ಜಾತಿರ್ವಿದ್ಯಾ – ಮಹತ್ವಂಚ – ರೂಪ – ಯೌವನಮೇವ – ಚ ।
ಏತೇಹಿ – ಭಕ್ತಿಮಾರ್ಗೇಷು – ಜನೇಷು – ಪಂಚ – ಕಂಟಕಾಃ ॥

ಜಾತಿ, ವಿದ್ಯೆ, ಅಧಿಕಾರ, ಸೌಂದರ್ಯ, ಯೌವನವು ಭಕ್ತಿಮಾರ್ಗದಲ್ಲಿನ ಪಂಚ ಕಂಟಕಗಳು ಎಂಬುದನ್ನು ತಿಳಿ.

ಎಂಟು ಗಂಟೆಯನ್ನು ನಿದ್ರೆಯಲ್ಲೂ, ಉಳಿದಕಾಲವನ್ನು ವೃಥಾ ಹರಟೆ, ಮಿಥ್ಯಾಲಾಪ, ಅನ್ಯರ ವಂಚನೆ, ಸ್ವಾರ್ಥ ಚಟುವಟಿಕೆಗಳಲ್ಲಿ ಮತ್ತು

ಧನಾರ್ಜನೆಯಲ್ಲಿ ಕಳೆದಿರುವೆ. ಆಧ್ಯಾತ್ಮಿಕ ಹಿತವನ್ನು ಅಮೃತತ್ತ್ವವನ್ನು ನೀನು ಹೇಗೆ ನಿರೀಕ್ಷಿಸುವೆ? ಅರ್ಧಗಂಟೆಯಷ್ಟು ದೇವರಸೇವೆಯಲ್ಲಿ, ನಾಮ ಸಂಕೀರ್ತನೆಯಲ್ಲಿ, ದಿವ್ಯಧ್ಯಾನದಲ್ಲಿ ಕಳೆಯದೆ ಅಮೃತತ್ತ್ವವು ಹೇಗೆ ದೊರೆಯುವುದು ?

ಒಮ್ಮೆ ಮಾಡಿದ ಒಂದು ಅಪರಾಧವನ್ನು ಕ್ಷಮಿಸೆಂದು ಭಗವಂತನನ್ನು ಬೇಡಿದರೆ, ಕೆಲವು ನಾಮೋಚ್ಚಾರಣೆಯಿಂದ ಮತ್ತೆಮತ್ತೆ ಮಾಡಿದ ಮಹಾ ಪಾಪವು ನಾಶವಾಗುವುದೆಂಬ ಭಾವನೆಯನ್ನು ಬಿಟ್ಟುಬಿಡು. ಮಾಡಿದ ಮಹದಪರಾಧವನ್ನು ಕ್ಷಮಿಸೆಂದು ಪ್ರಾರ್ಥಿಸು. ಆದರೆ ಅದನ್ನು ಮತ್ತೆಂದೂ ಮಾಡುವುದಿಲ್ಲವೆಂದು ಸ್ಥಿರಪ್ರತಿಜ್ಞೆಮಾಡು.

ನಿನ್ನ ಇಷ್ಟದೈವದಲ್ಲಿ ಶ್ರದ್ಧಾಭಕ್ತಿಯಿದ್ದರೆ ನಿನ್ನ ಮನಸ್ಸು ಪೂರ್ಣ ವಾಗಿ ಶ್ರೀಕೃಷ್ಣ ಚರಣ ಕಮಲಗಳಿಂದ ಆಕರ್ಷಿತವಾಗಿದ್ದರೆ ನಿನ್ನ ಗುರಿ ಯನ್ನು ನೀನು ಸುಲಭವಾಗಿ ಮುಟ್ಟುವೆ. ಎಲ್ಲ ಆತಂಕಗಳೂ ಕಳೆಯಲ್ಪಡು ವುವು. ಎಲ್ಲ ಬಗೆಯ ಸಾಧನೆಗಳು ಸುಲಲಿತವಾಗುವುವು.

ಎಲ್ಲದರಲ್ಲಿಯೂ ದೇವರನ್ನು ನೋಡಿರಿ. ಅಸಂಗವೂ, ಆತ್ಮಸಮರ್ಪಣವೂ ಆದ ಆದರ್ಶ ಜೀವನವನ್ನು ನಡೆಸಿರಿ. ನಿಮಗೆ ದೇವರ ದಿವ್ಯದರ್ಶನ ವಾಗುವುದು. ಕಷ್ಟಗಳು ಕೊನೆಗಾಣುವುವು. ರಾಮಾಯಣ ಭಾಗವತದ ಮುಖ್ಯ ಉಪದೇಶವೂ ಇದೇ. ಈ ಕ್ಷಣವೇ ಅನುಷ್ಠಾನದಲ್ಲಿ ತನ್ನಿ. ನಿಮ್ಮ ಹೃದಯಾಂತರಾಳದಿಂದ ಶಿವಭಗವಾನನ್ನೂ ಭಕ್ತಿ ಶ್ರದ್ಧೆಯಿಂದ ಪ್ರಾರ್ಥಿಸಿ. ಬೆಳಗಿನ ಜಾವ ೪ ರಿಂದ ೭ರ ವರೆಗೆ ಮತ್ತು ರಾತ್ರಿ ೭ರಿಂದ ೧೦ರ ವರೆಗೆ "ಓಂ ನಮಃ ಶಿವಾಯ" ಎಂದು ಮನಸ್ಸಿನಲ್ಲಿ ಭಾವ ಭಕ್ತಿಯುತ ಚಿತ್ತೈ ಕಾಗ್ರತೆಯಿಂದ ಉಚ್ಚರಿಸಿ. ಮನಸ್ಸು ಹುಚ್ಚೆದ್ದು ಹರಿದಾಡಿದರೆ ಮಂತ್ರವನ್ನು ಸ್ವಲ್ಪಕಾಲ ವೈಖರಿಯಾಗಿ ಜಪಿಸಿರಿ. ಮತ್ತೆ ಪುನಃ ಮಾನಸಿಕ ಜಪಮಾಡಿರಿ. ನಿಮಗೆ ಭಗವಾನ್ ಶಿವನ ದರ್ಶನವಾಗುವುದು. ಲೋಕ, ಮಿತ್ರರು, ಬಂಧು ಗಳು ಮತ್ತು ಸಂಪತ್ತನ್ನು ಮರೆಯಿರಿ. ಆದರೆ ನಿಮ್ಮ ಕಷ್ಟಗಳನ್ನು ಕಳೆ ಯುವ ಇಷ್ಟ ಮೂರ್ತಿಯಾದ ಶಿವನನ್ನು ಎಂದಿಗೂ ಮರೆಯದಿರಿ. ನನ್ನ ಪ್ರಿಯ ಶಿವ ಭಗವಾನನು ನಿಮಗೆ ಕೃಪೆ ತೋರಲಿ. "ಜಯ ಶಿವ, ಜಯ ಶಿವ" ಎಂದು ಹೇಳಿ. ದಿನವೂ **ಶಿವ ಮಹಿಮ್ನ ಸ್ತೋತ್ರ** ವನ್ನು ಪಠಿಸಿ.

ನಗರದ ಗದ್ದಲದ ನಡುವೆ ಯೋಗವನ್ನು ಸ್ವಲ್ಪವೇ ಅಭ್ಯಾಸಮಾಡುವವನು, ಪ್ರಲೋಭನೆಗಳಿಲ್ಲದ ಹಿಮಾಲಯದ ಗುಹೆಯ ಏಕಾಂತದಲ್ಲಿ ಆತ್ಮಧ್ಯಾನ ತತ್ಪರನಾದ ಸನ್ಯಾಸಿಗಿಂತಲೂ ಉತ್ತಮನು.

ದೇವರ ಸಹಾಯಕ್ಕಾಗಿ ಆಲಸ್ಯದಿಂದ ಹಂಬಲಿಸುತ್ತಾ ಕುಳಿತುಕೊಳ್ಳಬೇಡಿ. ಸಹಾಯ ಮಾಡುವವರಿಗೆ ದೇವರೇ ಸಹಾಯ ನೀಡುವನೆಂಬ ಗಾದೆಯಂತೆ ಏಳಿರಿ, ಎಚ್ಚರಗೊಂಡು ಯತ್ನಿಸಿರಿ. ಉತ್ತಮವಾದುದನ್ನು ಮಾಡಿರಿ. ಉಳಿದುದನ್ನು ದೇವರಿಗೆ ಬಿಡಿರಿ.

ಕೋಸಲ ದೇಶದಲ್ಲಿ ಗಾಧಿ ಎಂಬ ಒಳ್ಳೆಯ ಬ್ರಾಹ್ಮಣನಿದ್ದನು. ಆತನು ಅರಣ್ಯವನ್ನು ಪ್ರವೇಶಿಸಿ ಸರೋವರದಲ್ಲಿ ಕುತ್ತಿಗೆಯವರೆಗೆ ನೀರು ಬರುವ ಸ್ಥಳದಲ್ಲಿ ನಿಂತು ಎಂಟು ತಿಂಗಳ ಕಾಲ ತಪಸ್ಸನ್ನು ಆಚರಿಸಿದನು. ನಂತರ ಕೇವಲ ಒಂದು ಬೊಗಸೆಯಷ್ಟು ಜಲಪಾನದಿಂದ ಒಂದು ವರ್ಷ ತಪವನ್ನಾಚರಿಸಿದನು. ಶ್ರೀಹರಿಯು ದರ್ಶನವಿತ್ತು ಅವನಿಗೆ ಹೇಳಿದನು: “ಎದ್ದೇಳು, ಈ ಬೆಟ್ಟದ ಗುಹೆಯೊಳಗೆ ಕುಳಿತು ಹತ್ತು ವರ್ಷ ತಪಸ್ಸನ್ನು ಮಾಡು. ನಂತರ ಸತ್ಯವೂ, ಶಾಶ್ವತವೂ ಆದ ಜ್ಞಾನವು ಉದಯಿಸುವುದು.” ಆತನು ಅಪೂರ್ವವಾದ ತಪಸ್ಸನ್ನು ಹತ್ತುವರ್ಷಗಳು ಆಚರಿಸಿ ಜ್ಞಾನಪೂರ್ಣನಾದನು.

ನಿಮ್ಮ ಹತ್ತಾರು ಕಾರ್ಯ ಚಟುವಟಿಕೆಗಳ ನಡುವೆ ಭಗವನ್ನಾಮವನ್ನು ಸ್ಮರಿಸುತ್ತಾ, ಅವನ ಸನ್ನಿಧಿಯನ್ನು ಎಲ್ಲೆಲ್ಲಿಯೂ ಭಾವಿಸುತ್ತಾ ಎಲ್ಲ ರೂಪುಗಳಲ್ಲಿಯೂ ಅವನನ್ನೇ ದರ್ಶಿಸುತ್ತಾ ಇರಬಹುದಾದ ದಿವ್ಯ ಪ್ರಕಾಶದ ಉತ್ಕರ್ಷಕವಾದ ಜ್ವಾಲೆಯನ್ನು ಉಳಿಸಿಕೊಳ್ಳುವಿರಾ? ಪ್ರಾಪಂಚಿಕ ಅಥವಾ ಲೌಕಿಕ ಚಿಂತನೆ ಮತ್ತು ಕಾಮನೆಗಳಿಂದ ವಿಚಲಿತಗೊಂಡ ಮನಸ್ಸಿನೊಳಕ್ಕೆ ಭಗವದ್ಭಾವನೆಯು ಪ್ರವೇಶಿಸಲಾರದು.

ನಿಮ್ಮ ಪತ್ನೀ ಪುತ್ರರು, ಮಿತ್ರರು, ಮತ್ತು ಜಮೀನಿಗೆ ತೋರುವ ಎಲ್ಲ ಪ್ರೀತಿಯನ್ನು ಒಂದುಗೂಡಿಸಿ ದೇವರಲ್ಲಿಟ್ಟರೆ ಒಂದೇ ನಿಮಿಷದಲ್ಲಿ ಭಗವದ್ದರ್ಶನವಾಗುವುದು. ಈ ಜಗನ್ನಾಟಕ ಸೂತ್ರಧಾರಿಯೂ ನಿಮ್ಮ ಹೃದಯಾಂತರ್ಯಾಮಿಯೂ ಅವನೇ. ಅವನು ಕರ್ಮಾಧ್ಯಕ್ಷನು, ಕರ್ಮಫಲದಾತೃವು. ದೇವರ ನಾಮ ಸಂಕೀರ್ತನೆಯಿಂದ, ನಾಮೋಚ್ಚಾರಣೆಯಿಂದ ಮತ್ತು ಸರ್ವಕರ್ಮಫಲಸಮರ್ಪಣ ಭಾವದಿಂದ ದೇವರಲ್ಲೇ ಬಾಳಿರಿ.

ನಿಮ್ಮ ಗುರು ಮತ್ತು ಶಾಸ್ತ್ರೋಪದೇಶಗಳಲ್ಲಿ ಅತೀವವಾದ ಶ್ರದ್ಧೆ, ತೀವ್ರವಾದ ವೈರಾಗ್ಯ ಮೋಕ್ಷಾಕಾಂಕ್ಷೆ, ಸಂಕಲ್ಪಬಲ, ಗುರುತರಪ್ರತಿಜ್ಞೆ, ಗಾಢವಾದತಾಳ್ಮೆ, ಉಕ್ಕಿನಂತಹ ಪ್ರತಿಜ್ಞೆ, ಜಿಗಣೆಯಂತಹ ಸೂಕ್ಷ್ಮತೆ, ಮಗುವಿನಂತೆ ಮುಗ್ಧತೆ, ಗಡಿಯಾರದಂತೆ ನಿಯಮಪಾಲನೆಯನ್ನು ಹೊಂದಿರ ಬೇಕು. ಆಗಮಾತ್ರ ಮೋಕ್ಷವು ಪ್ರಾಪ್ತಿಯಾಗುವುದು.

ಭಗವತ್ಪ್ರಸಾದವಿಲ್ಲದೆ ಸಂಸಾರ ಸಾಗರವನ್ನು ದಾಟಲಾರೆ. ಜಪ, ಸಂಕೀರ್ತನೆ, ಉಪಾಸನ ಮತ್ತು ಆತ್ಮ ಸಮರ್ಪಣೆಯ ಮೂಲಕ ಅವನ ಕೃಪೆ ಯನ್ನು ಸಂಪಾದಿಸಿ. ನಮ್ರತೆಯಿಲ್ಲದೆ ನಿಷ್ಕಪಟವಾಗಿ, ನಿಷ್ಕಲ್ಮಶವಾಗಿ, ನಿಸ್ವಾರ್ಥತೆಯಿಂದ ಭಗವಂತನಿಗೆ ಶರಣಾಗತನಾಗದೆ ಅವನ ಕೃಪೆಯನ್ನು ಪಡೆಯಲು ಹೇಗೆ ಸಾಧ್ಯ ?

ಸ್ಥಿರಮನಸ್ಸಿನಿಂದ ದೇವರ ಮಹಿಮೆಯನ್ನು ಕೊಂಡಾಡಿ. ಭಕ್ತಿ ಭಾವದಿಂದ ಪೂಜೆಗಳನ್ನು ನಡೆಸಿ. ನಿಷ್ಠೆಯಿಂದ ನಾಮೋಚ್ಚಾರಣೆಮಾಡಿ. ಶಮ ದಮೆಗಳಿಂದ ರಾಮಾಯಣ, ಭಾಗವತವನ್ನು ಶ್ರವಣಮಾಡಿರಿ. ಪವಿತ್ರ ಕ್ಷೇತ್ರಗಳಾದ ನಾಸಿಕ್, ವಾರಣಾಸಿ, ಹರಿದ್ವಾರ, ಹೃಷೀಕೇಶ ಮತ್ತು ಪ್ರಯಾಗ ಕ್ಷೇತ್ರಗಳಿಗೆ ಪ್ರಯಾಣಮಾಡಿರಿ. ಸಾಧುಗಳನ್ನು ಹುಡುಕಿರಿ. ಶ್ರದ್ಧೆಯಿಂದ ಪ್ರಯತ್ನಿಸಿ. ಕೇವಲ ಕೆಲವೇ ನೋಟಗಳಿಂದ ತೃಪ್ತಿಗೊಳ್ಳಬೇಡಿ. ಅವರಿಂದ ಆಧ್ಯಾತ್ಮಿಕ ಸಲಹೆಗಳನ್ನು ಪಡೆದು ದೈನಂದಿನ ಜೀವನದಲ್ಲಿ ಅಭ್ಯಾಸಮಾಡಿ. ಸದ್ಗುಣಗಳನ್ನು ಬೆಳೆಸಿರಿ. ಆಗ ಸಂಸಾರ ಸಾಗರವನ್ನು ಸುಲಭವಾಗಿ ದಾಟ ಬಹುದು. ಆರಂಭದಲ್ಲಿ ಪ್ರತಿದಿನವೂ ಬೆಳಗಿನ ಜಾಮ ೪ ಗಂಟೆಗೆ ಮತ್ತು ಸಂಜೆ ೮ಗಂಟೆಗೆ ಪ್ರೇಮವೆಂಬ ಔಷಧಿಯನ್ನು ತಪ್ಪದೆ ಕುಡಿಯಿರಿ. ಮೂರು ಟೀ ಚಮಚೆಯಷ್ಟು ಪ್ರೇಮಕ್ಕೆ ಒಂದು ಚಮಚದಷ್ಟು ಶ್ರದ್ಧೆಯನ್ನೂ, ಅರ್ಧ ಚಮಚದಷ್ಟು ಭಾವವನ್ನು ಬೆರೆಸಿರಿ. ಈ ಮಿಶ್ರಣಕ್ಕೆ ೨ ಚಮಚದಷ್ಟು ಹರಿಕೀರ್ತನೆಯನ್ನೂ, ಒಂದು ಔನ್ಸ್‌ನಷ್ಟು ಜಪವನ್ನೂ ಕೂಡಿಸಿ ದಿನಕ್ರಮೇಣ ಅವುಗಳ ಪ್ರಮಾಣವನ್ನು ಹೆಚ್ಚಿಸಿರಿ. ಇದರಿಂದ ಅಮೃತತ್ತ್ವ ಪ್ರಾಪ್ತಿಯು ಜನನ ಮರಣವೆಂಬ ರೋಗರುಜಿನಗಳೂ ನಾಶವಾಗುವುವು. ನಾಮಸ್ಮರಣೆ, ಹಗಲು ರಾತ್ರಿ ನಾಮ ಸಂಕೀರ್ತನೆಯೂ ನಿಮ್ಮ ಆಧ್ಯಾತ್ಮ ಸಾಧನೆಯಾಗಿರಲಿ. ಬೆಳಿಗಿನ ಧ್ಯಾನ ನಾಲ್ಕು ಗಂಟೆಗೆ ತಪ್ಪದೆ ಏಳಿ. ಗೀತೆಯ ಕೆಲವು ಶ್ಲೋಕ

ಗಳನ್ನು ಅಧ್ಯಯನ ಮಾಡಿ. ಪ್ರಯಾಣಕಾಲದಲ್ಲೂ ಜಪ ಮತ್ತು ಗೀತಾ ಪಠಣಮಾಡಿ. ನೀವು ಆ ಕಾಲದಲ್ಲಿ ಆಹಾರ, ಪಾನೀಯಗಳನ್ನು ಸ್ವೀಕರಿಸುವುದಿಲ್ಲವೇ? ನಿಮ್ಮನ್ನು ಸದಾ ರಕ್ಷಿಸುವ, ಅನ್ನೋದಕಗಳನ್ನು ನೀಡುವ, ನಿಮ್ಮ ಅಂತರ್ಯಾಮಿಯಾದ ಆತ್ಮನನ್ನು ವಂಚಿಸದಿರಿ.

ಸ್ವಲ್ಪಕಾಲ ನಾಮ ಜಪವನ್ನು ಮಾಡಿ. ನಂತರ ಸ್ವಲ್ಪಹೊತ್ತು ಧ್ಯಾನಮಾಡಿ. ಆಮೇಲೆ ಸ್ವಲ್ಪಹೊತ್ತು ಭಗವಂತನ ಗುಣಗಳನ್ನು ಚಿಂತಿಸಿ. ಶಕ್ತಿಯಿದ್ದಷ್ಟು ಆ ಗುಣಗಳಲ್ಲಿ ಒಂದೊಂದನ್ನೂ ವೃದ್ಧಿಪಡಿಸಿಕೊಳ್ಳಿ.

ಸಂಕೀರ್ತನೆಯು ನಿಮ್ಮ ದಿನನಿತ್ಯದ ಆಹಾರವಾಗಲಿ. ರಾಮನಾಮವು ನಿಮ್ಮ ಶಾಂತಿಧಾಮವಾಗಲಿ. ಈ ಸಂಸಾರ ಸಾಗರವನ್ನು ದಾಟಲು ಸತ್ಸಂಗವು ನಾವೆಯಾಗಲಿ. ಪರಮಶಾಂತವಾದ ಅಧ್ಯಾತ್ಮ ಸ್ಪಂದನಗಳ ವಾತವರಣದಲ್ಲಿರುವ ಶ್ರೇಷ್ಠ ಜ್ಞಾನೀ ಗುರುವಿನ ಮಾರ್ಗದರ್ಶನದಲ್ಲಿದ್ದರೆ ಅಥವಾ ನಿಮ್ಮ ರಜಾದಿನಗಳನ್ನು ಮಹಾನುಭಾವರ ಸಹವಾಸದಲ್ಲಿ ಕಳೆದರೆ ನೀವು ಶೀಘ್ರವಾಗಿ ಅಧ್ಯಾತ್ಮದಲ್ಲಿ ಮುನ್ನಡೆಯುವಿರಿ, ಗಾಢವಾದ ಧ್ಯಾನದಲ್ಲಿ ಶೀಘ್ರವಾಗಿ ಸಮಾಧಿಯನ್ನು ಹೊಂದುವಿರಿ. ಧ್ಯಾನವು ನಿಮಗೆ ಸುಲಭಸಾಧ್ಯವಾಗುವುದು. ಅಧ್ಯಾತ್ಮಪಥದಲ್ಲಿ ನೀವು ಗೊತ್ತಾದ ಗುರಿಯನ್ನು ಮುಟ್ಟುವಿರಿ. ಅದಾದ ನಂತರ ಮನೆಯಲ್ಲಿ ನೀವೇ ಸ್ವತಃ ಧ್ಯಾನವನ್ನು ಮುಂದುವರೆಸಬಹುದು.

ಮುರನೆಂಬ ರಾಕ್ಷಸನು ದೇವತೆಗಳನ್ನು ದಮನಮಾಡಿದನು. ದೇವತೆಗಳು ರಕ್ಷಣೆಗಾಗಿ ಶ್ರೀಹರಿಯನ್ನು ಪ್ರಾರ್ಥಿಸಿದರು. ಶ್ರೀಹರಿಯು ರಾಕ್ಷಸರನ್ನು ಕೊಲ್ಲಲು ತನ್ನ ಯೋಗಮಾಯೆಯನ್ನು ಕಳುಹಿಸಿದನು. ಶ್ರೀಹರಿಯ ಆಜ್ಞೆಯಂತೆ ಯೋಗಮಾಯೆಯು ರಾಕ್ಷಸನನ್ನು ಕೊಂದಳು. ನಂತರ ಶ್ರೀಹರಿಯು ಯೋಗಮಾಯೆಗೆ ಹೇಳಿದನು, "ಏಕಾದಶಿ ವ್ರತವನ್ನು ಆಚರಿಸುವವರು ಪಾಪಗಳಿಂದ ಮುಕ್ತರಾಗುವರು. ಇನ್ನು ಮುಂದೆ ನಿನ್ನನು ಏಕಾದಶೀ ಎನ್ನುವರು."

ಬ್ರಹ್ಮನ ಹಣೆಯಿಂದ ತೊಟ್ಟಿಕ್ಕಿದ ಬೆವರು ಹನಿಯು ದೈತ್ಯಾಕಾರವನ್ನು ತಾಳಿ ಹೇಳಿತು " ಓ ಪ್ರಭುವೇ ನಾನು ವಾಸಿಸಲು ಒಂದು ಸ್ಥಳವನ್ನು ತೋರಿಸು" ಎಂದನು. ಬ್ರಹ್ಮನು ಹೇಳಿದನು " ಎಲೈ ಅಸುರನೇ ಏಕಾದಶಿಯ ದಿನ ಮನುಷ್ಯರಿಂದ ತಿನ್ನಲ್ಪಟ್ಟ ಅನ್ನದ ಕಾಳುಗಳಲ್ಲಿ ಸೇರಿ ಅವರ ಹೊಟ್ಟೆಯಲ್ಲಿ ಹುಳುಗಳಾಗು."

ಏಕಾದಶ ಇಂದ್ರಿಯಗಳನ್ನು ಒಳಸೆಳೆಯಿರಿ. ಬಾಹ್ಯವಸ್ತುಗಳಿಂದ ಪಂಚಕರ್ಮೇಂದ್ರಿಯಗಳೂ ಮತ್ತು ಪಂಚ ಬುದ್ಧೀಂದ್ರಿಯಗಳನ್ನೂ ಮತ್ತು ಮನಸ್ಸನ್ನು ಹಿಂದಕ್ಕೆ ಸರಿಸಿ ಶ್ರೀಹರಿಯ ಪಾದಕಮಲದಲ್ಲಿ ನಿಲ್ಲಿಸಿ. ಇದೇ ನಿಜವಾದ ಏಕಾದಶೀ ವ್ರತವು. ಏಕಾದಶಿಯಂದು ನಿರಾಹಾರಿಗಳಾದರೆ ಭಗವಂತನಲ್ಲಿ ಸುಲಭವಾಗಿ ಮನಸ್ಸನ್ನಿಡಬಹುದು.

ಇಂದ್ರಿಯ ದ್ವಾರಗಳನ್ನು ಮುಚ್ಚಿರಿ. ಚಿಂತನೆಗಳನ್ನು, ಭಾವನೆಗಳನ್ನು, ಉದ್ವಿಗ್ನತೆಗಳನ್ನು ಸ್ತಬ್ಧಗೊಳಿಸಿ. ಬೆಳಗಿನ ಝಾವ ಶಾಂತವಾಗಿ ಕುಳಿತು ಚಲಿಸದಿರಿ. ಕಾಣುವ ದೃಶ್ಯಗಳನ್ನೂ, ಬಣ್ಣಬಣ್ಣದ ಬೆಳಕನ್ನೂ ಗಮನಿಸ ದಿರಿ. ಶಾಂತಮೂರ್ತಿಗಳಾಗಿ, ದೇವದೇವನೊಡನೆಯೇ ನಡೆಯಿರಿ, ಅವನೊಡನೆ ಬೆರೆಯಿರಿ. ಶಾಂತಿಯೊಳಗಣ ಶಾಂತಿಯನ್ನು ಅನುಭವಿಸಿರಿ.

ಏಕಾಗ್ರತೆ ಮತ್ತು ಪರಿಶುದ್ಧ ಭಾವದಿಂದ ಸಂಪೂರ್ಣ ರಾಮಾಯಣ ವನ್ನು ನೂರೆಂಟು ಬಾರಿ ಓದಿರಿ. ಇದನ್ನು ಕೇವಲ ಮೂರು ವರ್ಷಗಳಲ್ಲೇ ಪ್ರತಿದಿನ ಮೂರು ಗಂಟೆಗಳಷ್ಟು ಓದಿದರೆ ಪೂರೈಸಬಹುದು. ತಿಂಗಳಲ್ಲಿ ಮೂರುಸಾರಿ ಈ ಗ್ರಂಥವನ್ನು ಓದಬಹುದು. ನಿಮಗೆ ಅನೇಕ ಸಿದ್ಧಿಗಳು ಪ್ರಾಪ್ತಿಯಾಗುವುವು ಮತ್ತು ಭಗವಾನ್ ರಾಮಚಂದ್ರನ ದರ್ಶನವಾಗುವುದು.

ಕೆಲವು ದಿನ ಜಪ, ಧ್ಯಾನ ಮತ್ತು ಕಠಿಣವಾದ ತಪಸ್ಸನ್ನು ಮಾಡಿ. ಬೆಳಗಿನ ನಾಲ್ಕು ಗಂಟೆಯಲ್ಲಿ ಧ್ಯಾನದ ಕೋಣೆಯನ್ನು ಪ್ರವೇಶಿಸಿ. ಅಂದು ಅನ್ನೋದಕಗಳನ್ನು ತೆಗದುಕೊಳ್ಳದೆ ನಿರ್ಜಲ ದಿನವನ್ನಾಗಿ ಪರಿವರ್ತಿಸಿ. ಆ ದಿನವೆಲ್ಲಾ ನಿಮಗೆ ಇಷ್ಟಬಂದ ಮಂತ್ರವನ್ನು ಪುನಶ್ಚರಣ ಮಾಡುತ್ತ ಮಾರನೆಯ ದಿನ ಬೆಳಿಗ್ಗೆ ೮ ಗಂಟೆಗೆ ಬಾಗಿಲನ್ನು ತೆರೆಯಿರಿ. ಇದನ್ನು ನಿಮಗೆ ಅನುಕೂಲವಾದ ಭಾನುವಾರದ ದಿನ ಆಚರಿಸಬಹುದು. ನಿಮ್ಮ ಮಾನಸಿಕ ಸ್ಥಿತಿ ಮತ್ತು ಭಾವನೆಗಳನ್ನು ಅವಲೋಕಿಸಿ. ನಿಮಗೆ ಅಪೂರ್ವವಾದ ಆಧ್ಯಾತ್ಮಿಕ ಅನುಭವಗಳುಂಟಾಗುವುವು. ನಾನು ನಿಮಗೆ ವಚನ ನೀಡುವೆನು. ನಿಮ್ಮ ಆಧ್ಯಾತ್ಮಸಾಧನೆಯಲ್ಲಿ ಶ್ರದ್ಧಾಮಯರೂ, ವೀರಸಾಧಕರೂ ಆಗಿರಿ.

ಇಲ್ಲೊಂದು ಹತ್ತುದಿನಗಳ ಸಾಧನೆ ಇದೆ. ಇದನ್ನು ಕ್ರಿಸ್‌ಮಸ್, ದಸರಾ ಅಥವಾ ಬೇಸಿಗೆಯ ರಜದಲ್ಲಿ ಆಚರಿಸಬಹುದು. ಗಾಳಿ, ಬೆಳಕಿರುವ ಕೋಣೆಯೊಳಗೆ ಸೇರಿಕೊಳ್ಳಿ, ಯಾರೊಡನೆಯೂ ಮಾತನಾಡಬೇಡಿ, ಯಾರನ್ನೂ

ನೋಡದಿರಿ, ಏನನ್ನೂ ಕೇಳದಿರಿ. ನಾಲ್ಕು ಗಂಟೆಗೆ ಎದ್ದು ಮಹಾಮಂತ್ರ, ಗಾಯತ್ರಿ 'ಓಂ' ಅಥವಾ ನಿಮ್ಮ ಗುರುಮಂತ್ರವನ್ನು ಸೂರ್ಯ ಅಸ್ತಮಿಸುವ ವರೆಗೂ ಜಪಿಸುತ್ತಿರಿ. ಸ್ವಲ್ಪ ಹಾಲು, ಹಣ್ಣನ್ನು ತೆಗೆದುಕೊಂಡು ವಿಶ್ರಾಂತಿ ಪಡೆಯಿರಿ. ಪುನಃ ಜಪವನ್ನು ಮುಂದುವರೆಸಿ ಹನ್ನೊಂದು ಗಂಟೆಗೆ ಮಲಗಿರಿ. ನಿಮ್ಮ ಜಪದೊಡನೆ ಧ್ಯಾನವನ್ನೂ ಸೇರಿಸಿಕೊಳ್ಳಬಹುದು. ನಿಮ್ಮ ಕೋಣೆ ಯೊಳಗೆ ಸ್ನಾನ ಆಹಾರ ಮುಂತಾದ ಅನುಕೂಲಗಳನ್ನು ಮಾಡಿಕೊಳ್ಳಿ. ಸಾಧ್ಯವಾದರೆ ಸ್ನಾನಕ್ಕೆ ಒಂದು ಕೊಠಡಿ ಮತ್ತು ಧ್ಯಾನಕ್ಕೆ ಮತ್ತೊಂದು ಕೊಠಡಿ ಇರಲಿ. ಈ ಬಗೆಯ ಜಪವನ್ನು ವರ್ಷದಲ್ಲಿ ನಾಲ್ಕು ಬಾರಿ ಆಚರಿಸಿ. ಈ ಅನುಷ್ಠಾನವನ್ನು ಮೂವತ್ತರಿಂದ ನಲವತ್ತು ದಿವಸಗಳವರೆಗೆ ನಡೆಸುವುದರಿಂದ ಆಶ್ಚರ್ಯಕರವಾದ ಫಲಿತಾಂಶವೂ, ವಿವಿಧ ಅನುಭವಗಳೂ ಉಂಟಾಗುವುವು. ನಾನು ಪ್ರಮಾಣಪೂರ್ವಕ ಹೇಳುವೆನು. " ನಿಮಗೆ ಖಂಡಿತವಾಗಿ ಸಮಾಧಿ ಉಂಟಾಗುವುದು ". ಇನ್ನೂ ಮುಂದುವರೆದ ಸಾಧಕರಿಗೆ ಇನ್ನೊಂದು ಬಗೆಯ ಸಾಧನೆ ಇದೆ. ಅಧ್ಯಾತ್ಮದ ಹಾದಿಯಲ್ಲಿ ಘನವಾದ ಕ್ಷಿಪ್ರ ಪ್ರಗತಿಗೆ ಇದು ಬಹಳ ಉಪಯುಕ್ತವಾದುದು. ನಾಲ್ಕು ಗಂಟೆಗೆ ಏಳಿ. ಸ್ನಾನ ಮಾಡಿ. ಅಥವಾ ಕೈ, ಕಾಲು, ಮುಖವನ್ನು ಮಾತ್ರ ತೊಳೆಯಿರಿ. ನಿಮಗೆ ಸಿದ್ಧಿಯಾಗಿರುವ ಯಾವುದಾದರೊಂದು ಆಸನದಲ್ಲಿ ಕುಳಿತು ಜಪವನ್ನಾರಂಭಿಸಿ. ೧೪ ಗಂಟೆಗಳ ಕಾಲ ಯಾವ ಆಹಾರವನ್ನೂ, ಪಾನೀಯವನ್ನೂ ಸೇವಿಸದಿರಿ. ಆ ಆಸನವನ್ನು ಬಿಟ್ಟು ಏಳದಿರಿ ಅಥವಾ ಅದನ್ನು ಬದಲಾಯಿಸದಿರಿ. ಸಂಜೆಯಲ್ಲಿ ಜಪವನ್ನು ಮುಗಿಸಿ ಹಾಲು ಹಣ್ಣು ಗಳನ್ನು ಸೇವಿಸಿರಿ. ರಜಾದಿನಗಳಲ್ಲಿ ಗೃಹಸ್ಥರೂ ಇದನ್ನು ಅಭ್ಯಾಸ ಮಾಡ ಬಹುದು. ವಾರಕ್ಕೊಮ್ಮೆ, ಪಕ್ಷಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆಯಾದರೂ ಇದನ್ನು ಅಭ್ಯಾಸಮಾಡಿ. ಬಡವರಿಗೂ ರೋಗಿಗಳಿಗೂ ಸೇವೆಮಾಡಿ. ಮಹಾ ತ್ಮರ ಸೇವೆ ಮಾಡಿ. ಭಕ್ತಿಯನ್ನು ಬೆಳೆಸಿ. ಸತ್ಸಂಗದಲ್ಲಿರಿ. ಸಾಧು, ಸನ್ಯಾಸಿ ಗಳನ್ನು ಹುಡುಕಿ ಹಣ್ಣುಗಳನ್ನು ಕೊಡಿ. ಜಪ ಮಾಡಿ, "ರಾಮ,ರಾಮ,ರಾಮ" ಎಂದು ಅವನ ನಾಮವನ್ನು ಉಚ್ಚರಿಸಿ. 'ಓಂ' ಎಂದು ಹಾಡಿರಿ. ಎಲ್ಲೆಲ್ಲಿಯೂ ಪರಮಾತ್ಮನ ಸಾನ್ನಿಧ್ಯವನ್ನು ಭಾವಿಸಿ. ಸತ್ಯ, ಜ್ಞಾನ, ಮತ್ತು ಆನಂದದಲ್ಲಿ ಶಾಂತಿಯನ್ನು ಪ್ರವೇಶಿಸಿ. ಜ್ಞಾನವು ತಾನಾಗಿಯೇ ಪ್ರಾಪ್ತಿಯಾಗುವುದು.

ಎಲೈ ಪ್ರಾಪಂಚಿಕರೇ, ಭಗವದ್ದರ್ಶನವು ಬಹಳ ಕಷ್ಟವೇನಲ್ಲವು. ಭಗವಂತನನ್ನು ಮೆಚ್ಚಿಸುವುದು ಬಹು ಕಠಿಣವೇನಲ್ಲ. ಅವನು ಸರ್ವ ವ್ಯಾಪಿಯು, ಸರ್ವಾಂತರ್ಯಾಮಿಯು. ನಿಮ್ಮ ಹೃದಯಗಳಲ್ಲೇ ಕುಳಿತಿರುವನು. ಅವನ ಸಾಕಾರ ಸಗುಣ ರೂಪವನ್ನು ಸದಾ ಚಿಂತಿಸಿ. ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ರುಕ್ಮಾಂಗದ, ಅರ್ಜುನ, ವಸಿಷ್ಠ ಮೊದಲಾದ ಮಹಾ ಭಕ್ತವರೇಣ್ಯರ ಮಹಿಮೆಯನ್ನೂ, ಅವರ ಜೀವನವನ್ನೂ ಸ್ಮರಿಸಿ. ನೀವು ಸ್ಫೂರ್ತಿಯನ್ನು ಪಡೆಯುವಿರಿ. ನಿಮ್ಮ ಮನಸ್ಸು ವಿಕಸಿತವಾಗುವುದು. ನಿಮ್ಮ ಹೃದಯವು ಭಕ್ತಿಯಿಂದ ತುಂಬುವುದು.

ಕೃಷ್ಣಭಕ್ತರು ತುಟಿಯನ್ನು ಮಾತ್ರ ಅಲುಗಿಸುತ್ತಾ ಶಾಂತವಾಗಿ ಜಪಿಸಬೇಕು ಮತ್ತು ' ಓಂನಮೋ ಭಗವತೇ ವಾಸುದೇವಾಯ ' ಎಂಬ ಮಂತ್ರ ವನ್ನು ದಿನವೂ ಮನಸ್ಸಿನಲ್ಲಿ ಜಪಿಸಬೇಕು. ತಮ್ಮ ಹೃದಯಕಮಲದಲ್ಲಿ ಮುರಳೀಲೋಲ ಗೋಪಾಲನ ಮುದ್ದು ರೂಪವನ್ನು ಧಾರಣಮಾಡಬೇಕು. ಚಿಂತನೆಗಳ ಆಧಾರಮೂಲವು ಶ್ರೀಕೃಷ್ಣನಾಗಿರಬೇಕು. ಅವರು ನಡೆಯುವಾಗ, ದುಡಿಯುವಾಗ : " ಶ್ರೀಕೃಷ್ಣಗೋವಿಂದ ಹರೇ ಮುರಾರೇ, ಹೇನಾಥ ನಾರಾಯಣ ವಾಸುದೇವ " ಎಂದು ಹಾಡಬೇಕು. ನಿರಾಸೆಯಾದಾಗ ಗಟ್ಟಿ ಯಾಗಿ ಹಾಡಬೇಕು. ಭಾಗವತವನ್ನು ಓದಬೇಕು. ಕೂಡಲೇ ಭಗವ ದ್ದರ್ಶನವೂ, ಸಾಕ್ಷಾತ್ಕಾರವೂ ಆಗುವುದು. ಶಿವಭಕ್ತರು ಸದಾ " ಓಂನಮಃ ಶಿವಾಯ " ಎಂದು ಉಚ್ಚರಿಸಬೇಕು ಮತ್ತು ಶಿವಪುರಾಣವನ್ನು ಓದಬೇಕು. ಅವರು : " ಮಹಾದೇವ ಶಂಭೋ ಕಾಶೀವಿಶ್ವನಾಥಗಂಗೆ ಅಥವಾ ಓಂಶಿವ ಶಂಕರ ಹರಹರ ಶಂಕರ ಜಯಜಯ ಶಂಕರ, ನಮಾಮಿ ಶಂಕರ " ಎಂದೂ "ಶಿವಾಯ ನಮ ಓಂ ಶಿವಾಯ ನಮಃ, ಶಿವಾಯ ನಮ ಓಂ ನಮಃ ಶಿವಾಯ" ಎಂದೂ ಹಾಡಬೇಕು.

ಬಡವರನ್ನೂ, ರೋಗಿಗಳನ್ನೂ ಸೇವಿಸಿರಿ. ಮಹಾತ್ಮರಿಗೆ ಸೇವೆಮಾಡಿ. ಭಕ್ತಿಯನ್ನು ಬೆಳೆಸಿ. ಸತ್ಸಂಗಮಾಡಿ. ಸಾಧುಸನ್ಯಾಸಿಗಳನ್ನು ಆದರಿಸಿ ಜಪಮಾಡಿ. ನಾಮೋಚ್ಚಾರಣೆ ಮಾಡಿ, ಓಂ ಎಂದು ಹಾಡಿ. ಸದಾ ಭಗವತ್ಸಾನ್ನಿಧ್ಯವನ್ನು ಭಾವಿಸಿ. ಸತ್ಯಜ್ಞಾನಾನಂದ ಜ್ಯೋತಿಯಿಂದ ಆನಂದಿ ಸಿರಿ. ಶಾಂತಿಯನ್ನು ಪ್ರವೇಶಿಸಿ. ಜ್ಞಾನವು ತಾನಾಗಿಯೇ ಪ್ರಾಪ್ತಿಯಾಗು

ವುದು. ಶ್ರೀಹರಿಯ ಅಂತರಂಗಭಕ್ತನು ನಶ್ವರ ವಸ್ತುಗಳನ್ನು ತ್ಯಾಗಮಾಡಿ ಶ್ರೀಹರಿಯ ದಿವ್ಯೈಶ್ವರ್ಯಗಳನ್ನು ಪಡೆಯುವನು.

ಧ್ರುವ, ಪ್ರಹ್ಲಾದರಂತೆ ಅನನ್ಯವಾಗಿ ಪ್ರಾರ್ಥಿಸಿ. ರಾಧೆಯಂತೆ ಕೀರ್ತನೆಮಾಡಿ. ಏಕಾಂತದಲ್ಲಿ ಮೀರಾಬಾಯಿಯಂತೆ ದುಃಖಿಸಿ. ಪ್ರಭು ಗೌರಾಂಗರಂತೆ ಕೀರ್ತನೆಮಾಡಿ. ಬಂಗಾಳದ ರಾಮಪ್ರಸಾದನಂತೆ ಭಜನೆ ಮಾಡಿ. ಚೈತನ್ಯಮಹಾಪ್ರಭುವಿನಂತೆ ನೃತ್ಯಮಾಡುತ್ತಾ ದಿವ್ಯಭಾವವನ್ನು ಪ್ರವೇಶಿಸಿ ಭಾವಸಮಾಧಿಯನ್ನು ಅನುಭವಿಸಿರಿ. ರಾಮದಾಸ, ತುಕಾರಾಮ, ವಾಲ್ಮೀಕಿಯಂತೆ ನಾಮಪುನಶ್ಚರಣೆಮಾಡಿ.

ನಿಮಗೆ ರಜೆ ದೊರೆತಾಗ ಪ್ರಯಾಗ, ಹೃಷಿಕೇಷ, ಕಾಶಿ, ಕನ್‌ಖಲ್, ಹರ್‌ದ್ವಾರ್, ನಾಸಿಕ್, ಭದ್ರಾಚಲ, ಅಯೋಧ್ಯ, ಬೃಂದಾವನ, ಪಂಢರಾಪುರ ಅಥವಾ ನವದ್ವೀಪಗಳಿಗೆ ಹೋಗಿ. ಹೆಚ್ಚುಹೆಚ್ಚು ಏಕಾಗ್ರತೆ ಯಿಂದ ಹೆಚ್ಚುಹೆಚ್ಚು ಜಪವನ್ನು ಮಾಡಿ. ಸಾಧುಗಳನ್ನೂ, ಮಹಾತ್ಮರನ್ನೂ ಕಂಡು ಭಾವಶುದ್ಧಿಯಿಂದ, ಶ್ರದ್ಧಾಪ್ರೇಮದಿಂದ ಹಣ್ಣುಗಳನ್ನು ಅರ್ಪಿಸಿ. ಅವರಿಂದ ಉಪದೇಶಗಳನ್ನು ಪಡೆದು ಕಟ್ಟುನಿಟ್ಟಾಗಿ ಆಚರಿಸಿ. ಅವರೊಡನೆ ಕೆಲವು ಕಾಲ ವಾಸಮಾಡಿ. ಭಾಗವತರ ಸೇವೆ, ಭಗವನ್ನಾಮೋಚ್ಚಾರಣೆ, ಸತ್ಸಂಗ, ಸಂಕೀರ್ತನ, ಭಾಗವತ, ರಾಮಾಯಣ ವಾಚನ ಮತ್ತು ಬೃಂದಾವನ, ಪಂಢರಪುರ, ಚಿತ್ರಕೂಟ, ಅಯೋಧ್ಯೆಯಲ್ಲಿ ವಾಸ, ಇವು ಐದೂ ಭಕ್ತಿಯ ಬೆಳವಣಿಗೆಗೆ ಸಹಕಾರಿಗಳು.

ಎಲ್ಲಿ ಸತ್ಸಂಗವಿಲ್ಲವೋ, ಸಾಧುಗಳು ವಾಸಿಸುವುದಿಲ್ಲವೋ, ಎಲ್ಲಿ ಸಂಕೀರ್ತನವು ನಡೆಯದೋ, ಎಲ್ಲಿ ಭಗವದಾರಾಧನೆಯು ಇಲ್ಲವೊ ಅಲ್ಲಿ ಎಷ್ಟೇ ಮನೋಹರವಾದ ದೃಶ್ಯಗಳಿದ್ದರೂ ಅವು ವಾಸಕ್ಕೆ ಅನರ್ಹವಾದ ಸ್ಥಳಗಳು. ಭಕ್ತನ ಮನಸ್ಸಿನಲ್ಲಿ ಭಗವಂತನ ಬಗ್ಗೆ ಹಂಬಲವು ಹುಟ್ಟಿದರೆ ಅವನಿಗೆ ಹಸಿವು ನೀರಡಿಕೆ ಆಗದಿರುವುದೇ ಮೊದಲ ಚಿಹ್ನೆ. ಆತನಿಗೆ ಅನ್ನೋದಕಗಳ ಸ್ಮರಣೆ ಇರುವುದಿಲ್ಲ. ತಾಯಿ ತನ್ನ ಮಗಳ ವಿವಾಹದ ಸಡಗರದಲ್ಲಿ ತೊಡಗಿರುವಾಗ ಆಕೆ ಅನ್ನೋದಕಗಳನ್ನು ಮರೆತಿದ್ದರೂ ಸಂತೋಷವಾಗಿಯೂ, ಬಲಶಾಲಿಯಾಗಿಯೂ ಇರುವಳು. ಒಬ್ಬನು ನಾಟಕ ಅಥವಾ ಸಂಗೀತಸಭೆಗೆ ಹೋದಾಗ ಅವನ ಮನಸ್ಸು ಸಂಗೀತ ಮತ್ತು

ನೋಟದಿಂದ ಸಂತೋಷಗೊಂಡಿರುವುದರಿಂದ ಅವನನ್ನು ಹಸಿವು, ಬಾಯಾರಿಕೆಗಳು ಬಾಧಿಸುವುದಿಲ್ಲ, ಮಗನು ಮೃತನಾದಾಗ ಹೇಗೆ ಹಸಿವು ಬಾಯಾರಿಕೆಗಳು ತೋರುವುದಿಲ್ಲವೋ ಹಾಗೆಯೇ. ಆಹಾರ ದೊರೆಯುವುದು ಸ್ವಲ್ಪ ತಡವಾದರೆ, ರುಚಿಕರವಾಗಿಲ್ಲದಿದ್ದರೆ, ಬೇಕಾದುದು ದೊರೆಯದಿದ್ದರೆ ಮನಸ್ಸು ಬಹಳ ವ್ಯಾಕುಲಗೊಳ್ಳುವುದು. ಇದರಿಂದ ನಿನಗೆ ದೇವರಲ್ಲಿ ಭಕ್ತಿ ಇಲ್ಲವೆಂದು ತಿಳಿ. ಇದೇ ಸರಿಯಾದ ರೀತಿಯ ಪರೀಕ್ಷೆ.

ಮೀನು ಮತ್ತೆ ನೀರನ್ನು ಸೇರಲು ಹಂಬಲಿಸುವಂತೆ, ನೀರಿನಲ್ಲಿ ಮುಳುಗಿದ ಹುಡುಗನು ಹೊರಬರಲು ತವಕಿಸುವಂತೆ, ಮನೆಗೆ ಬೆಂಕಿ ಬಿದ್ದವನು ಅಗ್ನಿಶಾಮಕ ದಳದವರನ್ನು ನಿರೀಕ್ಷಿಸುವಂತೆ, ಸಾಧಕನು ಭಗವತ್ ಸಾಕ್ಷಾತ್ಕಾರಕ್ಕಾಗಿ ಕಾತುರಪಡುವನು. ಆ ಕ್ಷಣವೇ ಅವನಿಗೆ ಭಗವತ್ ಸಾಕ್ಷಾತ್ಕಾರವಾಗುವುದೆಂಬುದರಲ್ಲಿ ಸಂಶಯವಿಲ್ಲ.

ಭಿಲ್ಲಿನಿಯಾದ ಶಬರಿಯು ನೀಡಿದ ಮನೋಭಾವದಂತೆ ನೀನು ಭಗವಂತನಿಗೆ ಏನನ್ನೂ ಸಮರ್ಪಿಸಿಲ್ಲವು. ದ್ರೌಪದಿಯು ದ್ವಾರಕಾನಾಥನನ್ನು ಕರೆದ ಅಥವಾ ಗಜೇಂದ್ರನು ಶ್ರೀಹರಿಯನ್ನು ಕರೆದ ಭಾವದಿಂದ ಭಗವಂತನನ್ನು ನೀನು ಎಂದೂ ಕರೆದಿಲ್ಲವು. ಈ ಕಾರಣದಿಂದ ನಿನ್ನ ಇಷ್ಟದೈವವನ್ನು ಕಾಣಲು ನಿನಗೆ ಸಾಧ್ಯವಾಗಿಲ್ಲಿ. ಭಾವವನ್ನು ಬೆಳೆಸಿಕೊ. ಭಗವದ್ದರ್ಶನವು ಕೂಡಲೇ ಆಗುವುದು.

ಆರಂಭದಲ್ಲಿ ಭಗವಂತನೊಡನೆ ಸಂಭಾಷಿಸುವೆ. ಅವನನ್ನು ಭೌತರೂಪದಲ್ಲಿ ಕಾಣುವೆ. ಆದರೆ ವಿಶಾಲವಾದ ಅರಿವು ಮೂಡಿದಾಗ ಸಂಭಾಷಣೆಯು ಸ್ತಬ್ಧವಾಗುವುದು. ಹೃದಯದ ಭಾಷೆ ಅಥವಾ ಶಾಂತಿಯ ಮಾತನ್ನು ಕೇಳಿ ಆನಂದಿಸುವೆ. ವೈಖರಿ ಶಬ್ದದಿಂದ ಮಧ್ಯಮ, ಪಶ್ಯಂತಿ ಮತ್ತು ಪರಾಸ್ಥಿತಿಗೆ ಏರಿ, ಅನುಕ್ರಮವಾಗಿ ಶಬ್ದರಹಿತವಾದ ಓಂಕಾರ ಅಥವಾ ಬ್ರಹ್ಮದಲ್ಲಿ ವಿಶ್ರಮಿಸುವೆ.

ನ ಧನಮ್, ನ ಜ್ಞಾನಂ, ನ ಸುಂದರೀಂ
ಕವಿತಂ ವಾ ಜಗದೀಶ ಕಾಮಯೇ
ಮಮ ಜನ್ಮನಿ ಜನ್ಮನೀಶ್ವರೇ
ಭವತು ತದ್ಭಕ್ತಿರ್ ಅಹೈತುಕೀ ತ್ವಯೀ ||

"ನಾನು ಹಣವನ್ನಾಗಲಿ, ಸುಂದರ ಸ್ತ್ರೀಯನ್ನಾಗಲಿ, ಕವಿತಾ ಸಾಮರ್ಥ್ಯವನ್ನಾಗಲೀ ಬೇಡುವುದಿಲ್ಲ. ಹೇ ಜಗದೀಶ ನನ್ನ ಪ್ರತಿಯೊಂದು ಜನ್ಮದಲ್ಲೂ ನಿನ್ನಲ್ಲಿ ಅಹೈತುಕ ಭಕ್ತಿಯುಂಟಾಗಲೆಂದು ಬೇಡುವೆನು" ಎಂದು ದಿನವೂ ಹಲವುಬಾರಿ ಹೇಳಿ.

ದೇವರು ನಿಮ್ಮ ಬಾಹ್ಯ ವೇಷವನ್ನು ನೋಡುವುದಿಲ್ಲ. ಅವನು ನಿಮ್ಮ ಹೃದಯವನ್ನು ನೋಡುವನು. ಪುನಃಪುನಃ ಹೇಳಿ : "ನಿನ್ನ ಇಚ್ಛೆಯಿದ್ದಂತಾಗಲಿ. ನಾನು ನಿನ್ನವನು. ಎಲ್ಲವೂ ನಿನ್ನದು" ಎಂದು ಹೃದಯಾಂತರಾಳದಿಂದ ನುಡಿಯಿರಿ. ಶ್ರದ್ಧಾವಂತರಾಗಿ ಪ್ರೇಮದಿಂದ ಕಣ್ಣೀರು ಸುರಿಸಿ. ಏಕಾಂತದಲ್ಲಿ ಭಕ್ತಿಯಿಂದ ದುಃಖಿಸಿ. ನಿಮ್ಮ ಕಣ್ಣೀರಿನ ಕೋಡಿಯಲ್ಲಿ ಬಟ್ಟೆಗಳು ನೆನೆಯಲಿ. ನಿಮ್ಮದು ಸ್ವಾರ್ಥಪ್ರೇಮವಾದರೆ ಅಲ್ಲಿ ಅನ್ಯಾಯವೂ, ಭೇದಬುದ್ಧಿಯೂ ಇರುವುದು. ಸ್ವಾರ್ಥಪ್ರೇಮವು ಬದಲಾಯಿಸುತ್ತಿರುವುದು. ಅದು ಜೀರ್ಣವಾಗುವುದಲ್ಲದೆ ನಾಶವಾಗುವುದು ಎಂದರೆ ಅಶಾಶ್ವತವು.

ನೀವು ಪತ್ನೀ ಪುತ್ರರು ಮತ್ತು ವಸ್ತುಗಳಲ್ಲಿಟ್ಟಿರುವ ಕೃತಕ ಪ್ರೇಮವನ್ನು ನಾಶಗೊಳಿಸಿದರೆ ನೀವು ದೇವರನ್ನು ಪ್ರೀತಿಸಬಹುದು. ನಿಮ್ಮ ಮಕ್ಕಳು, ಪತ್ನಿ ಅಥವಾ ಧನಪಿಶಾಚಿಗೆ ಸೇವೆ ಮಾಡುವುದರಲ್ಲಿ ಒಂದಂಶದಷ್ಟು ದೇವರಿಗೆ ಸೇವೆ ಮಾಡಿದರೆ ಅವನು ಕೂಡಲೇ ಪ್ರತ್ಯಕ್ಷವಾಗುತ್ತಿದ್ದನು. ತೀವ್ರವಾದ ವಿರಹವನ್ನೂ,ದೇವರನ್ನು ಕಾಣುವ ಹಂಬಲವನ್ನೂ ಕೇವಲ ಒಂದುಕ್ಷಣ ಹೊಂದಿದ್ದರೂ ನೀವು ದೇವರನ್ನು ಅತ್ಯಂತ ಸಮೀಪದಲ್ಲಿ ಕಾಣಲು ಸಾಕಾಗುತ್ತಿತ್ತು. ನಿಮ್ಮ ಪ್ರೇಮವನ್ನು ನಿರರ್ಗಳವಾಗಿ ಭಗವಂತನ ಮುಂದೆ ತೋರಿಕೊಂಡಿದ್ದರೆ ನಿಮಗೆ ಸುಖಸಂಪತ್ತುಗಳಲ್ಲಿ, ಸೌಂದರ್ಯ ಮತ್ತು ಬಲದಲ್ಲಿ ಆಸಕ್ತಿಯು ಮಾಯವಾಗುತ್ತಿತ್ತು. ನಿಮ್ಮಲ್ಲಿರುವ ಏಕಮಾತ್ರ ಪ್ರೇಮವು ಭಗವಂತನಿಗೆ ಮಾತ್ರ ಮೀಸಲಿರುತ್ತಿತ್ತು. ದೇವರಲ್ಲಿಟ್ಟ ಪ್ರೇಮವು ದೇಹಾಭಿಮಾನ ಮತ್ತು ಸ್ವಾರ್ಥತೆಯನ್ನು ನಾಶಮಾಡುವುದು, ಆತ್ಮಸಮರ್ಪಣಭಾವವನ್ನು ಬೆಳೆಸುವುದು.

ಒಬ್ಬ ಸಾಧಕನು ನನಗೆ ಹೀಗೆ ಬರೆದನು : "ನನ್ನ ಕೋಣೆಯ ಬಾಗಿಲನ್ನು ೩ ಗಂಟೆಗೆ ಯಾರೋ ತಟ್ಟಿದರು. ನಾನು ಎದ್ದು ಬಾಗಿಲನ್ನು ತೆರೆದೆನು. ಶ್ರೀಕೃಷ್ಣನು ಕಿರೀಟಧಾರಿಯಾಗಿ ನಿಂತಿರುವುದನ್ನು ಕಂಡೆನು.

ಕೂಡಲೇ ಅವನು ಅದೃಶ್ಯನಾದನು. ಬೀದಿಗಳಲ್ಲಿ ಅವನನ್ನು ಹುಡುಕುತ್ತಾ ಅಲೆದಾಡಿದೆನು. ಅವನನ್ನು ಕಾಣಲಾರದೆಹೋದೆ. ಮನೆಗೆ ಹಿಂತಿರುಗಿ ಬೆಳಕು ಹರಿಯುವವರೆಗೆ ಮುಂಬಾಗಿಲಿನಲ್ಲಿ ಕಾದು ಕುಳಿತೆನು.” ನಿದ್ರಾವಶ ರಾಗಿ, ನಿದ್ದೆಯ ಕಣ್ಣಿನಲ್ಲೇ ಓಡಾಡುವವರೂ ವಿರಳವೇನಿಲ್ಲ. ಅವರು ನಿಂತಾಗ, ನಡೆವಾಗಲೂ ಕನಸು ಕಾಣುವರು. ಮೇಲಿನ ದೃಷ್ಟಾಂತವು ನಿದ್ರಾವಸ್ಥೆಯ ದಾಗಿರಬಹುದು. ನಿಮ್ಮ ಅಧ್ಯಾತ್ಮದ ಅನುಭವದ ಸಹಜತೆಯನ್ನು ಅಥವಾ ನೈಜತೆಯನ್ನು ಎಚ್ಚರಿಕೆಯಿಂದ ಅದು ಕನಸೊ, ಅಥವಾ ನಿದ್ರೆಯೋ, ಎಚ್ಚರವೋ ಎಂದು ತಿಳಿಯಬೇಕು. ಕೃಷ್ಣದರ್ಶನವು ಅಷ್ಟು ಸುಲಭವಲ್ಲವು. ಸಾಧಕರು ಆರಂಭದಲ್ಲಿ ಹೀಗೆ ತಪ್ಪಾಗಿ ತಿಳಿಯುವುದುಂಟು.

ಯೋಗದ ಶ್ರೇಷ್ಠಮಟ್ಟವನ್ನು ಮುಟ್ಟುವ ಉನ್ನತ ಪ್ರತಿಜ್ಞೆಯು ನಿಮಗಿದ್ದರೆ, ಅಧ್ಯಾತ್ಮ ಜೀವನದ ಮುಗಿಲು ಮುಟ್ಟುವ ದೃಢ ಭಾವವಿದ್ದರೆ ಈಗ ತಾತ್ಕಾಲಿಕವಾಗಿ ಕೆಳಗೆ ಬಿದ್ದಿದ್ದರೂ ನೀವು ಮತ್ತೆ ಮೇಲಕ್ಕೆದ್ದು ಮುಂದುವರೆಯಿರಿ. ನಿಮ್ಮೊಳಗಿನ ದಿವ್ಯತೆಯನ್ನು ಕಂಡುಕೊಳ್ಳಿರಿ. ದಿವ್ಯ ಪ್ರಭಾವಕ್ಕೆ ನಿಮ್ಮ ಹೃದಯವನ್ನು ವಿಶಾಲವಾಗಿ ತೆರೆಯಿರಿ. ಪ್ರತಿ ಹಂತದಲ್ಲಿ ಭಗವಂತನ ಕೃಪೆ ಉಂಟಾಗುತ್ತಿದೆಯೆಂದು ವಿಶ್ವಾಸವಿಡಿರಿ. ನಿಮ್ಮ ಎಲ್ಲ ಕರ್ಮ ಗಳಲ್ಲೂ ದಿವ್ಯ ಮಾರ್ಗದರ್ಶನವಿದೆಯೆಂದು ಅರಿಯಿರಿ. ತೀವ್ರವಾದ ಇಚ್ಛೆ ಯನ್ನು ಭಗವದ್ ಜ್ಞಾನಾರ್ಜನೆಗೂ, ವೈರಾಗ್ಯದ ಅಭಿವೃದ್ಧಿಗೂ ಬಳಸಿರಿ. ಕ್ಷಣಿಕವಾದ ಇಚ್ಛೆಗಳನ್ನೂ, ಲೌಕಿಕವಾದ ಬಯಕೆಗಳನ್ನೂ ಬಿಟ್ಟುಬಿಡಿ. ನೀವು ಹೀಗೆ ಸರಿಯಾಗಿ ನಡೆಸಿದರೆ ದಿವ್ಯಜ್ಯೋತಿಯು ಇಳಿದುಬರುವುದು. ಯೋಗದಲ್ಲಿ ಶೀಘ್ರವಾಗಿ ಮುನ್ನಡೆಯುವಿರಿ. ದೇವದೇವನ ದಿವ್ಯ ಸನ್ನಿಧಿ ಯನ್ನು ನಿಮ್ಮ ಹೃದಯದಲ್ಲಿ, ಎಲ್ಲರ ಮುಖಗಳಲ್ಲಿ, ಎಲ್ಲ ವಸ್ತುಗಳಲ್ಲಿ, ಎಲ್ಲ ಚಿಂತನೆಗಳು ಮತ್ತು ಭಾವನೆಗಳಲ್ಲಿ ಮತ್ತು ನಡೆನುಡಿಗಳಲ್ಲಿ ಕಾಣಿರಿ. ನಿಮ್ಮ ಸಾಧನೆಯು ಸಂತತವಾಗಿ ನಡೆಯಲಿ. ಭಗವತ್ಕೃಪೆಯು ಬರುವುದು ತಡ ವಾದರೂ ನಿರಾಶರಾಗದೆ ಮುಂದುವರೆಸಿ ಆತ್ಮದಲ್ಲಿ ಸಂತೋಷಪಡಿರಿ. ಯೋಗದ ಹೆಚ್ಚಿನ ಧ್ಯೇಯವಾದ ಅಮೃತತ್ವ ಮತ್ತು ಶಾಶ್ವತವಾದ ಆನಂದ ವನ್ನು ಹೊಂದುವುದರಲ್ಲಿ ನೀವು ನಿಸ್ಸಂಶಯವಾಗಿ ಜಯವನ್ನು ಗಳಿಸುವಿರಿ.

---

# ೨. ಭಗವಂತನಲ್ಲಿ ಶ್ರದ್ಧೆ

ತರ್ಕವು ನಿಃಸತ್ವವು. ಶ್ರದ್ಧೆಯು ಸರ್ವಶಕ್ತವು. ದುರ್ಬಲ ತರ್ಕವು ಪ್ರಬಲ ತರ್ಕದಿಂದ ಸೋಲಿಸಲ್ಪಡುವುದು. ಶ್ರದ್ಧಾವಂತ ಭಕ್ತನು ಸುಧಾಮನಂತೆ ಭಗವಂತನ ಅಂತರ್ಧಾಮವನ್ನೂ ಪ್ರವೇಶಿಸಬಲ್ಲನು.

ರೇಖಾಗಣಿತದಲ್ಲಿ ನೀವು ಎಷ್ಟೋ ವಿಷಯಗಳನ್ನು ನಂಬಿ ಪರಿಗಣಿಸುವುದಿಲ್ಲವೇ? ಸರಳರೇಖೆಗೆ ಉದ್ದವಿದೆ, ಅಗಲವಿಲ್ಲ ಎಂದು ಉಪಾಧ್ಯಾಯರು ಹೇಳುವರು. ಬಿಂದುವಿಗೆ ಒಂದು ಸ್ಥಾನವಿದೆ, ಆದರೆ ಗಾತ್ರವಿಲ್ಲ (magnitude). ಇದು ನಿಜವಾಗಿಯೂ ಸರಿಯೇ? ಈ ವಿಷಯಗಳ ಬಗ್ಗೆ ಯಾವ ರೀತಿಯಲ್ಲಾದರೂ ನೀವು ಚರ್ಚಿಸಿರುವಿರಾ? ಇವುಗಳನ್ನು ಸುಮ್ಮನೆ ಅಂಗೀಕರಿಸುವಿರಿ. ಇದು ಕುರುಡುನಂಬಿಕೆಯಲ್ಲವೇನು? ಹೀಗೆಯೆ ಈ ಮನುಷ್ಯನು ನಿನಗೆ ತಂದೆ ಎಂದು ಹೇಗೆ ತಿಳಿದಿರುವೆ? ನಿನ್ನ ನಿಜವಾದ ತಂದೆ ಯಾರೆಂಬುದು ನಿನ್ನ ತಾಯಿಗೇ ಗೊತ್ತು. "ಅವರು ನಿನ್ನ ತಂದೆ" ಎಂದು ಆಕೆ ತೋರಿಸುವಳು. ನೀನು ಸುಮ್ಮನೆ ಒಪ್ಪಿಕೊಳ್ಳುವೆ. ಇದು ಕುರುಡು ನಂಬಿಕೆಯಲ್ಲವೆ?

ಮೋಡಗಳು ತುಂಬಿರುವುದರಿಂದ ಸೂರ್ಯನನ್ನು ನೀನು ನೋಡಲಾರೆ. ಆದರೆ ಸೂರ್ಯನು ಇರುವನು. ಮನಸ್ಸನ್ನು ನೋಡಲಾಗದಿದ್ದರೂ ಅದು ಮೆದುಳಿನಲ್ಲಿ ಅಡಗಿರುವುದು. ತಂತಿಯಲ್ಲಿರುವ ವಿದ್ಯುಚ್ಛಕ್ತಿ, ಗರ್ಭದಲ್ಲಿರುವ ಮಗು, ಹಾಲಿನಲ್ಲಿರುವ ಬೆಣ್ಣೆ, ಕಾಷ್ಠದಲ್ಲಿರುವ ಬೆಂಕಿಯು ಕಣ್ಣಿಗೆ ಕಾಣದಿದ್ದರೂ ಅವುಗಳಲ್ಲಿ ತತ್ವವು ಇದ್ದೇ ಇರುವುದು. ಹಾಗೆಯೇ ಎಲ್ಲಾ ನಾಮರೂಪಗಳಲ್ಲಿ ಅಡಗಿರುವ ಪರಮಾತ್ಮನು ಮನಸ್ಸಿನ ಮಾಲಿನ್ಯತೆಯಿಂದ ಕಾಣದಿದ್ದರೂ ಭಗವಂತನು ಎಲ್ಲದರಲ್ಲಿಯೂ ಇದ್ದೇ ಇರುವನು. ಹಗಲು ಹೊತ್ತು ನಕ್ಷತ್ರಗಳನ್ನು ಕಾಣದಿದ್ದರೂ, ಅವು ಇರುವಂತೆಯೇ ನಮ್ಮ ಚರ್ಮಚಕ್ಷುವಿಗೆ ಗೋಚರಿಸದಿದ್ದರೂ, ಎಲ್ಲ ನಾಮರೂಪಾತ್ಮಕವಾದ ವಸ್ತುಗಳಲ್ಲಿಯೂ ಪರಮಾತ್ಮನು ಅಡಗಿರುವನೆಂದು ತೀರ್ಮಾನಿಸಬಹುದು.

ಕೆಲವೊಮ್ಮೆ ನೀವು ವಿಚಿತ್ರ ಸಮಸ್ಯೆಗಳಲ್ಲಿ ಅಥವಾ ಕ್ಲಿಷ್ಟ ಪರಿಸ್ಥಿತಿಗಳಲ್ಲಿ ಸಿಕ್ಕಿಕೊಳ್ಳುವಿರಿ. ಬಹಳ ವಿಚಿತ್ರವಾದ ರೀತಿಯಲ್ಲಿ ನಿಮಗೆ ಸಹಾಯವು

ದೊರೆಯುವುದು. ಸಮಯದಲ್ಲಿ ಹಣ ಲಭಿಸುವುದು. ಇದು ನಿಮ್ಮೆಲ್ಲರ ಅನುಭವವಾಗಿದೆ. ನೀವು ಸಂತೋಷದಿಂದ ಆಶ್ಚರ್ಯಪಟ್ಟು "ಪರಮಾತ್ಮನ ರೀತಿಯು ವಿಚಿತ್ರವಾದುದು. ಈಗ ನನಗೆ ದೇವರಲ್ಲಿ ಪೂರ್ಣ ವಿಶ್ವಾಸ ಇದೆ. ಇಲ್ಲಿಯವರೆಗೆ ದೇವರಲ್ಲಿ ನನಗೆ ನಂಬಿಕೆ ಇರಲಿಲ್ಲ," ಎಂದು ನುಡಿಯುವಿರಿ.

ಮನಸ್ಸು ಮತ್ತು ಇಂದ್ರಿಯಗಳು ಮುಟ್ಟಲಾರದ ನಮ್ಮ ಆತ್ಮವೇ ಆದ ಬ್ರಹ್ಮ ಅಥವಾ ಜಗದಂತರ್ಯಾಮಿಯನ್ನು ಪ್ರದರ್ಶಿಸಲು ಸಾಧ್ಯವಿಲ್ಲವು. ಆದರೂ ದೈನಂದಿನ ಜೀವನದಲ್ಲಿ ಸಾಮಾನ್ಯ ಅನುಭವಗಳೂ ಅಥವಾ ಕೆಲವು ಪ್ರಾಯೋಗಿಕ ಪದ್ಧತಿಗಳಿಂದ ಪರಮಾತ್ಮನ ಇರುವಿಕೆಯನ್ನು ನಿಶ್ಚಯಿಸ ಬಹುದು. ಒಬ್ಬ ಸ್ತ್ರೀಯು ಮೂರನೆಯ ಮಹಡಿಯಿಂದ ಬಿದ್ದುಬಿಟ್ಟಳು. ಕೆಳಗೆ ಮೊನಚಾದ ಕಲ್ಲುಗಳ ರಾಶಿ. ಆಕೆಗೆ ಬಹು ತೀವ್ರತರವಾದ ಪೆಟ್ಟು ಗಳಾಗಬೇಕಿತ್ತು. ಆದರೆ ಅತ್ಯಾಶ್ಚರ್ಯ ರೀತಿಯಲ್ಲಿ ರಕ್ಷಿಸಲ್ಪಟ್ಟಳು. ಆಕೆ ಸ್ವತಃ ನುಡಿದಿರುವುದೆಂದರೆ "ನಾನು ಹಿತಕರವಾದ ಆಲಿಂಗನವನ್ನು ಯಾವುದೋ ಅವ್ಯಕ್ತವಾದ ತೋಳುಗಳಿಂದ ಹಿಡಿಯಲ್ಪಟ್ಟಂತೆ ಅನುಭವಿಸಿ ದೆನು. ಯಾವುದೋ ಅದ್ಭುತವಾದ ಶಕ್ತಿಯು ನನ್ನನ್ನು ರಕ್ಷಿಸಿತು." ಈ ಬಗೆಯ ಘಟನೆಗಳು ವಿರಳವೇನಲ್ಲ.

ಒಬ್ಬ ವಕೀಲನಿಗೆ ದೇವರಲ್ಲಿ ನಂಬಿಕೆ ಇರಲಿಲ್ಲ. ಅವನಿಗೆ ಎರಡೂ ಶ್ವಾಸಕೋಶಗಳ ಉರಿಯೂತವಾಯಿತು (double pneumonia). ಅವನ ಕೊನೆಯುಸಿರು ನಿಂತಿತು. ಅವನ ಸತಿ, ಸುತ ಮತ್ತು ಸಂಬಂಧಿಕರು ಅಳಲಾರಂಭಿಸಿದರು. ಆದರೆ ಅವನಿಗೆ ಅದ್ಭುತವಾದ ಅನುಭವವಾಯಿತು. ಯಮದೂತರು ಅವನನ್ನು ಹಿಡಿದು ತಂದು ಯಮಧರ್ಮನ ಮುಂದೆ ನಿಲ್ಲಿ ಸಿದರು. ಯಮನು ತನ್ನ ದೂತರನ್ನು ಕುರಿತು ನನಗೆ ಬೇಕಾಗಿದ್ದ ಮನುಷ್ಯನು ಇವನಲ್ಲ, ಬೇರೆಯವನನ್ನು ಕರೆತಂದಿದ್ದೀರಿ. ಇವನನ್ನು ಕಳುಹಿಸಿರಿ" ಎಂದನು. ಆ ವಕೀಲನು ಒಂದು ಗಂಟೆಯ ನಂತರ ಉಸಿರಾಡಲಾರಂಭಿಸಿದನು. ಆತನು ತಾನು ದೇಹವನ್ನು ಬಿಟ್ಟು ಯಮಲೋಕಕ್ಕೆ ಹೋಗಿದ್ದುದಾಗಿಯೂ ಮತ್ತೆ ಅದೇ ಶರೀರವನ್ನು ಪ್ರವೇಶಿಸಿದುದಾಗಿಯೂ ಸತ್ಯವನ್ನೇ ನುಡಿದನು. ಈ ಅದ್ಭುತವಾದ ಅನುಭವವು ಅವನ ಪೂರ್ಣ ಸ್ವಭಾವವನ್ನೇ ಬದಲಾಯಿಸಿತು.

ಅವನು ದೇವರಲ್ಲಿ ಅಪಾರವಾದ ಶ್ರದ್ಧೆಯನ್ನು ಬೆಳೆಸಿಕೊಂಡುದಲ್ಲದೆ ಧರ್ಮಿಷ್ಟನೂ ಆದನು. ಆತನು ಈಗಲೂ ಉತ್ತರಪ್ರದೇಶದಲ್ಲಿರುವನು.

ಇನ್ನೊಬ್ಬ ವಕೀಲನಿಗೂ ಇದೇ ಬಗೆಯ ಅನುಭವಗಳಾದರೂ, ಈತನ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದ್ದಿತು. ಆತನೂ ನಾಸ್ತಿಕನೇ ಆಗಿದ್ದನು. ಆತನು ಯಮನ ಆಸ್ಥಾನಕ್ಕೆ ದೂತರಿಂದ ಕರೆತರಲ್ಪಟ್ಟನು. ಈ ವಕೀಲನು ಯಮಧರ್ಮನನ್ನು ಕುರಿತು, "ಭೌತ ಪ್ರಪಂಚದಲ್ಲಿ ನಾನು ನಡೆಸ ಬೇಕಾದುದೆಲ್ಲವನ್ನೂ ಮುಗಿಸಿಲ್ಲವು. ಇನ್ನೂ ಉಪಯುಕ್ತವಾದ ಕೆಲವು ಕಾರ್ಯಗಳನ್ನು ಮಾಡಬೇಕಾಗಿದೆ. ದಯಮಾಡಿ ನನ್ನನ್ನು ಬಿಟ್ಟುಬಿಡಿರಿ" ಎಂದನು. ಅವನ ಪ್ರಾರ್ಥನೆಯು ಮನ್ನಿಸಲ್ಪಟ್ಟಿತು. ಈ ವಿಚಿತ್ರವಾದ ಅನುಭವದಿಂದ ಆತನಿಗೆ ಅತ್ಯಾಶ್ಚರ್ಯವಾಯಿತು. ಅವನ ಸ್ವಭಾವವೂ ಸಂಪೂರ್ಣವಾಗಿ ಬದಲಾಯಿತು. ತನ್ನ ವಕೀಲೀ ವೃತ್ತಿಯನ್ನು ಕೂಡಲೇ ತ್ಯಜಿಸಿದನು. ತನ್ನ ಉಳಿದಿರುವ ಆಯುಷ್ಯವನ್ನು ನಿಸ್ವಾರ್ಥಸೇವೆ ಮತ್ತು ಧ್ಯಾನದಲ್ಲಿ ವಿನಿಯೋಗಿಸುತ್ತಿರುವನು. ಆತನು ಈಗಲೂ ದಕ್ಷಿಣ ಭಾರತದಲ್ಲಿರುವನು.

ನಾಮದೇವನ ತಂದೆ ದಾಮಾಸೇಠ್ ಪ್ರತಿದಿನವೂ ಪಂಢರಪುರದ ವಿಠೋಬಾ ಮಂದಿರಕ್ಕೆ ಭೇಟಿನೀಡಿ, ಹಣ್ಣುಗಳು ಮತ್ತು ಧಾನ್ಯದಿಂದ ದೇವರನ್ನು ಪೂಜಿಸುತ್ತಿದ್ದನು. ಒಂದು ದಿನ ತುರ್ತು ಕೆಲಸದ ನಿಮಿತ್ತ ಆತನು ನೆರೆಯ ಗ್ರಾಮಕ್ಕೆ ಹೋದನು. ತಾಯಿ ಗೋಣಾಬಾಯಿಯು ಮಗ ನಾಮದೇವನಿಗೆ ಪೂಜಾ ಸಾಮಗ್ರಿಗಳನ್ನು ಕೊಟ್ಟು ವಿಠೋಬಾ ಮಂದಿರಕ್ಕೆ ಹೋಗಿ ಪೂಜೆ ಸಲ್ಲಿಸುವಂತೆ ಹೇಳಿದಳು. ನಾಮದೇವನು ಪೂಜಾದ್ರವ್ಯಗಳನ್ನು ಶ್ರೀಕೃಷ್ಣ ಅಥವ ವಿಠ್ಠಲ ಮೂರ್ತಿಯ ಮುಂದಿಟ್ಟು ಅವುಗಳನ್ನು ತಿನ್ನುವಂತೆ ಬೇಡಿದನು. ಆ ಮೂರ್ತಿಯು ಅಲ್ಲಾಡದೆ ಸುಮ್ಮನಿರುವುದನ್ನು ಕಂಡು ಕಣ್ಣೀರು ಸುರಿಸುತ್ತಾ ದುಃಖದಿಂದ ಅತ್ತನು. ಆಗ ಮಾನವರೂಪಿನಲ್ಲಿ ವಿಠ್ಠಲನು ಮೈದೋರಿ ಬಾಲಭಕ್ತನನ್ನು ಸಂತೋಷಪಡಿಸಲು ಅವನು ನೀಡಿದುದನ್ನು ಸ್ವೀಕರಿಸಿದನು. ಶ್ರದ್ಧಾ ಮತ್ತು ಭಕ್ತಿಯು ಅದ್ಭುತಗಳನ್ನು ಎಸಗುವುದು. ಭಗವಂತನು ಭಕ್ತ ಪರಾಧೀನನು.

ದೈನಂದಿನ ಕಾರ್ಯಗಳಲ್ಲಿ ಅವ್ಯಕ್ತವಾದ ಭಗವಂತನ ಕೈಗಳಿಂದ ದೊರೆಯುವ ನೆರವನ್ನು ನೆನೆಯುತ್ತಿರಿ. ಭಗವಂತನು ಸರ್ವದಾ ನಿಮ್ಮೊಡನೆಯೇ

ಇರುವನು, ಆತನು ನಮ್ಮೆಲ್ಲ ಕಾರ್ಯಚಟುವಟಿಕೆಗಳನ್ನೂ, ಚಿಂತನೆಗಳನ್ನೂ ಗಮನಿಸುತ್ತಿರುವನು. ಮಕ್ಕಳು ಮಹಡಿಗಳಿಂದ ಉರುಳಿಬಿದ್ದರೂ ಆಶ್ಚರ್ಯವಾಗುವ ರೀತಿಯಲ್ಲಿ ರಕ್ಷಿಸಲ್ಪಡುವರು. ಮೋಟಾರು ಕಾರುಗಳ ಅಪಘಾತಗಳಲ್ಲಿ, ವಿವಿಧ ದುರಂತಗಳಿಂದ ಮಾನವರು ಸಕಾಲೀಕವಾದ ಸಹಾಯವನ್ನು ಅಂತರ್ಯಾಮಿಯಾದ ಆತ್ಮನಿಂದ ಆಶ್ಚರ್ಯಕರ ರೀತಿಯಲ್ಲಿ ಪಡೆಯುವರು. ಈ ಬಗೆಯ ಅನುಭವವು ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಉಂಟಾಗಿರುವದು. ನೀವು ಬಹಳ ಕಷ್ಟದಲ್ಲಿರುವಾಗ, ಅನಿರೀಕ್ಷಿತ ಮೂಲದಿಂದ ನಿಮಗೆ ಧನವನ್ನು ಪರಮಾತ್ಮನು ಒದಗಿಸುವನು. ಆತನ ಸನ್ನಿಧಿಯನ್ನೂ ಮತ್ತು ಅವ್ಯಕ್ತವಾದ ಕೈಗಳನ್ನೂ ನೀವು ನೆನೆಯುವಿರಿ. ಆದರೆ ನಿಮ್ಮ ಕಿಸೆಯು ಹಣದಿಂದ ತುಂಬಿದೊಡನೆಯೇ ಆತನನ್ನು ಮರೆಯುವಿರಿ.

ವಾದಿಸದಿರಿ. ಏನನ್ನೂ ಗಳಿಸಲಾರಿರಿ. ನಿಮ್ಮ ಅಧ್ಯಾತ್ಮಗುರು ಅಥವ ಮಹಾತ್ಮನ ಬಳಿ ಕುಳಿತು ಶಾಂತರಾಗಿ ಒಂದು ಘಂಟೆಯಷ್ಟು ಧ್ಯಾನಿಸಿರಿ. ಆತ್ಮವು ಆತ್ಮದೊಡನೆ ಸಂಭಾಷಿಸಲಿ. ನಿಮ್ಮೆಲ್ಲ ಸಂಶಯಗಳೂ ತಾವಾಗಿ ನಿವಾರಣೆಯಾಗುವವು. ನಿಮಗೆ ಉತ್ತಮವಾದ ಅನುಭವಗಳಾಗುವವು. ವಿಲಕ್ಷಣವಾದ ಶಾಂತಿಯಿಂದ ಆನಂದಿಸುವಿರಿ. ನಿಮ್ಮ ಹೃದಯದಲ್ಲಿ ಪವಿತ್ರವಾದ ಆನಂದವು ಪುಳಕಿತವಾಗುವುದು. ಇದೇ ನಿಮ್ಮ ಅಧ್ಯಾತ್ಮದ ಬೆಳವಣಿಗೆಯ ಹಾದಿಯು.

---

## ೩. ಪ್ರಾರ್ಥನೆಯು

ಭಗವಂತನನ್ನು ಹೊಂದಲು ಪ್ರಾರ್ಥನೆಯು ಒಂದು ಪ್ರಯತ್ನವು. ಅದೊಂದು ಮಹತ್ತಾದ ಆಧ್ಯಾತ್ಮಿಕ ಬಲವು. ಅದು ಗುರುತ್ವಾಕರ್ಷಣ ಶಕ್ತಿಯಷ್ಟೇ ಬಲಶಾಲಿಯಾದುದು.

ಪ್ರಾರ್ಥನೆಗೆ ಹೆಚ್ಚಿನ ಬುದ್ಧಿವಂತಿಕೆ ಅಥವ ವಾಗ್ವೈಖರಿಯ ಅವಶ್ಯಕತೆಯಿಲ್ಲವು. ಪ್ರಾರ್ಥಿಸುವಾಗ ದೇವರು ನಿಮ್ಮ ಹೃದಯವನ್ನಪೇಕ್ಷಿಸುವನು. ಶಬ್ದಜಾಲಗಳ ಪ್ರವಾಹದಿಂದ ನಿರರ್ಗಳವಾಗಿ ನುಡಿಯುವ ಉಪನ್ಯಾಸಕನ

ಅಥವ ಭಾಷಣಕಾರನ ಪ್ರಾರ್ಥನೆಗಿಂತಲೂ ಅನಕ್ಷರಸ್ಥನಾದರೂ, ಶುದ್ಧಾತ್ಮನೂ ವಿನಯಶೀಲನೂ ಆದವನ ಕೇಲವೇ ಮಾತುಗಳು ಭಗವಂತನಿಗೆ ಪ್ರಿಯ ವಾದುವು.

ಪ್ರಾರ್ಥಿಸುವಾಗ, ಪರಿಪೂರ್ಣಾತ್ಮನಲ್ಲಿ ಹೊಂದಿಕೊಂಡಿರುವಿರಿ. ಅವ್ಯಯವೂ, ಅವಿನಾಶಿಯೂ ಆದ ಹಿರಣ್ಯಗರ್ಭ ಬ್ರಹ್ಮನೊಡನೆ ಕೂಡಿಕೊಂಡಿರುವುದರಿಂದ, ಶಕ್ತಿ, ಬಲ, ತೇಜಸ್ಸು ಮತ್ತು ಬೆಳಕನ್ನು ಭಗವಂತನಿಂದ ಪಡೆಯುವಿರಿ.

ದಿವ್ಯಜ್ಯೋತಿಯ ಪ್ರಾಪ್ತಿಗಾಗಿ ದೇವರನ್ನು ತೀವ್ರತೆಯಿಂದ ಮತ್ತು ಉತ್ಸಾಹದಿಂದ ಪ್ರಾರ್ಥಿಸಿ. ಆತನ ದಯೆಗಾಗಿ ಹಂಬಲಿಸಿ. ಆತನ ವಿರಹದಿಂದ ವಿಶೇಷವಾಗಿ ದುಃಖಿಸಿ. ಆತನ ಸಂಸರ್ಗಕ್ಕಾಗಿ ಹಾತೊರೆಯಿರಿ. ದಿವ್ಯ ಪ್ರೇಮಾಗ್ನಿಯಲ್ಲಿ ಮನಸ್ಸನ್ನು ಕರಗಿಸಿ. ಆಳವಾದ ಶಾಂತಿಯಲ್ಲಿ ಬೆರೆಯಿರಿ. ಭಕ್ತಿಯೆಂಬ ಬೆಂಕಿಯಲ್ಲಿ ಭೌತಶರೀರವನ್ನು ಭಸ್ಮಮಾಡಿ ಪ್ರೇಮ ಮಕರಂದವನ್ನು ಪಾನಮಾಡಿರಿ. ದಿವ್ಯವಾದ ಪ್ರೇಮರಸಾಮೃತಪಾನದಿಂದ ಮತ್ತರಾಗಿ ಅಮೃತತ್ವವನ್ನೂ, ನಿತ್ಯಾನಂದವನ್ನೂ ಹೊಂದಿರಿ.

ದಿನವೂ ದೇವರ ಪ್ರಾರ್ಥನೆಯ ಮೂಲಕ ನಿಮ್ಮ ಹೃದಯವನ್ನು ಅವನೊಡನೆ ಶೃತಿಗೂಡಿಸಿ. ದೇವರಿಗಾಗಿ ಹೃದಯವನ್ನು ತೆರೆದಿಡಿ. ಯಾವುದನ್ನೂ ಬಚ್ಚಿಡದಿರಿ. ಮಗುವಿನಂತೆ ಅವನೊಡನೆ ಮಾತನಾಡಿ. ನಮ್ರರೂ, ಸರಳರೂ ಆಗಿರಿ. ನಿಮ್ಮ ಪಾಪಗಳನ್ನು ಕ್ಷಮಿಸುವಂತೆ ದೈನ್ಯವಾಗಿ ಭಗವಂತನನ್ನು ಯಾಚಿಸಿ. ಅವನು ಕೃಪೆಯನ್ನು ಕರುಣಿಸುವಂತೆ ಬೇಡಿರಿ. ಮಾನವ ಸಹಾಯವನ್ನೇ ಅವಲಂಬಿಸದಿರಿ. ದೇವರು, ದೇವನೊಬ್ಬನನ್ನೇ ಆಶ್ರಯಿಸಿ. ನಿಮಗೆ ಎಲ್ಲವೂ ದೊರೆಯುವುದು. ನಿಮಗೆ ಅವನ ದರ್ಶನವಾಗುವುದು.

ನೀವು ಕ್ರಮತಪ್ಪದೆ ಪ್ರಾರ್ಥಿಸಿದರೆ, ನಿಮ್ಮ ಬದುಕನ್ನು ಬದಲಾಯಿಸಿ, ರೂಪಿಸುವನು. ಪ್ರಾರ್ಥನೆಯು ನಿತ್ಯಗಟ್ಟಳೆಯ ಪ್ರವೃತ್ತಿಯಾಗಬೇಕು. ಹಾಗಾದರೆ ಮಾತ್ರ ಪ್ರಾರ್ಥನೆಯಿಲ್ಲದೆ ನೀವು ಬದುಕಲಾರಿರಿ.

ಯಾರು ತಪ್ಪದೆ ಪ್ರಾರ್ಥಿಸುವರೋ, ಅವರು ಅಧ್ಯಾತ್ಮದ ಯಾತ್ರೆಯನ್ನು ಆರಂಭಿಸಿ, ನಿತ್ಯಾನಂದ, ಮತ್ತು ಶಾಂತಿಯ ಪರಂಧಾಮದ ಕಡೆಗೆ ನಡೆಯುತ್ತಿರುವರು.

ಪ್ರಾರ್ಥಿಸುವಾಗ, ಭಗವಂತನ ದಿವ್ಯರೂಪವನ್ನು ಮನಸ್ಸಿನಲ್ಲಿ ಧಾರಣಮಾಡಿ, ನಾಮ, ಸ್ತೋತ್ರ ಮತ್ತು ಮಂತ್ರೋಚ್ಚಾರಣೆಯನ್ನು ಮಾಡಿರಿ. ಸ್ತೋತ್ರ ಪಠನೆಗಳು ಮನಸ್ಸನ್ನು ತಾರಣ ಮಾಡುವುದಲ್ಲದೆ ಉತ್ಸಾಹವನ್ನೂ ತುಂಬುವುದು. ಭಗವಂತನೊಡನೆ ನಿಮ್ಮ ಮನಸ್ಸನ್ನು ಒಂದುಗೂಡಿಸುವದು. ನಿಮ್ಮ ಹೃದಯದಲ್ಲಿ ಸಂತೋಷ, ಶಾಂತಿ ಮತ್ತು ಆನಂದವನ್ನು ತುಂಬುವುದು. ದಿನವೂ ದೇವರನ್ನು ಸ್ತುತಿಸಿ ಅವನ ಅನುಗ್ರಹವನ್ನು ಪಡೆದು ಅವನಲ್ಲೇ ವಾಸಿಸಿರಿ.

ತಲೆಯಮೇಲೆ ಸುರಿದ ಕಾದ ಎಣ್ಣೆಯನ್ನು ತಣ್ಣಗೆ ಮಾಡಿದುದು ಪ್ರಹ್ಲಾದನ ಪಾರ್ಥನೆಯು. ಮುಳ್ಳಿನ ಹಾಸಿಗೆಯನ್ನು ಹೂವಿನ ಹಾಸಿಗೆ ಮಾಡಿ, ಹಾವಿನ ಹಾರವನ್ನು ಹೂವಿನ ಹಾರವಾಗಿ ಪರಿವರ್ತಿಸಿದುದು ಮೀರಳ ಪ್ರಾರ್ಥನೆಯೇ.

ದ್ರೌಪದಿಯು ಆರ್ತಳಾಗಿ ಪ್ರಾರ್ಥನೆ ಮಾಡಿದಳು. ಶ್ರೀಕೃಷ್ಣನು ಅವಳನ್ನು ಕಷ್ಟದಿಂದ ಪಾರುಮಾಡಲು ದ್ವಾರಕೆಯಿಂದ ಓಡಿ ಬಂದನು. ಗಜೇಂದ್ರನು ಶೋಕದಿಂದ ತೀಕ್ಷ್ಣವಾಗಿ ಪ್ರಾರ್ಥಿಸಿದನು. ಅವನನ್ನು ರಕ್ಷಿಸಲು ಶ್ರೀಹರಿಯು ತೀವ್ರ ವೇಗದಿಂದ ಸುದರ್ಶನದೊಡನೆ ಬಂದನು.

ಕೇವಲ ಸ್ವಾರ್ಥ ಪ್ರಾಪ್ತಿಗಾಗಿ, ನಶ್ವರ ವಸ್ತುಗಳಿಗಾಗಿ ಪ್ರಾರ್ಥಿಸದಿರಿ. ದೇವರ ದಯೆಗಾಗಿ ಪ್ರಾರ್ಥಿಸಿ. ಜ್ಯೋತಿಗಾಗಿ, ಪರಿಶುದ್ಧಿಗಾಗಿ, ಪರಾಮರಿಕೆಗಾಗಿ ಪ್ರಾರ್ಥಿಸಿ.

ಅನನ್ಯಭಕ್ತಿ ಮತ್ತು ಆತ್ಮಾರ್ಪಣೆಯಿಂದ ಭಗವತ್ಪ್ರಸಾದವು ಸಾಧ್ಯವು. ದೇವರು ಎಷ್ಟು ದಯಾಮಯನು ಮತ್ತು ಕರುಣಾಸಾಗರನು ! ಶ್ರೀಕೃಷ್ಣನು ಅರ್ಜುನನ ರಥವನ್ನು ನಡೆಸಿದನು. ಅವನಿಗೆ ಗೀತೆಯನ್ನು ಬೋಧಿಸಿದನು. ದ್ರೌಪದಿ ಮತ್ತು ಮೀರಾದೇವಿಯನ್ನು ರಕ್ಷಿಸಿದನು. ಕುರುಡ ಸೂರದಾಸನಿಗೆ ಮಾರ್ಗದರ್ಶನ ಮಾಡಿದನು. ನವಾಬನಿಗೆ ಹಣವನ್ನು ಕೊಟ್ಟು ದಾಮಾಜಿಯನ್ನು ಬದುಕಿಸಿದನು. ನರಸೀಮೆಹತನ ಹುಂಡಿಯನ್ನು ಮಾನ್ಯಮಾಡಿದನು. ಅವನ ಚರಣಕಮಲಗಳಲ್ಲಿ ನಿಮ್ಮ ಮನಸ್ಸನ್ನೂ ಹೃದಯವನ್ನೂ ಸ್ಥಿರಪಡಿಸಿರಿ. ಅವನ ಮಹಿಮೆಯನ್ನು ಸ್ತುತಿಸಿ. ನಾಮೋಚ್ಚಾರಣ ಮಾಡಿರಿ. ನಿಮಗೆ ಬೇಕಾದ್ದೆಲ್ಲವನ್ನೂ ಮಾಡುವನು. ಭಗವಾನ್ ಕೃಷ್ಣನು ಭಕ್ತರ ಪರಿಚಾರಕನು.

ಪ್ರಾರ್ಥನೆಯು ಮನಸ್ಸನ್ನು ವಿಕಾಸಗೊಳಿಸುವುದು, ಶುದ್ಧಮಾಡುವುದು. ಅದು ಭಗವತ್ಪ್ರಾರ್ಥನೆಯೊಡನೆ ಒಂದುಗೂಡುವುದು. **ತರ್ಕವು ಪ್ರವೇಶಿಸಲು ಅಂಜುವ ಸ್ಥಳವನ್ನು ಪ್ರಾರ್ಥನೆಯು ನಿರಾತಂಕವಾಗಿ ತಲಪುವುದು.** ಪ್ರಾರ್ಥನೆಯು ಪರ್ವತಗಳನ್ನು ಚಲಿಸುವಂತೆ ಮಾಡಬಲ್ಲದು, ಪವಾಡಗಳನ್ನು ನಡೆಸುವುದು. ಭಕ್ತನನ್ನು ಮರಣದ ಅಂಜಿಕೆಯಿಂದ ಬಿಡಿಸುವುದು. ಭಗವಂತನ ಬಳಿಗೆ ಕೊಂಡೊಯ್ದು ದಿವ್ಯಜ್ಞಾನವನ್ನೂ, ಅವನ ಆವಶ್ಯಕತೆ, ಅಮರತೆ ಮತ್ತು ಆನಂದಸ್ವಭಾವದ ಅನುಭವವನ್ನು ಅರಿಯುವಂತೆ ಮಾಡುವುದು.

ದೇಹ ಮತ್ತು ಮನಸ್ಸಿನ ಮೇಲೆ ಪ್ರಾರ್ಥನೆಯು ಅದ್ಭುತವಾದ ಪ್ರಭಾವವನ್ನು ಬೀರುವದು. ಮನಸ್ಸನ್ನು ಶುದ್ಧಿಗೊಳಿಸುವುದು, ಚೇತನಗೊಳಿಸುವುದು, ಬುದ್ಧಿಯನ್ನು ಚುರುಕುಗೊಳಿಸುವುದು, ದೇಹ ಮತ್ತು ಮನಸ್ಸಿನಲ್ಲಿ, ಅನುಕೂಲವಾದ ಅಧ್ಯಾತ್ಮ ಶಕ್ತಿಯನ್ನು ಉತ್ಪಾದಿಸುವುದು. ಅರಿವಿನ ಸಾಮರ್ಥ್ಯವನ್ನು ವೃದ್ಧಿಗೊಳಿಸುವುದು. ಗುಣವಾಗದ ರೋಗಗಳು ಶ್ರದ್ಧಾಮಯ ಪ್ರಾರ್ಥನೆಯಿಂದ ಗುಣವಾಗಿವೆ.

ಪ್ರಾರ್ಥನೆಯು ಅಧ್ಯಾತ್ಮಶಕ್ತಿ ಪ್ರವಾಹವನ್ನುಂಟುಮಾಡಿ ಮನಸ್ಸಿನಲ್ಲಿ ಶಾಂತಿಯನ್ನು ತುಂಬುವದು. ಪ್ರಾರ್ಥನೆಯ ಶಕ್ತಿಯು ಅವರ್ಣನೀಯವು. ಅದರ ವೈಭವವು ಅಪಾರವು. ಶ್ರದ್ಧಾವಂತ ಭಕ್ತರು ಮಾತ್ರ ಪ್ರಾರ್ಥನೆಯ ಪ್ರಯೋಜನವನ್ನು ಮತ್ತು ಮಹಿಮೆಯನ್ನು ತಿಳಿಯಬಲ್ಲರು. ಗೌರವದಿಂದ, ಶ್ರದ್ಧೆಯಿಂದ, ನಿಷ್ಕಾಮ್ಯ ಭಾವದಿಂದ, ಭಕ್ತಿಯಿಂದ ತೀವಗೊಂಡ ಹೃದಯದಿಂದ ಪ್ರಾರ್ಥಿಸಬೇಕು. ಎಲೈ ಮೂಢಮನುಷ್ಯನೇ ಪ್ರಾರ್ಥನೆಯ ಪರಿಣಾಮದ ಬಗ್ಗೆ ವಾದಿಸದಿರು. ನಿನಗೆ ಭ್ರಮೆಯುಂಟಾಗುವದು. ಆಧ್ಯಾತ್ಮಿಕ ವಿಷಯಗಳ ಬಗ್ಗೆ ವಿವಾದವೇ ಇಲ್ಲವು. ಬುದ್ಧಿವಂತಿಕೆಯು ಸಾಂತವು ಮತ್ತು ವ್ಯರ್ಥಸಾಧನವು. ಇದನ್ನು ನಂಬದಿರು. ಪ್ರಾರ್ಥನೆ ಎಂಬ ದಿವ್ಯಜ್ಯೋತಿಯಿಂದ ನಿನ್ನ ಅಜ್ಞಾನವೆಂಬ ಅಂಧಕಾರವನ್ನು ಕಳೆದುಕೊ.

---

# ೪. ನಮಸ್ಕಾರ

ನಮಸ್ಕಾರವೆಂದರೆ ಮುಖನಡಿಯಾಗಿ ಮಲಗುವುದು (prostration). ಆತ್ಮಸಾಕ್ಷಾತ್ಕಾರಕ್ಕೆ ಇದು ಸುಲಭ ಸಾಧನವು. ಕೃಷ್ಣ ಭಗವಾನನು ಉದ್ಧವನಿಗೆ ಹೇಳಿದನು: "ನಿನ್ನ ಮುಂದೆ ಬರುವವರು ಯಾರೇ ಆಗಲಿ, ಮನುಷ್ಯ, ಕತ್ತೆ, ಅಥವ ನಾಯಿಯಾದರೂ, ಅವರಿಗೆ ನಮಸ್ಕರಿಸು. ನಿನಗೆ ಆತ್ಮಜ್ಞಾನವು ಶೀಘ್ರವಾಗಿ, ಸುಲಭವಾಗಿ, ಸತ್ಯವಾಗಿ ಆಗುವುದು. ಭಗವಂತನು ಕತ್ತೆಯ ಹೃದಯದಲ್ಲಿಯೂ ಕುಳಿತಿರುವುದರಿಂದ ಕತ್ತೆಗೂ ನಮಸ್ಕಾರಮಾಡು. ಜನಸಾಮಾನ್ಯರ ಅಪಹಾಸ್ಯಕ್ಕೆ ಅಂಜುವುದಾದರೆ, ಕತ್ತೆಯನ್ನು ಮನಸ್ಸಿನಲ್ಲಿ ವಂದಿಸು."

ಶ್ರೀಕೃಷ್ಣನು ಉದ್ಧವನಿಗೆ ಹೇಳಿರುವುದೇನೆಂದರೆ "ಜನರ ತಿರಸ್ಕಾರ, ಅಪಹಾಸ್ಯಗಳಿಗೆ ಗಮನ ಕೊಡದೆ, ದೇಹಾಭಿಮಾನ ಮತ್ತು ಅಪಮಾನಗಳನ್ನು ಲಕ್ಷಿಸದೆ, ನಾಯಿ, ಚಂಡಾಲ, ಗೋವು ಮತ್ತು ಕತ್ತೆಯ ಮುಂದೆಯೂ ಮೈಚಾಚಿ ನಮಸ್ಕರಿಸು." ಇತರರಿಗೆ ನಮಸ್ಕರಿಸುವುದರಿಂದ ಮನುಷ್ಯನು ವಿನಯಶೀಲನಾಗುವನು. ನಮಸ್ಕರಿಸುವಾಗ ನಾರಾಯಣಭಾವವನ್ನೂ ತಳೆದಿದ್ದರೆ ಅವನು ನಿಶ್ಚಯವಾಗಿ ಎಲ್ಲದರಲ್ಲಿಯೂ ದೇವರನ್ನು ನೋಡಲು ಸಹಾಯವಾಗುವುದು. ದೇವರಿಗಿಂತ ಅನ್ಯವಾಗಿ ಮತ್ತೊಂದಿಲ್ಲವು. ಈ ಜಗತ್ತು ಪರಬ್ರಹ್ಮನ ವಿರಾಡ್ರೂಪವು ಎಂದು ತಿಳಿಯಬಲ್ಲನು. ಹಸು, ಕತ್ತೆ ಅಥವಾ ನಾಯಿಗೆ ಮನಸ್ಸಿನಿಂದಲೇ ನಮಸ್ಕರಿಸು ಮತ್ತು ಶ್ರೀಹರಿಗೆ ವಂದಿಸುತ್ತಿರುವೆನೆಂದು ತಿಳಿ. ಎಲ್ಲ ಜೀವಿಗಳೂ, ವಸ್ತುಗಳೂ ಶ್ರೀಹರಿಯ ರೂಪ ಮಾತ್ರವು. ಈ ವಿಷಯವನ್ನು ಎಂದಿಗೂ ಮರೆಯದಿರು.

ನಮಸ್ಕರಿಸುವುದರಲ್ಲಿ ಆರು ವಿಧವಾದ ಅನುಕೂಲಗಳಿವೆ. ಅದನ್ನು ವ್ಯಾಯಾಮದಂತೆ ಮಾಡಬೇಡ. ಭಾವ ತುಂಬಿ ಸಭ್ಯತೆಯಿಂದ ಮಾಡು. ನಾರಾಯಣ ಅಥವಾ ಶಿವನ, ಮುಂದೆ ಪ್ರಣಾಮ ಮಾಡುತ್ತಿರುವುದಾಗಿ ಭಾವಿಸು. ಅದು ಪೂರ್ಣ ಸಾಷ್ಟಾಂಗ ನಮಸ್ಕಾರವಾಗಿರಬೇಕು. ಮಂಡಿಗಳು, ಹಣೆ, ತೋಳುಗಳು, ಪಾದಗಳು, ಎದೆ, ಕಣ್ಣುಗಳು ಮುಂತಾಗಿ ದೇಹದ ಅವಯವಗಳು ನೆಲವನ್ನು ಮುಟ್ಟಬೇಕು. ಅಹಂಕಾರವನ್ನು ಅಳಿಸಿ, ವಿನಯ

ವನ್ನು ಬೆಳೆಸಿ ಸಮದೃಷ್ಟಿಯನ್ನುಂಟುಮಾಡುವುದು. ಹೃದಯವು ಭಕ್ತಿಪೂರ್ಣ ವಾಗುವುದು. ಅದು ಆತ್ಮಾವಾಸ್ಯವಾಗುವುದು. ಮೇಲಾಗಿ ಆತ್ಮಾನುಭವದ ಕಡೆಗೆ ಕರೆದೊಯ್ಯುವುದು. ನಮಸ್ಕರಿಸುವಾಗ ಮಹಮದೀಯ, ಕ್ರೈಸ್ತ, ಚಂಡಾಲ ಅಥವ ನಾಯಿಂದನಾದರೂ ಅವನ ಪಾದಗಳನ್ನು ಮುಟ್ಟಬೇಕು. ಇದರಿಂದ ಅಸೂಯ, ಘೃಣ (contempt for untouchables), ದ್ವೇಷ ಮುಂತಾದ ಕೀಳುಭಾವನೆಗಳು ಹೋಗುವುವು. ಸರ್ವರಿಗೂ ನಮಸ್ಕರಿಸು ಪವನಿಗೆ ಜಯವಾಗಲಿ. ಅವನು ಶೀಘ್ರವಾಗಿ ನಾರಾಯಣನಾಗುವನು. ನೀನು ಒಬ್ಬನಿಗೆ ನಮಸ್ಕರಿಸುತ್ತಿರುವಾಗ ಮತ್ತೊಬ್ಬನ ದೋಷವನ್ನು ಚಿಂತಿಸು ತ್ತಿದ್ದರೆ ಅಥವಾ ಆಡುತ್ತಿದ್ದರೆ ಅದು ವಂಚಕತನ (hypocrasy) ವಾಗು ವುದು. ಅದರಿಂದ ಒಳ್ಳೆಯದಾಗುವುದಿಲ್ಲವು. ಇದು ಹಿರಿಯರಿಗೆ ಗೌರವವನ್ನು ತೋರಿಸುವ ರೀತಿಯಲ್ಲವು.



## ೫. ಸಂಕೀರ್ತನೆಯ ಪ್ರಾಮುಖ್ಯತೆ

ಬ್ರಹ್ಮನು ಕುದುರೆಗಳು, ಗೋವುಗಳು, ನಾಯಿಗಳು, ಆನೆಗಳು ಮುಂತಾದ ವಿವಿಧ ಜೀವಿಗಳನ್ನು ಸೃಷ್ಟಿಸಿದನು. ಅದರಿಂದ ಅವನಿಗೆ ಸಂಪೂರ್ಣವಾಗಿ ಸಮಾಧಾನವಾಗಲಿಲ್ಲ. ನಂತರ ನರಮನುಷ್ಯನನ್ನು ಸೃಷ್ಟಿ ಸಿದನು. ಆವನಿಗೆ ಸಂಪೂರ್ಣ ಸಂತೋಷವಾಯಿತು. ಏಕೆಂದರೆ ಮನುಷ್ಯನು ಮಾತ್ರ ಸ, ರಿ, ಗ, ಮ, ಪ, ದ, ನಿ, ಸ ಎಂಬ ಸಪ್ತಸ್ವರಗಳನ್ನು ಉಚ್ಚರಿಸ ಬಲ್ಲನು. ಆವನು ಕೀರ್ತನ ಮಾಡಬಲ್ಲನು ಮತ್ತು ಸಂಕೀರ್ತನೆಯ ಮೂಲಕ ದೇವರ ಸಾಕ್ಷಾತ್ಕಾರವನ್ನೂ ಹೊಂದಬಲ್ಲನು. ಪ್ರಾಣಿಗಳಾದರೋ ಒಂದೇ ರೀತಿಯ ಶಬ್ದ ಅಥವಾ ಸ್ವರವನ್ನು ಉಚ್ಚರಿಸುವುವು.

ಮನಸ್ಸು ಪಂಚವಿಷಯಗಳನ್ನು ಚಿಂತಿಸುವುದು. ಪರಮಾತ್ಮನಿಂದ ನಮ್ಮನ್ನು ಪ್ರತ್ಯೇಕಿಸುವ ಕೋಟೆ ಎಂದರೆ ಮನಸ್ಸು. ಪೃಥ್ವಿ, ಅಪ್, ತೇಜಸ್ಸು, ವಾಯು ಮತ್ತು ಆಕಾಶವೆಂಬ ಪಂಚಭೂತಗಳು ಮನೋಮಯ ಶರೀರವನ್ನು

ಮಾಡಿವೆ. ಪಂಚೇಂದ್ರಿಯಗಳೂ ಆತ್ಮವೆಂಬ ಅನರ್ಘ್ಯ ರತ್ನವನ್ನೂ ಅಪಹರಿಸಿವೆ. ಆಕಾಶವು ಕಳ್ಳರ ನಾಯಕನು. ನೀನು ಆಕಾಶವನ್ನು ಹಿಡಿತದಲ್ಲಿಟ್ಟರೆ ಆ ಕಳ್ಳರ ನಾಯಕನು ಅಧೀನವಾದಂತೆ ಮತ್ತು ಇತರ ನಾಲ್ವರು ಕಳ್ಳರು ನಿನ್ನ ಅಂಕೆಗೆ ಒಳಪಡುವರು. ನೀನು ಪಂಚಭೂತಗಳನ್ನು ಹಿಡಿಯಬಲ್ಲವನಾದರೆ ನೀನು ಮನಸ್ಸನ್ನು ಸುಲಭವಾಗಿ ಹಿಡಿತದಲ್ಲಿಡುವೆ. ಆಕಾಶತತ್ವದ ಗುಣ ಶಬ್ದ ಪ್ರಾಸ ಮತ್ತು ಸ್ವರ ಸಂಯೋಜನೆಯಿಂದ ಮಧುರವಾಗಿ ಶ್ರೀಹರಿಯ ನಾಮವನ್ನು ಗಾನಮಾಡಿದರೆ ಆಕಾಶತತ್ವವನ್ನೂ, ಇತರ ಭೂತಗಳನ್ನೂ ಮತ್ತು ಮನಸ್ಸನ್ನೂ ಹಿಡಿತದಲ್ಲಿಡುವೆ. ಈ ಕಾರಣದಿಂದಲೇ ಭಗವಂತನು ನಾರದನಿಗೆ ಹೇಳಿದನು, " ನಾನು ವೈಕುಂಠದಲ್ಲಾಗಲಿ, ಯೋಗಿಗಳ ಹೃದಯದಲ್ಲಾಗಲೀ ವಾಸಿಸುವುದಿಲ್ಲವು. ಆದರೆ ನನ್ನ ನಾಮ ಸಂಕೀರ್ತನೆ ಮಾಡುವ ಭಕ್ತನ ಹೃದಯದಲ್ಲಿ ವಾಸಿಸುವೆನು."

ಹುಗ್ಗಿ, ಕಿಚಡಿಯೊಡನೆ ಮೊಸರು, ಪಪ್ಪಾಡ್, ಉಪ್ಪಿನಕಾಯಿ, ಶುಂಠಿಯ ಚಟ್ನಿ, ಕೊತ್ತಂಬರಿ ಸೊಪ್ಪು, ಪುದೀನ ಸೊಪ್ಪು ಸೇರಿಹೇಗೆ ಒಳ್ಳೆಯ ರುಚಿಕರವಾದ ಆಹ್ಲಾದವನ್ನುಂಟುಮಾಡುವುದೋ ಹಾಗೆಯೇ ನಿನ್ನ ಭಕ್ತಿಯನ್ನು ಮತ್ತೂ ಹೆಚ್ಚಿಸಲು ಸಂಕೀರ್ತನೆಯೊಡನೆ ಜಪ, ಸತ್ಸಂಗ, ರಾಮಾಯಣ ಮತ್ತು ಭಾಗವತ ವಾಚನವು ಸಂತಸದ ಸಮ್ಮಿಳನವಾಗಬೇಕು.

ಪಾಪಿಗಳ ಪಾಷಾಣ ಹೃದಯವನ್ನು, ನಾಸ್ತಿಕವಾದಿಗಳನ್ನು, ಸಂಶಯಗ್ರಸ್ತರನ್ನು ಮತ್ತು ಸರ್ವವಿಧ ಪಾತಕರ ಹೃದಯವನ್ನು ಕರಗಿಸುವುದರಲ್ಲಿ ಭಕ್ತಿ, ಸಂಕೀರ್ತನೆಗಿಂತ ಬಲಶಾಲಿಯಾದ ಮೃದುಗೊಳಿಸುವ ಕಾಲವು ಮತ್ತೊಂದಿಲ್ಲವು.

ನಾನಾವಿಧವಾದ ಪಾಪಗಳನ್ನು, ಬೆಂಕಿಯು ಲೋಹಗಳನ್ನು ಕರಗಿಸುವಂತೆ ನಾಶಗೊಳಿಸಲು ಭಗವನ್ನಾಮ ಸಂಕೀರ್ತನೆಯು ಸುಲಭಸಾಧನವು ( ವಿಷ್ಣು ಪುರಾಣ VI ಅಧ್ಯಾಯ ೭-೮)

ಮೀರತ್ತಿನಲ್ಲಿ ಜಮೀನುದಾರನೊಬ್ಬನ ಮಗನು ತೀವ್ರ ಖಾಯಿಲೆಯಿಂದ ನರಳುತ್ತಿದ್ದನು. ಅವನ ಸ್ಥಿತಿಯು ನಿರಾಶಾದಾಯಕವೆಂದು ವೈದ್ಯರು ಹೇಳಿದರು. ಆಗ ಅವನ ರೋಗನಿವಾರಣೆಯ ಜವಾಬ್ದಾರಿಯನ್ನು ಭಕ್ತರು ವಹಿಸಿಕೊಂಡರು. ರೋಗಿಯ ಹಾಸಿಗೆಯ ಸುತ್ತ ಅಖಂಡವಾಗಿ ಏಳು

ದಿನಗಳೂ ಸತ್ಸಂಕೀರ್ತನೆ ನಡೆಸಿದರು. ಏಳನೆಯ ದಿನ ರೋಗಿಯು ಎದ್ದು ನಿಂತು ಭಕ್ತರೊಡನೆ ನಾಮಸಂಕೀರ್ತನೆ ಮಾಡಲಾರಂಭಿಸಿದನು. ಅವನಿಗೆ ಪೂರ್ಣ ಗುಣವಾಯಿತು. ಸಂಕೀರ್ತನೆಯ ಬಲವು ಅಷ್ಟು ಅದ್ಭುತ ವಾದುದು.

ಸಂಕೀರ್ತನೆಯು ಆತ್ಮ ಮತ್ತು ಮನಸ್ಸಿಗೆ ಆಹಾರವು. ಅದೊಂದು ಬಲವರ್ಧಕ ಔಷಧವು, ಛಿದ್ರ ವಿಚ್ಛಿದ್ರವಾದ ನರಮಂಡಲಗಳ ಶಕ್ತಿದಾಯಕ ದಿವ್ಯಾಂಜನವು. ಸಂಕೀರ್ತನೆಯು ಒಂದು ದಿವ್ಯಾಮೃತವು. ಪ್ರತಿದಿನ ಬ್ರಾಹ್ಮೀಮುಹೂರ್ತದಲ್ಲಿಯೂ ಮತ್ತು ರಾತ್ರಿಯ ಹೊತ್ತು ಸಂಕೀರ್ತನೆಯ ಮೂಲಕ ಈ ದಿವ್ಯಾಮೃತವನ್ನು ಪಾನಮಾಡಿರಿ.

ತುಕಾರಾಮನು ಒಬ್ಬ ವ್ಯವಸಾಯಮಾಡುವ ರೈತನು. ಅವನು ತನ್ನ ಹೆಸರನ್ನೂ ಹೇಳಲು ಅಸಮರ್ಥನಾಗಿದ್ದನು. ಆದರೆ ಸದಾ ಕಾಲದಲ್ಲಿಯೂ ಕೈಗಳಲ್ಲಿ ತಾಳಗಳನ್ನು ಹಿಡಿದು "ವಿಠ್ಠಲಾ, ವಿಠ್ಠಲಾ" ಎಂದು ಶ್ರೀಕೃಷ್ಣ ಸಂಕೀರ್ತನೆಯನ್ನು ಮಾಡುತ್ತಿದ್ದನು. ಅವನು ಶ್ರೀಕೃಷ್ಣನ ಭೌತರೂಪವನ್ನು ಕಂಡನು. ಅವನ ಜ್ಞಾನ ಚಕ್ಷುಸ್ಸಿನ ದಿವ್ಯ ದೃಷ್ಟಿಯು (inner sight) ಸಂಕೀರ್ತನೆಯಿಂದ ತೆರೆಯಲ್ಪಟ್ಟಿತು. ಅವನ ಉತ್ಸಾಹಪೂರ್ಣ ಅಭಂಗಗಳು ಬೊಂಬಾಯಿ ವಿದ್ಯಾಪೀಠದ ಎಂ. ಎ. ವಿದ್ಯಾರ್ಥಿಗಳ ಪಠ್ಯಪುಸ್ತಕಗಳಾಗಿವೆ. ಅಜ್ಞಾನಿಯೂ ಅನಕ್ಷರಸ್ಥನೂ ಆದ ತುಕಾರಾಮನಿಗೆ ಅಷ್ಟೊಂದು ಜ್ಞಾನವು ಎಲ್ಲಿಂದ ಬಂದಿತು? ಅವನು ಸಂಕೀರ್ತನೆಯ ಮೂಲಕ ಜ್ಞಾನ ಬುಗ್ಗೆಯ ಬುಡವನ್ನೇ ಎಬ್ಬಿಸಿದನು. ಭಾವಸಮಾಧಿಯು ಆಳವಾದ ಸಂಕೀರ್ತನೆಯಿಂದ ದೊರೆತು ಅವನು ಆತ್ಮದ ಮೂಲವನ್ನು ಪ್ರವೇಶಿಸುವಂತಾಯಿತು. ಇದರಿಂದ ಸಂಕೀರ್ತನೆಯು ಎಷ್ಟು ಅದ್ಭುತವಾದ ಪ್ರಭಾವವನ್ನು ಬೀರುವುದು; ಭಗವಂತನು ಜ್ಞಾನಸ್ವರೂಪನಾಗಿರುವನು ಮತ್ತು ಭಗವಂತನು ಸತ್ಯನು ಎಂದು ಸಿದ್ಧಪಡಿಸಿದಂತಾಗಲಿಲ್ಲವೇ? ಶ್ರೀರಾಮಕೃಷ್ಣಪರಮಹಂಸರು ತಮ್ಮ ಹಸ್ತಾಕ್ಷರ ವನ್ನೇ ಬರೆಯಲು ಅಸಮರ್ಥವಾಗಿದ್ದರೂ ಪ್ರಕಾಂಡ ಪಂಡಿತರ (erudite-scholars) ಸಂಶಯವನ್ನು ಸುಲಭವಾಗಿ ನಿವಾರಿಸಬಲ್ಲವರಾಗಿದ್ದರು. ಈ ಶ್ರೇಷ್ಠ ಅಂತರ್ದೃಷ್ಟಿಯ ಜ್ಞಾನವು ಅವರಿಗೆ ಎಲ್ಲಿಂದ ಬಂದಿತು? ಅವರೂ ದಿವ್ಯತೆಯ ಮೂಲವನ್ನೇ ಮುಟ್ಟಿದ್ದರು.

ತೃಣಾದಪಿ ಸುನೀಚೇನ ತರೋರಿವ ಸಹಿಷ್ಣುನಾ
ಅಮಾನಿನಾ ಮಾನದೇನ ಕೀರ್ತನೀಯ ಸದಾಹರಿಃ

ಯಾರು ಹುಲ್ಲಿಗಿಂತಲೂ ನಮ್ರರೋ, ಮರದಂತೆ ಸಹಿಷ್ಣುಗಳೋ, ಗೌರವಾದರಣಗಳಿಗೆ ಗಮನ ಕೊಡದಿದ್ದರೂ ಇತರರನ್ನು ಗೌರವಿಸುವರೋ ಅವರು ಸದಾಕಾಲದಲ್ಲೂ ಹರಿನಾಮ ಸಂಕೀರ್ತನೆ ಮಾಡಲು ಅರ್ಹರು.

ನಾಮ ಸಂಕೀರ್ತನೆಯ ಜೊತೆಗೆ ಸಂಗೀತವಾದ್ಯಗಳನ್ನೂ ಬಳಸಬಹುದು. ಅಪವಿತ್ರ, ಅಶುದ್ಧ, ಕಾಮುಕ, ಜಡ ವ್ಯಕ್ತಿಗಳ ಮನೋಧರ್ಮದ ದೃಷ್ಟಿಯಿಂದ ಸಂಗೀತ ವಾದ್ಯಗಳು ಅಪಾಯಕಾರಿಯು.

ಅಡೆತಡೆಯಿಲ್ಲದೆ ಮಹಾಮಂತ್ರವನ್ನು ದೀರ್ಘವಾಗಿ ಉಚ್ಚರಿಸುವುದು ಕಠಿಣವು. ಆದ್ದರಿಂದ ಅದನ್ನು ಎರಡು ಭಾಗ ಮಾಡಬೇಕು. ಒಂದು ಗೋಷ್ಠಿಯ ನಾಯಕನು, "ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ" ಎಂದು ಹೇಳಿದ ಮೇಲೆ ಅದನ್ನೇ ಅವನ ಅನುಯಾಯಿಗಳು ಉಚ್ಚರಿಸಬೇಕು. ನಂತರ ನಾಯಕನು ಉಳಿದಭಾಗವನ್ನು "ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ" ಎಂದು ಹೇಳಿದಮೇಲೆ ಇತರರು ಅದನ್ನೇ ಅನುಸರಿಸಬೇಕು.

ಔಷಧ ತಯಾರಿಕೆಗಾರರು ಹಲವು ಪತ್ರಿಕೆಗಳಲ್ಲಿ ತಮ್ಮ ಔಷಧಿಗಳ ವಿಶೇಷಗುಣಗಳನ್ನು ಆಡಂಬರದಿಂದ ಪ್ರಚಾರ ಮಾಡುವುದಲ್ಲದೆ ಜನಗಳಲ್ಲಿ ಆಸಕ್ತಿ ಮೂಡಿಸಲು ಉಚಿತವಾಗಿ ಆ ಔಷಧಿಗಳನ್ನು ಸಣ್ಣ ಪ್ರಮಾಣದಲ್ಲಿ ಹಂಚುವರು. ಹಾಗೆಯೇ ಭಗವಂತನನ್ನು ಅರಿತ ಭಾಗವತರು ಭಗವನ್ನಾಮ ಮಹಿಮೆಯನ್ನು ಪ್ರಚಾರಮಾಡಬೇಕು. ಕಥಾಶ್ರವಣ ನಡೆಸಬೇಕು. ಜನರಲ್ಲಿ ಭಕ್ತಿ ಮತ್ತು ಆಸಕ್ತಿ ಬೆಳೆಯಲು ಕೀರ್ತನೆಗಳನ್ನೂ ನಡೆಸಬೇಕು. ಭಕ್ತರು ಭಗವತ್ಪ್ರಸಾದದಿಂದ ಕ್ಷಣಕಾಲ ದಿವ್ಯಾನುಭವವನ್ನು ಹೊಂದಿದರೂ ಅವರು ಅತ್ಯಂತವಾದ ಉತ್ಸಾಹದಿಂದ ಆತ್ಮನನ್ನು ಕಾಣಲು ತವಕಿಸುವರು. ಅಷ್ಟಲ್ಲದೆ ತಮ್ಮ ಇಡೀ ಜೀವನವನ್ನು ಭಗವಂತನ ಮತ್ತು ಭಕ್ತರ ಸೇವೆಗಾಗಿ ತಮ್ಮದೆಲ್ಲವನ್ನೂ ತ್ಯಾಗಮಾಡಿ ಆತ್ಮಾರ್ಪಣೆ ಮಾಡಿಕೊಳ್ಳುವರು.

ಸಂಕೀರ್ತನೆಯ ಸಲುವಾಗಿ ನಿಮ್ಮ ಜೀವನವನ್ನು ಮುಡುಪಿಡಿ. ಹೆಚ್ಚು ಮಕ್ಕಳಿಗೆ ಜನ್ಮ ಕೊಡದಿರಿ. ಜೀವನದಲ್ಲಿನ ಜಯಗಳ ರಹಸ್ಯವೇ ಇದು.

ಮಾಯೆಯ ಶಕ್ತಿಯೂ ಅದ್ಭುತವಾದುದು. ಆದರೆ ಮಾಯ ಮತ್ತು ಮೋಹವು ಸಂಕೀರ್ತನಕಾರರನ್ನು ಮುಟ್ಟಲಾರದು.

---

## ೬. ಧರ್ಮ

ಹಣವನ್ನು ಕೂಡಿಡುವುದು ಮಹಾಪಾಪವು. ಎಲ್ಲ ಸಂಪತ್ತೂ ಭಗವಂತನವೇ. ತಾನು ಆಸ್ತಿಯ ಕೇವಲ ಪೋಷಕನೆಂದು ಅರಿತು ಅದೂ ಭಗವಂತನಿಗೆ ಸಂಬಂಧಪಟ್ಟುದೆಂದು ತಿಳಿದು ಧರ್ಮಕ್ಕಾಗಿ ವಿನಿಯೋಗಿಸು ವವನೇ ಸಂತೋಷವಾಗಿ ಬಾಳುವನು. ಅವನು ಮೋಕ್ಷವನ್ನೂ, ನಿತ್ಯ ಶಾಂತಿಯನ್ನೂ ಪಡೆಯುವನು.

ಬಾಯಾರಿದವರು ಎಷ್ಟೇ ಪಾನಮಾಡಿದರೂ ಗಂಗೆಯ ನೀರು ಕುಗ್ಗವು ದಿಲ್ಲ. ಹಾಗೆಯೇ ನೀವು ಧರ್ಮಮಾಡುವುದರಿಂದ ನಿಮ್ಮ ಐಶ್ವರ್ಯವು ಕಡಿಮೆಯಾಗದು. ಏಸುಕ್ರಿಸ್ತನು ಹೇಳಿದನು: "ಅಸಂಖ್ಯಾತ ಪಾಪ ಗಳನ್ನು ಧರ್ಮವು ಮರೆಸುವುದು, ಆದರೆ ಸರಿಯಾದ ದೃಷ್ಟಿಕೋಣದಿಂದ ಮಾಡಿದರೆ ಮಾತ್ರ." ಕೃಷ್ಣಭಗವಾನನು, "ಧರ್ಮವು ಹೃದಯವನ್ನು ಶುದ್ಧಿ ಗೊಳಿಸುವುದು" ಎಂದು ಹೇಳಿದ್ದಾನೆ. (ಗೀತಾ ೧೮-೫)

ತನ್ನ ಸಂಪತ್ತಿನಿಂದ ಭ್ರಮೆಗೊಂಡ ಶ್ರೀಮಂತನು ಭಗವಂತನ ರಾಜ್ಯ ವನ್ನು ಪ್ರವೇಶಿಸಲಾರನು. ಈ ಕಾರಣದಿಂದಲೇ ಭಗವಾನ್ ಏಸುವು ಯುವ ರಾಜನಿಗೆ ಹೇಳಿದನು, "ನಿನ್ನ ಬಳಿಯಿರುವುದನ್ನು ಮಾರು ಮತ್ತು ನನ್ನನ್ನು ಹಿಂಬಾಲಿಸುವುದಾದರೆ ನಿನ್ನ ಬಳಿ ಇರುವುದನ್ನು ಬಡವರಿಗೆ ಕೊಡು." ನಿನ್ನ ಆಸ್ತಿ ಪಾಸ್ತಿಗಳ ಕೇವಲ ಪೋಷಕನೆಂದು ಅರಿತು ವಿನಿಯೋಗಿಸಿದರೆ ನಿನಗೆ ಭಗವತ್ಕೃಪೆಯೂ, ಶಾಶ್ವತ ಶಾಂತಿಯೂ ದೊರೆಯುವುದು.

ಲೋಭಿತನವೂ ಒಂದು ದೊಡ್ಡ ಶಾಪವು. ಅದು ಸಂಘಟನೆಯ ಶತ್ರು, ಸ್ವಾರ್ಥತೆಯ ಮಿತ್ರ. ಒಂದು ತಮಾಷೆಯನ್ನು ನೋಡಿ. ಮದರಾಸಿಗಳು

ಬಾಳೆ ಎಲೆಯಲ್ಲಿ ಊಟಮಾಡುವರು. ಕೆಲವು ಸ್ತ್ರೀಯರಂತೂ ಬಲು ಜಿಪುಣರು. ಅವರು ಕಟ್ಟನ್ನು ಬಿಚ್ಚಿ ಒಣಗುತ್ತಿರುವ ಎಲೆಯನ್ನು ಉಪಯೋಗಿಸಿ ಒಳ್ಳೆಯ ಎಲೆಗಳನ್ನು ಮಾರನೆಯ ದಿನಕ್ಕೆ ಕಟ್ಟಿಡುವರು. ಮತ್ತೆ ಮಾರನೆಯ ದಿನ ಕಟ್ಟನ್ನು ಬಿಚ್ಚಿದಾಗ ಒಳ್ಳೆಯ ಎಲೆಗಳೂ ಕೆಟ್ಟಿರುವುವು. ಅಂತೂ ಹೀಗೆ ದಿನವೂ ಮುಗ್ಗಿದ ಎಲೆಗಳನ್ನೇ ಉಪ ಯೋಗಿಸುವರು. ಜಿಪುಣತನವು ಹೀಗಿದೆ. ಮತ್ತೆ ಕೆಲವು ಲೋಭಿಗಳು ಉಪಯೋಗಿಸುವ ಟಾರ್ಚ್ ಲೈಟಿನ ಸ್ಥಿತಿಯೂ ಹೀಗೆಯೇ. ಅವರು ಹಳೆಯ ಕೋಶಗಳನ್ನೇ (cell) ಉಪಯೋಗಿಸುವರು. ಕಾಲಾನಂತರ ಬಳಸಲು ತೆಗೆಯುವ ಕೋಶಗಳೂ ಅಷ್ಟು ಹೊತ್ತಿಗೆ ಹಳೆಯದಾಗಿರುವುವು. ಅಂತೂ ಅವರು ಸದಾ ಮಂಕು ಬೆಳಕಿನಲ್ಲೇ ಓಡಾಡುವರು. ಅವರು ಇಲ್ಲಿಯೂ, ಇನ್ನು ಮುಂದೆಯೂ ಸುಖವನ್ನು ಕಾಣರು. ಅವರು ಕೇವಲ ಹಣ ಕಾಯುವವರು ಮಾತ್ರ. ಅನೇಕ ಲೋಭಿಗಳು ಹೊಸ ಬಟ್ಟೆಗಳನ್ನೇ ತೊಡು ವುದಿಲ್ಲ. ಚಿಂದಿ ಬಟ್ಟೆಗಳನ್ನೇ ಧರಿಸುವರು. ಇಟ್ಟಿರುವ ಹೊಸ ಬಟ್ಟೆಗಳನ್ನು ಉಡಬೇಕೆಂದು ಪೆಟ್ಟಿಗೆಯನ್ನು ತೆರೆಯುವ ಹೊತ್ತಿಗೆ ಅವು ಹುಳ, ಹುಪ್ಪಟೆ ಗಳಿಂದ ತಿಂದು ಜೀರ್ಣವಾಗಿರುವುವು.

ರಾಮಕೃಷ್ಣನು ಒಬ್ಬ ಬಡ ಮನುಷ್ಯನಿಗೆ ಒಂದು ಹೊದಿಕೆಯನ್ನು ಕೊಟ್ಟನು. ಸ್ವಲ್ಪ ಕಾಲದ ನಂತರ ಅಷ್ಟು ಒಳ್ಳೆಯದನ್ನು ಅವನಿಗೆ ಕೊಡಬಾರ ದಾಗಿತ್ತು, ಆ ಬಡವನಿಂದ ಹೇಗಾದರೂ ಅದನ್ನು ಮತ್ತೆ ಹಿಂದಕ್ಕೆ ಪಡೆಯ ಬೇಕು ಎಂದು ನೋವಿನಿಂದ ಚಿಂತಿಸಲಾರಂಭಿಸಿದನು. ನೀವು ಆ ಬಗೆಯ ಧರ್ಮವನ್ನು ಮಾಡಿದರೆ ಯಾವ ಪ್ರಯೋಜನವೂ ಇಲ್ಲ. ನಿಮ್ಮ ಹೃದಯವು ಶುದ್ಧವಾಗದು. ಅನೇಕ ಪ್ರಾಪಂಚಿಕರು ಈ ರೀತಿಯ ಧರ್ಮವನ್ನು ಆಚರಿಸುವರು. ಜಗತ್ತು ಇಂತಹ ಧಾರ್ಮಿಕರಿಂದಲೇ ಹೆಚ್ಚಾಗಿ ತುಂಬಿರು ವುದು.

ಎಲ್ಲರೂ ಅವರವರಮಟ್ಟಿಗೆ ಉದಾರಿಗಳೆ. ತಾವು ಮಾತ್ರ ಅತ್ಯುತ್ತಮ ವಾದ ಹಾಲು ಅಥವಾ ಚಹಾವನ್ನು ಕುಡಿಯುವರು. ತಮ್ಮ ಸ್ನೇಹಿತರಿಗೆ ಎರಡನೆಯ ದರ್ಜೆಯದನ್ನು, ಆಗಂತುಕರಿಗೆ ಮೂರನೆಯ ದರ್ಜೆಯದನ್ನೂ ಕೊಡುವರು. ತಾವು ಉತ್ತಮವಾದ ಫಲಗಳನ್ನು ತಿನ್ನುವರು. ಆದರೆ ಒಣಗಿದ

ಮತ್ತು ಕೊಳೆತ, ಹಣ್ಣುಗಳನ್ನು ಆಗಂತುಕರಿಗೂ, ನೆರೆಹೊರೆಯವರಿಗೂ ದಾನ ಮಾಡುವರು. ಅವರು ಎಷ್ಟು ಸಂಕುಚಿತವಾದ ಹೃದಯವನ್ನೂ, ಸಣ್ಣತನ ವನ್ನೂ ಹೊಂದಿರುವರು! ಅವರ ಜೀವನವು ಮಹದ್ದುಃಖಭರಿತವಾಗಿರುವುದು. ಭಗವಂತ ಅವರ ಹೃದಯವನ್ನು ವಿಕಾಸಗೊಳಿಸಿ ಸರಿಯಾದ ಅರಿವನ್ನು ಮೂಡಿಸು. ಅವರು, ತಾವು ಏನು ಮಾಡುತ್ತಿದ್ದಾರೆಂಬುದನ್ನು ಸರಿಯಾಗಿ ತಿಳಿದಿಲ್ಲವು.

ಉತ್ತಮವಾದ ವಸ್ತುಗಳು, ಆಹಾರ, ಹಣ್ಣುಗಳು, ಒಳ್ಳೆಯ ಹಾಲು, ಬಟ್ಟೆಗಳನ್ನು ನಿಮ್ಮ ಮಿತ್ರರಿಗೆ, ನೆರೆಯವರಿಗೆ, ಅಪರಿಚಿತರಿಗೆ, ಅತಿಥಿಗಳಿಗೆ ಮತ್ತು ಆಳುಗಳಿಗೆ ಕೊಡಿರಿ. ಅದರಿಂದ ನಿಮಗೆ ಸಂತೋಷ, ಬಲ ಮತ್ತು ಸುಖವು ಪ್ರಾಪ್ತಿಯಾಗುವುದು. ಇವುಗಳನ್ನು ಅನುಷ್ಠಾನಮಾಡಿ, ಪೂರ್ಣ ಫಲವನ್ನು ಪಡೆಯಿರಿ. ಏನನ್ನೂ ಬಚ್ಚಿಡದಿರಿ. ಬಾಗಿಲನ್ನು ಮುಚ್ಚಿ ನಡೆಸುವ ರಹಸ್ಯ ಕಾರ್ಯಗಳು ಹೊರಗೆ ಇತರರೊಡನೆ ಹಂಚಿಕೊಳ್ಳದೆ ಇರುವುದು ಪಾಪವು. ನೀನು ತಿನ್ನಬೇಕೆಂದಿರುವುದರಲ್ಲಿ ಸ್ವಲ್ಪವನ್ನು ಮೊದಲು ಬೇರೆ ಯವರಿಗೆ ಕೊಟ್ಟು ನಂತರ ಸೇವಿಸು. ಇದು ದಿವ್ಯ ಸ್ವಭಾವವು.

ದೈಹಿಕ, ಮಾನಸಿಕ, ಆಧ್ಯಾತ್ಮಿಕವಾದ ಯಾವುದೊಂದನ್ನೇ ಆಗಲಿ ನಿಮ್ಮ ಬಳಿಯಿರುವುದನ್ನು ಇತರರೊಡನೆ ಹಂಚಿಕೊಳ್ಳಿರಿ. ಇದೇ ನಿಜವಾದ ಯಜ್ಞವು. ನೀವು ವಿಕಾಸವಾಗುವಿರಿ. ಎಲ್ಲರೊಡನೆ ಐಕ್ಯತೆಯ, ಸಂಘಟನೆಯ ಜೀವನವನ್ನು ನಡೆಸುವಿರಿ. ಇದು ಅದ್ವೈತ ಸಾಕ್ಷಾತ್ಕಾರಕ್ಕೆ ಕೊಂಡೊಯ್ಯು ವುದು.

ಪರಿಚ್ಛಿನ್ನವಾದ ತೆರೆಗಳನ್ನು ಕತ್ತರಿಸಿ ಹೊರಬನ್ನಿ. ಆತ್ಮದೊಡನೆ ಒಂದಾಗುವುದನ್ನು ಅರಿಯುವಿರಿ. ಸಾಧನೆಯು ಅತ್ಯಾವಶ್ಯಕವು. ಶ್ರದ್ಧೆ ಮತ್ತು ಉತ್ಸಾಹದಿಂದ ಅಭ್ಯಾಸಮಾಡಿರಿ. ಕಾಲವು ಅಮೂಲ್ಯವಾದುದು. ಪ್ರತಿಕ್ಷಣವನ್ನೂ ಭಗವತ್ಸೇವೆ ಮತ್ತು ಸ್ಮರಣೆಯಲ್ಲಿ ಪ್ರಯೋಜನಕಾರಿಯಾಗಿ ಬಳಸಿ. ಸದಾ ನಿಮ್ಮ ಜೇಬಿನಲ್ಲಿ ಕೆಲವು ಪುಡಿಗಾಸುಗಳಿರಲಿ. ಅದನ್ನು ದಿನವೂ ನೀವು ಬಡವರಿಗೆ ಧರ್ಮಮಾಡಬಹುದು. ಇದನ್ನು ಈಗಲೇ ಅಭ್ಯಾಸಮಾಡಿರಿ.

ಜನರು ಹೇಳಬಹುದು, "ಪಂಡಿತ ರಮಾಕಾಂತ ಶರ್ಮನು ಅನೇಕ ಧರ್ಮಕಾರ್ಯಗಳನ್ನು ಮಾಡಿರುವನೆಂದು." ಆದರೆ ಅವು ದೇವರಿಗೆ

ಅಸಮಾಧಾನವನ್ನುಂಟುಮಾಡಿದ ವಿರುದ್ಧ ಕರ್ಮಗಳಾಗಿರಬಹುದು. ಯುದ್ಧ ದಲ್ಲಿ ಹೋರಾಡುವುದು ಸುಲಭವು. ಆದರೆ ತೋರಿಕೆಯಿಲ್ಲದೆ, ಆತ್ಮಪ್ರಶಂಸೆ ಇಲ್ಲದೆ ಇತರರೊಡನೆ ಹೇಳಿಕೊಳ್ಳದೆ ಮೌನದಿಂದ ಗುಪ್ತವಾಗಿ ದಾನಮಾಡು ವುದು ಕಷ್ಟವು.

ಬಡವರಿಗೆ ಧರ್ಮಮಾಡಿ. ಆದರೆ ನಿಮ್ಮ ದಾನದ ಬಗ್ಗೆ ಏನನ್ನೂ ಆಡದಿರಿ. ನಿಮ್ಮ ಆತ್ಮದ ವೈಭವವು ಹಿಂದಾಗುವುದು. ಬಲಗೈ ಮಾಡಿದು ದನ್ನು ನಿಮ್ಮ ಎಡಗೈ ತಿಳಿಯದಿರಲಿ. ಕೆಲವರು ಧರ್ಮಮಾಡಿದ ನಂತರ ಪತ್ರಿಕೆಗಳಲ್ಲಿ ತಮ್ಮ ಚಿತ್ರದೊಡನೆ ಸುದ್ದಿ ಅಚ್ಚಾಗಿದೆಯೇ ಎಂಬುದನ್ನು ನೋಡಲು ಕುತೂಹಲವಾಗಿರುವರು. ಇದು ತಾಮಸ ರೀತಿಯ ಧರ್ಮವು. ಇದು ಧರ್ಮವೇ ಅಲ್ಲ. ಈ ಬಗೆಯ ಜನರ ಸ್ಥಿತಿಯು ತುಂಬಾ ಶೋಚ ನೀಯವು. ಭಗವಾನ್ ಏಸುಪ್ರ ಹೇಳುವನು ; " ನಿಮ್ಮ ಬಲಗೈ ನೀಡಿದು ದನ್ನು ಎಡಗೈ ಅರಿಯಕೂಡದು " ಎಂದು ಹೇಳಿದ್ದಾನೆ. ನಿಮ್ಮ ಧರ್ಮಾ ಚರಣೆಗಳನ್ನು, ಧಾರ್ಮಿಕ ಸ್ವಭಾವವನ್ನು ಪ್ರಚಾರಮಾಡದಿರಿ ಹಾಗೂ ನಿಮ್ಮ ಧರ್ಮಾಭಿಮಾನವನ್ನು ಇತರರು ಹೊಗಳಿದರೆ ನಿಮ್ಮ ಹೃದಯವು ಹಿಗ್ಗದಿರಲಿ. ಒಬ್ಬ ನಿವೃತ್ತ ಗೃಹಸ್ಥನು ಮಾಡಿದ ತಮಾಷೆಯನ್ನು ನೋಡಿ. ಅವನು ತನ್ನ ಒಳ್ಳೆಯ ಆರೋಗ್ಯವಾದ ದೇಹ ಮತ್ತು ಮನಸ್ಸನ್ನು ಸುಮಾರು ನಲವತ್ತು ವರ್ಷಗಳ ಕಾಲ ತನ್ನ ಸಂಸಾರದ ಮತ್ತು ಅಧಿಕಾರಿಗಳ ಸೇವೆಗಾಗಿ ವಿನಿಯೋಗಿಸಿದನು. ಆದರೆ ವೃದ್ಧಾಪ್ಯದಲ್ಲಿ ತನ್ನ ಕೊಳಕು ಮನಸ್ಸು ಮತ್ತು ಕೊಳಕು ದೇಹವನ್ನು ಭಗವಂತನ ಸೇವೆಗಾಗಿ ಅರ್ಪಿಸಿದನು. ಇದೊಂದು ಬಹು ದೊಡ್ಡ ಔದಾರ್ಯದ ಬಹುಮಾನವೇ ? ಇವನೊಬ್ಬ ಬಹು ಉದಾರ ಹೃದಯದ, ಧಾರಳಿಯೂ, ಸಭ್ಯನೂ ಆದ ಆಧುನಿಕ ಕರ್ಣನು.

ಯತಿ ಎಂದರೆ ನಿಯಮಶೀಲನಾದ ಸಾಧು. ತನ್ನ ಇಂದ್ರಿಯಗಳನ್ನೂ ಮನಸ್ಸು ಮತ್ತು ಪ್ರಲೋಭನೆಗಳನ್ನೂ ಹಿಡಿತದಲ್ಲಿಟ್ಟುರುವನು. ಸಾಮಾನ್ಯ ವಾಗಿ ಸಂನ್ಯಾಸಿಗಳನ್ನು ಯತಿ ಎಂದು ಕರೆಯುವರು. ಯತಿಗಳ ಒಡೆಯನೇ ಯತೀಂದ್ರನು.

ಅತಿಥಿಗಳಿಗೆ ನೀಡುವ ಸ್ವಾಗತ ಮತ್ತು ಆತಿಥ್ಯವು ಅತಿಥಿಯಜ್ಞವೆನಿಸು ವುದು. ಆಗಂತುಕನೂ ನಾರಾಯಣ ಸ್ವರೂಪ ಅತಿಥಿಯೇ. ಇದನ್ನು

ಮನುಷ್ಯ ಯಜ್ಞ ಎಂದು ಕರೆಯುವರು. ಪಂಚವಿಧ ಯಜ್ಞಗಳಿಂದ ಚಿತ್ತಶುದ್ಧಿ ಯಾಗುವುದು.

ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಪಂಚ ಮಹಾಯಜ್ಞಗಳೆಂದರೆ : ೧. ವೇದ ಮಂತ್ರ ಪೂರ್ವಕವಾಗಿ ದೇವತೆಗಳಿಗೆ ಅರ್ಪಿಸುವ ಹವಿಸ್ಸನ್ನು **ದೇವಯಜ್ಞ** ಎನ್ನುವರು. ೨. ವೇದಾಧ್ಯಯನ ಮತ್ತು ವೇದೋಪದೇಶ ಗಳನ್ನು ನಡೆಸುವುದಲ್ಲದೆ ಋಷಿಗಳಿಗೆ ಸಲ್ಲಿಸುವ ಸೇವೆಯನ್ನು **ಋಷಿಯಜ್ಞ** ಎಂದು ಕರೆಯುವರು. ೩. **ಪಿತೃಯಜ್ಞ**ವೆಂದರೆ ಮೃತರಾದವರಿಗೆ ಪಿಂಡ ಮತ್ತು ತಿಲೋದಕಗಳನ್ನು ಸಮರ್ಪಿಸುವುದು. ೪. **ಭೂತಯಜ್ಞ**ದ ಪ್ರಕಾರ ಗೋವು, ಕಾಗೆ, ಮತ್ತಿತರ ಪ್ರಾಣಿಗಳಿಗೆ ಆಹಾರವನ್ನು ಕೊಡು ವುದರ ಮೂಲಕ ವಿಶ್ವಪ್ರೇಮವನ್ನೂ, ಅದ್ವೈತ ಭಾವವನ್ನೂ ಬೆಳೆಸುವುದು. ೫. **ಅತಿಥಿಯಜ್ಞ**ವೆಂದರೆ ಆಗಂತುಕರನ್ನು ಗೌರವದಿಂದ ಬರಮಾಡಿ ಊಟ ಉಪಚಾರಗಳನ್ನು ನೀಡುವುದು. ಈ ಯಜ್ಞಗಳನ್ನು ಮಾಡದವರು ಪ್ರತ್ಯವಾಯ ದೋಷವನ್ನು ಅನುಭವಿಸುವರು. ಅಗ್ನಿಸ್ಥಾನ, ಜಲಕುಂಭ, ಛೇದನ, ಬೀಸುವ ಮತ್ತು ಗುಡಿಸುವ ವಸ್ತುಗಳೂ ಸಾಮಾನ್ಯವಾಗಿ ಜೀವಿ ಗಳನ್ನು ನಾಶಮಾಡುವುದರಿಂದ ಪ್ರತಿದಿನವೂ ಪಾಪಗಳನ್ನು ಮಾಡುವರು.

ಈ ಯಜ್ಞಗಳು ಚಿತ್ತಶುದ್ಧಿಗಾಗಿ ಗೃಹಸ್ಥರಿಗೆ ವಿಧಿಸಲ್ಪಟ್ಟಿವೆ. ಪ್ರತಿ ಯೊಬ್ಬ ದ್ವಿಜನೂ ಇವುಗಳನ್ನು ಮಾಡುವುದರ ಮೂಲಕ ದೇವತೆಗಳು, ಋಷಿ ಗಳು, ಪಿತೃಗಳು, ಮನುಷ್ಯರು, ಭೂತಗಳು ಮತ್ತು ಅಲ್ಪಜಂತುಗಳನ್ನು ಸಂತೋಷಪಡಿಸುವರು. ಈ ಪಂಚ ಯಜ್ಞಗಳು ಜಗದ್ವ್ಯಾಪಿಯಾಗಿ ಅಹಿಂಸಾಧರ್ಮವನ್ನು ಬೆಳೆಸುವುದು.

ದಿನವೂ ಭೂತಯಜ್ಞವನ್ನು ನಡೆಸಿ. ಹಸುಗಳಿಗೂ ಕಾಗೆಗಳಿಗೂ ಅನ್ನ ನೀಡಿ. ಭೂತದಯೆಯನ್ನು ಬೆಳೆಸುವುದರಿಂದ ಹೃದಯವು ವಿಶಾಲ ವಾಗುವುದು, ಎಲ್ಲ ಜೀವಿಗಳೊಡನೆ ಆತ್ಮಭಾವವು ವಿಕಾಸವಾಗುವುದು. ಜ್ಞಾನಸಾಧನವಾದ ಸಮದೃಷ್ಟಿಯು ಉಂಟಾಗುವುದು.

ತಲೆಯ ಕೂದಲು ನರೆತರೆ ಮೃತ್ಯುದೇವತೆಯಾದ ಯಮದೇವನ ಮೊದಲನೇ ಕರೆ ಎಂದು ತಿಳಿಯಿರಿ. ಅವನನ್ನು ಕಾಣಲು ಸಿದ್ಧರಾಗಿ. ಮುಖ ದಲ್ಲುಂಟಾಗುವ ಸುಕ್ಕು, ಬಾಗಿದ ಬೆನ್ನು ಎರಡನೆಯ ಕರೆ ಎಂದು ತಿಳಿಯಿರಿ.

ಹಲ್ಲುಗಳು ಉದುರಿದಾಗ ಮೂರನೆಯ ಕರೆ ಎಂದು ಅರಿಯಿರಿ. ಮೂರೇ ಬಾರಿ ಬಿಕ್ಕಳಿಸಿ ಪ್ರಾಣವನ್ನು ತೊರೆಯುವಿರಿ. ಕೊನೆಯ ಬಿಕ್ಕಳಿಕೆಯಿಂದ ನಿಮ್ಮ ಮಕ್ಕಳೂ, ಸಂಬಂಧಿಕರೂ ಆಸ್ತಿಯನ್ನು ಹಂಚಿಕೊಳ್ಳುವರು. ಒಬ್ಬನು ಪಾಸ್ ಬುಕ್ ತೆಗೆದುಕೊಂಡು ಸೇವಿಂಗ್ಸ್ ಬ್ಯಾಂಕ್‌ಗೆ ಓಡುವನು. ಮತ್ತೊಬ್ಬನು ಹಣದ ಚೀಲವನ್ನು ಎತ್ತಿಕೊಳ್ಳುವನು. ಮೂರನೆಯವನು ಒಡವೆಗಳನ್ನು ಹುಡುಕುವನು. ಮತ್ತೊಬ್ಬನು ಪ್ರಾವಿಡೆಂಟ್ ಫಂಡ್ ಇನ್‌ಷೂರೆನ್ಸ್ ಪತ್ರಗಳನ್ನು ತೆಗೆದಿಟ್ಟುಕೊಳ್ಳುವನು. ಇದು ಈ ಜಗತ್ತಿನ ಜನರ ಸ್ಥಿತಿ. ಮಿತ್ರರೇ, ಭಕ್ತಿ, ಧ್ಯಾನ, ಪರಿಶುದ್ಧತೆ, ಸೇವೆ, ಜಪ, ಪ್ರಾರ್ಥನೆ ಮತ್ತು ವಿಚಾರದ ಮೂಲಕ ಅಮರತೆಯನ್ನು ಪಡೆಯಲು ಯತ್ನಿಸಿರಿ. ಎಲ್ಲ ಕಷ್ಟನಿಷ್ಠುರಗಳೂ ಕೊನೆಗಾಣುವುವು.

ವಿವಾಹ ಸಂದರ್ಭದಲ್ಲಿ ನಿಮ್ಮ ಸ್ನೇಹಿತರು ಮತ್ತು ಸಂಬಂಧಿಗಳ ಊಟಕ್ಕೆ ಬೇಕಾದಷ್ಟು ಹಣವನ್ನು ಖರ್ಚುಮಾಡುವಿರಿ. ಆಗ ಬಡವರು, ಸಾಧುಗಳು, ಸನ್ಯಾಸಿಗಳು ಮತ್ತು ಬ್ರಾಹ್ಮಣರಿಗೂ ಅನ್ನದಾನಮಾಡಿ. ನೀವು ಒಬ್ಬ ಜೀವನ್ಮುಕ್ತ ಅಥವಾ ಒಳ್ಳೆಯ ಸನ್ಯಾಸಿಗೆ ಭೋಜನ ಮಾಡಿಸಿದರೆ ಇಡೀ ವಿಶ್ವಕ್ಕೆ ಅನ್ನವನ್ನಿಟ್ಟಂತೆ. ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳ ಸಹಾಯಕ್ಕೆ ಸ್ವಲ್ಪ ಹಣವನ್ನು ಪ್ರತ್ಯೇಕವಾಗಿ ಇಡಲೇಬೇಕು. ಧಾರ್ಮಿಕ ಹಾಗೂ ತಾತ್ವಿಕ ಮಾರ್ಗದರ್ಶನಮಾಡುವ ಪ್ರಚಾರ ಪತ್ರಗಳನ್ನೂ, ಗೀತಾ ಪಠಣ, ಹರಿ ಸಂಕೀರ್ತನೆಗಳನ್ನೂ ಹಗಲು ರಾತ್ರಿ ನಡೆಸಬೇಕು. ಆಗ ಮಾತ್ರ ಇಲ್ಲಿಯೂ, ಮುಂದೆಯೂ ಭಗವನ್ನಾಮದ, ದಾನದ, ಧರ್ಮದ ಹಿರಿಮೆಯನ್ನು ಕಂಡುಕೊಳ್ಳುವಿರಿ. ಯಾವಾಗಲೂ ಸಾಂಘಿಕ ಉತ್ಸವಗಳಲ್ಲಿ ಆಧ್ಯಾತ್ಮದ ಬಣ್ಣವನ್ನು ಕೊಡಿ. ಸಂತೋಷಿಸಿರಿ. ದೇವರನ್ನು ಸ್ಮರಿಸಲು, ಅವನ ಸಾಕ್ಷಾತ್ಕಾರ ಪಡೆಯಲು ಇದು ಸುಲಭ ವಿಧಾನವು. ಕೇವಲ ಹೊಟ್ಟೆಯನ್ನು ತುಂಬುವುದೇ ಆದ ಚಾರ್ವಾಕನ ನಡವಳಿಕೆಯು ದೇವರನ್ನು ಮರೆಸುವುದು.

ಧಾರ್ಮಿಕ ಕಾರ್ಯಗಳನ್ನು ಮಾಡಲು ನೀವು ಹಂಬಲಿಸಬೇಕು. ದೊರೆತ ಅವಕಾಶಗಳನ್ನು ಕಳೆದುಕೊಳ್ಳಬೇಡಿ. ಅವಕಾಶಗಳನ್ನು ಕಲ್ಪಿಸಿಕೊಳ್ಳಿ. ಸಹಜವಾದ ಸಾತ್ವಿಕ ಮನೋಧರ್ಮಕ್ಕಿಂತ ಹಿರಿಯದಾದ ಯಜ್ಞವಿಲ್ಲ.

ಕರ್ಣ, ರಾಜಾ ಭೋಜ, ಅಸಂಖ್ಯಾತವಾಗಿ ದಾನಗಳನ್ನು ಮಾಡಿದ್ದಾರೆ. ಅವರ ಹೆಸರುಗಳು ನಮ್ಮ ಹೃದಯದಲ್ಲಿ ಅಚ್ಚಳಿಯದೆ ನಿಂತಿವೆ.

ಆರಂಭದಲ್ಲಿ ಯಾವಾಗ ದಾನಮಾಡಬೇಕೆಂದು ನೀವು ಯೋಚಿಸ ಬಹುದು. ಕಾಲಾನುಕ್ರಮದಲ್ಲಿ ವ್ಯಕ್ತಿ, ಕಾಲ, ದೇಶಗಳ ಗಣನೆಯಿಲ್ಲದೆ, ಭೇದವಿಲ್ಲದೆ ಧರ್ಮಮಾಡಿರಿ. ಹೀಗೆಯೇ ಅಭೇದ ಭಾವದಿಂದ ಎಲ್ಲರಿಗೂ ದಯೆತೋರಿಸಿ. ಕೇವಲ ಕೆಲವೇ ಜನರು ಇದನ್ನು ಅರಿತುಕೊಳ್ಳಬಲ್ಲರು.

ಧರ್ಮವು ಒತ್ತಾಯವಿಲ್ಲದೆ ಸಹಜವಾಗಿ ನಡೆಯಬೇಕು. ನೀಡುವ ಅಭ್ಯಾಸವು ಪ್ರಬಲವಾಗಬೇಕು. ದಾನಮಾಡುವುದರಲ್ಲಿ ಆನಂದವನ್ನು ಕಾಣುತ್ತಿರಬೇಕು. “ನಾನು ಬಹಳ ಧರ್ಮಗಳನ್ನು ಮಾಡಿದ್ದೇನೆ. ಸ್ವರ್ಗ ದಲ್ಲಿ ಬಹಳ ಸಂತೋಷವನ್ನು ಅನುಭವಿಸುವೆನು. ಮುಂದೆ ಶ್ರೀಮಂತನಾಗಿಯೇ ಹುಟ್ಟುವೆನು. ಈ ಧರ್ಮವು ನನ್ನ ಪಾಪಗಳನ್ನು ತೊಳೆದಿದೆ. ಈ ನಗರ ಅಥವಾ ಜಿಲ್ಲೆಯಲ್ಲಿ ನನ್ನಂತಹ ಧರ್ಮಿಷ್ಟನು ಯಾರೂ ಇಲ್ಲವು. ನಾನು ದೊಡ್ಡ, ಧಾರ್ಮಿಕ ವ್ಯಕ್ತಿ ಎಂಬುದು ಜನರಿಗೂ ಗೊತ್ತು” ಎಂದು ಎಂದಿಗೂ ಚಿಂತಿಸದಿರಿ. ಬಡಾಯಿಯು ಬಹಳ ಹೇಯವಾದ ರೀತಿಯು.

---

## ೭. ಸತ್ಸಂಗ

ನಿಜವಾದ ಸತ್ಸಂಗವೆಂದರೆ ಆತ್ಮ ಅಥವಾ ದೇವರೊಡನೆ ಧ್ಯಾನದ ಮೂಲಕ ಸಂಬಂಧವನ್ನು ಹೊಂದುವುದು. ಸಾಧುಸಂತರೊಡನೆ ಇರುವುದು ಸತ್ಸಂಗವೇ. ಮಹರ್ಷಿಗಳು, ಮಹಾಮುಹಿಮರು, ಸಂತರು ರಚಿಸುವ ಗ್ರಂಥಗಳನ್ನು ಓದುವುದೂ ಒಂದು ವಿಧವಾದ ಸತ್ಸಂಗವೇ. ಭಯರಹಿತವೂ, ಅಮರವೂ ಆದ ಮತ್ತೊಂದು ದಡವನ್ನು ಸೇರಿಸುವ ಸುಭದ್ರವಾದ ನಾವೆ ಎಂದರೆ ಸತ್ಸಂಗವು.

ಪವಿತ್ರಾತ್ಮರ ಸನ್ನಿಧಿಯು ದೊರೆಯದಾಗ, ಗೀತಾ ಪಾರಾಯಣವು ಸತ್ಸಂಗವಾಗುವುದು.

ಶ್ಲೋಕ || ಅಬ್ಧೌ ವಿಧೌ ವಧು ಮುಖೇ ಫಣಿನಂ ನಿವಾಸೇ
ಸ್ವರ್ಗೇ ಸುಧಾ ವಸತಿ ಚೇತಿ ಬುಧಾ ವದಂತಿ
ಕ್ಷರಕ್ಷಯಃ ಪತಿಮೃತಿರ್ ವಿಷಮ್ ಇಂದ್ರನಾಶಃ
ಕಂಠೇ ಸುಧಾ ವಸತಿ ಸ ಭಾಗವತ ಜನಾನಾಂ ||

" ಸಾಗರ, ಚಂದ್ರ, ಸ್ವರ್ಗ ಮತ್ತು ಯುವತಿಯ ತುಟಿಯಲ್ಲಿ ಅಮೃತ ವಿದೆಯೆಂದು ಜನರು ಹೇಳುವರು. ಚಂದ್ರನು ಒಂದೇ ಪಕ್ಷದಲ್ಲಿ ಕ್ಷಯಿಸುವುದ ರಿಂದ ಅಲ್ಲಿ ಅಮೃತವಿರಲಾರದು. ತಮ್ಮ ಪುಣ್ಯಕರ್ಮಗಳು ಮುಗಿದಮೇಲೆ ದೇವತೆಗಳೂ ಪುನಃ ಜನ್ಮವೆತ್ತುವುದರಿಂದ ಸ್ವರ್ಗದಲ್ಲಿಯೂ ಅಮೃತವಿರಲಾರದು. ಅಧರಾಮೃತವನ್ನು ಪಾನಮಾಡಿದ ಪತಿಗಳು ಮೃತರಾಗುವುದರಿಂದ ಯುವತಿ ಯರ ತುಟಿಗಳಲ್ಲಿಯೂ ಅಮೃತವಿರುವುದಿಲ್ಲ. ಆದರೆ ತಮ್ಮ ಸುಮಧುರವಾದ ವಾಕ್ಯಗಳಿಂದ, ಉಪದೇಶಗಳಿಂದ ಇತರರು ಅನುರಕ್ತಿಯನ್ನೂ, ನಿತ್ಯ ಶಾಂತಿ ಯನ್ನೂ ಪಡೆಯುವಂತೆ ಮಾಡುವ ಶಕ್ತಿಯು ಸಾಧು ಸಂತರಿಗಿರುವುದರಿಂದ ನಿಜವಾದ ಅಮೃತವು ಅವರ ಕಂಠ ಮತ್ತ ನಾಲಿಗೆಯಲ್ಲೇ ಇರುವುದು."

ಸಾಧುಗಳನ್ನು ಹೇಗೆ ತಿಳಿಯುವುದು ? ಭಗವಾನ್ ಕೃಷ್ಣನು ಅವರನ್ನು ವರ್ಣಿಸಿರುವನು. ನೀವು ಭಾಗವತದಲ್ಲಿ ಅದನ್ನು ನೋಡುವಿರಿ. " ಸಂತರು ಏನನ್ನೂ ಅಪೇಕ್ಷಿಸುವುದಿಲ್ಲ. ಅವರ ಹೃದಯಗಳೂ ನನ್ನಲ್ಲೇ ಸ್ಥಿರವಾಗಿ ನಿಂತಿರುವುವು. ಅವರು ಬಹಳ ವಿನಯಶೀಲರೂ, ಸಮದರ್ಶಿಗಳೂ ಆಗಿರುವರು. ಯಾವ ವ್ಯಕ್ತಿ ಅಥವಾ ವಸ್ತುವಿನಲ್ಲೂ ಅವರಿಗೆ ಸಂಗವಿಲ್ಲವು. ಅವರು ಮಮತಾಭಾವವನ್ನು (mineness) ಹೊಂದಿಲ್ಲ. ನಿರಹಂಕಾರಿಗಳು, ಸುಖ ದುಃಖಗಳೂ ಸಮಾನವು. ಯಾರಿಂದಲೂ ಏನನ್ನೂ ಸ್ವೀಕರಿಸರು. ಶೀತೋಷ್ಣ ಸುಖದುಃಖ ಸಹಿಷ್ಣುಗಳು. ಎಲ್ಲ ಜೀವಿಗಳನ್ನೂ ಪ್ರೀತಿಸುವರು. ಅವರಿಗೆ ಶತ್ರುವೇ ಇಲ್ಲ. ಶಾಂತರು ಮತ್ತು ಶ್ರೇಷ್ಠವಾದ ನಡೆಯುಳ್ಳವರು.

ಗಂಧದ ಮರವು ಎಲ್ಲಾ ಕಾಡುಗಳಲ್ಲಿಯೂ ಬೆಳೆಯುವುದಿಲ್ಲ. ಎಲ್ಲ ಸಮುದ್ರಗಳಲ್ಲಿ ಮುತ್ತು ದೊರೆಯುವುದಿಲ್ಲ. ಎಲ್ಲ ಪರ್ವತಗಳಲ್ಲಿ ಅನರ್ಘ್ಯ ರತ್ನಗಳು ಲಭಿಸುವುದಿಲ್ಲ. ಎಲ್ಲಾ ಸ್ಥಳಗಳಲ್ಲಿಯೂ ನಿಜವಾದ ಸಾಧುಸಂತರು ಕಾಣುವುದಿಲ್ಲ. ಏಕಾಂತ ಸ್ಥಳಗಳಲ್ಲಿ ಅವರನ್ನು ನೀವು ಹುಡುಕಬೇಕು. ಮೋಕ್ಷಸಾಮ್ರಾಜ್ಯ ಪ್ರಾಪ್ತಿಗೆ ಅವಶ್ಯಕವಾದ ರಕ್ಷಾಮಾರ್ಗವೆಂದರೆ ಸತ್ಸಂಗವು.

ಸತ್ಸಂಗದ ಸಂಬಂಧದಿಂದ ವಿಚಾರ, ಶಾಂತಿ ಮತ್ತು ಸಂತೋಷವೆಂಬ ಮಿತ್ರರನ್ನು ಪಡೆಯುವಿರಿ. ಸಾಧು ಸಂತರೊಡನೆ ಹಿತಕರಳಾದ ಗಂಗೆಯಲ್ಲಿ ಸ್ನಾನ ಮಾಡಿದರೆ ನೀವು ತೀರ್ಥಯಾತ್ರೆಗಳನ್ನೂ ಯಜ್ಞಯಾಗಗಳನ್ನೂ ಮಾಡುವ ಅವಶ್ಯಕವಿಲ್ಲವು. ಸಾಧುಗಳು ಮತ್ತು ಮಹಾತ್ಮರ ಸಹವಾಸದಿಂದ ಲೌಕಿಕವಾದ ಕಲ್ಮಷಗಳು ತೊಳೆದುಹೋಗಿ ಮೋಕ್ಷದ ಬಾಗಿಲನ್ನು ಹಾರಹೊಡೆಯುವುದು. ಸತ್ಸಂಗವು ಮೋಕ್ಷಸಾಮ್ರಾಜ್ಯದ ಪಹರೆಯು. ಸತ್ಸಂಗದ ಸ್ನೇಹವನ್ನು ಮಾಡಿದರೆ ನಿತ್ಯಾನಂದದ ಸಾಮ್ರಾಜ್ಯವನ್ನು ಸುಲಭವಾಗಿ ಪ್ರವೇಶಿಸುವಿರಿ.

ಸಾಧು ಸಂತರ ಕ್ಷಣಕಾಲದ ಸ್ನೇಹವು ಅಗಣಿತವಾದ ಬೆಲೆಯುಳ್ಳದ್ದು. ಬಯಸಿದುದೆಲ್ಲವನ್ನೂ, ಒಳ್ಳೆಯದನ್ನೂ ದೊರಕಿಸಿಕೊಡುವುದು. ಲೌಕಿಕ ಸಂಸ್ಕಾರಗಳನ್ನು ಶುದ್ಧಿಗೊಳಿಸಿ ದುಷ್ಟಸಂಸ್ಕಾರಗಳನ್ನು ನಾಶಮಾಡಿ ಲೌಕಿಕನ ಮನಸ್ಸನ್ನು ಅಧ್ಯಾತ್ಮದ ಕಡೆಗೆ ತಿರುಗಿಸುವುದು.

ಸತ್ಸಂಗವು ಹೃದಯದ ಅಂಧಕಾರವನ್ನು ನಾಶಮಾಡುವುದು. ಮನಸ್ಸನ್ನು ವಿಕಾಸಗೊಳಿಸಿ ಶುದ್ಧ ಸತ್ವದಿಂದ ತುಂಬುವುದು. ಅದು ಸನ್ಮಾರ್ಗದಲ್ಲಿ ಕೈಹಿಡಿದು ನಡೆಸುವುದಲ್ಲದೆ ಮನಸ್ಸಿನಲ್ಲಿ ಜ್ಞಾನಸೂರ್ಯನು ಉದಯಿಸುವಂತೆ. ರಾಜಾ ರಹೂಗಣನಿಗೆ ಸಂತ ಭರತನು ಹೇಳಿದನು, "ಎಲೈ ರಹೂಗಣನೆ, ನೀನು ಮಹಾತ್ಮರ ಚರಣಧೂಳಿಯನ್ನು ಮೈಗೆ ತೊಡೆಯದೆ ಮತ್ತು ಮಹಾತ್ಮರ ಸತ್ಸಂಗ ಮತ್ತು ಆಶ್ರಯವನ್ನು ಪಡೆಯದೆ, ಎಷ್ಟೇ ವೈದಿಕ ಯಜ್ಞಗಳನ್ನು, ತಪಸ್ಸು ಮೊದಲಾದ ಧಾರ್ಮಿಕ ಕಾರ್ಯಗಳನ್ನು ನಡೆಸಿದರೂ, ಶಾಸ್ತ್ರವ್ಯಾಸಂಗ ಮಾಡಿದರೂ ವರುಣ, ಅಗ್ನಿ, ಸೂರ್ಯ ಮೊದಲಾದ ದೇವತೆಗಳನ್ನು ಆರಾಧಿಸಿದರೂ ನಿನಗೆ ಭಗವಂತನು ದೊರೆಯುವುದಿಲ್ಲ." (ಭಾಗವತ ೫–೨೦–೧೨)

ಭಕ್ತಿಯು ಭಗವಂತನಲ್ಲಿ ತಾನಾಗಿ ಉಂಟಾಗುವುದಿಲ್ಲ. ಒಬ್ಬ ಕುರುಡನು ಮತ್ತೊಬ್ಬ ಕುರುಡನಿಗೆ ದಾರಿ ತೋರಿಸಲಾರನು. ಮಹಾತ್ಮರ ಸಂಗವೇ ಮಾನವನ ಹೃದಯದಲ್ಲಿ ಭಕ್ತಿಯು ಮೊಳೆಯುವಂತೆ ಮಾಡುವುದು. ಮಹಾತ್ಮರಿಗೆ ಜಯವಾಗಲಿ. ಅವರ ಅನುಗ್ರಹವು ಸದಾ ನಿಮ್ಮ ಮೇಲಿರಲಿ.

---

# ೮. ಶರಣಾಗತಿ

ಆತ್ಮ ಸಮರ್ಪಣೆ ಮತ್ತು ತ್ಯಾಗವು ಶ್ರೇಷ್ಠವಾದ ಆಧ್ಯಾತ್ಮಿಕ ಸಾಧನೆಗಳಿಗೆ, ಆದರ್ಶವಾದ ಮಾರ್ಗಕ್ಕೆ ಮತ್ತು ಆಧ್ಯಾತ್ಮಿಕ ವೈಭವದ ಕೀರ್ತಿಯ ಶಿಖರಕ್ಕೆ ನಿಮ್ಮನ್ನು ಕೊಂಡೊಯ್ಯುವುದು.

ಪ್ರಪತ್ತಿ ಮಾರ್ಗವನ್ನು ಶರಣಾಗತಿ ಎಂದೂ ಕರೆಯುವರು. ಭಕ್ತನ ಏಕಮಾತ್ರ ಆಶ್ರಯವು ಮತ್ತು ರಕ್ಷಕನು ದೇವರು. ಪ್ರಪತ್ತಿಮಾರ್ಗದಲ್ಲಿ ಆರು ಮುಖ್ಯ ಅಂಶಗಳಿವೆ. ೧) ಸದ್ಗುಣಗಳನ್ನು ಬೆಳೆಸಿಕೊಂಡು ತನ್ನನ್ನು ಭಗವಂತನಿಗೆ ಅರ್ಪಿಸಿಕೊಳ್ಳಲು ಅರ್ಹನಾಗುವುದು. ೨) ಭಗವಂತನಿಗೆ ಬೇಡವಾದ ನಡತೆಗಳನ್ನು ಬಿಡುವುದು. ೩) ಭಗವಂತನೇ ತನ್ನ ರಕ್ಷಕನೆಂದು ದೃಢವಾಗಿ ನಂಬುವುದು. ೪) ರಕ್ಷಣೆ ಮತ್ತು ದಯೆಗಾಗಿ ದೇವರನ್ನೇ ಬೇಡುವುದು. ೫) ತಾನು ಅಲ್ಪನೆಂದು ಭಾವಿಸುವುದು. ೬) ಸಂಪೂರ್ಣ ಶರಣಾಗತನಾಗುವುದು. ಇವುಗಳಲ್ಲಿ, ಮೊದಲನೆಯ ಐದೂ ಆತ್ಮಸಮರ್ಪಣೆಗೆ ಅವಶ್ಯವಾದ ಮಾರ್ಗಗಳು. ಸರಿಯಾದ ಭಾವದಿಂದ, ನ್ಯಾಯವಾದ ರೀತಿಯಲ್ಲಿ ಸಾಧನೆಯನ್ನು ಮಾಡಿದರೆ ಅಹಂಕಾರವು ಎಷ್ಟೇ ಸೂಕ್ಷ್ಮವಾಗಿಯೂ ಪ್ರವೇಶಿಸಲಾರದು. ಸಾಧನೆಯು ಅಹಂಕಾರವನ್ನು ನಾಶಮಾಡುವುದಕ್ಕಾಗಿಯೇ ಇರುವುದು. ಭಕ್ತಿಮಾರ್ಗದಲ್ಲಿಯೂ ಸಾಧಕನು ಆತ್ಮ ಸಮರ್ಪಣೆಯನ್ನು ಮಾಡಲೇಬೇಕು. ನಿಮಗಾಗಿ ದೇವರು ಇದನ್ನು ಮಾಡುವುದಿಲ್ಲ. ಮುರಳೀಧಾರಿ ಶ್ರೀ ಕೃಷ್ಣನು ಹೇಳುತ್ತಾನೆ, "ನಿಮ್ಮ ಸರ್ವಸ್ವದೊಡನೆ ನನ್ನಲ್ಲಿ ಶರಣಾಗಿರಿ. ನಾನು ಆಶ್ರಯವನ್ನು ನೀಡುವೆನು. ನನ್ನ ಕೃಪಾ ಪ್ರಸಾದವು ಲಭಿಸುವುದು. ನಿಮಗೆ ಮುಕ್ತಿಯನ್ನು ಕೊಡುವೆನು."

ಪ್ರತಿಯೊಬ್ಬನೂ ತನ್ನನ್ನು ಭಗವಂತನಿಗೆ ಸಮರ್ಪಣೆ ಮಾಡಿಕೊಳ್ಳುವುದರ ಮೂಲಕ ಮೋಕ್ಷಮಾರ್ಗವನ್ನು ತೆರೆಯಬಹುದು. ಆದರೆ ಶರಣಾಗತಿಯು ಶ್ರದ್ಧೆಯಿಂದಲೂ, ಪೂರ್ಣವಾಗಿಯೂ, ನಿಸ್ವಾರ್ಥವಾಗಿಯೂ ಇರಬೇಕು. ಭಕ್ತಿಮಾರ್ಗದಲ್ಲಿ ಜಯಗಳಿಸಲು ಇದೇ ರಹಸ್ಯವಾದ ಉಪಾಯವು. ಮಹಾತ್ಮರ ಸತ್ಸಂಗವು ಸಾಧಕನಲ್ಲಿ ಭಕ್ತಿಯು ಬೇರೂರಲು

ಸಹಾಯಕವಾಗುವುದು. ಲೌಕಿಕವಾದ ಭಾವನೆಗಳೂ, ದುಷ್ಟ ಸಂಸ್ಕಾರ ಗಳೂ, ಸಮೂಲವಾಗಿ ನಾಶವಾಗುವುವು.

ರೋಮಿನ ವೇಶ್ಯೆ, ಮೇರಿ ಮ್ಯಾಗ್ಡಲೀನಳನ್ನು, ಕಲ್ಲಿನಿಂದ ಹೊಡೆದು ಸಾಯಿಸಲು ಹತ್ತುಸಾವಿರ ಜನರ ಗುಂಪೊಂದು ಮುಂದೆಬಂದಿತು. ಭಗವಾನ್ ಏಸುವು ಅವರನ್ನು ಉದ್ದೇಶಿಸಿ ಹೀಗೆ ಹೇಳಿದನು, "ನಿಮ್ಮಲ್ಲಿ ಒಂದು ಪಾಪ ವನ್ನೂ ಮಾಡದವರು ಆಕೆಗೆ ಕಲ್ಲಿನಿಂದ ಹೊಡೆಯಬಹುದು" ಎಂದು. ಭಗವಾನ್ ಏಸುವಿನ ಮಾತಿನಿಂದ ಜನಸ್ತೋಮವು ಸ್ತಬ್ಧವಾಯಿತು. ಮರುಕ್ಷಣವೇ ಮೇರಿ ಮ್ಯಾಗ್ಡಲೀನಳು ಭಗವಾನ್ ಏಸುವಿನ ಕೃಪೆಯಿಂದ ಮಹಾನ್ ಸಂತಳಾದಳು. **ಯಾವಾಗ ಯಾರ ಮೇಲೆ ಭಗವಂತನ ಕೃಪೆಯು ಕಾಣಿಸಿಕೊಳ್ಳುವುದೆಂಬುದನ್ನು ಹೇಳುವುದು ಅತ್ಯಂತ ಕಠಿಣವು.** ಭಗವಾನ್ ಕೃಷ್ಣನು ಗೀತೆಯಲ್ಲಿ ಉಪದೇಶಿಸಿರುವುದೇನೆಂದರೆ, "ಓ ಪಾರ್ಥ! ಪಾಪಗರ್ಭಸಂಭೂತನಾಗಲೀ, ಸ್ತ್ರೀಯಾಗಲಿ, ವೈಶ್ಯನಾಗಲಿ, ಕೊನೆಗೆ ಶೂದ್ರನಾಗಲಿ ಅವರಲ್ಲಿ ಯಾರು ನನ್ನನ್ನು ಆಶ್ರಯಿಸಿರುವರೋ ಅವರು ನನ್ನ ದಿವ್ಯಮಾರ್ಗದಲ್ಲಿ ನಡೆಯುವರು." ಪ್ರಿಯಮಿತ್ರರೇ ಇನ್ನು ನಿರಾಶೆಗೆ ಯಾವ ಕಾರಣವಿದೆ? ಏಳಿ, ದುಡಿಯಿರಿ, ಪ್ರಯತ್ನಿಸಿ, ಅನುಷ್ಠಾನ ಮಾಡಿ, ಧೀರರಾಗಿ, ಮುಂದೆ ನಡೆಯಿರಿ. ಶ್ರದ್ಧೆಯಿಂದ ಸಾಧನೆಮಾಡಿ. ದಯಾಳುವಾದ ಪರಮಾತ್ಮನು ನಿಮ್ಮ ಪ್ರಯತ್ನಗಳಿಗೆ ತಕ್ಕ ಜಯವೆಂಬ ಕಿರೀಟವನ್ನಿಡುವನು. ನಮ್ಮಲ್ಲಿ ಅತ್ಯಂತ ಕ್ಷುದ್ರರಾದವರೂ ಮೋಕ್ಷವನ್ನು ಪಡೆಯಬಲ್ಲೆವು. ಶ್ರೀಕೃಷ್ಣನೇ ನಮಗೆ ಭರವಸೆಯ ಮಾತನ್ನು ನೀಡಿದ್ದಾನೆ. **ನಿಮಗೆ ಶ್ರೇಯಸ್ಸಾಗುವುದನ್ನು ನಿಮಗಿಂತಲೂ ಚೆನ್ನಾಗಿ ಶ್ರೀಕೃಷ್ಣನು ಅರಿತಿರುವನು.** ಎಲ್ಲವನ್ನೂ ಅವನ ಇಚ್ಛೆಯೆಂದು ಅರಿತು ಅವನಿಗೇ ಬಿಡುವುದು ದೇವಾಲಯಗಳಿಗೆ ಹೋಗಿ ಗಂಟೆಗಳನ್ನು ಬಾರಿಸು ವುದಕ್ಕಿಂತ, ಪೂಜೆ ಸಲ್ಲಿಸುವುದಕ್ಕಿಂತ ಶ್ರೇಷ್ಠವಾದ ಆರಾಧನೆಯು.

ಭಗವಂತನು ತನ್ನ ಮಧುರವಾದ ಪ್ರೇಮ ಮತ್ತು ದಯೆಯಿಂದ ನಿಮ್ಮನ್ನು ಆಲಂಗಿಸಲು ನಿಮ್ಮ ಹೃದಯದಲ್ಲೇ ತನ್ನ ಕೈಗಳೆರಡನ್ನೂ ಚಾಚಿ ನಿಂತಿರುವನು. ನಿಮ್ಮ ಮುಖವನ್ನು ಎತ್ತಿರಿ. ಮಗುವಿನಂತೆ ಸರಳತೆಯಿಂದ, ಮುಗ್ಧತೆಯಿಂದ, ಆರ್ಜವದಿಂದ (frankness) ಅವನನ್ನು ಸಂಧಿಸಿ. ನಿಮ್ಮ

ಹೃದಯದ ಮೂಲಕ ಸಂಭಾಷಿಸಿ. ನಿರಪೇಕ್ಷಿತರಾಗಿ ಆತ್ಮಸಮರ್ಪಣೆ ಮಾಡಿ. ಮನಃಪೂರ್ವಕವಾದ, ಅನಿರ್ಬಾಧಿತವಾದ, ನಿಸ್ಸಂಕೋಚವಾದ ಸಂಪೂರ್ಣ ವಾದ, ಶರಣಾಗತರಾದರೆ ನಿಮ್ಮೆಲ್ಲ ಕರ್ತವ್ಯಗಳೂ, ಜವಾಬ್ದಾರಿಯೂ ಪೂರ್ಣ ವಾದಂತೆಯೇ. ಭಗವಂತನು ಎಲ್ಲ ರೀತಿಯಲ್ಲಿಯೂ ನಿಮ್ಮ ಯೋಗಕ್ಷೇಮವನ್ನು ವಹಿಸಿಕೊಳ್ಳುವನು. ಸಾಧನೆಯಲ್ಲಿ ಮತ್ಯಾವ ವಿಧವಾದ ಪ್ರಯತ್ನವನ್ನೂ ನೀವು ಮಾಡುವ ಅವಶ್ಯಕತೆಯಿಲ್ಲವು. ನಿಮಗಾಗಿ ದೇವರು ಎಲ್ಲವನ್ನೂ ನಡೆಸುವನು.

ನಿರಪೇಕ್ಷಿತವಾದ ಶರಣಾಗತಿಯು ನಿಮ್ಮೆಲ್ಲ ಕಾರ್ಯಗಳಲ್ಲಿಯೂ ಭಗವಂತನ ಕೃಪೆಯಿಂದ ಸುಲಲಿತವಾಗಿ ನಡೆಯುವುದು. ಆದರೆ ಅದು ಅನುಭವಕ್ಕೆ ಬಂದಾಗ ಅಹಂಕಾರವು ಪ್ರಧಾನವಾಗುವುದು. ಸ್ವಾರ್ಥತೆಯು ತಲೆಹಾಕುವುದು. ಇದನ್ನು ಜಯಿಸಲು ಯತ್ನಿಸಿರಿ.

ಪೂರ್ಣ ಶರಣಾಗತಿಗೆ ಇಲ್ಲಿ ಕೆಲವು ಸೂತ್ರರೂಪವಾದ ಮಂತ್ರಗಳಿವೆ. ದಿನವೂ ಅವುಗಳನ್ನು ಮನಸ್ಸಿನಲ್ಲಿ ಭಾವಶುದ್ಧಿಯಿಂದ ಉಚ್ಚರಿಸಿ : " ಹೇಪ್ರಭು ನಾನು ನಿನ್ನವನು. ಎಲ್ಲವೂ ನಿನ್ನದು. ನಿನ್ನ ಇಚ್ಛೆಯಿದ್ದಂತಾಗಲಿ. ಸರ್ವವೂ ನೀನೇ ಆಗಿರುವೆ. ಎಲ್ಲವನ್ನೂ ನಡೆಸುತ್ತಿರುವವನು ನೀನೆ." ಈ ಅಭ್ಯಾಸವು ಅಹಂ, ಮಮ ಮುಂತಾದ ಭಾವಗಳನ್ನು ಕಳೆಯುವುದು.

ಭಕ್ತನು ಹೇಳುವನು, " ಸ್ವಾಮಿ ನಾನು ನಿನ್ನವನು. ನೀನೇ ಸಕಲವು. ನೀನು ಸರ್ವಕರ್ತನು. ನೀನು ನ್ಯಾಯಮೂರ್ತಿಯು. ನಾನು ನಿನ್ನ ಕೈಯಲ್ಲಿರುವ ಒಂದು ಸಾಧನವು. ನಾನು ಅಲ್ಪನು. ನಾನು ಏನನ್ನೂ ಮಾಡಲಾರೆ. ನನ್ನಲ್ಲಿ ಏನೂ ಇಲ್ಲವು." ಹೀಗೆ ಅಹಂಕಾರವನ್ನು ನಾಶ ಪಡಿಸುತ್ತಾ ಭಗವಂತನಲ್ಲಿ ಆತ್ಮಸಮರ್ಪಣೆ ಮಾಡಿಕೊಳ್ಳುತ್ತಿರುವನು.

ದಶೇಂದ್ರಿಯಗಳು, ಮನಸ್ಸು, ಬುದ್ಧಿ ಮತ್ತು ಪ್ರಾಣಗಳು ಸ್ವತಂತ್ರ ಸತ್ತೆಯನ್ನು (ಇರುವಿಕೆಯನ್ನು) ಹೊಂದಿಲ್ಲವು. ಅವು ತಮ್ಮದೇ ಆದ ಶಕ್ತಿಯನ್ನು ಹೊಂದಿಲ್ಲವು. ಅವು ಭಗವಂತನಿಂದಲೇ ಶಕ್ತಿ, ಬಲ ಮತ್ತು ಬೆಳಕನ್ನು ಪಡೆ ಯುವುವು. ಆದ್ದರಿಂದ ಸ್ವಾರ್ಥ ಅಹಂಕಾರಗಳನ್ನು ತ್ಯಜಿಸಿ."ಈ ಮಹತ್ಕಾರ್ಯ ವನ್ನು ನಾನು ಮಾಡಿದೆನು. ನಾನು ಮಹಾ ಮೇಧಾವಿಯು. ನನ್ನ ಬುದ್ಧಿಯು ಬಲಯುತವಾದುದು" ಎಂದು ಆಲೋಚಿಸದಿರಿ. ಎಲ್ಲವನ್ನೂ ನಡೆಸುವವನು

ದೇವರೇ. ಇವೆಲ್ಲವೂ ಆತನ ಉಪಕರಣಗಳು. ಈ ಅಂಶಗಳನ್ನು ನೀವು ಗಮನದಲ್ಲಿಟ್ಟರೆ ಕರ್ಮಬಂಧನಗಳನ್ನು ಕಳಚಿ ಸ್ವಾರ್ಥದಿಂದ ಮುಕ್ತರಾಗುವಿರಿ. ಸಂಪೂರ್ಣ ಶರಣಾಗತರಾಗಲು ಸಾಧ್ಯವು. "ನಾನು ಸತ್ಕಾರ್ಯಗಳನ್ನು ಮಾಡಿದೆನು" ಎಂಬುದರಿಂದ ದುರಭಿಮಾನವು ಬೆಳೆಯುವುದು. "ನಾನು ಬ್ರಾಹ್ಮಣ, ಗೃಹಸ್ಥ, ನಾನು ಸನ್ಯಾಸಿ, ಪರಿಶುದ್ಧನು" ಎಂಬುದರಿಂದ ವರ್ಣಾಶ್ರಮ ಭಾವನೆಯು ಬರುವುದು. ದೇಹಬಲ, ಐಶ್ವರ್ಯ, ಮೇಧಾಶಕ್ತಿ, ಸೌಂದರ್ಯ, ಗುಣನೀತಿಗಳು ಮುಂತಾದವುಗಳಿಂದ ದಂಭವು ಬೆಳೆಯುವುದು ಆಧ್ಯಾತ್ಮ ಸಾಧನೆಯ ಮೂಲಕ ಆತ್ಮಸಮರ್ಪಣೆ ಮಾಡಿಕೊಂಡು, ಭಗವತ್ಕೃಪೆಯಿಂದ ಅಹಂಕಾರವನ್ನು ಅಳಿಸಿರಿ.

---

# 7

# ಜಪಯೋಗ

## ೧. ಜಪವು ಸುಲಭ ಸಾಧನವು

ನಾಮ ಮತ್ತು ನಾಮಿಯನ್ನು ಪ್ರತ್ಯೇಕಿಸಲಾಗುವುದಿಲ್ಲವು. ದೇವರ ನಾಮವನ್ನು ಜ್ಞಾಪಕದಲ್ಲಿಡಿ. ಅವನ ನಾಮವನ್ನು ಉಚ್ಚರಿಸಿರಿ. ಭಗವನ್ನಾಮಕ್ಕೆ ಯಶಸ್ಸು ದೊರೆಯಲಿ. ನಾಮಕ್ಕೆ ಜಯ ದೊರೆಯಲಿ. ಅದು ನಮಗೆ ನಿತ್ಯಶಾಂತಿಯನ್ನು, ದಿವ್ಯಾನಂದವನ್ನು ಮತ್ತು ಅಮೃತತ್ವವನ್ನು ಕರುಣಿಸುವುದು.

ನಶ್ವರವಾದ ಸಂಸಾರಸಾಗರವನ್ನು ದಾಟಲು ಸುಲಭವಾದ ಸಾಧನೆ ಎಂದರೆ, ಭಗವಂತನ ನಾಮಗಳ ಸಂತತ ಚಿಂತನೆಯು. ಇದು ಗೃಹಸ್ಥರಿಗೆ ಬಹಳ ಅನುಕೂಲವಾದುದು.

ಧ್ಯಾನವು ಜಪಕ್ಕಿಂತಲೂ ಪ್ರತ್ಯೇಕವಾದುದು. ಜಪವೆಂದರೆ ಯಾವುದಾದರೊಂದು ಮಂತ್ರದ ಪುನಶ್ಚರಣೆಯು. ನಿಮ್ಮ ಮನಸ್ಸು ನಿಮ್ಮ ಇಷ್ಟ ದೈವದ ದಿವ್ಯರೂಪಿನಲ್ಲಿ ನಿಂತು, ಅವನ ದಿವ್ಯಗುಣಗಳಾದ, ಸರ್ವಶಕ್ತಿವಂತ, ಸರ್ವಜ್ಞ ಮುಂತಾದ ಭಾವನೆಗಳಲ್ಲಿ ಸಂಚರಿಸುವುದನ್ನು ಧ್ಯಾನವೆಂದು ಕರೆಯುವರು.

ಮಂತ್ರಯೋಗದಲ್ಲಿ ಸಿದ್ಧಿಯನ್ನು ಪಡೆಯಬೇಕೆಂಬ ಅಭೀಷ್ಟವಿದ್ದರೆ ನೀವು ಭಕ್ತಿಯನ್ನು ಅವಶ್ಯಕವಾಗಿ ಅಭ್ಯಾಸಮಾಡಬೇಕು. ಮಂತ್ರಯೋಗ ಮತ್ತು ಭಕ್ತಿಯೋಗವು ಪರಸ್ಪರ ಅಂತಃಸಂಯೋಜಕವು (inter blended). ಅವುಗಳನ್ನು ಬೇರ್ಪಡಿಸಲಾಗುವುದಿಲ್ಲವು.

ಭಗವನ್ನಾಮೋಚ್ಚಾರಣೆಯನ್ನು ಮಾಡದವನ ಬಾಳು ವ್ಯರ್ಥ ವಾದುದು. ಭಗವನ್ನಾಮವನ್ನು ನುಡಿಯದೇ ಬದುಕುವುದಕ್ಕಿಂತ ಸಾಯು ವುದೇ ಮೇಲು.

**ಯಾವುದೇ ಮಂತ್ರಜಪವನ್ನು ಮಾಡಿದರೂ ನೀವು ತಪ್ಪದೆ ಸದಾಚಾರ ನಿರತರಾಗಬೇಕು. ಸದ್ಗುಣಿಗಳಾಗಬೇಕು.** ಆಗ ಮಂತ್ರದ ಮಹತ್ತರ ಪ್ರಯೋಜನವು ಅರಿವಾಗುವುದು.

ಆಸನ ಮತ್ತು ಪ್ರಾಣಾಯಾಮಕ್ಕಿಂತಲೂ ಜಪ ಮತ್ತು ಧ್ಯಾನವು ಬಹುಮುಖ್ಯವು.

ಶಾಸ್ತ್ರೋಪದೇಶಗಳಲ್ಲಿ ಸಂಶಯಮಾಡದಿರಿ. ಚಂಚಲ ನಂಬಿಕೆಯು (flickering faith) ಅಧಃಪತನವನ್ನುಂಟುಮಾಡುವದು. ಜಪದಲ್ಲಿ ನಂಬಿಕೆಯಿಲ್ಲದ ದುರ್ಬಲ ಚಿತ್ತನು, ಅಧ್ಯಾತ್ಮದ ಹಾದಿಯಲ್ಲಿ ಮುಂದುವರೆಯ ಲಾರನು.

"ನಾನು ಅಭ್ಯಾಸ ಮಾಡುತ್ತಿದ್ದೇನೆ. ನಾನು ಯಾರು? ಎಂದು ವಿಚಾರಮಾಡುತ್ತೇನೆ" ಎಂದು ಹೇಳುವುದೆಲ್ಲವೂ ಕೇವಲ ದುಷ್ಟಭಾವನೆಗಳು. ಎಲ್ಲೋ ಕೆಲವರು ಮಾತ್ರ "ನಾನು ಯಾರು" ಎಂದು ವಿಚಾರಮಾಡಲು ಅರ್ಹರು.

ನಿಮ್ಮ ಅಚ್ಚುಮೆಚ್ಚಿನ ದೇವತೆಯ ಯಾವ ಮಂತ್ರವನ್ನಾದರೂ ಉಚ್ಚರಿಸುತ್ತಾ ಮನಸ್ಸು ಮತ್ತು ದೇಹದ ಮೇಲೆ ಅದರ ಪ್ರಭಾವವನ್ನೂ ಮತ್ತು ಅಂತರ್ಯದಲ್ಲುಂಟಾಗುವ ದಿವ್ಯದರ್ಶನವನ್ನೂ ಗಮನಿಸಿ. ಇದು ಕೇವಲ ಗ್ರಂಥಪಠಣೆಗಿಂತ ಉತ್ತಮವಾದುದು. ಗ್ರಂಥಗಳು ತಿಳುವಳಿಕೆಯ ಬಗ್ಗೆ ಸಹಾಯವನ್ನೂ ಮತ್ತು ಮನಸ್ಸಿನ ಮೇಲೆ ಹೆಚ್ಚು ಬೆಳಕನ್ನು ಬೀರುವುದರಲ್ಲಿ ಸಂಶಯವಿಲ್ಲ. ಆದರೆ ನಿಶ್ಚಯವಾಗಿ ಬೇಕಾಗಿರುವುದು ನಿಜವಾದ ಸಾಧನವು. ಬ್ರಹ್ಮಚರ್ಯವ್ರತ, ಸತ್ಯವಾಕ್ಯ, ಅಹಿಂಸಾ, ಸದಾಚಾರ, ಸಾತ್ವಿಕ ಆಹಾರವು ಸಾಧನೆಯಲ್ಲಿರಬೇಕಾದ ಅಭ್ಯಾಸಗಳು.

ಮಂತ್ರೋಚ್ಚಾರಣೆಯಲ್ಲಿ ಸ್ವರತರಂಗಗಳಿವೆ (rhythm). ಛಂದಸ್ಸು ಒಂದು ಗೊತ್ತಾದ ಪ್ರಮಾಣದಲ್ಲಿರುವುದು. ಛಂದಸ್ಸು ಪ್ರವಹಿಸುವ ಚಲನ ಶಕ್ತಿಯು. ಅದು ಉಚ್ಚಾರಣೆಯು, ಗೊತ್ತಾದ ಪ್ರಮಾಣದ ಒಂದು

ಸಂಯೋಜನೆಯು. ಉದಾತ್ತ ಅನುದಾತ್ತಗಳ ಕ್ರಮಬದ್ಧವು. ಅಭ್ಯಾಸಿಗರಲ್ಲಿ ಈ ತರಂಗದ ಗುರಿಯು ಘಾಟಿಯು ಸಮಶೋಲನವನ್ನುಂಟುಮಾಡುವುದು. ಮಂತ್ರೋಚ್ಚಾರಣೆಯು ಕ್ರಮಬದ್ಧತೆಯಿಂದ ಮನಸ್ಸನ್ನು ಹಿಡಿದು ನಿಲ್ಲಿಸು ವುದಲ್ಲದೆ ಪ್ರಶಾಂತಗೊಳಿಸುವುದು.

ನಿಮಗೆ ಬಹಳ ಬಳಲಿಕೆಯು ತೋರಿದಾಗ ಆಸನಮಾಡುವುದನ್ನು ಸ್ವಲ್ಪ ಹೊತ್ತು ನಿಲ್ಲಿಸಿರಿ. ಆದರೆ ಜಪವನ್ನು ನಿರಂತರವಾಗಿ ನಡೆಸಲೇಬೇಕು. ಅದು ದೇಹ ಮತ್ತು ಮನಸ್ಸನ್ನು ಉದ್ದೀಪನಗೊಳಿಸುವ ಶಕ್ತಿವರ್ಧಕ ಮಾತ್ರವಲ್ಲವೆ ಶುದ್ಧಿಕಾರಕವೂ ಮತ್ತು ಮೋಕ್ಷದಾಯಕವೂ ಆಗಿರುವುದು. ಕರ್ಮಗಳನ್ನು ಹೊರದೂಡಬೇಕು. ಉತ್ಸುಕನಾದ ಸಾಧಕನು ಭಗವಂತನೊಡನೆ ಒಂದಾಗಲು ದುಡುಕುವುದರಿಂದ ವಿವಿಧ ಖಾಯಿಲೆಗಳಿಗೆ ಗುರಿಯಾಗುವನು. ಹಲವು ದುಷ್ಟ ಕರ್ಮಗಳನ್ನೂ ಮುಗಿಸಬೇಕಾಗಿರುವುದು. ಸಾಧಕರು ನಿರ್ಭಯರಾಗಿ ಮುಂದುವರೆಯಬೇಕು. ರೋಗವು ಭಗವಂತನ ಪ್ರತಿನಿಧಿಯು. ಅದು ದೇಹವೆಂಬ ಮನೆಗೆ ಬಂದಿರುವ ಅತಿಥಿಯು. ಸಾಧಕನ ಶ್ರದ್ಧೆಯನ್ನು ಪ್ರಾಯೋಗಿಕವಾಗಿ ಪರೀಕ್ಷಿಸಲು ಬಂದಿರುವುದು ಖಾಯಿಲೆಯು. ಸತ್ಯಾನ್ವೇಷಿ ಗಳೂ ವಿಚಲಿತರಾಗದೆ, ಹಿಂದೆ ಸರಿಯದೆ ಸದಾ ಶ್ರದ್ಧಾವಂತರಾಗಿ ಜೀವನದ ಎಲ್ಲಾ ಸ್ಥಿತಿಯಲ್ಲಿಯೂ ಮುಂದುವರೆಯಬೇಕು. ಅವರನ್ನು ಧೈರ್ಯಗುಂದಿಸ ಬಾರದು. ರಾಮಾಯಣವನ್ನು ತಪ್ಪದೆ ಓದುವುದರಿಂದ, ಜಪ ಮತ್ತು ಧ್ಯಾನ ದಿಂದ ಮತ್ತು ಬೆಳಿಗ್ಗೆ ಮತ್ತು ಸಂಜೆಯ ಗಾಳಿಸಂಚಾರದಿಂದ ಅವುಗಳನ್ನು ಸರಿಪಡಿಸಬೇಕು.

ಕಮಾಲನು ತಂದೆ ಕಬೀರನಿಂದ ಅನೇಕ ಬೈಗಳನ್ನು ಕೇಳಬೇಕಾಯಿತು. ಕಾರಣ, ಒಬ್ಬ ವ್ಯಾಪಾರಿಯ ಕುಷ್ಠರೋಗ ನಿವಾರಣೆಗೆ ರಾಮನಾಮವನ್ನು ಎರಡು ಬಾರಿ ಉಚ್ಚರಿಸಿದನು. ವ್ಯಾಪಾರಿಯು ಎರಡು ಬಾರಿ ರಾಮನಾಮ ವನ್ನು ಉಚ್ಚರಿಸುವಂತೆ ಕಮಾಲನು ಹೇಳಿದನು. ಆದರೂ ರೋಗವು ವಾಸಿಯಾಗಲಿಲ್ಲ. ನಡೆದ ಘಟನೆಯನ್ನು ಕಮಾಲನು ತಂದೆಗೆ ತಿಳಿಸಿದನು. ಕಬೀರನಿಗೆ ನೋವಾಗಿ ಕಮಾಲನಿಗೆ ಹೇಳಿದನು, “ನಮ್ಮ ವಂಶಕ್ಕೆ ಕಳಂಕ ವನ್ನುಂಟುಮಾಡಿದೆ. ರಾಮನಾಮವನ್ನು ಎರಡು ಸಲ ವ್ಯಾಪಾರಿಯು ಉಚ್ಚರಿಸು ವಂತೆ ಮಾಡಿದೆ. ಕೇವಲ ಒಂದೇ ಉಚ್ಚಾರಣೆಯು ಸಾಕಾಗಿದ್ದಿತು. ಹೋಗು.

ಆ ವ್ಯಾಪಾರಿಯು ಗಂಗೆಯಲ್ಲಿ ನಿಂತು ಹೃದಯಾಂತರಾಳದಿಂದ ಒಂದೇ ಬಾರಿ ರಾಮನಾಮವನ್ನು ಉಚ್ಚರಿಸುವಂತೆ ಹೇಳು." ಕಮಾಲನು ತಂದೆಯು ನುಡಿದಂತೆಯೇ ನುಡಿದನು. ವ್ಯಾಪಾರಿಯು ಭಾವಯುಕ್ತನಾಗಿ ಹೃದಯಾಂತರಾಳದಿಂದ ರಾಮನಾಮವನ್ನು ಉಚ್ಚರಿಸಿದನು. ಅವನ ಕುಷ್ಠರೋಗವು ಪೂರ್ಣವಾಗಿ ಗುಣವಾಯಿತು. ನಂತರ ಕಬೀರನು ಕಮಾಲನನ್ನು ತುಳಸೀದಾಸನ ಬಳಿಗೆ ಕಳುಹಿಸಿದನು. ತುಳಸೀದಾಸನು ರಾಮನಾಮವನ್ನು ಒಂದು ತುಳಸೀ ಎಲೆಯ ಮೇಲೆ ಬರೆದು ಅದರ ರಸವನ್ನು ಐದು ನೂರು ಕುಷ್ಠರೋಗಿಗಳ ಮೇಲೆ ಚುಮುಕಿಸಿದನು. ಎಲ್ಲರಿಗೂ ಗುಣವಾಯಿತು. ಕಮಾಲನಿಗೆ ಅತ್ಯಾಶ್ಚರ್ಯವಾಯಿತು. ನಂತರ ಕಬೀರನು ಕಮಾಲನನ್ನು ನದಿಯಲ್ಲಿ ತೇಲುತ್ತಿದ್ದ ಒಂದು ಶವದ ಬಳಿಗೆ ಕರೆತಂದನು. ಅಲ್ಲಿ ಸೂರದಾಸನು ಶವದ ಒಂದು ಕಿವಿಯಲ್ಲಿ ರಾಮನಾಮವನ್ನು ಉಚ್ಚರಿಸಿದನು. ಆ ಶವಕ್ಕೆ ಮತ್ತೆ ಜೀವ ಬಂದಿತು. ಕಮಾಲನ ಹೃದಯವು ಪರಮಾಶ್ಚರ್ಯದಿಂದ ತುಂಬಿತು. ಭಗವನ್ನಾಮದ ಶಕ್ತಿಯು ಅಷ್ಟು ಅದ್ಭುತವಾದುದು. ನನ್ನ ಪ್ರಿಯ ಸ್ನೇಹಿತರೇ, ಕಾಲೇಜಿನ ವಿದ್ಯಾವಂತ ಯುವಕರೇ, ನನ್ನ ಪ್ರೀತಿಯ ವಕೀಲರೇ, ಪ್ರಾಧ್ಯಾಪಕರೇ, ವೈದ್ಯರೇ ಮತ್ತು ನ್ಯಾಯಮೂರ್ತಿಗಳೇ ಭಗವನ್ನಾಮವನ್ನು ಪ್ರೇಮಭಾವದಿಂದ ಹೃದಯದ ಅಂತರಾಳದಿಂದ ಉಚ್ಚರಿಸಿ. ದಿವ್ಯಾನಂದವನ್ನೂ, ಅಮೃತತ್ವವನ್ನೂ ಈಗಲೇ ಪಡೆಯಿರಿ.

---

## ೨. ಜಪದ ಮಂತ್ರಗಳು

ಈ ಕಲಿಯುಗದಲ್ಲಿ ಸಂಸಾರ ಸಾಗರವನ್ನು ದಾಟಲು ಭಗವನ್ನಾಮವು ಏಕಮಾತ್ರ ಸಾಧನವು. ಆ ನಾಮದಲ್ಲಿ ಅಚಿಂತ್ಯವಾದ ಶಕ್ತಿ ಇರುವುದು. ಈ ಶಕ್ತಿಯೇ ಮನುಷ್ಯನನ್ನು ಭಗವಂತನ ಬಳಿಗೆ ಕೊಂಡೊಯ್ಯುವುದು. ಹಲವು ವಿಧವಾದ ತಪಶ್ಚರ್ಯಗಳಲ್ಲಿ ಕೃಷ್ಣನಾಮಸ್ಮರಣೆಯು ಚಿಂತಾಮಣಿಯಂತೆ ಉತ್ತಮವಾದುದು. (ವಿಷ್ಣುಪುರಾಣ. II ಅಧ್ಯಾಯ VI – ಶ್ಲೋ ೧೩೪–೧೩೫)

ಭಗವಾನ್ ಶ್ರೀಕೃಷ್ಣನ ರೂಪವನ್ನು ಧ್ಯಾನಿಸುವವರು "**ಓಂ ನಮೋ ಭಗವತೇ ವಾಸುದೇವಾಯ** ಎಂಬ" ಮಂತ್ರವನ್ನು ಮನಸ್ಸಿನಲ್ಲೇ ಜಪಿಸಬೇಕು. ಶ್ರೀಕೃಷ್ಣನ ಮತ್ತೊಂದು ಹೆಸರು ವಾಸುದೇವ ಎಂದರೆ ಸರ್ವವ್ಯಾಪಿಯಾದ ಜ್ಞಾನಶಕ್ತಿಯು.

ಭಗವಾನ್ ನಾರಾಯಣನಿಗೆ ನಮಸ್ಕರಿಸಿ ಮತ್ತು "ಜಯನಾರಾಯಣ" ಎಂದು ನುಡಿಯಿರಿ. "**ಓಂ ನಮೋ ನಾರಾಯಣಾಯ**" ಎಂದು ಮನಸ್ಸಿನಲ್ಲಿ ಜಪಿಸಿರಿ. ಈ ಪವಿತ್ರ ಮಂತ್ರವನ್ನು ಎಂಟು ಲಕ್ಷ ಸಲ ಜಪಿಸಿರಿ. ಇದು ಒಂದು ಪುನಶ್ಚರಣವಾಗುವುದು. ನಂತರ ಹೋಮವನ್ನು ಮಾಡಿ. ಬ್ರಾಹ್ಮಣರು ಮತ್ತು ಬಡವರಿಗೆ ಅನ್ನದಾನ ಮಾಡಿ. ನಿಮಗೆ ಪರಮಾಶ್ಚರ್ಯಕರವಾದ ಆಧ್ಯಾತ್ಮಿಕ ಅನುಭವಗಳುಂಟಾಗುವುವು.

ಓಂಕಾರದ ಜಪವು, "**ಅಹಂ ಬ್ರಹ್ಮಾಸ್ಮಿ**" ಮುಂತಾದ ಮಹಾವಾಕ್ಯಗಳ ಮನನವೂ, ವೈದಿಕ ಸಂಸ್ಕಾರಗಳನ್ನು ಬಲಪಡಿಸಿ, ಚಿತ್ತಶುದ್ಧಿಯನ್ನುಂಟುಮಾಡಿ ಆತ್ಮಜ್ಞಾನ ಲಾಭಕ್ಕೆ ಅವಕಾಶವನ್ನು ಮಾಡಿಕೊಡುವುದು.

ಪ್ರತಿಯೊಂದು ಮಂತ್ರವನ್ನೂ ಓಂಕಾರಪೂರ್ವಕವಾಗಿ ಉಚ್ಚರಿಸಬೇಕು. ಓಂಕಾರವು ಮಂತ್ರಕ್ಕೆ ಪೂರ್ಣ ಚೈತನ್ಯವನ್ನು ತುಂಬುವುದು.

ಎಲ್ಲ ಮಂತ್ರಗಳೂ ಸಮಾನವಾದ ಶಕ್ತಿಯನ್ನು ಹೊಂದಿವೆ. ಒಂದು ಮಂತ್ರವು ಇನ್ನೊಂದು ಮಂತ್ರಕ್ಕಿಂತ ಶ್ರೇಷ್ಠವೆಂದು ಹೇಳುವುದು ದೊಡ್ಡ ತಪ್ಪು. **ಯಾವ ಮಂತ್ರ ಜಪದಿಂದಲಾದರೂ ಆತ್ಮಜ್ಞಾನವು ತಪ್ಪದೆ ಆಗುವುದು.** ಕೆಲವರು 'ಓಂ' ಅಥವಾ 'ಸೋಹಂ' ಮಂತ್ರವು 'ಓಂ ನಮೊ ನಾರಾಯಣಾಯ' ಅಥವಾ 'ಓಂ ನಮ ಶಿವಾಯ' ಮಂತ್ರಕ್ಕಿಂತ ಶ್ರೇಷ್ಠವೆಂದು ಭಾವಿಸುವರು. ಇದೂ ತಪ್ಪುಭಾವನೆಯೇ. 'ಓಂ' ಅಥವಾ 'ಸೋಹಂ' ಮಂತ್ರದ ಜಪದಿಂದ ಪಡೆಯಬಹುದಾದ ಸ್ಥಿತಿಯನ್ನೇ 'ಶ್ರೀರಾಮ್' ಅಥವಾ 'ರಾಧೇಶ್ಯಾಮ್' ಮಂತ್ರ ಜಪದಿಂದಲೂ ಪಡೆಯಲು ಸಾಧ್ಯವು.

ರಾಕ್ಷಸ ಮನಸ್ಸನ್ನು ಸಂಹಾರಮಾಡಲು ರಾಮ ಅಥವಾ ಓಂಕಾರವು ಹರಿತವಾದ ಖಡ್ಗವು. ಈ ಮಹಾ ಸಂಸಾರಸಾಗರವನ್ನು ದಾಟಲು ಅದು ನಿಜವಾಗಿಯೂ ನಾವೆಯಾಗಿದೆ. ಈ ಜಗತ್ತನ್ನು ಗೆಲ್ಲಲು ಅತ್ಯುಗ್ರವಾದ

ಶಸ್ತ್ರವಾಗಿದೆ. ವಾಸನೆಗಳನ್ನೂ, ಸಂಸ್ಕಾರಗಳನ್ನೂ, ದೇಹಾಭಿಮಾನವನ್ನೂ ಮತ್ತು ಅಜ್ಞಾನವನ್ನೂ ಭಸ್ಮಮಾಡಲು ಅದು ಜ್ಞಾನಾಗ್ನಿಯಾಗಿರುವುದು. ಮಂತ್ರೋಚ್ಚಾರಣೆಯು ಆತ್ಮನನ್ನು ಜಾಗೃತಗೊಳಿಸುವುದು. ಛಿದ್ರವಿಚ್ಛಿದ್ರವಾದ ನರಮಂಡಲಗಳನ್ನು ಸರಿಪಡಿಸುವ ಆಶ್ಚರ್ಯಕರವಾದ ಅಂಜನವು–ರಾಮನಾಮವು. ನಿತ್ಯಾನಂದ ಸಾಮ್ರಾಜ್ಯದ ಪರಿಪೂರ್ಣವಾದ ದ್ವಾರವನ್ನು ತೆರೆದು ಉತ್ಕೃಷ್ಟವಾದ ಶಾಂತಿಯನ್ನು ಪ್ರಾಪ್ತಿಮಾಡಿಕೊಡುವ ಐಂದ್ರಜಾಲಿಕ ಸಂಕೇತಾಜ್ಞೆಯು (sesame). ಈ ಅದ್ಭುತವಾದ ಖಡ್ಗವನ್ನು ಹಿಡಿದು ಜಗತ್ತಿನ ಕರ್ಮ ಮತ್ತು ಮನಸ್ಸಿನ ಬಂಧನಗಳನ್ನು ಕತ್ತರಿಸಿ ಅಜ್ಞಾನವನ್ನು ತಳ್ಳಿಹಾಕಿ, ಸ್ವಭಾವಗಳನ್ನು ಪುಡಿಮಾಡಿ, ಅಪರಿಮಿತವಾದ ಆನಂದ ಮತ್ತು ನಿತ್ಯ ಸೂರ್ಯನ ಬೆಳಕಿನ ಸಾಮ್ರಾಜ್ಯವನ್ನು ಧೈರ್ಯದಿಂದ ಪ್ರವೇಶಿಸಿರಿ.

---

## ೩. ಅಜಪ ಜಪ

ಅಜಪ ಜಪವನ್ನು ಮಾಡಿ. ಹೃದಯದ ಅನಾಹತ-ನಾದದಲ್ಲಿ ಪ್ರಾಣವನ್ನು ಒಂದುಗೂಡಿಸಿ. ಎಲ್ಲ ವೃತ್ತಿಗಳೂ ನಾಶವಾಗುವುವು.

ನೀವು ಸದಾ ದುಡಿಯುವಿರಾದರೆ, ಪ್ರಯಾಣಮಾಡುವವರಾದರೆ ಧ್ಯಾನಕ್ಕಾಗಿ ಪ್ರತ್ಯೇಕವಾದ ಕೋಣೆಯನ್ನು, ವಿಶೇಷವಾದ ಕಾಲವನ್ನು ಮೀಸಲಾಗಿಡಬೇಡಿರಿ. ಸೋಽಹಂ ಜಪ ಮತ್ತು ಸೋಽಹಂ ಧ್ಯಾನವನ್ನು ಪ್ರಾಣದೊಡನೆ ಕೂಡಿಸಿ. ಇದು ಬಹಳ ಸುಲಭವು. ಅಥವಾ **"ರಾ —— ಮ"** ಮಂತ್ರಾಕ್ಷರಗಳನ್ನು ಪ್ರಾಣದೊಡನೆ ಒಂದುಮಾಡಿ. ಆಗ ಪ್ರತಿಕ್ಷಣದ ಉಸಿರೂ ಪ್ರಾರ್ಥನೆಯಾಗುವುದು ಮತ್ತು ಧ್ಯಾನವಾಗುವುದು. "ಸೋಽಹಂ" ಅನ್ನು ನೆನಪಿನಲ್ಲಿಡಿ. ಭಗವತ್ಸಾನ್ನಿಧ್ಯವನ್ನು ಎಲ್ಲೆಲ್ಲಿಯೂ ಭಾವಿಸುವುದು ಸುಲಭವು.

---

# ೪. ಲಿಖಿತ ಜಪ

ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸುವುದಕ್ಕೆ ಲಿಖಿತ ಜಪವು ಒಂದು ಮೊನೆಗೋಲಾಗಿರುವುದು (sharp-goad). ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸಿ. ಮಂತ್ರವನ್ನು ಬರೆಯುವಾಗ ಭಗವಂತನ ಗುಣಗಳನ್ನು ನೆನೆಯುತ್ತಿರಿ. ಸನ್ನಿವೇಶಗಳನ್ನು ಮರೆತುಬಿಡಿ. ಎಲ್ಲವನ್ನೂ ಮರೆಯಿರಿ. ನಿಮ್ಮ ಇಷ್ಟದೇವತೆಯೊಡನೆ ಮಾತ್ರ ಉಳಿಯಿರಿ. ಪ್ರತಿದಿನ ಮೌನವಾಗಿ ಅರ್ಧ ಘಂಟೆಯ ಹೊತ್ತು ಭಗವಂತನ ಮಂತ್ರವನ್ನು ಶಾಯಿಯಲ್ಲಿ ಬರೆಯಿರಿ. ಯಾವ ಭಾಷೆಯಲ್ಲಾದರೂ ಬರೆಯಬಹುದು. ಆದರೆ ನಿಮ್ಮ ಇಷ್ಟ ದೇವತೆಯ ಮಂತ್ರ ಅಥವಾ ಗುರುಮಂತ್ರವನ್ನು ಮಾತ್ರ ಬರೆಯಿರಿ.

ಭಾನುವಾರಗಳಲ್ಲಿ ಮನೆಮಂದಿಯವರೆಲ್ಲಾ ಒಟ್ಟಾಗಿ ಕುಳಿತು ಸಂಜೆ ಒಂದು ಘಂಟೆಯ ಕಾಲ ನಿಮ್ಮ ನಿಮ್ಮ ಪುಸ್ತಕಗಳಲ್ಲಿ ಹರಿ ಓಂ, ಸೀತಾರಾಮ್, ಶ್ರೀರಾಮ ಜಯರಾಮ, ಓಂನಮಃಶ್ಶಿವಾಯ ಅಥವಾ ಓಂನಮೋ ನಾರಾಯಣಾಯ ಎಂಬ ಯಾವುದಾದರೊಂದು ಮಂತ್ರವನ್ನು ಮೌನವಾಗಿ ಬರೆಯಿರಿ. ಅದ್ಭುತವಾದ ಶಾಂತಿಯನ್ನೂ, ಶಕ್ತಿಯನ್ನೂ ನೀವು ಕಾಣಬಹುದು. ಇದನ್ನು ಒಂದು ದಿನವೆಲ್ಲಾ ಅಭ್ಯಾಸ ಮಾಡಬಹುದು. ಇದು ನಿಮ್ಮ ಕುಟುಂಬದ ಹಿತರಕ್ಷಣೆಗಾಗಿ ಹೇಳಿದುದು. ಒಂದು ದೇವಾಲಯ ಅಥವಾ ಸಾರ್ವಜನಿಕ ಸ್ಥಳದಲ್ಲಿ ನಿಮ್ಮ ಮಿತ್ರರೊಡನೆ ಒಟ್ಟಾಗಿ ಸೇರಿ ಅಧ್ಯಾತ್ಮ ಶಕ್ತಿ ಸಂಚಯ ಮಾಡಬಹುದು. ಆದರೆ ಮಂತ್ರವನ್ನು ಬರೆಯುವಾಗ ಆಂತರಿಕ ಭಾವನೆಯನ್ನು ಉಳಿಸಿಕೊಳ್ಳಿ. ಅತ್ತ, ಇತ್ತ ನೋಡಬಾರದು. ಜಪಕ್ಕಿಂತಲೂ ಇದರಲ್ಲಿ ಹೆಚ್ಚಿನ ಏಕಾಗ್ರತೆಯು ದೊರೆಯುವುದು. ಬಿಹಾರ, ಉತ್ತರ ಪ್ರದೇಶ, ಪಂಜಾಬು ಮೊದಲಾದ ಅನೇಕ ಪ್ರಾಂತ್ಯಗಳಲ್ಲಿ ಈ ಅಭ್ಯಾಸದ ಪರಿಚಯವನ್ನು ಮಾಡಿಕೊಟ್ಟಿದ್ದೇನೆ. ಸಹಸ್ರಾರು ಜನರು ಇದರ ಪೂರ್ಣಫಲವನ್ನು ಪಡೆದಿದ್ದಾರೆ. ಒಂದು ಕಾಲದಲ್ಲಿ ನಾಸ್ತಿಕರಾಗಿದ್ದ ವಿದ್ಯಾವಂತರೂ ಲಿಖಿತ ಜಪವನ್ನು ಅಭ್ಯಾಸಮಾಡುತ್ತಿದ್ದಾರೆ. ಈ ಅಭ್ಯಾಸವನ್ನು ನೀವೂ ಕೈಗೊಂಡರೆ ನಿಜವಾಗಿ ಇದರ ಅದ್ಭುತ ಫಲಗಳನ್ನು ಮನಗಾಣುವಿರಿ.

---

# ೫. ಜಪದ ಪ್ರಯೋಜನಗಳು

ಜಪವು ಮನಸ್ಸಿಗೆ ಒಂದು ಅದ್ಭುತವಾದ ದಿವ್ಯಸಬಕಾರವು (soap). ಜಪವು ನವಚೈತನ್ಯವನ್ನೂ, ಆಧ್ಯಾತ್ಮಿಕ ಸ್ನಾನದ ಲವಲವಿಕೆಯನ್ನೂ ಕೊಡುವುದು. ಅದು ಸ್ಥೂಲ ಹಾಗು ಸೂಕ್ಷ್ಮ ಶರೀರಗಳನ್ನು ವಿಚಿತ್ರರೀತಿಯಲ್ಲಿ ಶುದ್ಧಿಮಾಡುವುದು. ಹಲವು ವಿಧವಾದ ಮಲಗಳನ್ನು ತೊಳೆದು ತಳ್ಳುವುದು. ಹೃದಯವನ್ನೂ ಜಪವು ಶುದ್ಧಿಗೊಳಿಸುವುದು. ಮನಸ್ಸನ್ನೂ ಸ್ಥಿರಪಡಿಸುವುದು. ಅದು ಷಡ್ರಿಪುಗಳನ್ನು ನಾಶಮಾಡುವುದಲ್ಲದೆ ಜನನ ಮರಣಗಳನ್ನು ಕೊನೆಗಾಣಿಸುವುದು. ಜಪವು ಪಾಪಗಳನ್ನು ದಹಿಸುವುದು. ಸಂಸ್ಕಾರಗಳು ಜಪದಿಂದ ಸೀದುಹೋಗುವುವು (scorches). ಜಪವು ಸಂಗದೋಷವನ್ನು ಕಳೆದು ವೈರಾಗ್ಯವನ್ನುಂಟುಮಾಡುವುದು. ಎಲ್ಲ ಕಾಮನೆಗಳನ್ನೂ ಸಮೂಲ ಕಿತ್ತುಹಾಕಿ ಭಯರಹಿತನನ್ನಾಗಿ ಮಾಡುವುದು. ಭ್ರಮೆಯನ್ನು ತೆಗೆದುಹಾಕಿ ಶ್ರೇಷ್ಠವಾದ ಶಾಂತಿಯನ್ನು ನೀಡುವುದು. ಪ್ರೇಮವನ್ನು ಬೆಳೆಸಿ ಭಕ್ತನನ್ನು ಭಗವಂತನೊಡನೆ ಕೂಡಿಸುವುದು. ಜಪವು ಆರೋಗ್ಯ, ಐಶ್ವರ್ಯ, ಬಲ ಮತ್ತು ದೀರ್ಘಾಯುಸ್ಸನ್ನು ದೊರಕಿಸುವುದು. ಜಪವು ಆತ್ಮಜ್ಞಾನವನ್ನುಂಟುಮಾಡುವುದು. ಕುಂಡಲಿನಿಯನ್ನು ಜಾಗೃತಗೊಳಿಸಿ ನಿತ್ಯಾನಂದವನ್ನು ದಯಪಾಲಿಸುವುದು.

ಸಂತೋಷ, ಶಾಂತಿ, ಸ್ಥಿತಪ್ರಜ್ಞೆ, ಆಂತರಿಕ ಅಧ್ಯಾತ್ಮ ಬಲ, ನಿರ್ಭಯತೆ, ಮನಸ್ಸಿನ ಚಾಂಚಲ್ಯವು ತೊಲಗುವಿಕೆ, ಮುಂತಾದವು ಅಧ್ಯಾತ್ಮ ಸಾಧನೆಯ ಪ್ರಗತಿಯ ಕೆಲವು ಸೂಚನೆಗಳು. ಇವು ಮಂತ್ರ ಜಪದ ಅಭ್ಯಾಸದಿಂದ ದೊರೆತ ಫಲಗಳು.

ಅಲೋಪತಿ, ಹೋಮಿಯೋಪತಿ, ಕ್ರೋಮೋಪತಿ, ನ್ಯಾಚುರೋಪತಿ, ಆಯುರ್ವೇದ ಮತ್ತಿತರ ಪತಿಗಳು ರೋಗವನ್ನು ಕಳೆಯಲು ಅಸಮರ್ಥವಾದಾಗ ದಿವ್ಯನಾಮಾಪತಿಯೊಂದೇ ನಿಮ್ಮನು ರಕ್ಷಿಸಬಲ್ಲುದು. ಭಗವನ್ನಾಮವು ಶ್ರೇಷ್ಠತಮವಾದ ರಕ್ಷಾಕವಚವು, ಊಹಿಸಲಾಗದ ಸರ್ವರೋಗನಿವಾರಿಣಿಯು, ಮದ್ದು ಅಥವಾ ಚ್ಯವನಪ್ರಾಶವು ಅಥವಾ ವಿಶ್ವೌಷಧವು. ಅದೊಂದು ಆದರ್ಶ, ಶ್ರೇಷ್ಠತಮ, ಸಮಯ ಸಹಾಯಕ

ಶಕ್ತಿಯಾಗಿ ನೋವು, ನಿರಾಶೆ, ದುಃಖ ಮೊದಲಾದ ಬದುಕಿನ ಹೋರಾಟ ಗಳನ್ನು ಕೊನೆಗಾಣಿಸುವ ದಿವ್ಯವಟೂಲಿಕೆಯು.

ಆಧ್ಯಾತ್ಮ ವೃಕ್ಷದ ಮೂಲಬೀಜವೆಂದರೆ ಭಗವನ್ನಾಮವು. ಮನಸ್ಸಿನ ಕಲ್ಮಷಗಳನ್ನು ಅದು ಕಳೆಯುವುದು. ಅಮೂಲ್ಯವಾದ ಶಾಂತಿ, ಅನಂತವಾದ ಆನಂದ ಮತ್ತು ಪರಿಪೂರ್ಣವಾದ ಜ್ಞಾನವನ್ನು ದಯಪಾಲಿಸುವುದು. ನಾಮೋಚ್ಚಾರಕರ ಹೃದಯದಲ್ಲಿ ದಿವ್ಯಪ್ರೇಮವನ್ನು ಜಾಗೃತಗೊಳಿಸುವುದು. ಎಲ್ಲ ಸಂತೋಷಗಳ ಉಗಮಸ್ಥಾನವು ಜಪವು. ಆ ನಾಮವು ಅಮೃತ ದಾಯಕವು. ಅದು ನಿಮ್ಮೆಲ್ಲಾ ಭಯಗಳನ್ನು ಕಳೆದು ಶಾಂತಿ, ಸಮಾಧಾನ ಗಳನ್ನು, ಪರಮಾನಂದವನ್ನು ಉಂಟುಮಾಡುವುದು.

ಮಧುರವಾದ ವಸ್ತುಗಳಿಗಿಂತಲೂ ಮಧುರವಾದುದು ಶ್ರೀರಾಮ ನಾಮವು. ಅದು ಶಾಂತಿಯ ವಿಶ್ರಾಂತಿಯ ಸ್ಥಳವು. ಶುದ್ಧ ಹೃದಯಿಗಳ ಪ್ರಾಣವು. ಶುದ್ಧಿಗೊಳಿಸುವ ಸಾಧನಗಳಲ್ಲಿ ಪರಮಶುದ್ಧಿಕರವು. ಜಗತ್ತಿನ ಕಾಮನೆಗಳನ್ನು ಹೀರಿ ತೃಪ್ತಿಯನ್ನುಂಟುಮಾಡುವುದು. ದೇವಭಾವವನ್ನು ನಮ್ಮ ಹೃದಯದಲ್ಲಿ ಜಾಗೃತಗೊಳಿಸುವುದು. ದಿವ್ಯಾನಂದದ ಸಾಗರದಲ್ಲಿ ಸಾಧಕನಿಗೆ ಸ್ನಾನಮಾಡಿಸುವುದು. ಶ್ರೀರಾಮನಿಗೆ ಜಯವಾಗಲಿ ಮತ್ತು ಅವನ ನಾಮಕ್ಕೆ ಜಯವಾಗಲಿ.

ಭಗವಂತನನ್ನು ಕೇವಲ ಒಂದೇ ಕ್ಷಣ ಸ್ಮರಿಸಿದರೂ ಕೂಡಲೇ ಅವರ ಅತ್ಯಂತ ಹೇಯವಾದ ಪಾಪಕರ್ಮಗಳೂ ನಾಶವಾಗುವುವು.

(ವಿ. ಪು. VI, ೮–೧೦)

ನಾಮದಲ್ಲಿ ಅದ್ಭುತವಾದ ಶಕ್ತಿ ಇರುವುದು. ಎಲ್ಲ ವಿಧವಾದ ದಿವ್ಯ ಶಕ್ತಿಗಳೂ ಭಗವನ್ನಾಮದಲ್ಲಿ ಅಡಗಿವೆ. ಚ್ಯವನಪ್ರಾಶ, ಮಕರಧ್ವಜ, ಬಾದಾಮಿಲೇಹ, ವಸಂತಕುಸುಮಾಕರ ಅಥವಾ ಸ್ವರ್ಣಭಸ್ಮ, ಎಲ್ಲದರ ಸಾರವು **ರಾಮನಾಮವು.** ಅದೊಂದು ಅತ್ಯಾಶ್ಚರ್ಯಕರವಾದ, ಅಪಾರಶಕ್ತಿಯುಳ್ಳ, "೧೯೧೦೧೯೪" ದಿವ್ಯಸೂಜೀಮದ್ದು (ineffable divine injection).

ಭಗವಂತನನ್ನು ಮರೆತವನಿಗೆ ಇಹದಲ್ಲಾಗಲಿ ಪರದಲ್ಲಾಗಲೀ ಸುಖ ಸಂತೋಷಗಳು ದೊರೆಯಲಾರವು. ಸ್ವಾರ್ಥಪರನೂ, ಅಹಂಕಾರ ಮತ್ತು ದಂಭದಿಂದ ಇತರರಿಂದ ಪ್ರತ್ಯೇಕವಾಗಿರುವವನಿಗೆ ನಿಜವಾದ ಶಾಂತಿಯು

ದೊರೆಯಲಾರದು. ಭಗವಂತನ ನಿರಂತರ ಸ್ಮರಣೆಯು ಸಮಸ್ತ ದುಃಖ ಗಳನ್ನೂ, ನೋವುಗಳನ್ನೂ ನಾಶಮಾಡುವುದಲ್ಲದೆ ಅಮೃತತ್ವ, ಆನಂದ ಮತ್ತು ಶಾಂತಿಯನ್ನು ಭಕ್ತನಿಗೆ ನೀಡುವುದು. ಆತ್ಮಸಮರ್ಪಣೆಯು ಸ್ವಾರ್ಥ ಮತ್ತು ದಂಭವನ್ನು ಕಳೆಯುವುದು. ದಿವ್ಯೈಕ್ಯತೆಗೆ ಆತ್ಮಾರ್ಪಣವು ಅತ್ಯಂತ ಸಮೀಪ ವಾದ ಮಾರ್ಗವು.

ದಿವ್ಯನಾಮವು ಜನನ ಮರಣವೆಂಬ ರೋಗವನ್ನು ಕಳೆಯುವುದಲ್ಲದೆ ಮೋಕ್ಷ, ಬಿಡುಗಡೆ ಅಥವಾ ಅಮೃತತ್ವವನ್ನುಂಟುಮಾಡುವುದು.

ಭಗವನ್ನಾಮವು ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟವರಿಗೆ ಸಿದ್ಧೌಷಧವು. ಅದು ದಿವ್ಯಾಮೃತವು. ಭಗವನ್ನಾಮೋಚ್ಚಾರಣೆ ಮಾಡುವವ ರಿಂದ ಯಮನಿಗೂ ಭಯವಾಗುವುದು. ಆತನು ಅವರ ಸಮೀಪಕ್ಕೇ ಹೋಗಲಾರನು. ಮೃಕಂಡು ಮಹರ್ಷಿಯ ಮಗನಾದ ಮಾರ್ಕಂಡೇಯನು ಶಿವಮಂತ್ರೋಚ್ಚಾರಣೆಯಿಂದ ಚಿರಂಜೀವಿಯಾದನು. ಆತನು ಶ್ರೇಷ್ಠವೂ, ಅಭಯವೂ ಆದ ಸ್ಥಿತಿಯನ್ನು ಪಡೆದನು.

ಭಕ್ತನು ತಾನು ಪೂಜೆಮಾಡುವಾಗಲೂ ಮಂತ್ರವನ್ನುಚ್ಚರಿಸುತ್ತಾ ತನ್ನ ಹೃದಯ, ಶಿರ, ಶಿಖ, ಬಾಹುಗಳು ಮತ್ತು ಹಸ್ತಗಳನ್ನು ಸ್ಪರ್ಶ ಮಾಡುವನು. ಮಂತ್ರದ ಪ್ರತಿ ಅಕ್ಷರದಲ್ಲಿಯೂ ಚೈತನ್ಯವಿದೆ. ಮಂತ್ರೋ ಚ್ಚಾರಣೆಯಿಂದಲೂ, ಅಂಗನ್ಯಾಸ ಕರನ್ಯಾಸಗಳಿಂದಲೂ ಸಾಧಕನು ಕ್ರಮ ವಾಗಿ ಪವಿತ್ರನಾಗುವನು, ಆತ್ಮಶಕ್ತಿಯು ಎಚ್ಚರಗೊಳ್ಳುವುದು. ಆತ್ಮಶಕ್ತಿಯ ತೇಜಸ್ಸು ಹೊರಹೊಮ್ಮುವುದು. ತಮಸ್ಸು ಮತ್ತು ರಜಸ್ಸು ನಾಶವಾಗಿ ಅವನಲ್ಲಿ ಶುದ್ಧಸತ್ವವು ತುಂಬುವುದು. ಆರಾಧನೆಯ ವಸ್ತುಗಳೊಡನೆ ತಾದಾತ್ಮ್ಯವನ್ನೂ ಪಡೆಯುವನು. ಭಗವಂತನ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ (proximity), ಮತ್ತು ಸಾಯುಜ್ಯವನ್ನು (absorption) ಹೊಂದುವನು.

# ೬. ಜಪನಿಷ್ಠೆಯಲ್ಲಿ ಭಾವದ ಆವಶ್ಯಕತೆ

ಆಧ್ಯಾತ್ಮಿಕ ಆದರ್ಶವನ್ನು ನಿಮ್ಮ ಮುಂದಿಟ್ಟುಕೊಂಡು ನಿಮ್ಮ ಕಷ್ಟಗಳನ್ನು ಒಂದೊಂದಾಗಿ ದೂರಮಾಡಿ. ನಿಮಗೆ ಆತ್ಮಬಲವು ದೊರೆಯುವುದು. ಭಗವಂತನನ್ನು ನಿಷ್ಠೆಯಿಂದ ಸ್ಮರಿಸುವುದರಿಂದ, ಅವನ ಸಾಮೀಪ್ಯವನ್ನು ಭಾವಿಸುವುದರಿಂದ ನೀವು ಗುರಿಯನ್ನು ಸುಲಭವಾಗಿ ಮುಟ್ಟಲು ಸಹಾಯಕವಾಗುವುದು. ಮಾನಸಿಕ ನಾಮಸ್ಮರಣೆಯಿಂದ ಮತ್ತು ಮೂರುನಾಲ್ಕು ತಿಂಗಳು ನಡೆಸಿದ ಜಪದಿಂದ ನಿಮ್ಮ ಲೌಕಿಕ ಕರ್ಮಗಳು ಮುಗಿದೊಡನೆಯೇ ಮನಸ್ಸು ನಾಮಸ್ಮರಣೆಯನ್ನು ಮಾಡುವುದು. ಎಲ್ಲ ಚಿಂತೆಗಳಿಂದ ಹಿಂದೆ ಸರಿದು ಭಗವಂತನನ್ನು ಸ್ಮರಿಸುವುದು. ಇದು **ನಿಮ್ಮ ದೈವೀ** ಸಂಪತ್ತು.

ಸಾಯುವ ಸಮಯದಲ್ಲಿ ಭಗವಂತನನ್ನು ಸ್ಮರಿಸಿದರೆ ಖಂಡಿತವಾಗಿಯು ನೀವು ದೈವಸಾಕ್ಷಾತ್ಕಾರವನ್ನು ಹೊಂದುವಿರಿ. ಶ್ರೀಕೃಷ್ಣನು ಈ ವಿಷಯದಲ್ಲಿ ನೀಡಿರುವ ಆಶ್ವಾಸನೆ ಎಂದರೆ, **“ಕೊನೆಯ ಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ಬಿಟ್ಟು ಯಾವನು ಪ್ರಯಾಣಮಾಡುವನೋ ಅವನು ನನ್ನ ಸ್ವರೂಪವನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ.”** (ಗೀತಾ VIII – ೫). ನಿಮ್ಮ ಬಾಳಿನಲ್ಲೆಲ್ಲಾ ಭಗವಂತನನ್ನು ಸ್ಮರಿಸುವ ಅಭ್ಯಾಸಮಾಡಿದ್ದರೆ ಮಾತ್ರ ಸಾಯುವಾಗ ದೇವರನ್ನು ನೆನೆಸಿಕೊಳ್ಳಲು ಸುಲಭವು.

ಭಗವನ್ನಾಮವನ್ನು ನಿರಂತರವಾಗಿ ನುಡಿಯುವ ಅಭ್ಯಾಸವನ್ನು ಬಲಪಡಿಸಿರಿ. ಆಗ ಮಾತ್ರ ಸಾಯುವ ಸಮಯದಲ್ಲಿ ದೇವರನ್ನು ಸ್ಮರಿಸಲು ಸರಳವಾಗುವುದು.

ಒಂದು ಜಪವನ್ನು ಹದಿಮೂರು ಕೋಟಿ ಮಾಡಿದರೆ ದೇವರು ಸಾಕಾರವಾಗಿ ದರ್ಶನಕೊಡುವನು. ನೀವು ನಿಷ್ಠಾವಂತರೂ, ಶ್ರದ್ಧಾವಂತರೂ ಆದರೆ ಕೇವಲ ನಾಲ್ಕೇ ವರ್ಷಗಳಲ್ಲಿ ಅಷ್ಟೇ ಪುನಶ್ಚರಣೆಯನ್ನು ಮಾಡಬಹುದು. **“ಹರಿ ಓಂ”** ಮಂತ್ರಜಪದ ಎರಡು ಸಾವಿರ ಮಾಲೆಗಳನ್ನು ಹದಿನಾಲ್ಕು ಘಂಟೆಗಳಲ್ಲಿ ಮುಗಿಸಬಹುದು. **“ಶ್ರೀರಾಮ”** ಮಂತ್ರಜಪವನ್ನು ಏಳು

ಘಂಟೆಗಳಲ್ಲಿ ಒಂದು ಲಕ್ಷ ಜಪಿಸಬಹುದು. ಹಾಗೂ ಅರ್ಧ ಘಂಟೆಯಲ್ಲಿ ಹತ್ತು ಸಾವಿರ ಜಪಿಸಬಹುದು.

ಚಿತ್ರಕೂಟವು ಧ್ಯಾನಮಾಡಲು ಪ್ರಶಸ್ತವಾದ ಸ್ಥಳವು. ಅಲ್ಲಿ ಮಂದಾಕಿನಿಯು ಶುಭ್ರಳಾಗಿ, ಥಳಥಳಿಸುತ್ತಾ ಪ್ರವಹಿಸುವಳು. ರಾಮಭಕ್ತರು ಚಿತ್ರಕೂಟದಲ್ಲಿ ಕುಳಿತು ಹಾಲು, ಹಣ್ಣುಗಳನ್ನು ಮಾತ್ರ ಸೇವಿಸುತ್ತಾ ನಿಷ್ಠಾವಂತರಾಗಿ ರಾಮನಾಮವನ್ನು ಜಪಿಸಿದರೆ ಶ್ರೀರಾಮನು ತಪ್ಪದೆ ದರ್ಶನವನ್ನು ಕೊಡುವನೆಂದು ಶ್ರೀ ತುಳಸೀದಾಸರು ತಮ್ಮ ಚೌಪಾಯಿಯಲ್ಲಿ ಹೇಳಿದ್ದಾರೆ.

ಕೆಲವರು ನಿತ್ಯವೂ ಜಪವನ್ನು ಯಾಂತ್ರಿಕವಾಗಿ ಮಾಡುವರು. ನಾಮೋಚ್ಚಾರಣೆಯ ಕಾಲದಲ್ಲಿ ಅವರು ಯಾವ ಆನಂದವನ್ನೂ ಕಾಣುವುದಿಲ್ಲ. ಅಂತಹವರು ಮೊದಲು ಭಾವವನ್ನು ಬೆಳೆಸಿಕೊಂಡು, ಮಂತ್ರಾರ್ಥವನ್ನೂ ಚಿಂತಿಸಿ ಭಗವದ್ರೂಪವನ್ನು ಧಾರಣಮಾಡಬೇಕು. ಮಂತ್ರದ ಶಕ್ತಿ ಮತ್ತು ಚೈತನ್ಯವು ಇಷ್ಟದೈವದ ದಿವ್ಯರೂಪವು ತಮ್ಮ ಶರೀರದ ಕಣಕಣದಲ್ಲಿಯೂ ಆವಿರ್ಭವಿಸಿ ಪ್ರವಹಿಸುತ್ತಿರುವಂತೆ ತಿಳಿಯಬೇಕು. ಅನಂತರ ತಮ್ಮ ಹೃದಯದಲ್ಲಿ ಆಗುವ ವಿಶಿಷ್ಟವಾದ ಪುಳಕವನ್ನು, ಆನಂದವನ್ನು, ದಿವ್ಯವಾದ ಶಾಂತಿಯನ್ನು, ಅನಿರ್ವಚನೀಯವಾದ ಸ್ಥಿತಿಯನ್ನು ಅನುಭವಿಸುವರು. ಮಾಡಿದ ಜಪದ ಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳಬಾರದು. ಜಪ ಮಾಡುವಾಗ ಪರಿಶುದ್ಧತೆ, ಚಿತ್ತೈಕಾಗ್ರತೆ ಮತ್ತು ಭಾವಶುದ್ಧಿ ಇರಬೇಕು. ಇದು ಅತಿ ಪ್ರಮುಖವಾದುದು.

ಮಾತ್ರ, ಪರ, ಪಶ್ಯಂತಿ ಮೊದಲಾದವುಗಳ ಬಗ್ಗೆ ಚಿಂತಿಸದಿರಿ. ಓಂಕಾರವನ್ನು ಅರ್ಥ ಮತ್ತು ಭಾವದಿಂದ ತಪ್ಪದೆ ಜಪಿಸಿರಿ. ನಿಮಗೆ ದೈವಿಕವಾದ ಫಲಗಳು ಉಂಟಾಗುವುವು. ನದಿಯ ದಡದಲ್ಲಿರುವ ಗುಂಡು ಕಲ್ಲುಗಳನ್ನು ಎಣಿಸುವುದರಲ್ಲಿ ಕಾಲವನ್ನೇಕೆ ಕಳೆಯುವಿರಿ? ಗಂಗೆಯಲ್ಲಿ ಈಗಲೇ ಮುಳುಗಿ ಸ್ನಾನದ ಆನಂದವನ್ನು ಅನುಭವಿಸಿ. ವಿವೇಕಿಗಳಾಗಿ.

---

# 8

## ಕರ್ಮಯೋಗ

### ೧. ಕರ್ಮಯೋಗದ ಅವಶ್ಯಕತೆ

ನದಿಗಳು ಸದಾ ಶುದ್ಧವಾದ, ಒಳ್ಳೆಯ, ಪಾನಾರ್ಹವಾದ ನೀರನ್ನು ಒದಗಿಸುವವು. ಮರಗಳು ಹಣ್ಣುಗಳನ್ನೂ, ನೆರಳನ್ನೂ ನೀಡುವವು. ಸೂರ್ಯನು ಬೆಳಕು, ಶಾಖ, ಮತ್ತು ಶಕ್ತಿಯನ್ನು ಕೊಡುವನು. ಪೃಥ್ವಿಯು ಹಲವು ಬಗೆಯ ಹಸಿರು ಸಸ್ಯಗಳನ್ನೂ, ಧಾನ್ಯಗಳನ್ನೂ ಹೊರತರುವಳು. ಪುಷ್ಪಗಳು ಸೌಂದರ್ಯವನ್ನು ನೀಡುವವು. ಗೋವುಗಳು ಪುಷ್ಟಿದಾಯಕವಾದ ಹಾಲನ್ನು ಕೊಡುವವು. ಮನುಷ್ಯನ ವಿನಃ ಎಲ್ಲ ಜೀವರಾಶಿಗಳೂ ಸ್ವಾರ್ಥತ್ಯಾಗವನ್ನು ಮಾಡುವವು. ಮಾನವನು ಮಾತ್ರ ಅತ್ಯಂತ ಸ್ವಾರ್ಥಿಯು.

ದೈವೀ ಸಂಸ್ಕೃತಿಯು ಅನಿವಾರ್ಯವು (sine-qua-non) ಮತ್ತು ರಾಷ್ಟ್ರೀಯ ಪುನರುತ್ಥಾನಕ್ಕೆ ಬಹಳ ದುರ್ಲಭವು (difideratum). ಜೀವನದ ಗುರಿಯೇ ಆತ್ಮಸಾಕ್ಷಾತ್ಕಾರವು. ಅದು ಆತ್ಮಬಲವನ್ನು ಬೆಳೆಸುವುದು ಮತ್ತು ಜನರನ್ನು ನಿಸ್ವಾರ್ಥರೂ, ನಿರ್ಭಯರೂ, ಧೀರರೂ, ಬಲಶಾಲಿಗಳೂ ಆಗಿ ಮಾಡಿ ದೇಹದ ಮೋಹವನ್ನು ಕಳೆಯುವುದು. ನಿಸ್ವಾರ್ಥಿಗಳಾದವರು ಮಾತ್ರವೇ ರಾಷ್ಟ್ರಸೇವೆಯನ್ನು ಮಾಡಬಲ್ಲರು, ಐಕ್ಯತೆಯಿಂದ ದುಡಿಯಬಲ್ಲರು, ಮತ್ತು ವಿಶ್ವಪ್ರೇಮವನ್ನು ಹೊಂದಿರುವವರು.

ಪ್ರತಿಯೊಬ್ಬನೂ ತಾನು, ತನ್ನ ಪತ್ನಿ, ಮಕ್ಕಳ ಬಗ್ಗೆ ಮಾತ್ರ ಉದಾರಿಯಾಗಿರುವನು. ಅವನು ಇತರರನ್ನು ಉಪೇಕ್ಷಿಸುವನು, ಅನರಿಂದ ಪ್ರತ್ಯೇಕತಾ

ಮನೋಭಾವವನ್ನು ಹೊಂದಿರುವನು. ಇದೇ ಅಜ್ಞಾನವು. ಇದೇ ಮಾಯೆಯು. ಜನನ, ಮರಣಗಳಿಗೆ, ಮಾನವನ ತೊಂದರೆಗಳಿಗೆ ಮೂಲಕಾರಣವೂ ಇದೆ. **ಪ್ರತ್ಯೇಕತೆಯೇ ಸಾವು. ಐಕ್ಯತೆಯೇ ಅಮರತೆಯು.**

ಪರಿಶುದ್ಧವಾದ ಪ್ರೇಮದಿಂದ ಜನರ ಹೃದಯವನ್ನು ಗೆಲ್ಲಿರಿ. ಸತ್ಯ ನಿಷ್ಠರಾಗಿ ಯೋಗಮಾರ್ಗದಲ್ಲಿ ಜಯಶೀಲರಾಗಿ ಮುಂದುವರೆಯಿರಿ. ಧಂಭ ವನ್ನು ದಮನಮಾಡಿ ದಿವ್ಯಾನಂದದ ಪೂರ್ಣ ರಾಜ್ಯವನ್ನು ಪ್ರವೇಶಿಸಿ. ಅಜ್ಞಾನವನ್ನು ಕೊಂದು ಆತ್ಮಜ್ಞಾನವನ್ನು ಪಡೆಯಿರಿ. ವಾಸನೆಗಳನ್ನು ಪುಡಿಮಾಡಿ ನಿತ್ಯಾನಂದದ ಅಖಂಡ ಸಾಮ್ರಾಜ್ಯವನ್ನು ಪ್ರವೇಶಿಸಿರಿ.

ಸ್ವಾರ್ಥವು ಸರ್ವ ದುಶ್ಚಟಗಳ (vices) ಮೂಲವು. ಅದು ಅಜ್ಞಾನ ದಿಂದ ಜನಿಸಿದುದು. ಸ್ವಾರ್ಥೀ ಮನುಷ್ಯನು ಲೋಭಿಯು ಮತ್ತು ಅಧರ್ಮಿಯು. ಆತನು ದೇವರಿಂದ ದೂರದಲ್ಲಿರುವನು. ತನ್ನ ಸ್ವಾರ್ಥ ಸಾಧನೆಗೆ ಏನನ್ನಾದರೂ ಮಾಡುವನು. ಸ್ವಾರ್ಥ ಪೂರೈಕೆಗಾಗಿ ಇತರರನ್ನು ಹಿಂಸಿಸುವನು. ಅವರ ಸಂಪತ್ತನ್ನು ದೋಚುವನು. ಅಲ್ಲದೆ ಹಲವು ಪಾಪ ಕರ್ಮಗಳನ್ನೆಸಗುವನು. ಅವನಿಗೆ ನೀತಿನಿಯಮ (scruples) ಗಳಿಲ್ಲವು. ನೆಮ್ಮದಿಯ ಮನಸ್ಸೆಂಬುವೇ ತಿಳಿಯದು. ಸದಾ ಸಂಪತ್ತು, ಶಕ್ತಿ, ಖ್ಯಾತಿ ಮತ್ತೆ ಹೆಸರನ್ನು ಗಳಿಸಲು ಯೋಜನೆಗಳನ್ನು ಚಿಂತಿಸುವನು. ಇತರರಿಂದ ಪ್ರತ್ಯೇಕವಾಗಿಯೇ ಉಳಿಯುವನು. ಸ್ವಾರ್ಥಸಂಗವೂ, ಅನ್ಯರಿಂದ ಪ್ರತ್ಯೇಕವಾದ ಮನೋಭಾವವೂ, ಅವನಲ್ಲಿ ಪರಮಾವಧಿಯ ಮಟ್ಟವನ್ನು ಮುಟ್ಟಿರುವುವು. ಸ್ವಾರ್ಥವು ಯೋಗಕ್ಕೆ ದೊಡ್ಡ ಅಡ್ಡಿಯು (impediment). ನಿಸ್ವಾರ್ಥಸೇವೆ, ಧರ್ಮ, ಸತ್ಸಂಗದ ಮೂಲಕ ಸ್ವಾರ್ಥವನ್ನು ನಾಶಮಾಡಿ.

ಸ್ವಾರ್ಥತೆಯಿಂದ ನಿನಗೆ ಸಂಕುಚಿತ ಮನೋಭಾವ ಬೆಳೆದಿದೆ. ನಿನ್ನ ಹೃದಯವೂ ಸಂಕೋಚಗೊಂಡು ಸಣ್ಣದಾಗಿರುವುದು. ಅನಾಸಕ್ತನಾಗಿ ಸೇವೆ ಮತ್ತು ಸಹಾಯವನ್ನು ಸಲ್ಲಿಸುವುದರಿಂದ ನಿನ್ನ ಹೃದಯವು ವಿಕಾಸ ಗೊಳ್ಳುವುದು. ನೀನು ದೇವರು ಅಥವಾ ಬ್ರಹ್ಮದೊಡನೆ ಒಂದಾಗುವೆ. ಆದ್ದರಿಂದ ಸೇವೆಯಲ್ಲಿ ಸಂತೋಷವನ್ನು ಪಡೆ.

ಹಲವರು ಗಂಗಾತೀರದಲ್ಲಿ ಅನೇಕ ವರ್ಷಗಳು ವಾಸಿಸುವರು. ಅವರು ಜಪ ಮತ್ತು ಕೀರ್ತನೆಯನ್ನು ಮಾಡುವರು. ವೇದಾಂತ ಗ್ರಂಥವನ್ನು

ಪಾರಾಯಣ ಮಾಡುವರು. " **ಅಹಂ ಬ್ರಹ್ಮಾಸ್ಮಿ** " ಎಂಬ ಸೂತ್ರವನ್ನು ಅನೇಕಬಾರಿ ಉಚ್ಚರಿಸಿದರೂ ಅವರಿಗೆ ಇನ್ನೂ ಆತ್ಮಸಾಕ್ಷಾತ್ಕಾರವಾಗಿಲ್ಲ. ಅವರಿಗೆ ಚಿತ್ತ ವಿಶಾಲತೆಯು ಇನ್ನೂ ಉಂಟಾಗದಿರುವುದರಿಂದ ಹಲವು ವರ್ಷಗಳ ಹಿಂದೆ ಇದ್ದ ಸ್ಥಿತಿಯಲ್ಲೇ ಇರುವರು. **ಚಿತ್ತವೈಶಾಲ್ಯವು ಸತ್ಯಾನ್ವೇಷಿಗೆ ಅವಶ್ಯಕವಾಗಿರಬೇಕಾದ ಅರ್ಹತೆಯು.** ಬೇಸರವಿಲ್ಲದ ಸೇವೆ, ಧರ್ಮಕಾರ್ಯಗಳು, ಮಾನವ ಸೇವೆ ಕರುಣೆಯ ಕೃತಿಗಳು, ಸಹಜವೂ, ಅಡೆತಡೆಯಿಲ್ಲದುದೂ ಆದ ಧಾರಾಳತನವು ಶೀಘ್ರವಾಗಿ ಹೃದಯವೈಶಾಲ್ಯವನ್ನುಂಟು ಮಾಡುವುದು. ಎಲ್ಲ ಹೃದಯಗಳಲ್ಲೂ ನೆಲೆಸಿರುವವನು ಒಬ್ಬ ಪರಮಾತ್ಮನೇ. ನಿಮ್ಮಲ್ಲಿರುವುದನ್ನು ಇತರರೊಡನೆ ಹಂಚಿಕೊಳ್ಳದೆ ಸರ್ವಪ್ರೇಮಭಾವವನ್ನು ಬೆಳೆಸಿಕೊಳ್ಳದೆ ನೀವು ಹೇಗೆ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯ ?

ಮಾನವನು ಈ ಲೋಕದಲ್ಲಿ ಮಾತ್ರವಲ್ಲದೆ ಅನೇಕ ಲೋಕಗಳ ಪೌರನು. ಆದ್ದರಿಂದ ಈ ಲೋಕದಲ್ಲಿಯೂ, ಇತರ ಲೋಕಗಳಲ್ಲಿಯೂ ಹಲವು ಬಗೆಯ ಪ್ರಲೋಭನೆಗಳನ್ನೂ, ಅಪಾಯಗಳನ್ನೂ ಎದುರಿಸಬೇಕು. ಗಂಧರ್ವ ಲೋಕದಲ್ಲಿ ಆಸೆಆಕಾಂಕ್ಷೆಗಳೇ ಹೆಚ್ಚು. ಆ ಕಾರಣದಿಂದಲೇ ಸಾಧಕನು ಮೊದಲು ಶುದ್ಧನಾಗಬೇಕು. ಇಂದ್ರಿಯಗಳನ್ನು ಹಿಡಿತದಲ್ಲಿಡಬೇಕು. ಆಶೆಗಳನ್ನು ನಾಶ ಮಾಡಬೇಕು. ' ಕುಂಡಲಿನಿಯನ್ನು ಜಾಗೃತಗೊಳಿಸುವ ಮುನ್ನ ಯಮದಲ್ಲಿ ಪ್ರತಿಷ್ಠಿತನಾಗಿರಬೇಕು ' ಎಂದು ಯೋಗಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಮೂಲಾಧಾರ ಚಕ್ರದಲ್ಲಿ ಜಡವಾಗಿ ನಿದ್ರಿಸುತ್ತಿರುವ ಕುಂಡಲಿನಿಯನ್ನು ಯೋಗಿಯು, ಆಸನ, ಬಂಧ ಮತ್ತು ಮುದ್ರೆಗಳಿಂದ ಶುದ್ಧನಾಗದೆ ಜಾಗೃತಗೊಳಿಸಿದರೆ ಇತರ ಭೂಮಿಕೆಗಳಲ್ಲಿ ಉಂಟಾಗುವ ಪ್ರಲೋಭನೆಗಳನ್ನು ದಾಟಲು ಸಮರ್ಥನಾಗುವುದಿಲ್ಲ ಮತ್ತು ಹೇಯವಾದ ಅಧಃಪತನವನ್ನು ಹೊಂದುವನು. ಆತನು ಪುನಃ ಯೋಗದ ಏಣಿಯನ್ನು ಹತ್ತಲು ಬಹಳ ಕಷ್ಟವಾಗುವುದು. ಆದ್ದರಿಂದ ಸಾಧಕನು ಮೊದಲು ಪರಿಶುದ್ಧನಾಗಲು ಯತ್ನಿಸಬೇಕು. ಜಪ, ಕೀರ್ತನೆ, ನಿಸ್ವಾರ್ಥ ಸೇವೆಯಿಂದ ಪರಿಶುದ್ಧನಾದರೆ ಕುಂಡಲಿನೀಶಕ್ತಿಯು ಉದ್ದೀಪನಗೊಂಡು ತ್ರಿಶೂಲಧಾರಿಯೂ, ಕೈಲಾಸವಾಸಿಯೂ, ಜ್ಞಾನನಿಧಿಯೂ, ಆನಂದ ಮತ್ತು ಶಾಂತಿಯ ಆಗರವೂ ಆದ ಶಿವಭಗವಾನನನ್ನು ಸಂಧಿಸಲು ಸಹಸ್ರಾರದ ಕಡೆಗೆ ವೇಗವಾಗಿ ಚಲಿಸುವಳು.

ನಿಷ್ಕಾಮ ಕರ್ಮವು ಜೀವನದ ಪರಮಸುಖವನ್ನು ಪ್ರಾಪ್ತಿಮಾಡಿ ಕೊಡುವ ಶ್ರೇಷ್ಠವಾದ ಸ್ವಧರ್ಮವು. ನಿಷ್ಕಾಮ ಕರ್ಮವು ಹೃದಯವನ್ನು ಶುದ್ಧಿಗೊಳಿಸುವುದು ಮತ್ತು ವಿಯೋಗಭಾವವನ್ನು ನಾಶಮಾಡುವುದು. ಆಗ ಮನಸ್ಸನ್ನು ಸ್ಥಿರಗೊಳಿಸಲು ಮತ್ತು ಭಗವತ್ಪ್ರಸಾದವನ್ನು ಪಡೆಯಲು ಉಪಾಸನೆಯನ್ನು ಮಾಡತಕ್ಕದ್ದು. ಕೊನೆಯದಾಗಿ ವೇದಾಂತವು ಅಜ್ಞಾನಾ ವರಣವನ್ನು ನಾಶಮಾಡುವುದಲ್ಲದೆ ಕೈವಲ ಮೋಕ್ಷ ಅಥವಾ ಜನನ ಮರಣ ಸುಳಿಯಿಂದ ಆತ್ಯಂತಿಕ ಬಿಡುಗಡೆಯನ್ನು ಹೊಂದಲು ಸಹಾಯಮಾಡುವುದು.

ಅನಾಸಕ್ತ, ನಿಸ್ವಾರ್ಥ ಸೇವೆಯನ್ನು ಉತ್ಸಾಹದಿಂದ ಕೈಗೊಳ್ಳಿ. ವಿಶಾಲವೂ, ಉದಾರವೂ, ದೊಡ್ಡ ಹೃದಯವೂ, ತಾಳ್ಮೆಯೂ ಇರಲಿ. ಎಲ್ಲರಲ್ಲಿಯೂ ದಯೆಯಿಂದಿರಿ. ಎಲ್ಲರನ್ನೂ ಪ್ರೀತಿಸಿ. ಎಲ್ಲರಿಗೂ ಸೇವೆ ಮಾಡಿ. ಎಲ್ಲರಲ್ಲಿರುವ ದೇವರಿಗೆ ಸೇವೆಮಾಡಿ.

ನೀಡುವುದನ್ನು ಕಲಿಯಿರಿ. ಅದರಲ್ಲಿ ಬಹಳ ಆನಂದವಿರುವುದು. ಕೇವಲ ಕೆಲವರೇ ಇದನ್ನು ತಿಳಿದುಕೊಳ್ಳಬಲ್ಲರು. ಎಲ್ಲವನ್ನೂ ಭಗವಂತನ ಇಚ್ಛೆಗೆ ಅಧೀನಮಾಡುವುದನ್ನು ಅರಿತುಕೊಳ್ಳಿ. ಶರಣಾಗತಿಯಿಂದ ಅವರ್ಣನೀಯವಾದ ಶಾಂತಿಯು ದೊರೆಯುವುದು. ವಿವೇಕವನ್ನು ಪಡೆಯಿರಿ: ಸಾರಾಸಾರವನ್ನು ವಿಂಗಡಿಸುವುದರಲ್ಲಿ ಅತೀಂದ್ರಿಯವಾದ ಆನಂದವಿರುವುದು. ಬಹು ಸ್ವಲ್ಪ ಜನರು ಮಾತ್ರ ಇವನ್ನು ತಿಳಿಯಬಲ್ಲರು. ಆಶಾರಹಿತರಾಗಿ. ಅದರಿಂದ ನಿತ್ಯತೃಪ್ತಿಯೂ, ವೈರಾಗ್ಯವೂ ಬೆಳೆಯಬಲ್ಲದು.

ಕೆಲವರು ಕರ್ಮಮಾಡಬಲ್ಲರು, ಧ್ಯಾನಮಾಡಲಾರರು. ಇನ್ನು ಕೆಲವರು ಧ್ಯಾನಮಾಡಬಲ್ಲರೇ ಹೊರತು ಕರ್ಮಮಾಡಲಾರರು. ಇದು ಒಂದು ಭಾಗದ ಸಾಧನೆ ಮಾತ್ರ. ಧ್ಯಾನ ಮತ್ತು ನಿಸ್ವಾರ್ಥ ಸೇವೆಯನ್ನು ಸರಿಯಾಗಿ ಒಂದು ಗೂಡಿಸಿಕೊಳ್ಳಬೇಕು. ಇದು ಯೋಗಸಮನ್ವಯವು. ಇದು ಕ್ರಿಯಾ ಯೋಗವು. ನೀವು ಲೋಕದಲ್ಲಿ ಸಂಚರಿಸುತ್ತಿದ್ದರೂ ಅಥವಾ ಏಕಾಂತ ದಲ್ಲಿರುವಾಗಲೂ ಚಿತ್ತವಿಕ್ಷೇಪವಾಗುವುದೆಂದು ದೂರುವುದಿಲ್ಲ. ಸ್ಥಿರಪ್ರಜ್ಞೆ ಯನ್ನು ಹೊಂದಿ ಸಮಗ್ರವಾದ ಬೆಳವಣಿಗೆಯನ್ನು ಪಡೆಯಿರಿ.

ವಿಶ್ವಪ್ರೇಮವನ್ನು ಬೆಳೆಸಿ. ವಿಶ್ವಾತ್ಮಭಾವವನ್ನು ಹೊಂದಿ. ಸ್ವಾರ್ಥ ಮತ್ತು ಸಂಕುಚಿತ ಮನಸ್ಸನ್ನು ನಾಶಮಾಡಿ. ಹಿಗ್ಗಿರಿ. ದೊಡ್ಡವರಾಗಿ.

ಏಳಿ. ಎಚ್ಚರಗೊಳ್ಳಿ. ನಿಮ್ಮ ಆಲಸ್ಯವನ್ನು (lethargy), ಅಲಕ್ಷ್ಯವನ್ನು ಕಿತ್ತೊಗೆಯಿರಿ. ಸಮಷ್ಟಿಭಾವವನ್ನು, ಐಕ್ಯತೆಯ ಬಾಳನ್ನು ನಡೆಸಿರಿ. ಆಂತರಿಕ ಶಕ್ತಿಗಳನ್ನು ಬೆಳೆಸಿ. ಪ್ರತಿಪಾದಿಸಿ. ದೃಢೀಕರಿಸಿ. ಆತ್ಮನನ್ನು ಕಾಣಿರಿ. ಭವ್ಯ ಭವಿಷ್ಯವು ನಿಮಗೆ ಕಾಯುತ್ತಿದೆ.

ನೀವು ಪತ್ನೀಪುತ್ರರಲ್ಲಿ ವ್ಯಾಮೋಹವನ್ನು ಹೊಂದಿದ್ದರೆ, ವಿಶ್ವಪ್ರೇಮ ವನ್ನು ಬೆಳೆಸಿಕೊಳ್ಳಲಾರಿರಿ. ಮಾನವ ಜನಾಂಗವನ್ನು ಒಂದು ಕುಟುಂಬವೆಂದು ನೋಡಲಾರಿರಿ. ವಿಶ್ವಸೋದರ ಭಾವವನ್ನು ಬೆಳಸಲಾರಿರಿ. ನಿಮ್ಮ ಮಕ್ಕಳಲ್ಲಿರುವ ಪ್ರೀತಿಯನ್ನೇ ಬೇರೆ ಮಕ್ಕಳಿಗೂ ತೋರಿಸಲಾರಿರಿ. ಎಲ್ಲ ಮಕ್ಕಳೂ ನಿಮ್ಮ ಮಕ್ಕಳೆಂದು ತಿಳಿಯುವುದಿಲ್ಲ. ನಿಮ್ಮ ಬಗ್ಗೆ ಬಹಳ ಸಂಕುಚಿತ ವಾದ ಹೃದಯವನ್ನು ಹೊಂದಿರುವಿರಿ. ನಿಮ್ಮ ಪ್ರೇಮವು ಕೆಲವೇ ವ್ಯಕ್ತಿಗಳಿಗೆ ಮೀಸಲಾಗಿರುವುದು. ಸ್ವಾರ್ಥತೆಯಿಂದ ನಿಮ್ಮ ನೆಂಟರಿಷ್ಟರ ಸುತ್ತಲೂ ಭಾವನಾ ಬಂಧನವೆಂಬ ಕೋಟೆಯನ್ನು ಕಟ್ಟಿರುವಿರಿ. ಸದಾ ಯೋಚಿಸು ವಿರಿ—"ನನ್ನ ಸಂಸಾರವು ಅಭಿವೃದ್ಧಿಯಾಗಲಿ. ನಾವು ಮಾತ್ರ ಸಂತೋಷ ವಾಗಿರುವಂತಾಗಲಿ. ಇತರರ ಹಿತವನ್ನು ಕಟ್ಟಿಕೊಂಡು ನನಗೇನು ?" ಎಂದು.

ಆದರೆ, ವಿಶ್ವಪ್ರೇಮಿಯು ಎಲ್ಲರಲ್ಲಿಯೂ ಸಮ ದೃಷ್ಟಿಯುಳ್ಳವನು. ಅವನು ಎಲ್ಲರನ್ನೂ ಪ್ರೀತಿಸುವನು ಮತ್ತು ಆಲಂಗಿಸುವನು. ಎಲ್ಲ ಮಕ್ಕಳೂ ಅವನವೇ. ಎಲ್ಲ ಜನರೂ ಅವನ ಸಹೋದರರೇ. ಎಲ್ಲ ಸ್ತ್ರೀಯರೂ ಅವನ ಸಹೋದರಿಯರೇ. ಸಮಸ್ತ ಪ್ರಪಂಚವೂ ಅವನ ಕುಟುಂಬವೇ. ಇಡೀ ಜಗತ್ತೂ ಅವನ ಗೃಹವೇ. ಅವನು ಎಲ್ಲರಿಗೂ ಕರುಣೆ ತೋರುವನು. ಎಲ್ಲರಿಗೂ ಸೇವೆ ಸಲ್ಲಿಸುವನು. ತನ್ನಲ್ಲಿರುವುದನ್ನು ಎಲ್ಲರೊಡನೆ ಹಂಚಿ ಕೊಳ್ಳುವನು. ಎಲ್ಲರ ಹಿತವನ್ನು ಬಯಸುವನು. ಎಲ್ಲರ ಹಿತಕ್ಕಾಗಿ ತನ್ನ ಹಿತವನ್ನು ಬಲಿಗೊಡುವನು. ಎಷ್ಟು ಮಹತ್ವವಾದ ವ್ಯಕ್ತಿತ್ವವು ! ಎಲ್ಲರಿ ಗಾಗಿ ಅವನು ಸಾಯಲೂ ಸಿದ್ಧ, ಅವನು ಇತರರ ಹಿತಕ್ಕಾಗಿ ದುಡಿಯಲು ಸಿದ್ಧನಿರುವನು. ಎಷ್ಟು ವಿಶಾಲವಾದ ಹೃದಯವನ್ನು ಹೊಂದಿರುವನು ! ಅವನು ಪೃಥ್ವಿಯಲ್ಲಿ ಸಾಕ್ಷಾತ್ ದೇವರೇ (veritable God).

ಅನುಕಂಪ ಹೃದಯವಿಲ್ಲದ ವೇದಾಂತವು ಶುಷ್ಕವು. ಜ್ಞಾನವಿಲ್ಲದ ಭಕ್ತಿಯು ಅಂಧವೂ ಮತ್ತು ಅಸ್ಥಿರವು. ಕರ್ಮವು ಪೂರ್ಣತೆಯನ್ನುಂಟು

ಮಾಡುವ ಕೌಶಲ್ಯವು. ನಿಮ್ಮ ಆಂತರಿಕ ಭಾವನೆಗಳನ್ನು ಕರ್ಮದ ಮೂಲಕ ವ್ಯಕ್ತಪಡಿಸುವಿರಿ. ನಿಸ್ವಾರ್ಥ ಸೇವೆಯಿಂದ ಶುದ್ಧಾದ್ವೈತ ಭಾವವನ್ನು ಬೆಳೆಸಿಕೊಳ್ಳಿ. ಮುಕ್ತಾತ್ಮನು ಎಲ್ಲೆಲ್ಲಿಯೂ ಆತ್ಮವನ್ನೇ ನೋಡುವಾಗ ವಿಶ್ವಸೇವೆಯಿಂದ ಹೇಗೆ ದೂರವಾಗುವನು ? (desist).

ನೊಂದವರನ್ನು ಸಂತೈಸಲು ದಯೆತೋರುವವರು ಬಹು ವಿರಳ. ಆಳವೂ, ದೃಢವೂ, ಕ್ರಿಯಾತ್ಮಕವೂ, ಆದ ದಯಾವಂತರು ದುರ್ಲಭರು. ಈ ಜಗತ್ತು ಕೇವಲ ಬಾಯುಪಚಾರದ, ಕರುಣೆಯ ಮಾತುಗಳಾಡುವ ನಿಷ್ಪ್ರಯೋಜಕರಾದ ಜನರಿಂದ ತುಂಬಿದೆ. ನಿಜವಾಗಿ ದಯೆಯುಳ್ಳವರು ತೊಂದರೆಗೊಳಗಾದವರನ್ನು ಕಂಡು ಒಂದು ಕ್ಷಣವೂ ಸುಮ್ಮನಿರಲಾರರು. ನೋವಿನಲ್ಲಿರುವವರನ್ನು ಕಂಡೊಡನೆಯೇ ಅವನ ಹೃದಯವು ಕರಗಿ ನೀರಾಗುವುದು. ತಾನೇ ಆ ನೋವನ್ನು ಅನುಭವಿಸುತ್ತಿರುವಂತೆ ದುಃಖ ಪಡುವನು. ಕೇವಲ ತುಟಿಯ ತುದಿಯಲ್ಲಿ ಕರುಣೆ ತೋರುವವನು ನಿಜಕ್ಕೂ ಆತ್ಮವಂಚಕನು (confirmed hypocrite). ಸ್ವಲ್ಪಮಟ್ಟಿಗೆ ದಯೆ ಯುಳ್ಳವರಲ್ಲಿ ಅನ್ಯರ ಕಷ್ಟವನ್ನು ಕೇಳಿ ಕರುಣೆಗೊಂಡರೂ ಕೈಯೆತ್ತಿ ಧರ್ಮ ಮಾಡಲು ಅವರ ಮನಸ್ಸು ಒಪ್ಪದು. ಆತನ ಅಂಗೈ ಮುಷ್ಟಿಯು ಸದಾ ಮುಚ್ಚಿರುವುದು. ಇಂತಹ ಮನುಷ್ಯನನ್ನು ತಿದ್ದಿ ಸ್ವಲ್ಪಕಾಲದಲ್ಲೇ ಉತ್ತಮ ಪಡಿಸಬಹುದು. ಅನುಭವಗಳ ಮೂಲಕ ಆತನು ಉದಾರಿಯೂ ಸಹಾಯಕನೂ ಆಗಬಹುದು. ಮಾನವತಾ ಸೇವೆಯು ನಿಸ್ವಾರ್ಥತೆಯಿಂದ ಕೂಡಿದ್ದರೆ ಸಾಧಕನು ವಿಶ್ವಾತ್ಮದ ಅರಿವಿನ ಜೊತೆಗೆ ಆತ್ಮೈಕ್ಯವನ್ನೂ ಪಡೆಯುವನು.

ಹೃದಯ ಶುದ್ಧವಿಲ್ಲದವನು ವೇದಶಾಸ್ತ್ರಗಳ ಅಪಾರವಾದ ಜ್ಞಾನ ವನ್ನು ಗಳಿಸಿದ್ದರೂ ಸರ್ವಭೂತಾಂತರ್ಯಾಮಿಯಾದ, ಮಹತ್ತಾದ, ಜಗದಾಧಾರನೂ, ಸರ್ವವ್ಯಾಪಿಯೂ, ಸ್ವಯಂಜ್ಯೋತಿಯೂ ಆದ ಶ್ರೇಷ್ಠಾತ್ಮ ನನ್ನು ಗ್ರಹಿಸಲಾರನು.

ಸೇವೆಯ ಉದ್ದೇಶವೇನು ? ನೊಂದು ಬೆಂದುಹೋಗುತ್ತಿರುವ, ಬಡತನ ದಿಂದ ಬಳಲುತ್ತಿರುವ ಅಸಂಖ್ಯಾತ ಜನರಿಗೆ ಏಕೆ ಸೇವೆ ಸಲ್ಲಿಸುವೆ ? ಸಮಾಜ ಮತ್ತು ದೇಶಕ್ಕೆ ಸೇವೆ ಮಾಡಲು ಕಾರಣವೇನು ? ಸೇವೆ ಮಾಡುವುದರಿಂದ

ನಿನ್ನ ಹೃದಯವು ಶುದ್ಧವಾಗುವುದು. ದಂಭ, ಅಸೂಯೆ, ದ್ವೇಷ, ಶ್ರೇಷ್ಠ ನೆಂಬ ಭಾವನೆಗಳು ಮಾಯವಾಗುವುವು. ಸಮ್ರತೆ, ಪರಿಶುದ್ಧತೆ, ಪ್ರೇಮ, ಕರುಣೆ, ಸಹನೆ ಮತ್ತು ದಯೆಯು ವರ್ಧಿಸುವುದು. ಪ್ರತ್ಯೇಕತಾ ಭಾವವು ನಷ್ಟವಾಗುವುದು. ಸ್ವಾರ್ಥವು ಸಮೂಲವಾಗಿ ನಾಶಗೊಳ್ಳುವುದು. ಜೀವನದ ದೃಷ್ಟಿವೈಶಾಲ್ಯವನ್ನು ಪಡೆಯುವೆ. ಐಕ್ಯತೆಯನ್ನು ಕಂಡು ಕೊಳ್ಳುವೆ. ಹೃದಯ ವೈಶಾಲ್ಯದಿಂದ ಹಿರಿಯ ಭಾವನೆಗಳು ಬೆಳೆಯುವುವು. ಪರಿಣಾಮವಾಗಿ ಆತ್ಮಜ್ಞಾನವು ಪ್ರಾಪ್ತಿಯಾಗುವುದು. ಸರ್ವವನ್ನು ಏಕ ದಲ್ಲಿಯೂ, ಏಕವನ್ನು ಸರ್ವದಲ್ಲಿಯೂ ಅರಿತುಕೊಳ್ಳುವೆ. ಅಪರಿಮಿತವಾದ ಆನಂದವನ್ನು ಅನುಭವಿಸುವೆ. ಸಮಾಜವು ವ್ಯಕ್ತಿಗಳ ಸಮಷ್ಟಿಯು. ಜಗತ್ತು ಭಗವಂತನ ವ್ಯಕ್ತರೂಪವು. ಆದ್ದರಿಂದ ಜನಸೇವೆಯು ಜನಾರ್ಧನನ ಸೇವೆಯಾಗುವುದು. ಸೇವೆಯೇ ಆರಾಧನೆಯು. ಈ ಭಾವದಿಂದಲೇ ಶ್ರಮಿಸಬೇಕು. ಆಗ ಹೃದಯವು ಶೀಘ್ರವಾಗಿ ಶುದ್ಧವಾಗುವುದು ಮತ್ತು ಸಾಕ್ಷಾತ್ಕಾರವನ್ನು ಹೊಂದುವುದು.

ನಿಮ್ಮೊಳಗೆ ಬಾಳಿರಿ. ಆತ್ಮದಲ್ಲಿ ಒಂದಾಗಿರಿ. ಆತ್ಮವನ್ನು ತಿಳಿಯಿರಿ. ಅದೇ ಆಗಿರಿ. ಮುಕ್ತರಾಗಿ. ಸಂತೋಷವಾಗಿ ಸಂಚರಿಸಿ. ಪ್ರೇಮ, ಆತ್ಮಜ್ಞಾನ ಮತ್ತು ಆಳವಾದ ಅರಿವಿನ ಮೂಲಕ ರಾಷ್ಟ್ರಗಳನ್ನೂ ಒಂದುಗೂಡಿಸಬಹುದು. ಪರಮಾರ್ಥ ಸಂಸ್ಕೃತಿ, ವೇದಾಂತ ಅನುಷ್ಠಾನಗಳ ಮೂಲಕ ಜನಾಂಗ ಗಳನ್ನು ಒಂದುಗೂಡಿಸಬಹುದು. ಉಪನಿಷತ್ತುಗಳ ಪ್ರಾಚೀನ ಜ್ಞಾನದ ಅನುಭಾವದಿಂದ ಜನಾಂಗಗಳನ್ನು ಒಂದುಗೂಡಿಸಬಹುದು. ಹೃದಯದ ವಿಕಾಸ, ಸಹಿಷ್ಣುತೆಯ ವೈಶಾಲ್ಯದಿಂದ ಭಿನ್ನಭಿನ್ನ ಬಣಗಳವರನ್ನೂ, ವಂಶದವರನ್ನೂ (sects & cults), ಒಂದುಗೂಡಿಸಬಹುದು. ಒಂದು ಸಂಸಾರದಲ್ಲಿನ ಜನರನ್ನೇ ಪ್ರೇಮ, ಸಮಾಹಿತ ಚಿತ್ತ (complacency) ಮತ್ತು ಜ್ಞಾನದಿಂದ ಒಂದುಗೂಡಿಸಬಹುದು.

---

# ೨. ಕರ್ಮಯೋಗದ ಪ್ರಭೇದಗಳು

ಸ್ವಾರ್ಥರಹಿತ, ಆತ್ಮಭಾವ ಪೂರಕವಾದ ಮಾನವತಾ ಸೇವೆಯು ಸಾಮಾಜಿಕ, ಧಾರ್ಮಿಕ ಸಂಸ್ಥೆಗಳ ಮೂಲಕವಾಗಿ ನಡೆಯುವುದು. ಬಡವರಿಗೆ ಆಹಾರವನ್ನು ನೀಡುವುದು, ಬೆತ್ತಲೆ ಇರುವವರಿಗೆ ಬಟ್ಟೆ ಕೊಡುವುದು, ಆರ್ತರಿಗೆ ಸಮಾಧಾನ ಮಾಡುವುದು, ರೋಗಿಗಳಿಗೆ ನೆರವು ನೀಡುವುದು, ನಿರಾಶರಾದವರನ್ನು ಸಮಾಧಾನಗೊಳಿಸುವುದು, ನೊಂದು ಬಿದ್ದವರಿಗೆ ಸಹಾಯಮಾಡುವುದು, ಅಜ್ಞಾನಿಗಳಿಗೆ ಆತ್ಮಜ್ಞಾನವನ್ನು ನೀಡುವುದು, ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ಪಾಠ ಹೇಳುವುದು, ಭಗವದಿಚ್ಛೆಯಂತೆಯೇ ತಾನು ನಡೆಯುತ್ತಿರುವುದಾಗಿ ತಿಳಿಯುವುದು, ನಿಷ್ಕಾಮ್ಯ ಕರ್ಮಯೋಗವನ್ನು ನಿಮಿತ್ತಭಾವದಿಂದ ಆಚರಿಸುವುದು, ಹೃದಯ ಪರಿಶುದ್ಧತೆಗೆ ಮತ್ತು ಶ್ರೇಷ್ಠ ಸತ್ಯದ ಪ್ರಾಪ್ತಿಗೆ ಇದು ಪೂರ್ವಸಿದ್ಧತೆಯೆಂದು ತಿಳಿಯಬೇಕು ಮತ್ತು ಇವೆಲ್ಲವೂ ಕರ್ಮಯೋಗದ ಪ್ರಭೇದಗಳೆಂದು ಮನಗಾಣಬೇಕು.

ಒಬ್ಬ ವೈದ್ಯನು ಬಡವರನ್ನು ಸರಿಯಾದ ಮನೋಭಾವದಿಂದ ಸೇವೆ ಮಾಡಿದರೆ ಅವನ ಹೃದಯವು ಶೀಘ್ರದಲ್ಲೇ ಶುದ್ಧವಾಗುವುದು. ಈ ಶುದ್ಧಿಯ ಮೂಲಕ ತನ್ನ ಆತ್ಮಶುದ್ಧಿಗೂ, ಆತ್ಮ ಸಾಕ್ಷಾತ್ಕಾರಕ್ಕೂ ಈ ವೃತ್ತಿಯು ಶ್ರೇಷ್ಠವಾದುದು. ಆತನು ಕರ್ಮಯೋಗಿಯ ಸತ್ಯಭಾವವನ್ನು ತಳೆದರೆ, ನಾರಾಯಣ ಅಥವಾ ಆತ್ಮನನ್ನೇ ಸೇವಿಸುತ್ತಿರುವೆನೆಂದು ಭಾವಿಸಿದರೆ ಆ ವೈದ್ಯನು ದೇವರನ್ನು ಶೀಘ್ರವಾಗಿ ಕಾಣಬಹುದು.

ಬಡವರಿಗೆ, ರೋಗಿಗಳಿಗೆ, ಅಸಹಾಯಕರಿಗೆ, ಅನಾಥರಿಗೆ, ಆಪತ್ತಿನಲ್ಲಿರುವವರಿಗೆ ಕೊಡಿರಿ. ನಿರ್ಗತಿಕರಿಗೆ, ಅಂಗವಿಕಲರಿಗೆ, ಕುರುಡರಿಗೆ, ಅನಾಥ ವಿಧವೆಯರಿಗೆ ಸಹಾಯಮಾಡಿರಿ. ಸಾಧು-ಸನ್ಯಾಸಿಗಳಿಗೆ, ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಕೊಡಿರಿ. ಧರ್ಮಕಾರ್ಯಗಳನ್ನು ಸೇವೆಗಳನ್ನು ಸಲ್ಲಿಸಲು ಅವಕಾಶ ಕೊಟ್ಟವನಿಗೆ ವಂದಿಸಿರಿ. ನಿಮ್ಮ ಧರ್ಮಕಾರ್ಯಗಳ ಮೂಲಕವಾಗಿ ಆತ್ಮಸಾಕ್ಷಾತ್ಕಾರವನ್ನು ಹೊಂದಿ. ಮತ್ತು ದಾನದ ಮೂಲಕ ಸದ್ಭಾವದ ಮನಸ್ಸನ್ನು ಹೊಂದಿ. ನ್ಯಾಯವಾದ ಭಾವದಿಂದ ಧರ್ಮಮಾಡುವವರಿಗೆ ಜಯವಾಗಲಿ.

ಅರಿತುಕೊಳ್ಳುವ ಹೃಯವನ್ನು ಬೆಳೆಸಿರಿ. ನಿಮ್ಮ ಕಿರಿಯ ಸಹೋದರರೂ ಆಧ್ಯಾತ್ಮಮಾರ್ಗದಲ್ಲಿರಲು ಸಹಾಯಮಾಡಿ. ಅವರನ್ನು ಉದ್ಧರಿಸಿ. ಅವರ ಮಾರ್ಗದಲ್ಲಿ ಬೆಳಕನ್ನು ನೀಡಿ. ಅವರಿಂದ ಪರಿಪೂರ್ಣತೆಯನ್ನು ನಿರೀಕ್ಷಿಸದಿರಿ. ದಯಾವಂತರಾಗಿ. ನೀವು ಎಷ್ಟರಮಟ್ಟಿಗೆ ಮಾಡುವಿರೋ ಅವರು ಅವರ ಶಕ್ತಿ ಇದ್ದಷ್ಟುಮಟ್ಟಿಗೆ ಮಾಡುತ್ತಿರುವರು. ಅವರಿಗೆ ಸಹಾಯಮಾಡುವುದ ರಿಂದ ನೀವು ವರ್ಧಿಸುವಿರಿ.

ಹೃದಯ ಶುದ್ಧಿಯನ್ನು ಹೊಂದಲು, ಭಗವಂತನಿಂದ ದಿವ್ಯವಾದ ಬೆಳಕನ್ನು ಪಡೆಯಲು ಸ್ವಾರ್ಥರಹಿತ ಸೇವೆಯನ್ನು ನೀಡುವುದಕ್ಕಾಗಿ ಸೇವಾ ಶಿಬಿರಗಳನ್ನು ಶೀಘ್ರವಾಗಿ ಆರಂಭಿಸಿ. ಕ್ರಮಬದ್ಧವಾದ ನಿಯಮನಿರತವಾದ ರೀತಿಯಲ್ಲಿ ಶ್ರಮಿಸಿರಿ. ಸೇವೆಯಲ್ಲಿ ಮಾತ್ರ ಉಜ್ಜ್ವಲತೆಯಿರಲಿ, ಸೇವಾ ದೃಷ್ಟಿಯಿರಲಿ. ಕೆಲವೇ ಹೊತ್ತು ಅಲ್ಪ ನಿದ್ರೆ ಮತ್ತು ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಳ್ಳಿ. ನೋವಿಲ್ಲ ಮತ್ತು ನಷ್ಟವಿಲ್ಲ. ಅದರ ಫಲವು ಅಮರತೆಯೇ. ನೀವು ಕ್ರಿಯಾಯೋಗಿಗಳಾಗಿ. ಭಗವಂತನಿಗೂ ಅವನ ನಾಮಗಳಿಗೂ, ನಿಸ್ವಾರ್ಥ ಸೇವಕರಿಗೂ, ನಿಜವಾದ ಕರ್ಮಯೋಗಿಗಳಿಗೂ, ಗೀತೆಯ ಉಪದೇಶದಂತೆ ನಡೆವ ಆಧ್ಯಾತ್ಮ ಪುಷ್ಪಗಳಂತಿರುವ ನಿಷ್ಕಾಮಕರ್ಮ ಯೋಗಿ ಗಳಿಗೂ ನಿರ್ಮಲ ಯಶಸ್ಸು ದೊರೆಯಲಿ.

ಆಧ್ಯಾತ್ಮ ಕ್ಷೇತ್ರದಲ್ಲಿ ಅಂಕಿಗಳಿಗೆ ಗಣನೆಯಿಲ್ಲವು. ಶಂಕರಾಚಾರ್ಯ ರೊಬ್ಬರೇ ಅದ್ವೈತ ವೇದಾಂತವನ್ನು ಸಿದ್ಧಾಂತಮಾಡಿದರು. ಪಾಪಪುರುಷನಿಗೆ ಅಸಂಖ್ಯಾತವಾದ ಅನುಯಾಯಿಗಳಿರುವರು. ಹಾಗೆಂದಮಾತ್ರಕ್ಕೆ ದೈವ ವಿರೋಧಿಯ ಗೋಷ್ಠಿಯು ಉತ್ತಮವೆಂದು ತೀರ್ಮಾನಿಸೋಣವೇ ? ಕೆಲವೇ ಶ್ರದ್ಧಾಳುಗಳಾದ ಸದಸ್ಯರೇ ನಿಜವಾದ ಸಂಪತ್ತು. ಈ ಕೆಲವೇ ಸದಸ್ಯರಿಂದ ಅದ್ಭುತವಾದ ಕಾರ್ಯಗಳನ್ನು ಸಾಧಿಸಬಹುದು. ಇನ್ನು ಮುಂದೆ, "ಅಲ್ಪ ಸದಸ್ಯರ ಸಂಖ್ಯೆ ಇರುವುದರಿಂದ ಸಮಾಜೋದ್ಧಾರ ಮುಂತಾದ ಅತಿಶಯವಾದ ಕಾರ್ಯಗಳನ್ನು ನಾವು ಮಾಡಲಾರೆವು" ಎಂದು ದೂರದಿರಿ. ಯಾವು ದಾದರೂ ಒಂದು ವಿಧವಾದ ಬಡವರ ಮತ್ತು ರೋಗಿಗಳ ಸೇವೆಯು ನಿಮ್ಮ ಆಧ್ಯಾತ್ಮದ ಬೆಳವಣಿಗೆ, ವಿಕಾಸ ಮತ್ತು ಮುಂದುವರೆಯುವಿಕೆಗೆ ಒಳ್ಳೆಯ ಸಾಧನವು. ಏಕೀಭಾವವುಳ್ಳ ಇಬ್ಬರು ಅಥವ ಮೂವರೇ ಒಂದುಗೂಡಿ

ಅತ್ಯುಪಯುಕ್ತವಾದ ಮಹತ್ಕಾರ್ಯಗಳನ್ನು ಸುಲಭವಾಗಿ ಸಾಧಿಸ ಬಲ್ಲರು.

ಯಾವುದೇ ವಿಧವಾದ ಭಿನ್ನಾಭಿಪ್ರಾಯ ಅಥವಾ ಒಡಕನ್ನು ಸ್ನೇಹ ಮತ್ತು ಪ್ರೇಮದಿಂದ ಶಾಂತವಾಗಿ ವಿಚಾರಿಸಿ. ತಪ್ಪು ತಿಳಿವಳಿಕೆಯನ್ನು ತೊಡೆದುಹಾಕಿ ಭದ್ರಪಡಿಸಿ. ಆಗ ಸಂಘಟನಾ ಸಾಮರ್ಥ್ಯವಿರುವುದು. ಅತಿ ಹೆಚ್ಚಿನ ಉಪಯುಕ್ತ ಕಾರ್ಯವನ್ನು ಮಾಡಬಹುದು. ಪರಸ್ಪರ ಹೃದಯಗಳನ್ನು ಕೊಕ್ಕು ಪ್ರೇಮ ಮತ್ತು ಸೇವೆಯ ಮೂಲಕ ಮುಂದುವರೆ ಯುವುದನ್ನು ಕಲಿಯಿರಿ. ಇದು ಅತ್ಯುತ್ಕೃಷ್ಟವಾದ ಯೋಗವು.

ಡಿಸ್ಟ್ರಿಕ್ಟ್ ಕಲೆಕ್ಟರ್ ಆಗಿದ್ದ ಒಬ್ಬ ಇಂಗ್ಲಿಷರವನು ರಸ್ತೆಯಲ್ಲಿ ಸಾಯುವಸ್ಥಿತಿಯಲ್ಲಿ ನರಳುತ್ತಿರುವವನೊಬ್ಬನನ್ನು ಕಂಡನು. ಆ ರೋಗಿಯನ್ನು ಕೂಡಲೇ ತನ್ನ ಹೆಗಲುಗಳಮೇಲೆ ಹೊತ್ತು ಹತ್ತಿರದ ವೈದ್ಯಶಾಲೆಗೆ ಕೊಂಡೊಯ್ದನು. ಆತನು ದಯಾಮಯನು.

ಐಕ್ಯತಾ ಭಾವನೆಯನ್ನು ನೋಡಿರಿ. ಅವನಿಗೆ ಉಪನಿಷತ್ತುಗಳು ತಿಳಿದಿದೆಯೋ ಇಲ್ಲವೋ, ಅಂತೂ ಅವನು ಅನುಷ್ಠಾನ ವೇದಾಂತಿಯು (practical vedantin). ಅನೇಕ ಜನರು, ಅಷ್ಟೇಕೆ ಸನ್ಯಾಸಿಗಳೂ ಹೇಳುತ್ತಾರೆ! “ಮಹಾತ್ಮಾ ಗಾಂಧೀಜಿ ಒಬ್ಬ ಸರಳ ಕರ್ಮಯೋಗಿ ಮಾತ್ರ. ಅವರು ವೇದಾಂತಿಯಲ್ಲವು.” ಆದರೆ ನಿಜವನ್ನು ನುಡಿಯುವುದಾದರೆ ಮಹಾತ್ಮಾ ಗಾಂಧೀಜಿಗಿಂತ ದೊಡ್ಡ ಅನುಷ್ಠಾನವೇದಾಂತಿ ಇಲ್ಲವು. “ಅವರು ವಿಶ್ವದ ಹಿತಕ್ಕಾಗಿ ಬಾಳುತ್ತಿರುವರು. ಅವರು ವಿಶ್ವಚೈತನ್ಯದ ಕೇಂದ್ರವು. ಎಲ್ಲರೊಡನೆ ಒಂದಾಗಿರುವರು. ಶುದ್ಧಪ್ರೇಮದಿಂದ ಎಲ್ಲರನ್ನೂ ಆಲಂಗಿಸುವರು. ಆತ್ಮಾರ್ಪಣೆ, ಸೇವೆ, ಅಹಿಂಸೆ, ಸತ್ಯಪೂರ್ಣತೆ, ಪರಿಶುದ್ಧತೆ, ನಮ್ರತೆ ಮತ್ತು ಐಕ್ಯತೆಯೇ ಅವರ ಅಭಿಪ್ರಾಯುಗಳು. ಆದರೂ ತಾನು ವೇದಾಂತಿ ಎಂಬ ಹೆಸರನ್ನು ತಳೆದಿಲ್ಲವು. ವೇದಾಂತಿಗಳೆಂದು ಕರೆದುಕೊಳ್ಳುವವರನ್ನು ಸಮಾಧಾನಮಾಡಲು, **‘ನಾನು ಬ್ರಹ್ಮನು – ಅಹಂ ಬ್ರಹ್ಮಾಸ್ಮಿ’** ಮುಂತಾಗಿ ಹೇಳಿಕೊಳ್ಳುವುದಿಲ್ಲ. ಅದೇ ಅವರ ದೌರ್ಬಲ್ಯ ಅಥವಾ ದೋಷವು.”

ಇಡೀ ಜಗತ್ತು ನಿನ್ನನ್ನು ವಿರೋಧಿಸಲು ಸಿದ್ಧವಿರಬಹುದು. ಪ್ರಪಂಚವೇ ಒಂದುಕಡೆಯಾಗಿ ನೀನು ಮಾತ್ರ ಒಂಟಿಯಾಗಿ ಇದ್ದರೊಡನೆ

ಹೋರಾಡಬೇಕಾದರೂ ಧೈರ್ಯದಿಂದ ನೀನು ಹೋರಾಡಲೇಬೇಕು. ಒಂದು ಅಂಗುಲದಷ್ಟು ಹಿಂತೆಗೆಯಬೇಡ. ನಿಮ್ಮ ತತ್ವಗಳನ್ನು, ಆದರ್ಶಗಳನ್ನು ಭದ್ರವಾಗಿ ಹಿಡಿಯಿರಿ. (tenaciously).

ತಾಮಸಿಗಳು ತಮಗೆ ಇಷ್ಟಬಂದಂತೆ ನಡೆಯಲಿ. ನಿನಗೆ ವಿರುದ್ಧವಾಗಿ ಬೇಕಾದಷ್ಟು ಅಪಪ್ರಚಾರಮಾಡಲಿ. ನಿನ್ನ ಹಿಂದೆ ದೂಷಿಸಲಿ, ಹಂಗಿಸಲಿ (vilify). ಅಲ್ಲಾಡದೆ ನಿಂತಿರು. ಪ್ರಾಣಾಪಾಯಕ್ಕೂ, ಚಿತ್ರಹಿಂಸೆಗಳಿಗೂ, ಎಲ್ಲ ವಿಧವಾದ ವಿರೋಧಗಳನ್ನೂ ಕಂಡು ಹೆದರದಿರು. ದೇವರು ಸದಾ ನಿನ್ನೊಡನೆ ಇರುವನು. "ಸತ್ಯಮೇವ ಜಯತೇ ನಾನೃತಮ್". ಸತ್ಯವೊಂದೇ ಜಯವನ್ನು ಪಡೆಯುವುದು. ಎಂದಿಗೂ ಅನೃತವಲ್ಲವು. ಸತ್ಯವಂತನೂ, ಶ್ರದ್ಧಾವಂತನೂ ಆಗು. ಎರಡರಷ್ಟು ಶಕ್ತಿ, ಬಲ ಮತ್ತು ಉತ್ಸಾಹದಿಂದ ಸ್ವಾರ್ಥರಹಿತನಾಗಿ ದುಡಿ.

---

## ೩. ಕರ್ಮಯೋಗದ ಅನುಷ್ಠಾನವು

ಸೇವೆಯೇ ಆರಾಧನೆಯು. ಕರ್ಮವು ನಾರಾಯಣನ ಪೂಜೆಯು. ಕರ್ಮವೇ ಧ್ಯಾನವು. ಇದನ್ನು ಮರೆಯಬೇಡ. ಧ್ಯಾನ ಮತ್ತು ಕರ್ಮವನ್ನು ಹೊಂದಿಸಿಕೊಂಡು ಅಧ್ಯಾತ್ಮದಲ್ಲಿ ವಿಕಾಸಮಾಡು. ಸರಿಯಾದ ಭಾವದಿಂದ ಮಾಡುವ ಗುಡಿಸುವ ಕಾರ್ಯವೂ ಯೋಗವೇ. **"ವಸುಧೈವ ಕುಟುಂಬಕಂ"** ಎಂದರೆ ಸಮಸ್ತ ಪ್ರಪಂಚವನ್ನು ನಿನ್ನ ಗೃಹವನ್ನಾಗಿ ತಿಳಿ. ಕೊಠಡಿಯ ಮೂಲೆಯಲ್ಲಿ ಕುಳಿತು ಕಣ್ಣು ಮುಚ್ಚಬೇಕಾಗಿಲ್ಲವು.

ಫಲಾಪೇಕ್ಷೆಯಿಲ್ಲದೆ ಅಕರ್ತೃಭಾವ ಮತ್ತು ಸಾಕ್ಷೀಭಾವದಿಂದ ಮಾಡಿದುದು ಕರ್ಮವೆನಿಸುವುದಿಲ್ಲ. ಅದು ಜ್ಞಾನಾಗ್ನಿಯಲ್ಲಿ ಸುಡಲ್ಪಟ್ಟಿರುವುದು. ಅದು ಸಂಸಾರಕ್ಕೆ ಬಂಧಿಸಲಾರದು. ಸಕಾಮ್ಯ ಕರ್ಮವನ್ನು ಮಾಡಲೇ ಬೇಡಿರೆಂದು ಮಾತ್ರ ಶ್ರೀ ಶಂಕರರು ಒತ್ತಿ ಒತ್ತಿ ಹೇಳಿರುವರು. ಇಂದಿನ ಹಲವು-

ಮಡಿನಂತ ಮಾಯಾವಾದಿಗಳು ಶ್ರೀ ಶಂಕರರ ಅಭಿಪ್ರಾಯವನ್ನು ತಪ್ಪಾಗಿ ತಿಳಿದಿರುವರು. ಸ್ವಾರ್ಥರಹಿತ ಸೇವೆಯೇ ಬೀಜವು. ಎಲ್ಲವೂ ನಾರಾಯಣನು, ಎಲ್ಲ ಭೂತಗಳಲ್ಲಿರುವ ನಾರಾಯಣನಿಗೇ ಸೇವೆಮಾಡುತ್ತಿರುವೆನು ಎಂಬ ನಾರಾಯಣಭಾವವೆ ಮೂಲವಾದ ಬೇರು. ಉತ್ಸಾಹವೇ ಮಳೆಯು. ಹೃದಯ ವಿಕಾಸವೇ ಪುಷ್ಪವು. ಚಿತ್ತಶುದ್ಧಿಯೇ ಫಲವು. ಇದೇ ಕರ್ಮ ಯೋಗದ ಮಾರ್ಗವು.

“ದೇವರು ಕೈಗಳಿಂದ ಕಟ್ಟಲ್ಪಟ್ಟ ದೇವಾಲಯದಲ್ಲಿ ವಾಸಿಸುವುದಿಲ್ಲವು. ಆದರೆ ಯಾವ ಸ್ತ್ರೀಪುರುಷರ ಹೃದಯದಲ್ಲಿ ಪ್ರೇಮವು ನೆಲಸಿರುವುದೋ, ಎಲ್ಲರ ಹಿತಕ್ಕಾಗಿ ಸೇವೆ ಮಾಡಲು ಹಾತೊರೆಯುವುದೋ ಅವರ ಹೃದಯಗಳಲ್ಲಿ ನೆಲೆಸಿರುವನು” ಎಂದು ಪಾಲ್ ಮತ್ತು ಜಾನ್ ಸಂತರು ಹೇಳಿರುವರು. ಮಾನವನ ಹೃದಯವು ಭಗವಂತನ ಅಮೋಘವಾದ ದೇವಾಲಯವು. ಶ್ರೀಮಂತರು ಹೆಸರು ಮತ್ತು ಖ್ಯಾತಿಗಾಗಿ ದೇವಾಲಯಗಳನ್ನು ಕಟ್ಟಿಸಿ, ತಮ್ಮ ನಾಮ ಫಲಕಗಳನ್ನು (name plates) ಪ್ರವೇಶದ್ವಾರಗಳ ಮೇಲೆ ನೆಡಿಸುವರು. ಇದೊಂದು ದೊಡ್ಡ ಮೂರ್ಖತನವಲ್ಲವೇನು ?

ಈಶ್ವರನೇ ಪ್ರಭುವು, ಸೃಷ್ಟಿಕರ್ತನು, ನಿಯಾಮಕನು ಮತ್ತು ಎಲ್ಲರ ಉದ್ಧಾರಕನು. ಮೇಲು, ಕೀಳು ಮತ್ತು ಎಲ್ಲರಲ್ಲಿಯೂ ವಾಸಿಸುವನು.

ಅನಾಸಕ್ತಿಯಿಂದ ಮತ್ತು ಆತ್ಮಭಾವದಿಂದ ಇತರರಿಗೆ ಸೇವೆಮಾಡಲು, ಅನ್ಯರು ನನಗೆ ಸೇವೆ ಮಾಡಲು ಅವಕಾಶ ಕೊಡದೆ, ಏನನ್ನೂ ನಿರೀಕ್ಷಿಸದೆ ಇರುವದೇ ನನ್ನ ಯೋಗವು, ಮತವು ಮತ್ತು ಧರ್ಮವು.

ದುರಭಿಮಾನ ವ್ಯಕ್ತಿತ್ವದ ಅಲ್ಪತ್ವವನ್ನು ಮರೆಯಿರಿ. ನಿಮ್ಮ ಹಿತ ಗಳನ್ನು, ಆಕಾಂಕ್ಷೆಗಳನ್ನು ಮತ್ತು ಬಯಕೆಗಳನ್ನು ಮರೆತು, ಎಲ್ಲ ಭೂತ ಗಳನ್ನೂ ಆಲಂಗಿಸಿರಿ. ಇತರರಿಗಾಗಿ ದುಡಿಯಿರಿ. ಎಲ್ಲ ವಿಧವಾದ ಸಣ್ಣತನ ವನ್ನು ಬಿಟ್ಟುಬಿಡಿ. ಧಾರಾಳಿಗಳೂ, ಸಭ್ಯರೂ, ಮತ್ತು ಉದಾರಶೀಲರೂ ಆಗಿ. ಮಹತ್ಪೂರ್ಣವಾದ ‘**ನಾನು**’ ವಿನ ನಿಮ್ಮ ಆತ್ಮಸ್ವಭಾವವನ್ನು ಹೆಚ್ಚುಹೆಚ್ಚಾಗಿ ಅರಿತುಕೊಳ್ಳುವಿರಿ.

ಯಾವ ತನ್ನ ಸ್ವಸುಖ ಮತ್ತು ಸ್ವಹಿತವನ್ನು ಉಪೇಕ್ಷಿಸುವನೋ ಮತ್ತು ಇತರರಿಗೆ ಸೇವೆ ಮತ್ತು ಸಹಾಯವನ್ನು ನೀಡುವನೋ

ಅವನೇ ನಿಜವಾಗಿಯೂ ಅಧ್ಯಾತ್ಮದ ಹಾದಿಯಲ್ಲಿ ಮುಂದುವರೆದ ವಿದ್ಯಾರ್ಥಿಯು.

ನಿಸ್ವಾರ್ಥಿಯೂ, ದೇಹಾಧ್ಯಾಸವರ್ಜಿತನೂ ಆದವನು, ಮಾನವರಿಗೆ ಯಾವ ಬಗೆಯ ಸೇವೆಯನ್ನಾದರೂ ಮಾಡಬಲ್ಲನು. ಆ ಮನುಷ್ಯನು ನಿಜವಾದ ಶಕ್ತಿಯನ್ನು ಹೊಂದಬಲ್ಲನು. ಅಂಥವನೇ ಭಯರಹಿತನು.

ಶುದ್ಧ ಅಪರಂಜಿಯಿಂದ ಯಾವ ಆಭರಣವನ್ನೂ ಮಾಡಲಾರೆ. ಕೇವಲ ೨%ರಷ್ಟು ಮತ್ಯಾವ ಲೋಹವನ್ನಾದರೂ ಚಿನ್ನದೊಡನೆ ಬೆರಸಿದರೆ, ಬೇಕು ಬೇಕಾದ ಆಭರಣಗಳನ್ನು ಮಾಡಬಹುದು. ಹಾಗೆಯೇ ೨%ರಷ್ಟು ರಜಸ್ಸಿನೊಡನೆ ವಿಶ್ವದಲ್ಲಿ ಕರ್ಮವನ್ನು ಮಾಡುವನು. ಆದರಿಂದ ಅವನು ಬಾಧಿಸಲ್ಪಡುವುದಿಲ್ಲ. ಜನರು ೯೮%ರಷ್ಟು ರಜಸ್ಸಿನಿಂದ ಮತ್ತು ೨%ರಷ್ಟು ಸತ್ವದಿಂದ ಪ್ರಪಂಚದಲ್ಲಿ ದುಡಿದರೆ ಅವರು ಅಪವಿತ್ರಗೊಳಿಸಲ್ಪಡುವರು (contaminated). ಜಗತ್ತಿನ ಹಿತಕ್ಕಾಗಿ ದುಡಿಯಲಿಚ್ಛಿಸುವವರು ಅಪಾರವಾದ ಸತ್ವದಿಂದ ತುಂಬಿರಬೇಕು. ಆಗ ಮಾತ್ರ ಲೌಕಿಕರೊಡನೆ ಬೆರೆತರೂ ಅವರಿಗೆ ಬಾಧೆಯಾಗದು. ಮೇಲಾಗಿ ಜನರನ್ನೂ ಅವರು ಉದ್ಧಾರಮಾಡಬಲ್ಲರು.

ದ್ವೇಷ, ಕಲಹ, ಅಧಿಕಾರಲೋಭ, ಬಲದ ಆಶೆ, ಚಿನ್ನದ ಅಪೇಕ್ಷೆಯನ್ನು ಬಿಡಿರಿ. ಸೌಜನ್ಯದ ಕಿರೀಟವನ್ನು ಧರಿಸಿ. ಪರಿಶುದ್ಧರೂ, ಕಾಂತಿಮಯರೂ ಆಗಿ. ದೇವರಲ್ಲಿ ವಿಶ್ವಾಸವನ್ನು ಬೆಳೆಸಿ. ಜಪ ಮತ್ತು ಧ್ಯಾನದಲ್ಲಿ ತಪ್ಪದೆ ಮುಂದುವರೆಯಿರಿ. ಪ್ರೇಮ ಮತ್ತು ಬೆಳಕನ್ನು ಪಡೆಯಿರಿ.

ಸದಾ ಚುರುಕು ಅಭ್ಯಾಸಗಳನ್ನಿಟ್ಟುಕೊಳ್ಳಿ. ಇತರರಿಗೆ ಒಳ್ಳೆಯದನ್ನು ಮಾಡಲು ನಿಮ್ಮ ಶಕ್ತಿ ಇದ್ದಷ್ಟು ತ್ಯಾಗಮಾಡಿ. ಸ್ವಾರ್ಥವನ್ನು ಸಂಪೂರ್ಣವಾಗಿ ತ್ಯಜಿಸಿ.

ಒಬ್ಬರಿಗೆ ಸೇವೆ ಮಾಡುತ್ತಿರುವಾಗ ಅಥವಾ ದಾನ ಮಾಡುವಾಗ ಏನನ್ನೂ ನಿರೀಕ್ಷಿಸದಿರಿ. ಸೇವೆ ಮಾಡುವ ಸದವಕಾಶವನ್ನು ನೀಡಿದನೆಂದು ಅವನಿಗೆ ವಂದಿಸಿ.

ಯಾರು ಜಗತ್ತಿನ ಸೇವೆ ಮಾಡುವರೋ ಅವರು ನಿಜವಾಗಿ ತಮಗೂ ಸೇವೆ ಮಾಡಿಕೊಂಡಂತೆ. ಇತರರಿಗೆ ಸಹಾಯ ಮಾಡಿದವನು ತನಗೂ ಸಹಾಯ ಮಾಡಿಕೊಳ್ಳುವನು. ಆದ್ದರಿಂದ ಒಬ್ಬ ಮನುಷ್ಯನಿಗೆ ಅಥವಾ ನಿಮ್ಮ ದೇಶಕ್ಕೆ

ಸೇವೆ ಮಾಡುವಾಗ ನೀವು ಉತ್ತಮರಾಗಲು, ಸರಿಯಾಗಲು ಮತ್ತು ಸೇವೆ ಯಿಂದ ಕಡೆದ ಮೂರ್ತಿಯಾಗಲು ಭಗವಂತನು ಒಂದು ಅವಕಾಶವನ್ನು ಕಲ್ಪಿಸಿಕೊಟ್ಟನೆಂದು ಸರ್ವದಾ ಚಿಂತಿಸಿರಿ ಮತ್ತು ಭಾವಿಸಿರಿ ಸೇವೆ ಮಾಡಲು ಅವಕಾಶವನ್ನು ನೀಡಿದವನಿಗೆ ಕೃತಜ್ಞರಾಗಿರಿ ಇತರರಿಗೆ ಸಹಾಯಮಾಡುವ ಮತ್ತು ಸೇವೆ ಮಾಡುವ ಒಂದು ಅವಕಾಶವನ್ನೂ ಕಳೆದುಕೊಳ್ಳಬೇಡಿ ಸಂತೋಷವಾಗಿಯೂ, ಮನಃಪೂರ್ವಕವಾಗಿಯೂ ಸೇವೆ ಮಾಡಿ ಎಂದಿಗೂ ಬೇಸರದ ಮುಖವನ್ನು ಅಥವಾ ನೋವಿನ ಮುಖವನ್ನು (sunday face) ತೋರಿಸದಿರಿ ಪ್ರತಿಯೊಂದು ಕೆಲಸವನ್ನೂ ಏಕಾಗ್ರತೆಯಿಂದಲೂ, ಭಕ್ತಿ ಯಿಂದಲೂ ಮತ್ತು ಅಚ್ಚುಕಟ್ಟಾಗಿಯೂ ಮಾಡಿ ಆದಷ್ಟು ಅತ್ಯುತ್ತಮ ವಾದ ರೀತಿಯಲ್ಲಿ ಪ್ರತಿಕ್ಷಣವನ್ನೂ ಸೇವೆಗಾಗಿ ವಿನಿಯೋಗಿಸಿ

ಇತರರಿಗೆ ಸೇವೆ ಮಾಡಿ, ಸಹಾಯ ಮಾಡಿ ನಿಮ್ಮ ಹೃದಯವನ್ನು ಶುದ್ಧ ಮತ್ತು ಅಕೃತ್ರಿಮ ಪ್ರೀತಿಯಿಂದ ತುಂಬಿರಿ ಸದಾ ಒಳ್ಳೆಯದನ್ನೇ ಮಾಡಿ ದಿನವೂ ಕ್ರಮತಪ್ಪದೆ ನಿಸ್ವಾರ್ಥ ಸಮಾಜಸೇವೆಯನ್ನು ಭಾವ ಪೂರ್ವಕವಾಗಿ, "ವ್ಯಕ್ತರೂಪಿನ ದೇವರನ್ನು ಸೇವೆಮಾಡುತ್ತಿದ್ದೇನೆ" ಎಂಬ ಚಿಂತನೆಯು ಅಗ್ನಿಹೋತ್ರದ ಸ್ಥಾನವನ್ನು ಪಡೆಯುವುದಲ್ಲದೆ ಚಿತ್ತ ಶುದ್ಧಿಯನ್ನೂ, ಹೃದಯ ಪರಿಶುದ್ಧತೆಯನ್ನೂ ಶೀಘ್ರವಾಗಿ ಮಾಡಬಲ್ಲದು

ಕಾರ್ಯದಲ್ಲಿ ತನ್ಮಯರಾಗಿ (absorb) ನಿಮ್ಮ ಹೃದಯ, ಮನಸ್ಸು ಮತ್ತು ಆತ್ಮವನ್ನು ಪೂರ್ಣವಾಗಿ ಸಲ್ಲಿಸಿ ಫಲಿತಾಂಶಗಳಿಗೆ ಗಮನ ಕೊಡದಿರಿ ಜಯಾಪಜಯಗಳನ್ನು ಚಿಂತಿಸದಿರಿ ಕಳೆದುಹೋದುದನ್ನೂ ಯೋಚಿಸದಿರಿ ಪೂರ್ಣವಿಶ್ವಾಸವನ್ನು ಹೊಂದಿ ಆತ್ಮಾವಲಂಬನೆಯನ್ನು ಅಭ್ಯಾಸಮಾಡಿ- ಸದಾ ಸಂತೋಷಚಿತ್ತರಾಗಿ, ಸ್ಥಿತಪ್ರಜ್ಞರಾಗಿ, ಕರ್ಮಕ್ಕಾಗಿ ಕರ್ಮವನ್ನು ಮಾಡಿ- ಧೈರ್ಯ ಮತ್ತು ಎದೆಗಾರಿಕೆಯಿಂದಿರಿ ನೀವು ಕೈಗೊಂಡ ಕಾರ್ಯ ಗಳಲ್ಲಿ ಜಯವು ಸ್ವತಃಸಿದ್ಧವು- ಇದೇ ಜಯದ ರಹಸ್ಯವು

ನೀವು ಸೇವೆ ಮಾಡುವಾಗ ದೇವರಿಗಾಗಿ ಮಾಡುತ್ತಿರುವೆನೆಂದು ನೆನಪಿ ನಲ್ಲಿಡಿ ಪ್ರತಿಯೊಂದು ಕರ್ಮವನ್ನೂ ಈಶ್ವರಾರ್ಪಣವೆಂದು ಮಾಡಿರಿ ನೀವು ಪರಮಾರ್ಥದಲ್ಲಿ ಮುಂದುವರೆಯುವಿರಿ ಕೂಡಲೇ ದಿವ್ಯತೆಗೆ ಪರಿವರ್ತನ ಹೊಂದುವಿರಿ (transmuted) ನಿಮ್ಮ ಉದ್ದೇಶಗಳನ್ನು ಯಾವಾಗಲೂ

ಪರಿಶೀಲಿಸಿ ನರಳುತ್ತಿರುವವನ ನೋವಿನ ಭಾಗಕ್ಕೆ ಮುಲಾಮನ್ನು ಹಚ್ಚುತ್ತಿರುವಾಗ ವಿರಾಟ್ ಪುರುಷನ ದೇಹವನ್ನು ಮುಟ್ಟುತ್ತಿರುವೆನೆಂದು ಅನುಭವಿಸಿ ಕೂಡಲೇ ನಿಮ್ಮ ಹೃದಯವು ಹಿಗ್ಗುವುದು ಚಿತ್ತವು ವಿಕಾಸವಾಗುವುದು ದ್ವೇಷಭಾವವು ಅದೃಶ್ಯವಾಗುವುದು ಪ್ರೇಮವು ವೃದ್ಧಿಯಾಗುವುದು ಶುದ್ಧಭಾವವು ಕ್ಷೀಣವಾದೊಡನೆಯೇ ಮತ್ತೆ ಅದನ್ನು ಹಿಡಿದು ನಿಲ್ಲಿಸಿ. ಕೆಲವು ತಿಂಗಳ ನಿರಂತರ ಅಭ್ಯಾಸದಿಂದ ಶುದ್ಧಭಾವದಲ್ಲಿ ಸದಾ ಸ್ಥಿರವಾಗಿ ನಿಲ್ಲುವಿರಿ ಕಷ್ಟಪಟ್ಟು ಹೋರಾಡಿ

ಒಬ್ಬ ಮನುಷ್ಯನ ಕಾಲನ್ನು ಎಣ್ಣೆಯಿಂದ ಉಜ್ಜಿದರೆ ಅವನಿಗೆ ಸಂತೋಷವಾಗುವುದು ಶರೀರದ ಒಂದಂಗವನ್ನು ಮುಟ್ಟಿದುದರಿಂದಲೇ ಆ ಸಂಪೂರ್ಣ ಮನುಷ್ಯನಿಗೆ ಆನಂದವಾಗುವುದು. ಕಾಲು ಆ ಮನುಷ್ಯನ ಒಂದು ಭಾಗ. ಹಾಗೆಯೇ ಒಬ್ಬ ಮನುಷ್ಯನಿಗೆ ಸೇವೆ ಮಾಡುವುದರಿಂದ ಇಡೀ ವಿರಾಟ್ ಪುರುಷನಿಗೇ ತೃಪ್ತಿಯಾಗುವುದು, ಸಂತೋಷವಾಗುವುದು ಏಕೆಂದರೆ ಮಾನವನು ವಿರಾಟಿನ ಒಂದು ಭಾಗವು

ಆತ್ಮಸಾಕ್ಷಾತ್ಕಾರವನ್ನು ಕರ್ಮಬಾಹುಳ್ಯದಿಂದ ಹೊಂದಲಾರೆ. ವಿವೇಕ (descrimination), ವಿಚಾರ, ನಿಧಿಧ್ಯಾಸನದಿಂದ ಆತ್ಮವನ್ನು ಕಂಡುಕೊಳ್ಳಬಹುದು ಏನಾದರೂ ನಿತ್ಯಗಟ್ಟಳೆಯ ಅಧ್ಯಾತ್ಮ ಚಿಂತನೆಯನ್ನು ನಡೆಸಲೇಬೇಕು ಕರ್ಮದಲ್ಲಿ ತೊಡಗಿರುವಾಗ ಭಾವವನ್ನು ಬಿಡದಿರಿ. ಭಗವತ್ಸಾನ್ನಿಧ್ಯವನ್ನು ಎಲ್ಲೆಲ್ಲಿಯೂ ಭಾವಿಸುತ್ತ ಪ್ರತಿಯೊಂದು ಕರ್ಮವನ್ನೂ ಭಗವಂತನಿಗೆ ಈಶ್ವರಾರ್ಪಣ ಬುದ್ಧಿಯಿಂದ (consecration to God) ಅರ್ಪಿಸುವ ಅಭ್ಯಾಸವನ್ನು ಮಾಡಲೇಬೇಕು. ನಿಮ್ಮೆರಡು ಕೈಗಳೂ ರಾಮ ಅಥವಾ ಕೃಷ್ಣನ ಕೈಗಳು ನಿಮ್ಮ ಮೂಲಕ ದೇವರು ನೋಡುವನು, ಮಾಡುವನು, ಕೇಳುವನು, ಚಿಂತಿಸುವನು ಮತ್ತು ತಿನ್ನುವನು ಇದನ್ನು ಭಾವಿಸಿ ಯಾವಾಗಲೂ ತಪ್ಪದೆ ಭಾವಿಸಿ

ನಿಮ್ಮ ದೃಷ್ಟಿಯನ್ನು ಒಂದೇ ವಸ್ತುವಿನಲ್ಲಿ ಕೇಂದ್ರೀಕರಿಸಿ ನಿಮ್ಮ ಉದ್ದೇಶಗಳನ್ನು ಪೂರ್ಣಮಾಡುವುದರಲ್ಲಿ ಅಚಲರೂ, ನಿಶ್ಚಲರೂ ಆಗಿ. ನಿಮ್ಮ ಮನಸ್ಸು ಹಲವು ದಿಕ್ಕುಗಳಲ್ಲಿ ಹರಿಯದಂತೆ ನೋಡಿ. ಮನಸ್ಸಿನ ಶಾಂತತೆಯನ್ನು ಬೆಳೆಸಿ ಈಶ್ವರಾರ್ಪಣ ಬುದ್ಧಿ, ಸರಿಯಾದ ಮತ್ತು ಶಾಂತವಾದ

ತಿಳುವಳಿಕೆಯಿಂದ ನಿಮ್ಮ ಕೆಲಸಗಳನ್ನು ಮಾಡಿ. ನಿಮ್ಮ ಪ್ರತಿಯೊಂದು ಕಾರ್ಯವೂ ಯೋಗದ ಚಟುವಟಿಕೆಗಳಾಗಿ ಪರಿವರ್ತನಗೊಳ್ಳುವುದು. ಪ್ರತಿಯೊಂದರಲ್ಲೂ ಜಯವನ್ನು ಪಡೆಯುವಿರಿ.

ನಿಮ್ಮ ಸಂಪಾದನೆಯ ಒಂದು ಪಾಾಗವನ್ನು ಧರ್ಮಕ್ಕಾಗಿ ಮೀಸಲಿಡಿ. "ಯಾವುದೋ ಒಂದು ಸಂದರ್ಭದಲ್ಲಿ ಮಾಡಿದ ಸೇವೆಯು ಯೋಗವೆನಿಸಲಾರದು. ಕ್ರಮಬದ್ಧವಾದ ಸೇವೆಯಲ್ಲಿ ಧುಮುಕಿ ನಿಮ್ಮನ್ನು ನೀವೇ ಮರೆತರೆ ಅದೇ ನಿಜವಾದ ಯೋಗವು."

ದೇವರು ಪ್ರೇಮವು. ಪ್ರೇಮವೇ ದೇವರು. ಪರಮಾತ್ಮನನ್ನು ಪಡೆಯಲು ಪ್ರೇಮವು ಒಳ್ಳೆಯ ಸಾಧನವು. ಆದ್ದರಿಂದ ಪ್ರೇಮವು ಸಾಧನ ಮಾತ್ರವಲ್ಲದೆ ಆದರ್ಶ ಅಥವಾ ಗುರಿಯೂ ಆಗಿರುವುದು. ಅದು ವಿಶಿಷ್ಟವಾದುದು. ಅದು ಭೇದಗಳನ್ನರಿಯದು. ಅಂತಸ್ತುಗಳನ್ನು ಹುಡುಕದು. ಸಮತೆಯನ್ನುಂಟುಮಾಡುವುದು. ಅದು ಅತ್ಯುತ್ಕೃಷ್ಟವಾದುದು. ಭಕ್ತರ ಶುದ್ಧವಾದ ಹೃದಯದಲ್ಲಿ ತುಳುಕಾಡುವುದು. ಉತ್ತಮವಾದ ಕಾರ್ಯಗಳನ್ನು ಮಾಡಲು ಮತ್ತು ದಿವ್ಯಭಾವದಿಂದ ಮಾನವಸೇವೆಯನ್ನು ಮಾಡಲು ಪ್ರೇರೇಪಿಸುವುದು. ಎಲ್ಲರಲ್ಲಿ ದೇವರನ್ನು ಕಾಣಲು ಮತ್ತು ಎಲ್ಲರನ್ನೂ ಗೌರವಿಸುವಂತೆ ಪ್ರಚೋದಿಸುವುದು. ಅದು ನಿಮಗೆ ಶಾಂತಿ, ಆನಂದ, ಸುಖ ಮತ್ತು ಅಮೃತತ್ವವನ್ನು ಕೊಡುವುದು.

ಎಲ್ಲರೊಡನೆ ಹೊಂದಿಕೊಂಡಿರಿ. ಎಲ್ಲರನ್ನೂ ಆಲಂಗಿಸಿ. ಎಲ್ಲರನ್ನೂ ಪ್ರೀತಿಸಿ. ಎಲ್ಲರಿಗೂ ಸೇವೆ ಮಾಡಿ. ಹೊಂದಿಕೊಳ್ಳುವುದನ್ನೂ, ನಿಸ್ವಾರ್ಥ ಸೇವೆಯ ಮನೋಭಾವವನ್ನೂ, ನಿರಂತರ ಸೇವೆಯಿಂದ ಇತರರ ಹೃದಯದೊಳಗೆ ಪ್ರವೇಶಿಸುವ ಶಕ್ತಿಯನ್ನೂ ಬೆಳೆಸಿಕೊಳ್ಳಿ. ಇದು ನಿಜವಾಗಿಯೂ ಐಕ್ಯತೆಯು ಅಥವಾ ಅದ್ವೈತ ಸಾಕ್ಷಾತ್ಕಾರವು.

ಮಾನವಸೇವೆಯು ಕೇವಲ ಯಾಂತ್ರಿಕ ಕ್ರಿಯೆಗಳಾಗಬಾರದು. ಅದನ್ನು ಆತ್ಮಭಾವದಿಂದ ಮಾಡಬೇಕು. ಹೃದಯ ಶುದ್ಧಿಗಾಗಿಯು ಹಾಗೂ ಬೆಳಕಿನ ಪ್ರಾಪ್ತಿಗಾಗಿ ಸೇವೆಯು ಯೋಗವಾಗಿದೆ. ಕರ್ಮ ಮಾಡುವವರು ಮನಸ್ಸನ್ನು ಈ ಭಾವದಿಂದ ಮೇಲಿಂದಮೇಲೆ ರೂಪಿಸಬೇಕು. ನೀವು ಇತರರಿಗಾಗಿ ಹೆಚ್ಚು ಹೆಚ್ಚಾಗಿ ಚಿಂತಿಸಿದರೆ ಅದು ನಿಮ್ಮ ಹೃದಯ ವೈಶಾಲ್ಯದ ಮತ್ತು ಆಧ್ಯಾತ್ಮಿಕ

ಬೆಳವಣಿಗೆಯ ಚಿಹ್ನೆಯಾಗಿದೆ. ನಿಮ್ಮ ಪ್ರತಿನಿತ್ಯದ ಅಭ್ಯಾಸವನ್ನು ಕ್ರಮ ತಪ್ಪದೆ ನಡೆಸಿ.

ನಿಮ್ಮ ಮಿತ್ರನೊಬ್ಬನಿಗೆ ಸೇವೆ ಮಾಡುವ ಇಚ್ಛೆಯಾದಾಗ, "ನಿನಗೆ ಟೀ ಅಥವಾ ಹಾಲು, ಯಾವುದರಲ್ಲಿ ಅಪೇಕ್ಷೆ?" ಎಂದು ಕೇಳದಿರಿ. ಇದು ಕೇವಲ ತುಟಿಯ ತುದಿಯ ಸೇವೆ. ಒಂದು ಬಟ್ಟಲು ಹಾಲು ಅಥವಾ ಟೀ ಯನ್ನು ತೆಗೆದುಕೊಂಡು ನಿಮ್ಮ ಮಿತ್ರನ ಮುಂದೆ ಸಂತೋಷ ಮತ್ತು ವಿನಯ ದಿಂದ ಇಡಿರಿ. ಇದು ನಿಜವಾದ ಸೇವೆಯು. ನಿಮ್ಮ ದಯೆಯು ಎಲ್ಲ ಕಾಲ ಗಳಲ್ಲೂ ಸಹಜವಾಗಿ ಅಪರಿಮಿತವಾಗಿ ಒಂದೇಸಮನಾಗಿರಲಿ. ಕೆಲವು ವಂಚಕರು ವ್ಯರ್ಥವಾದ ದಯೆಯಿಂದ ತಮ್ಮ ಸ್ನೇಹಿತರನ್ನು ಸಂಧಿಸಿದಾಗ ಹೀಗೆ ಹೇಳುವರು, "ನೀನು ಊಟಮಾಡುವುದಿಲ್ಲವೆಂದು ನನಗೆ ಗೊತ್ತು. ನಿನಗ ಒಂದು ಲೋಟ ಹಾಲು ಬೇಕೊ ಅಥವಾ ಟೀ ಬೇಕೊ ?" ಆಗ ಮಿತ್ರನು ಹೇಳುತ್ತಾನೆ, "ಇಲ್ಲ, ಇಲ್ಲ, ನಾನು ಈಗತಾನೆ ಟೀಯನ್ನು ತೆಗೆದುಕೊಂಡೆನು" ಎಂದರೆ, ಅವರು "ಹೋಗಲಿ ಈ ಒಂದು ಏಲಕ್ಕಿ ಅಥವಾ ಅಡಿಕೆಯನ್ನಾದರು ತೆಗೆದುಕೊ" ಎನ್ನುವರು ಮೊದಲಿಂದಲೂ ಅವನಿಗೆ ಹಾಲು ಅಥವಾ ಆಹಾರ ವನ್ನು ಕೊಡಲು ಇಷ್ಟವಿಲ್ಲ. ಅವರ ಸೇವಾಮನೋಧರ್ಮವು ಕೇವಲ ತುಟಿಯ ಮೇಲೆ ಮಾತ್ರ ಇರುವುದು. ಪ್ರಪಂಚದಲ್ಲಿ ಇಂತಹವರೇ ತುಂಬಿದ್ದಾರೆ. ಅವರು ಭೂಮಿಗೆ ನಿಜವಾಗಿಯೂ ಭಾರವು.

ಅಪಕ್ವನಾದ ಸಾಧಕನು ಹೀಗೆ ಭಾವಿಸುವನು, "ಗುರುವು ನನ್ನನ್ನು ತನ್ನ ಸೇವಕನಾಗಿ ಕಾಣುತ್ತಿರುವನು. ಸಣ್ಣಪುಟ್ಟ ಕಾರ್ಯಗಳಿಗೆ ನೇಮಿಸುವನು." ಕರ್ಮಯೋಗದ ನಿಜವಾದ ಬೆಲೆಯನ್ನು ಕಂಡುಕೊಂಡವನು ಪ್ರತಿಯೊಂದು ಕೆಲಸವನ್ನೂ ಯೋಗದಕಾರ್ಯವೆಂದು ಅಥವಾ ಭಗವಂತನ ಪೂಜೆಯೆಂದು ತಿಳಿಯುವನು. ಅವನ ದೃಷ್ಟಿಯಲ್ಲಿ ಹೀನಕರ್ಮವೇ ಇಲ್ಲ. ಪ್ರತಿಯೊಂದು ಕರ್ಮವೂ ನಾರಾಯಣನ ಪೂಜೆಯೇ. **ಕರ್ಮಯೋಗದ ಬೆಳಕಿನಲ್ಲಿ ಎಲ್ಲ ಕೆಲಸಗಳೂ ಪವಿತ್ರವೇ.** ಲೌಕಿಕ ಮನುಷ್ಯನು ಯಾವ ಕರ್ಮಗಳನ್ನು ತುಚ್ಛವೆಂದು ತಿಳಿದಿರುವನೋ ಅದನ್ನೇ ಸಾಧಕನು ಅತ್ಯಂತ ಸಂತೋಷದಿಂದಲೂ, ಮನಃಪೂರ್ವಕವಾಗಿಯೂ ಸದಾ ಮಾಡುವುದರಿಂದ ಕ್ರಿಯಾತ್ಮಕನಾದ ಯೋಗಿಯಾಗುವನು. ಆತನು ವಂಚಕತನ ಮತ್ತು

ಡಾಂಭಿಕತನದಿಂದ ಪೂರ್ಣವಾಗಿ ಮುಕ್ತನಾಗುವನು. ಅಹಂಕಾರವೆಂಬ ಕೀಟವು ಅವನನ್ನು ಮುಟ್ಟಲಾರದು.

ಪಾಶ್ಚಾತ್ಯ ದೇಶಗಳಲ್ಲಿ ಚಮ್ಮಾರರು ಮತ್ತು ರೈತರು ಸಮಾಜದಲ್ಲಿ ಬಹಳ ಉನ್ನತಿಗೇರಿರುವರು. ಪ್ರತಿಯೊಂದು ಕೆಲಸವೂ ಅವರ ದೃಷ್ಟಿಯಲ್ಲಿ ಗೌರವಯುತವಾದುದು. ಲಂಡನ್ನಿನ ಬೀದಿಯಲ್ಲಿ ಪೆನ್ನಿಗಾಗಿ ಬೂಟ್ ಪಾಲಿಷ್‌ಮಾಡುವ ಹುಡುಗನು ಮಧ್ಯಾಹ್ನದ ವೇಳೆ ವೃತ್ತಾಂತ ಪತ್ರಿಕೆಗಳನ್ನು ಹೊತ್ತು ಮಾರಾಟಮಾಡುವನು ಮತ್ತು ರಾತ್ರಿಯ ವೇಳೆ ಅವಕಾಶ ದೊರೆತಾಗ ಪತ್ರಿಕಾ ಸಂಪಾದಕರ ಕೈಕೆಳಗೆ ದುಡಿಯುತ್ತಾ ಕಲಿಯುವನು. ಆತನು ಗ್ರಂಥಗಳನ್ನು ಓದುವನು. ಕಷ್ಟಪಟ್ಟು ದುಡಿಯುವನು. ಒಂದು ನಿಮಿಷವನ್ನೂ ವ್ಯರ್ಥಮಾಡದಿರುವುದರಿಂದ ಕೆಲವೇ ವರ್ಷಗಳಲ್ಲಿ ಸುಪ್ರಸಿದ್ಧನೂ, ಅಂತರ ರಾಷ್ಟ್ರೀಯ ಖ್ಯಾತಿವಂತನೂ ಆದ ಪತ್ರಿಕೋದ್ಯೋಗಿಯಾಗುವನು. ಪಂಜಾಬಿನಲ್ಲಿ ಕೆಲವು ಪದವೀಧರರು ಕೂದಲನ್ನು ಅಂದಗೊಳಿಸುವ ವೃತ್ತಿಯನ್ನು ಕೈಗೊಂಡಿದ್ದಾರೆ. ಅವರಿಗೆ ಶ್ರಮ ಜೀವನದ ಗೌರವವು ತಿಳಿದಿದೆ.

ನಿಜವಾದ ಯೋಗಿಯು ನಿಕೃಷ್ಟವಾದ ಅಥವಾ ಉತ್ಕೃಷ್ಟವಾದ ಕೆಲಸವೆಂದು ಭೇದವನ್ನೆಣಿಸುವುದಿಲ್ಲ. ಅವಿವೇಕಿಯಾದವನು ಮಾತ್ರ ಹಾಗೆ ಭೇದದೃಷ್ಟಿಯನ್ನಿಡುವನು. ಕೆಲವು ಸಾಧಕರು ತಮ್ಮ ಸಾಧನೆಯ ಆರಂಭದಲ್ಲಿ ಬಹಳ ವಿನಯದಿಂದಿರುವರು. ಅವರಿಗೆ ಹೆಸರು ಮತ್ತು ಖ್ಯಾತಿಯು, ಕೆಲವು ಹಿಂಬಾಲಕರು, ಮೆಚ್ಚುವವರು, ಭಕ್ತರು, ಶಿಷ್ಯರು ದೊರೆತಾಗ ದುರಭಿಮಾನದ ದಾಸರಾಗುವರು. ಅವರು ಯಾವ ಸೇವೆಯನ್ನೂ ಮಾಡಲಾರರು. ತಮ್ಮ ಕೈಗಳಲ್ಲಿ ಅಥವಾ ತಲೆಯಮೇಲೆ ಏನನ್ನೂ ಹೊರಲಾರರು. ಆದರೆ ಯಾವ ಯೋಗಿಯು ಅಸಂಖ್ಯಾತ ಜನಸಂದಣಿಯಿರುವ ರೈಲ್ವೆ ನಿಲ್ದಾಣದಲ್ಲಿ ತನ್ನನ್ನು ಮೆಚ್ಚಿಕೊಂಡವರೂ, ಶಿಷ್ಯರೂ, ಭಕ್ತರೂ ಇದ್ದಾಗ್ಯೂ ಬಾಹ್ಯ ತೋರಿಕೆಯನ್ನುಂಟುಮಾಡದೆ ತನ್ನ ಪೆಟ್ಟಿಗೆಯನ್ನು ತಾನೇ ಹೊತ್ತು ನಡೆಯುವನೋ ಅವನೇ ಶ್ರೇಷ್ಠನು ಮತ್ತು ಪ್ರಶಂಸಾರ್ಹನು. ರಾಜರ್ಷಿ ಜಡಭರತನು ರಾಜನೊಬ್ಬನ ಪಲ್ಲಕ್ಕಿಯನ್ನು ಸ್ವಲ್ಪವೂ ಗೊಣಗದೆ ತನ್ನ ಹೆಗಲುಗಳ ಮೇಲೆ ಹೊತ್ತನು. ತನ್ನ ನಾಯಿಂದಭಕ್ತನು ವಿಶ್ರಾಂತಿಯಲ್ಲಿರುವಾಗ ಶ್ರೀಕೃಷ್ಣನೇ ಕಾಲುಗಳನ್ನು ಒತ್ತಿದನು. ಶ್ರೀರಾಮನು ತನ್ನ ಭಕ್ತನು ನಡೆಸಬೇಕಾದ

ಕರ್ಮವೊಂದಕ್ಕೆ ಒಂದು ಬಿಂದಿಗೆಯ ನೀರನ್ನು ಹೊತ್ತನು. ಶ್ರೀಕೃಷ್ಣನು ವಿಟ್ಠೋ ಎಂಬ ಸೇವಕನ ವೇಷವನ್ನು ಧರಿಸಿ ದಾಮಾಜಿಯ ಪ್ರತಿನಿಧಿಯಾಗಿ ನವಾಬನಿಗೆ ಹಣವನ್ನು ಹಿಂತಿರುಗಿಸಿದನು. ನೀವು ನಿಜವಾಗಿಯೂ ಅಧ್ಯಾತ್ಮ ಮಾರ್ಗದಲ್ಲಿ ನಡೆಯಬೇಕೆಂಬ ಇಚ್ಛೆಯಿದ್ದರೆ ಸಾಯುವವರೆಗೂ ನಾನಾ ವಿಧ ವಾದ ಸೇವೆಗಳನ್ನು ದಿನವೂ ತಪ್ಪದೆ ಮಾಡಿರಿ. ಆಗ ಮಾತ್ರ ನೀವು ಸುರಕ್ಷಿತರು. ನೀವು ಸುಪ್ರಸಿದ್ಧ ಯೋಗಿ ಎನ್ನಿಸಿಕೊಂಡಾಗ ಸೇವೆ ಮಾಡು ವುದನ್ನು ನಿಲ್ಲಿಸದಿರಿ. ಸೇವಾಮನೋಭಾವವು ನಿಮ್ಮ ಶರೀರದ ಪ್ರತಿಯೊಂದು ನರ, ಕೋಶ, ಮೇದಸ್ಸು ಮತ್ತು ಮೂಳೆಯನ್ನೂ ಪ್ರವೇಶಿಸಬೇಕು. ಅದು ನಿಮ್ಮಲ್ಲಿ ದೃಢಮೂಲವಾಗಲಿ (ingrained). ಆಗ ಮಾತ್ರ ನೀವು ನಿಜ ವಾದ, ಪೂರ್ಣವಾದ ಬೆಳೆದ ಅನುಷ್ಠಾನ ವೇದಾಂತಿಗಳಾಗುವಿರಿ. ಬುದ್ಧನಿ ಗಿಂತಲೂ ಹಿರಿಯನಾದ ಕರ್ಮಯೋಗಿ ಅಥವಾ ಹೆಚ್ಚಿನ ವೇದಾಂತಿಯು ಯಾರಿರುವರು ? ಅವನು ತನ್ನ ಜೀವಮಾನದಲ್ಲಿ ಮಾಡಿದ ಹಲವು ವಿಧವಾದ ಸೇವೆಗಳಿಂದ ಸೇವಾಧರ್ಮವೂ ಅವನಲ್ಲಿ ದೃಢಮೂಲವಾಗಿದ್ದುದರಿಂದ ಇಂದಿಗೂ ಅವನು ನಮ್ಮ ಹೃದಯದಲ್ಲಿ ನೆಲೆಸಿರುವನು. ಆತನು ಉದಾರ ಚರಿತನೂ, ಅದ್ವಿತೀಯನೂ ಆಗಿರುವನು. ನೀವೂ ಸಹ ನಿಸ್ವಾರ್ಥ, ನಿರ್ದಿಷ್ಟ ಸೇವೆಯನ್ನು ಸರಿಯಾದ ಮನೋಭಾವದಿಂದ ಮಾಡಿದ್ದೇ ಆದರೆ ಬುದ್ಧ ರಾಗುವಿರಿ.

ಮಹಾತ್ಮಾ ಗಾಂಧೀಜಿಯವರ ಆತ್ಮಚರಿತ್ರೆಯನ್ನು ಓದಿ. ಅವರು ಉತ್ತಮವಾದ ಮತ್ತು ಕೀಳಾದ ಕೆಲಸವೆಂದು ಯಾವ ಭೇದವನ್ನೂ ಎಣಿಸ ಲಿಲ್ಲ. ಅವರಿಗೆ ಬೀದಿ ಗುಡಿಸುವುದೂ, ಕಕ್ಕಸ್ಸು ತೊಳೆಯುವುದೂ ಒಂದು ಉತ್ತಮವಾದ ಯೋಗವೇ. ಇದು ಅವರ ಶ್ರೇಷ್ಠ ಪೂಜೆಯು. ಅವರೇ ಸ್ವತಃ ಪಾಯಖಾನೆಗಳ ಶುದ್ಧಿಮಾಡುತ್ತಿದ್ದರು. ಹೀಗೆ -ಹಲವು ವಿಧವಾದ ಸೇವೆಗಳಿಂದ ತೋರಿಕೆಯ ಪುಟ್ಟ ಅಹಂಕಾರದ "ನಾನು"ವನ್ನು ದಮನಮಾಡು ತ್ತಿದ್ದರು. ಅನೇಕ ದೊಡ್ಡ ವಿದ್ಯಾವಂತರು ಅವರ ಆಶ್ರಮವನ್ನು ಸೇರಿ ಅವರಿಂದ ಈ ಯೋಗವನ್ನು ಕಲಿತರು. ಗಾಂಧೀಜಿಯವರು ಒಂದು ಪ್ರತ್ಯೇಕ ವಾದ ಕೋಣೆಯಲ್ಲಿ ತಮಗೆ ಪ್ರಾಣಾಯಾಮ, ಧ್ಯಾನ, ಆಪಕರ್ಷಣ (obstruction) ಮತ್ತು ಕುಂಡಲಿನಿಯನ್ನು ಜಾಗೃತಗೊಳಿಸುವ ಯೋಗ

ವನ್ನು ರಹಸ್ಯವಾಗಿ ಉಪದೇಶಿಸುವರೆಂದು ಭಾವಿಸಿದ್ದರು. ಆದರೆ ಮೊದಲು ಪಾಯಖಾನೆ ತೊಳೆಯಿರೆಂದು ಹೇಳಿದಾಗ ಅವರಿಗೆಲ್ಲಾ ನಿರಾಶೆಯಾಯಿತು. ಕೂಡಲೇ ಅವರು ಆಶ್ರಮವನ್ನು ಬಿಟ್ಟರು. ಗಾಂಧೀಜಿ ತಮ್ಮ ಷೂಗಳನ್ನು ತಾವೇ ಹೊಲೆಯುತ್ತಿದ್ದರು, ಗೋಧಿ ಬೀಸಿಕೊಳ್ಳುತ್ತಿದ್ದರು ಮತ್ತು ಇತರರಿಗೆ ಆಗದ ಕಾರ್ಯಗಳನ್ನು ತಾವೇ ಮಾಡುತ್ತಿದ್ದರು. ಆಶ್ರಮಕ್ಕೆ ಹೊಸದಾಗಿ ಬಂದವರು ಧಾನ್ಯವನ್ನು ಬೀಸಲು ನಾಚಿಕೊಂಡರೆ ಗಾಂಧೀಜಿಯವರು ಅವರ ಬದಲು ತಾವೇ ಆ ಕೆಲಸವನ್ನು ಮಾಡುತ್ತಿದ್ದುದರಿಂದ ಮಾರನೆಯ ದಿನದಿಂದ ಆ ಮನುಷ್ಯರೇ ಮನಃಪೂರ್ವಕವಾಗಿ ಬೀಸುತ್ತಿದ್ದರು.

ದೇವರಿಗೆ ಸೇವೆ ಮಾಡುವವರೆಲ್ಲಾ ಸಮಾನರೆ. ಜಾತಿ, ಬಣ್ಣ, ಮತ ಎಂಬ ಭೇದಭಾವಗಳಿಲ್ಲದೆ ಎಲ್ಲರೂ ಒಟ್ಟಿಗೆ ತಿನ್ನಬೇಕು ಮತ್ತು ಕುಡಿಯ ಬೇಕು. ನಿಮಗೆ ದೇವರಲ್ಲಿ ಶ್ರೇಷ್ಠ, ಕನಿಷ್ಠ ಭಾವನೆಗಳನ್ನು ಬಿಟ್ಟರೆಮಾತ್ರ ನೀವು ಅಧ್ಯಾತ್ಮ ಬೆಳವಣಿಗೆಯನ್ನು ಮತ್ತು ದೇವರಲ್ಲಿ ಭಕ್ತಿಯನ್ನು ಬೆಳೆಸಲು ಸಾಧ್ಯವಾಗುವುದು. ಎಲ್ಲ ಭೇದಗಳನ್ನೂ ಸುಟ್ಟು ಎಲ್ಲೆಲ್ಲಿಯೂ ದೇವರೊಬ್ಬ ನನ್ನೇ ನೋಡಿ. ಎಲ್ಲರೊಡನೆ ಒಂದಾಗಿ. ಎಲ್ಲರೊಡನೆ ಬೆರೆಯಿರಿ. ಸಹನೆ, ತಾಳ್ಮೆ, ಹೊಂದಿಕೊಳ್ಳುವಿಕೆ, ಶುದ್ಧಪ್ರೇಮ, ಕ್ಷಮಾಶೀಲತೆ, ಸಮದರ್ಶನ ವನ್ನು ಬೆಳೆಸಿರಿ.

ನಿಮ್ಮ ಆದರ್ಶ ಮತ್ತು ತತ್ವವನ್ನು ಎಂದಿಗೂ ಬಿಡದಿರಿ. ಇಡೀ ಜಗತ್ತು ವಿರೋಧಿಸಿದರೂ ಧೀರರಾಗಿ ನಿಲ್ಲಿ. ಒಂದು ಉತ್ತಮವಾದ ಕಾರ್ಯಕ್ಕೆ ತ್ಯಾಗಮಾಡಲು ಸದಾ ಸಿದ್ಧವಿರಿ. ದುಡಿಯಲು ಇಷ್ಟವಿದ್ದರೆ ಸ್ವತಂತ್ರವಾಗಿ ದುಡಿಯಿರಿ. ಧ್ಯಾನವು ಮುಗಿದ ತಕ್ಷಣ ವಿಶ್ರಾಂತಿಯು ಅವಶ್ಯಕವಾದುದರಿಂದ ಹಗುರಾದ ಕೆಲಸಗಳನ್ನೇ ಮಾಡಿ. ಆದರೆ ಆ ಕೆಲಸವು ಸರಿಹೊಂದಬೇಕು (congenial). ಅದು ಆಧ್ಯಾತ್ಮಿಕ ಧ್ಯಾನಕ್ಕೆ ಸಹಾಯಕ ವಾಗಿರಬೇಕು. ಸ್ವಾರ್ಥರಹಿತ ಸೇವೆಗೆ ಪ್ರೇಮವಿದ್ದರೆ, ಚಿತ್ತಶುದ್ಧಿಯಲ್ಲಿ ಆಸಕ್ತಿಯಿದ್ದರೆ ನಿಮ್ಮನ್ನು ಪ್ರಕೃತಿಯು ನಿಷ್ಕಾಮ್ಯಕರ್ಮದ ಮೂಲಕ ತನ್ನ ದಿವ್ಯಕಾರ್ಯಕ್ಕೆ ಉಪಯೋಗಿಸಿಕೊಳ್ಳುವುದು. ಆಕೆಯು ತನ್ನ ಮುಖ್ಯ ಸಾಧನವಾಗಿ ನಿಮ್ಮನ್ನು ಬಳಸಿಕೊಳ್ಳುವಳು. ನೀವು ಕೂಡಲೆ ವಿಕಾಸ ಗೊಳ್ಳುವಿರಿ.

ಭಗವಂತನಿಗೆ ಸರ್ವವನ್ನೂ ಸಮರ್ಪಿಸಿ. ನಿಮ್ಮ ಅಹಂಕಾರವನ್ನು ಆತನ ಪದತಲದಲ್ಲಿಟ್ಟು ನೆಮ್ಮದಿಯಿಂದಿರಿ. ಭಗವಂತನು ನಿಮ್ಮ ಯೋಗ ಕ್ಷೇಮವನ್ನು ವಹಿಸಿಕೊಳ್ಳುವನು. ಅವನ ಇಷ್ಟಬಂದಂತೆ ನಿಮ್ಮನ್ನು ರೂಪಿಸಲಿ. ತನ್ನ ಸಂಕಲ್ಪದಂತೆಯೇ ಭಗವಂತನು ನಡೆಸುವನು. ನಿಮ್ಮ ದೋಷಗಳನ್ನೂ ದೌರ್ಬಲ್ಯಗಳನ್ನೂ ಕಳೆಯುವನು. ಈ ದೇಹವೆಂಬ ಕೊಳಲಿನ ಮೂಲಕ ಅವನು ಸುಂದರವಾಗಿ ನುಡಿಸುವನು. ಭಗವಂತನ ಕೊಳಲಿನ ನಾದ ಮಾಧುರ್ಯವನ್ನು ಕೇಳಿ ಆತ್ಮಾನಂದವನ್ನು ಅನುಭವಿಸಿ.

ಯಜ್ಞಯಾಗಾದಿಗಳನ್ನು ಮಾಡುವುದು ನಿಜವಾಗಿಯೂ ಬಹಳ ಕಷ್ಟವು. ಸ್ವಯಂಸೇವಕರ ವೇಷ ಧರಿಸಿ ಪೀಠದಲ್ಲಿ ನಿಂತು ಮಾತಾಡುವವ ರೆಲ್ಲಾ ತಮ್ಮ ತಮ್ಮ ಸೇವೆಯಲ್ಲೇ ಆಸಕ್ತಿಯುಳ್ಳವರಾಗಿರುವರು. ಕೆಲವು ಸನ್ಯಾಸಿ ಗಳೂ ಸಹ ಹೀಗೆಯೇ ವರ್ತಿಸುವರು. ಇದು ಬಹಳ ಶೋಚನೀಯವಲ್ಲವೇ ?

ನಾನು, ನೀನು, ಅವನು, ಈ ಮನುಷ್ಯ ಅಥವಾ ಆ ಮನುಷ್ಯ ಎಂಬ ಭೇದಭಾವಗಳನ್ನೂ ಈ ವಸ್ತುಗಳು ನನ್ನವು ಎಂಬ ದುರ್ವ್ಯಾಮೋಹವನ್ನೂ ದೂರಮಾಡಿ. ನಿಮಗೆ ಜ್ಞಾನೋದಯವಾಗುವುದು. ಅವಿವೇಕದಿಂದ ಆಸೆ ಗಳು ಹುಟ್ಟುವುವು. ವಿವೇಕದಿಂದ ಅವು ಇಲ್ಲವಾಗುವುವು. ಸತ್ಯ, ಮಿಥ್ಯ ಗಳನ್ನು ವಿವೇಕದಿಂದ ವಿಂಗಡಿಸಿ. ಮೋಕ್ಷಾನಂದದ ನಿತ್ಯಪಥದಲ್ಲಿ ನೀವು ಶೀಘ್ರವಾಗಿ ಪ್ರಯಾಣಮಾಡುವಂತಾಗಲಿ.

ಕರ್ತೃ ಸಂಗವಿಲ್ಲದೆ ತನ್ನ ಚಿತ್ತಶುದ್ಧಿಗಾಗಿ ಕರ್ಮಗಳನ್ನು ಮಾಡಿ "ಭಗವಂತನಿಗೆ ಸಂತೋಷವಾಗಲೆಂದು" ಮನಸ್ಸಿನಲ್ಲಿ ತಿಳಿದು ದೇವರಿಗಾಗಿ ಮಾಡುತ್ತಿದ್ದೇನೆಂದು ಕರ್ಮಗಳನ್ನು ಹೇಳಿಕೊಂಡು ಮಾಡದಿರಿ. ಕರ್ಮವು ಎಷ್ಟೇ ಪ್ರಿಯವಾಗಿದ್ದರೂ, ಎಷ್ಟೇ ಫಲಕಾರಿಯಾಗಿದ್ದರೂ ಯಾವಾಗ ಎಂದರೆ ಆಗಲೇ ಅದನ್ನು ಬಿಡಲು ನೀವು ಸಿದ್ಧರಿರಬೇಕು. ಆತ್ಮದ ಅಂತರ್ವಾಣಿಯು ಆಜ್ಞೆಮಾಡಿದ ಒಡನೆಯೇ ಕರ್ಮವನ್ನು ಬಿಡಬೇಕು. ಕರ್ಮ ಸಂಗವು ಎಂದಿದ್ದರೂ ನಿಮ್ಮನ್ನು ಬಂಧಿಸುವುದು. ಕರ್ಮಯೋಗದ ಈ ಸೂಕ್ಷ್ಮ ರಹಸ್ಯಗಳನ್ನರಿತು ಕರ್ಮಯೋಗ ಪಥದಲ್ಲಿ ಧೀರರಾಗಿ ಮುನ್ನಡೆಯಿರಿ.

ಸ್ವಾತ್ಮಾವಲಂಬಿಗಳಾಗಿ. ಸುಲಭವಾಗಿ ವಂಚಿತರಾಗಬೇಡಿ. ಔದ್ಧತ್ಯದ (credulous) ಮಾತುಗಳನ್ನು ನಂಬದಿರಿ. ಆತ್ಮದ ಅಂತರ್ವಾಣಿಯನ್ನು

ಕೇಳಿ ಶುದ್ಧ ಜ್ಞಾನವನ್ನು ಹೊಂದಿರಿ ಗುಲಾಮರಾಗದಿರಿ ಸ್ವಾತಂತ್ರ್ಯವನ್ನು ಮಾರಿಕೊಳ್ಳದಿರಿ ನೀವು ಅಮೃತಾತ್ಮರು ಅಲ್ಪರೆಂಬ ಭಾವನೆಯನ್ನು ನಾಶಗೊಳಿಸಿ ಬಲ, ಧೈರ್ಯ, ಸಾಮರ್ಥ್ಯವನ್ನು ಅಂತರ್ಯದಿಂದ ಮೇಲಕ್ಕೆಳೆಯಿರಿ, ಮುಕ್ತರಾಗಿ ಅಂಧಶ್ರದ್ಧೆಯನ್ನು ಹೊಂದದಿರಿ ಜಾಗರೂಕತೆ ಯಿಂದ ವಿಚಾರಮಾಡಿ ನಂತರ ಒಪ್ಪಿಕೊಳ್ಳಿ ಕುರುಡು ಉತ್ಸಾಹದ ಪ್ರವಾಹದಲ್ಲಿ ಕೊಚ್ಚಿಹೋಗದಿರಿ ವ್ಯಾಪ್ಯರಾಗಿ ನಿಮ್ಮೊಳಗೇ ಅಪಾರವಾದ ಶಕ್ತಿ ಸಾಮರ್ಥ್ಯಗಳ ಮದ್ದುಗುಂಡುಗಳಿವೆ ಅದು ಬರಿಯ ಬೆಂಕಿಯನ್ನು ಅಪೇಕ್ಷಿಸುತ್ತಿದೆ ಆಗ ನಿಮ್ಮ ಆತ್ಮದ ಸಮಸ್ತ ರಹಸ್ಯವೂ ತೆರೆದಿಟ್ಟಂತಾಗು ವುದು ಆತ್ಮಜ್ಞಾನದ ಬೆಳಕಿನಿಂದ ನಿಮ್ಮ ಅಜ್ಞಾನವೆಂಬ ಅಂಧಕಾರವು ಓಡಿಸಲ್ಪಡುವುದು ನಾನು ಇಲ್ಲಿ ಕರ್ಮಯೋಗ ಮತ್ತು ವೇದಾಂತದ ಸಾರ ವನ್ನು ಸ್ವಲ್ಪವೇ ಸಾಲುಗಳಲ್ಲಿ ತಿಳಿಸಿರುವೆನು ಅಮೃತಾಸ್ವಾದನೆಯಿಂದ ಅಮೃತತ್ವವನ್ನೂ, ನಿತ್ಯಾನಂದವನ್ನೂ ಮತ್ತು ಸಂತತ ಸುಖವನ್ನೂ ಸಂಪಾದಿ ಸಿರಿ ಇದೇ ಜೀವನದ ಗುರಿಯು ಇದೇ ಬಾಳಿನ ಧ್ಯೇಯ ಮತ್ತು ಗುರಿಯು. ಕರ್ಮಯೋಗ ಮತ್ತು ಉಪಾಸನೆಯು ಶ್ರೇಷ್ಠವಾದ ಗುರಿಯನ್ನು ಹೊಂದಲು ಸಿದ್ಧಗೊಳಿಸುವುದು

# 9

# ಮಾಯಾ

## ೧. ಮಾಯಾ ಎಂದರೇನು ?

ಮಾಯೆಯು ಈಶ್ವರನ ಭ್ರಮೆಯ ನಿಗೂಢ ಶಕ್ತಿಯು. ಅಗ್ನಿಯಿಂದ ಉಷ್ಣವನ್ನು ಪ್ರತ್ಯೇಕಿಸಲಾಗದಂತೆ ಮಾಯೆಯನ್ನು ಈಶ್ವರನಿಂದ ಬೇರ್ಪಡಿಸಲಾಗದು. ಮಾಯೆಯು ಈಶ್ವರನ ಉಪಾಧಿಯು. ಈಶ್ವರನು ಮಾಯೆಯನ್ನು ತನ್ನ ಹಿಡಿತದಲ್ಲಿಟ್ಟಿರುವನು. ಮಾಯೆಯು 'ಸತ್' ಅಥವಾ 'ಅಸತ್' ಅಲ್ಲವು. ಆದ್ದರಿಂದ ಅದು ಅನಿರ್ವಚನೀಯವು. ಈ ವಿಶ್ವವು ಮಾಯೆಯ ಆಟವು. ಲೋಕಾನುಭವವೆಲ್ಲವೂ ಮಾಯೆಯ ಪರಿಣಾಮವೇ. ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಋಷಿಯು ಮಾಯೆಯನ್ನು ದಾಟಿರುವನು.

ಮಾಯೆಯು ಬ್ರಹ್ಮದ ಅಭಿನ್ನ ಶಕ್ತಿಯು. ಅಭಿನ್ನವೆಂದರೆ ಬೇರ್ಪಡಿಸಲಾಗದ್ದು. ಮಾಯೆಯನ್ನು ಬ್ರಹ್ಮದಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ಉಷ್ಣವನ್ನು ಬೆಂಕಿಯಿಂದ ಹೇಗೆ ಬೇರ್ಪಡಿಸಲಾಗುವುದಿಲ್ಲವೋ ಹಾಗೆಯೇ ಮಾಯೆಯನ್ನು ಬ್ರಹ್ಮದಿಂದ ಬೇರ್ಪಡಿಸಲಾಗುವುದಿಲ್ಲ.

ನೀವು ಕಂಡ ಮಡಕೆಗೆ ಒಂದು ಕಾರಣವಿದ್ದೇ ಇರಬೇಕೆಂದು ಊಹಿಸುವಿರಿ. ಹೀಗೆಯೇ ನೀವು ಕಾಣುವ ಜಗತ್ತಿಗೂ ಒಂದು ಕಾರಣವಿರಬೇಕೆಂದು ತೀರ್ಮಾನಿಸಬೇಕು. ಬ್ರಹ್ಮದ ಭ್ರಾಂತಿಶಕ್ತಿಯಾದ ಮಾಯೆಯು ಜಗತ್ತಿನ ಕಾರಣವು.

ಯಾವುದು ವಿವರಣೆಗೆ ಮೀರಿದುದೋ ಅದೇ ಮಾಯೆಯು, ಎಂದರೆ ಅನಿರ್ವಚನೀಯವು. ಬ್ರಹ್ಮದ ಭ್ರಮೆಯನ್ನುಂಟುಮಾಡುವ ಶಕ್ತಿಯು ಜಗತ್ತು ಹೊರತೋರುವಂತೆ ಮಾಡುವುದು.

ಮಾಯೆಯು ಮೋಸವು ಮತ್ತು ವಂಚಕಿಯು. ಅವಳು ಈಶ್ವರನ ಭ್ರಾಂತಿಶಕ್ತಿಯು. ಅದು ಅಖಂಡ ಬ್ರಹ್ಮದಲ್ಲಿ ಖಂಡಖಂಡ ರೂಪಗಳನ್ನು ಸೃಷ್ಟಿ ಮಾಡುವ ಖಂಡ ತತ್ವವು. ಆಕೆಗೆ ಆವರಣಶಕ್ತಿ (veil`ng power) ಮತ್ತು ವಿಕ್ಷೇಪಶಕ್ತಿಗಳಿವೆ (projecting power). ಅವಳು ಆವರಣಶಕ್ತಿಯಿಂದ ಸತ್ಯವನ್ನು ಮರೆಮಾಡುವಳು. ವಿಕ್ಷೇಪಶಕ್ತಿಯಿಂದ ನಾಮರೂಪಾತ್ಮಕವಾದ ಈ ವಿಶ್ವವನ್ನೆಲ್ಲಾ ಹೊರದೂಡುವಳು.

ಆವರಣಶಕ್ತಿಯು ಆತ್ಮನನ್ನು ಬಚ್ಚಿಡುವಳು ಮತ್ತು ಜೀವನನ್ನು ತೆರೆಯಿಂದ ಮರೆಮಾಡುವಳು. ಈ ಶಕ್ತಿಯ ಮೂಲಕ ಜೀವನು ಪಂಚಕೋಶಗಳನ್ನು ಬಿಡಿಸಿಕೊಳ್ಳಲಾರನು. ಈ ಆವರಣಶಕ್ತಿಯು ಅಸತ್ ಆವರಣ ಮತ್ತು ಅಭಾನ ಆವರಣವೆಂದು ಇಬ್ಭಾಗವಾಗುವುದು. ಬ್ರಹ್ಮವಿಲ್ಲವೆಂಬ ಭಾವಕ್ಕೆ ಮೊದಲನೆಯದು ಕಾರಣವು. "ಬ್ರಹ್ಮವು ಇದ್ದರೆ, ಅದು ಹೊಳೆಯಬೇಡವೆ?" ಎಂದು ಪ್ರಶ್ನಿಸುವರು. ಈ ಭಾವನೆಯು ಅಭಾನ ಆವರಣದಿಂದ ಹುಟ್ಟುವುದು. ಅಸತ್ ಆವರಣವನ್ನು ಶ್ರುತಿಗಳ ಶ್ರವಣದಿಂದ ಪಡೆದ ಪರೋಕ್ಷ ಜ್ಞಾನದಿಂದ ಕಳೆಯಬಹುದು. ಅಪರೋಕ್ಷ ಜ್ಞಾನದಿಂದ ಬ್ರಹ್ಮಜ್ಞಾನವು ಪ್ರಾಪ್ತಿಯಾದಾಗ ಅಭಾನ ಆವರಣವು ನಾಶವಾಗುವುದು.

ಅವ್ಯಕ್ತ, ಮಾಯೆ, ಮೂಲಪ್ರಕೃತಿ, ಪ್ರಧಾನ, ಗುಣಸಾಮ್ಯ ಮುಂತಾದವು ಸಮಾನಾರ್ಥಕ ಪದಗಳು. ಅವ್ಯಕ್ತವು ಮಾಯೆಯ ಅಂತಃಸ್ಥಿತಿಯು. ವೃಕ್ಷವು ಬೀಜದಲ್ಲಿ ಸೂಕ್ಷ್ಮವಾಗಿ ಅಡಗಿರುವಂತೆ ಜಗತ್ತು ಪ್ರಳಯಕಾಲದಲ್ಲಿ ಅವ್ಯಕ್ತದಲ್ಲಿ ಬೀಜರೂಪವಾಗಿರುವುದು. ಅವ್ಯಕ್ತ ಮತ್ತು ಪ್ರಧಾನವು ಸಾಂಖ್ಯತತ್ವದ ಶಬ್ದಗಳು. ಮೂಲಪ್ರಕೃತಿಯು ಕಪ್ಪು, ಬಿಳುಪು ಮತ್ತು ಕೆಂಪು ಎಂಬ ಮೂರು ದಾರಗಳನ್ನು ಹೊಸೆದ ಹಗ್ಗದಂತೆ ಸತ್ವ, ರಜ, ತಮಸ್ಸಿನ ಮಿಶ್ರಣವು. ಗುಣಸಾಮ್ಯಾವಸ್ಥೆಯಲ್ಲಿ ತ್ರಿಗುಣಗಳೂ ಸಮ ಪ್ರಮಾಣದಲ್ಲಿರುವುದು. ಇದೇ ಪ್ರಳಯ ಅಥವಾ ಸುಷುಪ್ತಿಯ ಅವಸ್ಥೆಯು. ಮನುಷ್ಯರು ದಿನವೂ ಸುಷುಪ್ತ್ಯಾವಸ್ಥೆಯನ್ನು ಅನುಭವಿಸುವಂತೆ ಜಗತ್ತು ಪ್ರಳಯಕಾಲದಲ್ಲಿ ಸುಷುಪ್ತ್ಯಾವಸ್ಥೆಯಲ್ಲಿರುವುದು. ಬಂಗಾರದ ರಜಗಳು ಮೇಣದ ಉಂಡೆಯಲ್ಲಿ ಸೇರಿಕೊಂಡಿರುವಂತೆ ಅಸಂಖ್ಯಾತ ಜೀವರು ತಮ್ಮ ಸಂಸ್ಕಾರಗಳಿಗೆ ತಕ್ಕಂತೆ ಪ್ರಳಯಕಾಲದಲ್ಲಿ, ಮೂಲಪ್ರಕೃತಿಯಲ್ಲಿ ಅಡಗುವರು.

ಪ್ರಳಯಾಂತ್ಯದಲ್ಲಿ ಜೀವರ ಕರ್ಮಗಳು ಪಕ್ವವಾಗುವುವು. ಈಶ್ವರನು ಅವರ ಕರ್ಮಗಳಿಗೆ ತಕ್ಕ ಫಲಗಳನ್ನು ನೀಡುವನು. ಆದ್ದರಿಂದ ತನ್ನ ಸಂಕಲ್ಪ ದಿಂದಲೇ ಈಶ್ವರನು ಈ ಜಗತ್ತನ್ನು ಹೊರಮುಖಮಾಡುವನು.

ಮಾಯೆಯಲ್ಲಿ ಶುದ್ಧಸತ್ವವು ಮಿತಿಮೀರಿರುವುದು. ಮಾಯೆಯಲ್ಲಿ ಪರಬ್ರಹ್ಮದ ಪ್ರತಿಫಲನವೇ ಈಶ್ವರನು. ಮಾಯೆಯು ಈಶ್ವರನ ಉಪಾಧಿಯು. ಅದು ಈಶ್ವರನ ಕಾರಣಶರೀರವು. ಈಶ್ವರನು ಮಾಯೆಯನ್ನು ತನ್ನ ಅಂಕೆ ಯಲ್ಲಿಟ್ಟಿರುವನು. ಈಶ್ವರನನ್ನು ಅವ್ಯಾಕೃತ, ಅಂತರ್ಯಾಮಿ ಎಂಬ ನಾಮ ಗಳಿಂದ ಕರೆಯುವರು. ಈಶ್ವರನು ಜಗತ್ತಿನ ನಿಮಿತ್ತಕಾರಣನು (instrumental cause). ಜೇಡರಹುಳುವು ತನ್ನಿಂದಲೇ ಬಲೆಯನ್ನು ಸೃಷ್ಟಿಸು ವಂತೆ ಈಶ್ವರನು ತಮಸ್ಸಿನೊಡನೆ ತಾನೇ ಸೇರಿಕೊಂಡು ಜಗತ್ತಿಗೆ ಉಪಾದಾನ ಕಾರಣನಾಗುವನು (material cause). ಅವಿದ್ಯೆಯು ಅಶುದ್ಧ ಸತ್ವವು. ಹೆಚ್ಚಾದ ರಜಸ್ಸು ಸತ್ವದೊಡನೆ ಬೆರೆತಾಗ ಜೀವನ ಕಾರಣಶರೀರವಾಗುವುದು. ಇದೇ ಆನಂದಮಯ ಕೋಶವು. ಜೀವ ಮತ್ತು ಈಶ್ವರ ಕಾರಣಶರೀರದ ಮೂಲಕ ಸುಷುಪ್ತಿ ಅಥವಾ ಗಾಢನಿದ್ರೆಯನ್ನು ಅನುಭವಿಸುವರು. ಇದೇ ವಿಕಸನಾತ್ಮಕ (ಆತ್ಮವಿಕಸನಕ್ಕೆ) ಕಾರಣವು.

ಜುನಗಢ ರಾಜ್ಯದಲ್ಲಿ ಇತ್ತೀಚೆಗೆ ಒಂದು ವಿಚಿತ್ರ ಘಟನೆಯು ನಡೆ ಯಿತು. ಒಂದು ಹುಡುಗಿಗೆ ಅವಳ ೧೨ನೇ ವಯಸ್ಸಿನಲ್ಲಿ ವಿವಾಹವಾಯಿತು. ವಿವಾಹವಾದ ೬ ವರ್ಷಗಳ ನಂತರ ಅವಳು ಆಕಸ್ಮಿಕವಾಗಿ ಗಂಡಸಾಗಿ ಪರಿ ವರ್ತನೆ ಹೊಂದಿದಳು. ಗಂಡಸಿನ ಎಲ್ಲ ರೂಪಗಳೂ ಅವಳಲ್ಲಿ ಸ್ಪಷ್ಟವಾಗಿ ಗೋಚರಿಸಿದವು. ಆಗ ತನ್ನ ಗಂಡನ ಮನೆಯನ್ನು ಬಿಟ್ಟು ತಂದೆಯ ಮನೆಗೆ ಅವಳು (ಅಲ್ಲ ಅವನು) ಹಿಂತಿರುಗಿದನು. ಅವಳ ತಂದೆಯು ಬಹು ದೊಡ್ಡ ಶ್ರೀಮಂತನು. ಆತನು ಇತ್ತೀಚೆಗೆ ಸತ್ತಿದ್ದನು. ಅವನ ಆಸ್ತಿಯು ಅವಳಿಗೆ (ಅವನಿಗೆ) ಕೊಡಬೇಕೇ, ಬೇಡವೇ ಎಂದು ವಕೀಲರುಗಳನ್ನು ವಿಚಾರಿಸ ಲಾಯಿತು. ಮಾಯೆಯು ಏನು ಬೇಕಾದರೂ ಮಾಡಬಲ್ಲುದು. ನಪುಂಸಕ ರನ್ನು, ದ್ವೈಲಿಂಗಿಗಳನ್ನು, ಮಧುರ ಸ್ತ್ರೀ ವಾಣಿಯ ಪುರುಷರನ್ನೂ, ಒರಟು ಪುರುಷ ಧ್ವನಿಯ ಸ್ತ್ರೀಯರನ್ನೂ, ಗಡ್ಡ ಮೀಸೆಗಳುಳ್ಳ ಸ್ತ್ರೀಯರನ್ನೂ, ಶುದ್ಧ ಸ್ತ್ರೀಮುಖದ ಗಂಡಸರನ್ನೂ, ಹೊಟ್ಟೆಗಳಲ್ಲಿ ಮುಖವುಳ್ಳವರನ್ನೂ, ತಲೆಗಳಲ್ಲಿ

ಗೊರಸುಳ್ಳವರನ್ನೂ ಮತ್ತು ಅರ್ಧಮಾನವ, ಅರ್ಧ ಸಿಂಹ ಮತ್ತು ಅರ್ಧ ಕುದುರೆಗಳಂತಿರುವ ಜೀವಿಗಳನ್ನೂ ಸೃಷ್ಟಿಮಾಡಬಲ್ಲಳು. ಇದರಿಂದಲೇ ಈ ಜಗತ್ತು ಅಸತ್ಯವೂ, ಭ್ರಾಂತಿಜನ್ಯವೂ ಆಗಿದೆಯೆಂದು, ಆತ್ಮವೊಂದೇ ಸತ್ಯ, ನಿತ್ಯ, ಸಿದ್ಧವೆಂದು ತೀರ್ಮಾನಿಸಬಹುದಾಗಿದೆ. ಪ್ರಕೃತಿಯ ಸೂಕ್ಷ್ಮಾವಲೋಕನದಿಂದ ವಿವೇಕ, ವೈರಾಗ್ಯಗಳು ಉದಯಿಸಿ, ಜಗನ್ನಾಥನ ಸಾಕ್ಷಾತ್ಕಾರವನ್ನು ಪಡೆಯಲು ಸ್ಫೂರ್ತಿಯುಂಟಾಗುವುದು.

ಸೂರ್ಯನು ತಣ್ಣಗಾದರೂ, ಚಂದ್ರನು ಉಷ್ಣವಾದರೂ ಬೆಂಕಿಯು ಅಧೋಮುಖವಾಗಿ ಉರಿದರೂ, ಮಂಜು ಶಾಖವಾದರೂ, ದುರ್ಗಂಧ ವಸ್ತುಗಳು ಪರಿಮಳವಂತವಾದರೂ, ಜ್ಞಾನಿಯು ಎಂದಿಗೂ ಆಶ್ಚರ್ಯಪಡುವುದಿಲ್ಲ. ಇವೆಲ್ಲವೂ ಮಾಯೆಯ ವಿಚಿತ್ರ ಕೈವಾಡವೆಂಬುದು ಅವನಿಗೆ ತಿಳಿದಿದೆ. ಇದು ಪರಿವರ್ತನೆಗಳಿಗೆ ಒಳಪಡುವ ವಿಶ್ವವಾಗಿ ಮಾಯೆ ಮಾರ್ಪಡುವುದು. ಆದರೆ ಬ್ರಹ್ಮವು ಮಾರ್ಪಡುವುದಿಲ್ಲ. ಅವನು ವಿಪರಿಣಮನು, ಮಹಾತ್ಮನು, ಸ್ಥಿರನು, ಅಜನೂ ಆಗಿರುವನು.

ಬೂದಿಮುಚ್ಚಿದ ಕೆಂಡವನ್ನು ಕಾಣದಿರುವುದರಿಂದ ಬೆಂಕಿಯೇ ಇಲ್ಲವೆಂದು ಹೇಳಲಾರೆ. ಹಾಗೆಯೇ ದೇಹ, ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳಿಂದ ಮರೆಮಾಡಲ್ಪಟ್ಟಿರುವ ಆತ್ಮನನ್ನು ಇಲ್ಲವೆಂದು ನೀನು ಹೇಳಲಾರೆ.

---

## ೨. ಅವಿದ್ಯಾ

ಬುದ್ಧಿಯೊಡನೆ ಆತ್ಮದ ಸಂಬಂಧವು, ಅದರ ಪರಿಮಿತವಾದ ಗುಣವು, ಅವಿದ್ಯಾ ಅಥವಾ ಮಿಥ್ಯಾಜ್ಞಾನದ ಅಥವಾ ತಪ್ಪುತಿಳುವಳಿಕೆಯಿಂದಾದುದು. ಬ್ರಹ್ಮಜ್ಞಾನದಿಂದ ಮಾತ್ರ ಈ ಅಜ್ಞಾನವು ತೊಲಗುವುದು. ಎಲ್ಲಿಯವರೆಗೆ ಬ್ರಹ್ಮಜ್ಞಾನವಾಗುವುದಿಲ್ಲವೋ ಅಲ್ಲಿಯವರೆಗೂ ಬುದ್ಧಿ, ದೇಹ ಮತ್ತು ಇಂದ್ರಿಯಗಳೊಡನೆ ಆತ್ಮದ ಸಂಬಂಧವು ಕೊನೆಗಾಣುವುದಿಲ್ಲ.

ಅವಿದ್ಯೆಯು ಸಂಸಾರದ ಮೂಲಕಾರಣವು. ಅಜ್ಞಾನದ ನಾಶವು ಜನನ ಮರಣ ಸುಳಿಯಿಂದ ತನ್ನನ್ನು ಬಿಡಿಸುವುದಲ್ಲದೆ ಅವನ ದುಃಖವನ್ನು ಆತ್ಯಂತಿಕವಾಗಿ ನಾಶಗೊಳಿಸುವುದು. ವೇದಾಂತ ಶಾಸ್ತ್ರವು ಅವಿದ್ಯೆಯ ಮೂಲ ಹೇಗಾಯಿತು ಮತ್ತು ಏಕಾಯಿತು ಎಂದು ವಿಚಾರಮಾಡುವುದಿಲ್ಲ. ಅವಿದ್ಯೆಯು ಇರುವುದೆಂದೂ, ಅದು ಬ್ರಹ್ಮಜ್ಞಾನದಿಂದ ಮಾತ್ರ ನಾಶವಾಗುವುದೆಂದು ಹೇಳುವುದು.

ಬೆಂಕಿಯು ಬೂದಿಯಿಂದ ಹೇಗೆ ಮುಚ್ಚಲ್ಪಟ್ಟಿರುವುದೋ ಹಾಗೆಯೇ ಅವಿದ್ಯೆ ಮತ್ತು ಅದರ ಪರಿಣಾಮಗಳಾದ ಮನಸ್ಸು, ಅಹಂಕಾರ, ಸ್ವಾರ್ಥ, ದ್ವೇಷ, ದೇಹ, ಪ್ರಾಣ ಮತ್ತು ಇಂದ್ರಿಯಗಳಿಂದ ಸ್ವಯಂ ಶುದ್ಧವೂ, ಅಮೃತವೂ, ಸ್ವಯಂಜ್ಯೋತಿಯೂ ಆದ ಆತ್ಮವು ಮುಚ್ಚಲ್ಪಟ್ಟಿರುವುದು. ಬೂದಿಯನ್ನು ತೆಗೆದಾಗ ಬೆಂಕಿಯು ಪ್ರಕಾಶಮಾನವಾಗಿ ಉರಿಯುವುದು. ಹಾಗೆಯೇ ಆತ್ಮಜ್ಞಾನದಿಂದ ಅವಿದ್ಯೆಯನ್ನು ಕಳೆದಾಗ ಸ್ವಯಂಜ್ಯೋತಿಯಾದ ಆತ್ಮನೂ ತಾನೇತಾನಾಗಿ ಬೆಳಗುವನು.

ಭ್ರಮೆಯಿಂದ ಭಿನ್ನತೆ, ಪ್ರತ್ಯೇಕತೆ, ದ್ವೈತ, ಅನಂತತೆ ಮತ್ತು ವಿವಿಧತೆಗಳೆಂಬ ಭಾವಗಳು ತೋರುವುವು. ಭ್ರಮೆಯು ಅಜ್ಞಾನದಿಂದ ಹುಟ್ಟಿದುದು. ಎಲ್ಲ ವಿಧವಾದ ದುಃಖಗಳೂ, ಕ್ಲೇಶಗಳೂ, ನೋವುಗಳೂ, ತೊಂದರೆಗಳೂ ಅಜ್ಞಾನದಿಂದಲೇ ಹುಟ್ಟುವುವು. ಅಜ್ಞಾನವು ಭ್ರಮೆಯನ್ನೂ, ಭಿನ್ನತೆಯನ್ನೂ ಸೃಷ್ಟಿಸುವುದು. ಆದ್ದರಿಂದ ಆತ್ಮಜ್ಞಾನವೆಂಬ ಖಡ್ಗದಿಂದ ಅಜ್ಞಾನವನ್ನು ಛೇದಿಸಿ ಮುಕ್ತರಾಗಿ.

ಪ್ರತ್ಯೇಕತಾಭಾವವು ಒಂದು ದೊಡ್ಡ ಶೃಂಖಲೆಯು. ಈ ಭಿನ್ನ ಭಾವನೆಯನ್ನು ಅದ್ವೈತ ಭಾವದಿಂದ ಮತ್ತು ನಿಸ್ವಾರ್ಥಸೇವೆಯಿಂದ ಅಥವಾ ಬ್ರಹ್ಮಭಾವನೆಯಿಂದ ಕತ್ತರಿಸಿ. ಈ ಭಿನ್ನಭಾವವು ಮಾಯಾ ಅಥವಾ ಅವಿದ್ಯೆಯಿಂದಾದುದು. ಒರೆಯನ್ನು ತೆಗೆದರೆ ಕತ್ತಿಯನ್ನು ಹಿಡಿಯಬಹುದು. ಬೂದಿಯನ್ನು ಕೊಡವಿದರೆ ಕೆಂಡವನ್ನು ನೋಡಬಹುದು. ಮೋಡಗಳು ಚದುರಿದರೆ ಸೂರ್ಯನನ್ನು ಕಾಣಬಹುದು. ಹಾಗೆಯೇ ಆತ್ಮನನ್ನು ಮರೆ ಮಾಡಿರುವ ಅಜ್ಞಾನವನ್ನು ತೆಗೆದರೆ ಸ್ವಯಂಪ್ರಕಾಶನಾದ ಆತ್ಮನನ್ನು ನೇರವಾಗಿ ನೋಡಬಲ್ಲಿರಿ. ಧೂಳಿನಿಂದ ಮುಚ್ಚಿದ ಕನ್ನಡಿಯು ಮಸಕಾಗಿ

ಕಾಣುವಂತೆ ಅವಿದ್ಯೆಯಿಂದ ಜ್ಞಾನವು ಮರೆಯಾಗಿರುವುದು. ಆದರಿಂದ ಎಲ್ಲರೂ ಭ್ರಮೆಗೊಂಡಿರುವರು. ಮಿಥ್ಯವಾದ ಈ ದೇಹವನ್ನು ಶುದ್ಧಾತ್ಮನೆಂದು ತಿಳಿದಿರುವರು. ನಾಮರೂಪಾತ್ಮಕವಾದ ಈ ಮಾಯಾಜಗತ್ತನ್ನು ನಿಜವೆಂದು ಭಾವಿಸುವರು.

---

## ೩. ಅಹಂಕಾರ [ ಸರ್ವ ದುಃಖಗಳ ಮೂಲ ]

ಜೀವಸೃಷ್ಟಿ ಮತ್ತು ಈಶ್ವರಸೃಷ್ಟಿ ಎಂದು ಸೃಷ್ಟಿಯಲ್ಲಿ ಎರಡು ವಿಧ. ಈಶ್ವರಸೃಷ್ಟಿಯಲ್ಲಿ ದುಃಖವಿಲ್ಲ. ನೀರು ತೃಷೆಯನ್ನು ನೀಗಿಸುವುದು. ಬೆಂಕಿ ಕಾವನ್ನು ಕೊಡುವುದು. ತಂಗಾಳಿಯು ಶಕ್ತಿವರ್ಧಕವು. ಮರಗಳಿಂದ ನೆರಳು ದೊರೆಯುವುದು. ಹಸುಗಳು ಹಾಲನ್ನು ಕೊಡುವುವು. ನನ್ನ ಪತ್ನಿ ಸುತ ಎಂಬ ಮಮತೆಯು ಜೀವಸೃಷ್ಟಿಯು. ಇದು ದುಃಖದಾಯಕವು. "ಕುದುರೆಯು ಸತ್ತಿತು" ಎಂಬುದನ್ನು ಕೇಳಿದಾಗ ನಿನಗೆ ಭಾದೆಯಿಲ್ಲ. "ನನ್ನ ಕುದುರೆಯು ಸತ್ತಿತು" ಎಂದು ಕೇಳಿದಾಗ ನೀನು ಚಿಂತಿಸಲಾರಂಭಿಸುವೆ. ಮಾನವನ ದುಃಖಗಳಿಗೆ ಮಮತೆಯೇ ಮೂಲವು. ಈ ಮಮತೆಯನ್ನು ನಾಶಮಾಡಿ ಆತ್ಮಾನಂದದಲ್ಲಿ ವಿರಮಿಸಿ.

ಅತಿಯಾದ ದೇಹಾಭಿಮಾನವುಳ್ಳವನು ಆತ್ಮಜ್ಞಾನವನ್ನು ಹೊಂದುವುದು ಅಥವಾ ಜೀವೈಕ್ಯವನ್ನು ಪಡೆಯುವುದು ಮತ್ತು ಜ್ಞಾನೈಕತ್ವವನ್ನು ಪಡೆಯುವುದು ಬಹುಕಠಿಣ.

ಎಷ್ಟು ಪರಿಪೂರ್ಣನಾಗಿ ದೇಹ ಮತ್ತು ಅಂಗಗಳೊಡನೆ ದುಡಿಯುತ್ತಿರುವೆ. "ನಾನು, ನಾನು, ನಾನು. ನಾನು ಒಬ್ಬ ಡಾಕ್ಟರ್, ನಾನು ಒಬ್ಬ ಇಂಗ್ಲೀಷ್‌ಮನ್, ನಾನು ಒಬ್ಬ ಅಮೆರಿಕನ್, ನಾನು ಒಬ್ಬ ಬ್ರಾಹ್ಮಣ, ನನಗೆ ಎಲ್ಲವೂ ತಿಳಿದಿದೆ, ನಾನು ಬುದ್ಧಿವಂತ, ನಾನು ಜಾಣ, ನಾನು ಬಲಶಾಲಿ, ನಾನು ಕರ್ತೃ, ನಾನೊಬ್ಬ ನಟ, ನಾನು ಬಹಳ ಧರ್ಮವನ್ನು ಮಾಡಿರುವೆನು, ನಮ್ಮ ತಂದೆಯ ಹೆಸರಿನಲ್ಲಿ ಒಂದು ಆಸ್ಪತ್ರೆಯನ್ನು ಕಟ್ಟಿಸಿರುವೆನು." ಈ "ನಾನು" ವಿಗೆ ಕೊನೆಯೇ ಇಲ್ಲ. ಈ ನಶ್ವರವಾದ, ಅಶುದ್ಧವಾದ

ದೇಹದೊಡನೆ ಅಂಹಂತಾದಾತ್ಮ್ಯ ನಿಲ್ಲುವುದು. "ಈ ದೇಹವು ನಾನಲ್ಲ" ವೆಂದು ಯಾವಾಗ ತಿಳಿಯುವೆಯೋ ಮತ್ತು ನೀನು ಸರ್ವವ್ಯಾಪಿಯಾದ ಅಮೃತಾತ್ಮನು ಎಂದು ಅರಿತುಕೊಳ್ಳುವಿಯೋ ಆಗಲೆ ನಿನ್ನ ದುಃಖಗಳೂ ಕಷ್ಟಗಳೂ ನಷ್ಟವಾಗಿ ಈ ಭಯಂಕರವಾದ ಸಂಸಾರದಿಂದ ಬಿಡುಗಡೆ ಹೊಂದುವೆ. ನೀನು ಸುಖದ ಗಣಿಯೂ ಮತ್ತು ಅಮೃತದ ಆಗರವೂ ಮತ್ತು ಅಕ್ಷಯವಾದ ಆಧ್ಯಾತ್ಮಿಕ ಸಂಪತ್ತಿನಿಂದ ಕೂಡಿದ, ಮರಣವಿಲ್ಲದ ನಗರವನ್ನು ಪ್ರವೇಶಿಸಿ ಅಮೃತವನ್ನು ಪಾನಮಾಡು.

ಐವತ್ತು ಬಾಂಬುಗಳು ಒಂದು ದೊಡ್ಡ ಪಟ್ಟಣವನ್ನು ನಾಶಮಾಡು ವುದು. ಆದರೆ ಐದು ಸಾವಿರ ಬಾಂಬುಗಳು ಈ ಅಹಂಕಾರವನ್ನು ನಾಶ ಮಾಡಲಾರದು. ಅಹಂಕಾರವು ಅಷ್ಟು ಕಠಿಣವಾದುದು. ಅಜ್ಞಾನೀ ಜೀವನು ಬಹುವಾಗಿ ತನ್ನ ವ್ಯಕ್ತಿತ್ವವನ್ನೇ ಚಿಂತಿಸುತ್ತಾ, ನಿಷ್ಪ್ರಯೋಜಕ ವಾಗಿ ಭಾವಿಸುತ್ತಾ ಸ್ವಾರ್ಥವನ್ನು ಬಲಪಡಿಸಿದ್ದಾನೆ. ಗ್ರಾನೇಟ್ ಅಥವಾ ವಜ್ರವಾದರೂ ಕಾಲಾಂತರದಲ್ಲಿ ಕರಗಬಹುದು. ಆದರೆ ಹುರುಳಿಲ್ಲದ ಈ ಅಹಂಕಾರವು ಮಾತ್ರ ನಾಶವಾಗುವುದು ಬಹು ಕಷ್ಟ. ಭಕ್ತನು ಶರಣಾಗತಿಯ ಮೂಲಕ ಅಹಂಕಾರವನ್ನು ನಾಶಮಾಡುವನು. ಸನ್ಯಾಸಿಯೂ ಆತ್ಮವಿಚಾರ ಅಥವಾ 'ನಾನು ಯಾರು' ಎಂಬ ವಿಚಾರದಿಂದ ಅಹಂಕಾರ ವನ್ನು ತಿರಸ್ಕರಿಸುವನು.

ಶಿವಾಜಿಯು ಒಂದು ಕೋಟೆಯನ್ನು ಕಟ್ಟಲು ಸಾವಿರಾರು ಕೂಲಿ ಗಳನ್ನು ನೇಮಿಸಿದನು. ಇಷ್ಟೊಂದು ಜನರಿಗೆ ಆಹಾರವನ್ನು ನೀಡುತ್ತಿರುವೆ ನೆಂದು ಅವನಿಗೆ ಅಭಿಮಾನವುಂಟಾಯಿತು. ಶಿವಾಜಿಯ ಗುರು ಸ್ವಾಮಿ ರಾಮದಾಸರು ಇದನ್ನು ತಿಳಿದರು. ಅವರು ಶಿವಾಜಿಯನ್ನು ಕರೆದು ಅರಮನೆಯ ಮುಂದಿನ ದೊಡ್ಡ ಬಂಡೆಯನ್ನು ಒಡೆಯುವಂತೆ ಹೇಳಿದರು. ಶಿವಾಜಿಯು ಆಳನ್ನು ಕರೆದು ಆಜ್ಞಾಪಿಸಿದನು. ಬಂಡೆಯು ಒಡೆಯಲ್ಪಟ್ಟ ತಕ್ಷಣವೇ ಒಳಗಿನಿಂದ ಒಂದು ಕಪ್ಪೆಯು ಹೊರಕ್ಕೆ ಹಾರಿತು. ರಾಮದಾಸರು ಹೇಳಿದರು, "ಓ ಶಿವಾಜಿ ಈ ಪುಟ್ಟ ಕಪ್ಪೆಯು ಕಲ್ಲಿನೊಳಗಿದ್ದಾಗ ಆಹಾರ ವನ್ನು ಕೊಡುತ್ತಿದ್ದವರು ಯಾರು?" ಶಿವಾಜಿಯು ನಾಚಿಕೆಯಿಂದ ತಲೆತಗ್ಗಿಸಿ ರಾಮದಾಸರಿಗೆ ನಮಸ್ಕರಿಸಿ ಹೇಳಿದನು, "ಗುರುಮಹಾರಾಜರೆ, ತಾವು

ಅಂತರ್ಯಾಮಿಗಳು. ನನ್ನಿಂದಲೇ ಈ ಕೂಲಿಗಳಿಗೆ ಅನ್ನವು ದೊರೆಯುತ್ತಿದೆ ಎಂಬ ಅಭಿಮಾನವನ್ನು ನಾನು ಹೊಂದಿದ ಕೂಡಲೇ ನೀವು ಅದನ್ನು ತಿಳಿದು ಕೊಂಡಿರಿ. ನನ್ನಲ್ಲಿ ಈಗ ವಿವೇಕವು ಉದಯಿಸಿದೆ. ನಾನು ತಮ್ಮ ಶಿಷ್ಯನು. ನನ್ನನ್ನು ಕಾಪಾಡಿ" ಎಂದು ಬೇಡಿದನು.

ಕಪಿಗಳಿಗೆ ಅವುಗಳ ಮಕ್ಕಳಮೇಲೆ ಬಹಳ ಮೋಹ. ತಮ್ಮ ಸತ್ತ ಮಕ್ಕಳ ಮೂಳೆಯನ್ನು ತಿಂಗಳುಗಟ್ಟಲೆ ಹೊತ್ತು ತಿರುಗುವುವು. ಮೋಹ ವೆಂದರೆ ಈ ಭೌತ ಶರೀರಕ್ಕೆ ಅಂಟಿಕೊಂಡಿರುವುದು. ಈ ಸಂಸ್ಕಾರಗಳು ಪಶುರಾಜ್ಯದಿಂದ ಮಾನವ ರಾಜ್ಯಕ್ಕೂ ಬಂದಿವೆ. ಈ ಕಾರಣದಿಂದಲೇ ಸ್ತ್ರೀಪುರುಷರು ಮಕ್ಕಳಮೇಲೆ ಮೋಹವನ್ನು ಬೆಳೆಸಿಕೊಳ್ಳುವರು.

ನೀವು ಒಂಟಿಯಾಗಿ ಹುಟ್ಟಿದಿರಿ, ಒಂಟಿಯಾಗೇ ಸಾಯುವಿರಿ. ಹಲವು ಬಂಧನಗಳನ್ನು ಏಕಾಂಗಿಯಾಗಿಯೇ ದಾಟುವಿರಿ. ಒದಗಿದ ಕಷ್ಟಗಳನ್ನು ಒಂಟಿಯಾಗೇ ಅನುಭವಿಸುವಿರಿ. ಇಷ್ಟಾದರೂ ಮಕ್ಕಳು ಮಡದಿಯಮೇಲೆ ವ್ಯರ್ಥವಾದ ಮೋಹವನ್ನೇಕೆ ಬೆಳೆಸುವಿರಿ? ಎಚ್ಚರಗೊಳ್ಳಿ. ಮೇಲೇಳಿ, ಜಾಗರೂಕರಾಗಿ. ನೀವು ಜನ್ಮವೆತ್ತಿರುವುದು ಸ್ವಭಾವವನ್ನು ಗೆದ್ದು ಆತ್ಮ ಸಾಕ್ಷಾತ್ಕಾರವನ್ನು ಪಡೆಯಲು. ಈ ಅಹಂಕಾರದ ರೀತಿ, ನೀತಿಗಳನ್ನು ತುಳಿಯಲು ಪ್ರಯತ್ನಿಸಿ. ಆತ್ಮದ ಪ್ರಗತಿಗೆ, ಅಧಿಕಾರಕ್ಕೆ, ಸುಖಸಂಪತ್ತು ಗಳ ಪ್ರಾಪ್ತಿಗೆ ಅದು ಬಾಯಿ ನೀರು ಕರೆಯುವುದು. ಈ ಸ್ವಾರ್ಥ ಮತ್ತು ದಂಭದ ಅಹಂಕಾರವನ್ನು ತ್ಯಜಿಸಿ. ಅನಾಸಕ್ತರಾಗಿ, ನಿಸ್ವಾರ್ಥತೆ, ತ್ಯಾಗ ಮನೋಭಾವ ಮುಂತಾದ ವಿರುದ್ಧಗುಣಗಳಲ್ಲಿ ಶ್ರದ್ಧೆಯನ್ನಿಡಿ, ತ್ಯಾಗ ಮತ್ತು ಸೇವೆಯನ್ನು ಜೀವನದ ಮಾರ್ಗದರ್ಶಕ ತತ್ವಗಳೆಂದು ತಿಳಿಯಿರಿ. ಕೂಡಲೇ ನೀವು ವಿಶಾಲವಾದ ಶ್ರೀಮಂತ ಆಧ್ಯಾತ್ಮ ಜೀವನವನ್ನು ನಡೆಸುವಿರಿ.

ದೇಹ, ಮಡದಿ, ಮಕ್ಕಳು, ವಸ್ತುಗಳೊಡನೆ ಮಮತೆಯನ್ನು ಹೊಂದ ದಿರಿ. ನನ್ನದೆಂಬ ಎಲ್ಲ ಭಾವನೆಗಳನ್ನೂ ಬಿಡಿರಿ. "ಇದು ನನ್ನದು" ಎಂದು ಎಂದಿಗೂ ಹೇಳದಿರಿ. "ಬ್ರಹ್ಮವೊಂದೇ ಇರುವುದು ಮತ್ತು ಪ್ರಕಾಶಿಸು ವುದು. ನಾನೂ ಬ್ರಹ್ಮವೇ." ಎಂಬ ಏಕಮಾತ್ರ ಬ್ರಹ್ಮಭಾವದಲ್ಲಿ ಸ್ಥಿರವಾಗಿ ನಿಲ್ಲಿ. ಜೀವನ್ಮುಕ್ತರಾಗಿ. ಪರಮಸುಖವಾದ ಬ್ರಹ್ಮಾನಂದವನ್ನೂ, ಅದ್ವೈತ ಭಾವವನ್ನೂ ಆನಂದಿಸಿರಿ.

ಕತ್ತಲೆಯ ಕೋಣೆಯಲ್ಲಿಡಲ್ಪಟ್ಟ ಉರಿಯುವ ಹಣತೆಯನ್ನು ಒಳಗೆ ಹೊಂದಿರುವ ಮಡಕೆಯು ಒಡೆದರೆ ಇಡೀ ಕೊಠಡಿಯಲ್ಲೆಲ್ಲಾ ಬೆಳಕು ಹಬ್ಬುವುದು ಮತ್ತು ಕೋಣೆಯ ತುಂಬ ಆವರಿಸಿದ್ದ ಕತ್ತಲೆಯು ಮಾಯವಾಗುವುದು. ಹಾಗೆಯೇ ಸಂತತವಾದ ಆತ್ಮಚಿಂತನೆಯಿಂದ ದೇಹಾಧ್ಯಾಸವು ತೊಲಗಿ ಎಂದರೆ ಅವಿದ್ಯೆಯು ನಾಶವಾಗಿ, ದೇಹಭಾವವು ಹೋಗಿ ಆತ್ಮಜ್ಯೋತಿಯೊಂದೇ ಎಲ್ಲೆಲ್ಲಿಯೂ ಬೆಳಗುತ್ತಿರುವುದೆಂಬ ಜ್ಞಾನವುಂಟಾಗುವುದು.

ಬೇರೂರಿದ ಹಳೆಯ ಶತೃ ಅಹಂಕಾರವನ್ನು ಕತ್ತರಿಸಲು ಆತ್ಮವಿಚಾರಕ್ಕಿಂತ ಹರಿತವಾದ ಖಡ್ಗವಿಲ್ಲವು.

ಮನುಷ್ಯನು ಮಾಂಸದಲ್ಲಿ ಬದುಕುವನು. ಮಾಂಸವನ್ನೇ ತಿನ್ನುವನು. ಮಾಂಸವನ್ನೇ ಆಲಂಗಿಸುವನು. ಮಾಂಸವು ಅಹಂಕಾರವು. ಮಾತೆ ಕಾಳಿಗೆ ಮಾಂಸದ ಅರ್ಪಣೆಯ ಅಪೇಕ್ಷೆಯಿಲ್ಲವು. ಅವಳು ಅಹಂಕಾರದ ಅರ್ಪಣೆಯನ್ನು ಬಯಸುವಳು. ಮೂರ್ಖರು ತಮ್ಮ ನಾಲಿಗೆಯನ್ನು ತೃಪ್ತಿಪಡಿಸಲು ಕಾಳೀಮಾತೆಯ ನೆಪದಿಂದ ಆಡುಗಳನ್ನು ಕೊಲ್ಲುವರು. ಮೂರ್ಖರ ಈ ಪಾಪ ಕೃತ್ಯವು ನಿಜವಾಗಿಯೂ ಅಕ್ಷಮ್ಯವು.

ಹಾವಾಡಿಗನು ಹಾವಿನ ಎರಡು ವಿಷದ ಹಲ್ಲುಗಳನ್ನು ತೆಗೆದು ನಂತರ ನಿರ್ಭಯನಾಗಿ ಆಟವಾಡಿಸುವನು. ಆ ಹಾವು ಈಗಲೂ ಹೆಡೆಬಿಚ್ಚಿ ಮೇಲೆದ್ದು ಬುಸುಗುಟ್ಟುವುದು. ಆದರೆ ಅದು ಯಾವ ತೊಂದರೆಯನ್ನೂ ಮಾಡಲಾರದೆಂಬುದು ಹಾವಾಡಿಗನಿಗೆ ತಿಳಿದಿದೆ. ಹಾಗೆಯೇ ಅಹಂತ, ಮಮತ ಎಂಬ ಎರಡು ಹಲ್ಲುಗಳನ್ನು ಕಿತ್ತರೆ ನೀವು ಈ ಲೋಕದಲ್ಲಿ ಧೈರ್ಯವಾಗಿ ಸಂಚರಿಸಬಹುದು. ನೀವು ಜೀವನ್ಮುಕ್ತರಾಗಿ ಒಳಗೆ ಆತ್ಮದಲ್ಲಿ ಆನಂದಿಸುವಿರಿ. ತೊಂದರೆಗಳ ನಿಮಿತ್ತ ಹತ್ಯೆಮಾಡಿಕೊಳ್ಳುವವನು ಅಪವಿತ್ರ ಮರಣವನ್ನು ಪಡೆದಂತೆ. ಯಾರು ಅಹಂಕಾರ, ಸ್ವಾರ್ಥ, ವಾಸನೆಗಳು, ಇಂದ್ರಿಯಗಳು, ಚಿಂತನೆಗಳು ಮುಂತಾದುವುಗಳನ್ನು ನಾಶಮಾಡುವನೋ ಅವನು ಪವಿತ್ರವಾದ ಮರಣವನ್ನು ಹೊಂದುವನು.

ಬೆರಣಿಯ ಬೂದಿಯನ್ನು ಹಣೆಗೆ ಧರಿಸಿದರೆ ಪ್ರಯೋಜನವೇನು? ಅಹಂಕಾರವನ್ನು ಸುಟ್ಟು ಆ ಅಹಂಕಾರ ನಾಶದಿಂದ ವಿಭೂತಿಯನ್ನು ದೇಹ ಮತ್ತು ಹಣೆಯಮೇಲೆ ಧರಿಸಿರಿ.

ದೇವಕಿಯು ತನ್ನ ಬಾಲಕೃಷ್ಣನನ್ನು ತುಂಡು ಹಗ್ಗದಿಂದ ಕಟ್ಟಲು ಎಷ್ಟೋ ಪ್ರಯತ್ನಪಟ್ಟಳು. ಅದು ಎರಡು ಅಂಗುಲ ಚಿಕ್ಕದು. ಮತ್ತೆ ದೊಡ್ಡ ಹಗ್ಗವನ್ನು ತಂದಳು. ಅದೂ ಸಹ ಎರಡು ಅಂಗುಲ ಚಿಕ್ಕದಾಯಿತು. ಹೀಗೆ ಅವಳು ತಂದ ಹಗ್ಗವೆಲ್ಲಾ ಎರಡು ಅಂಗುಲದಷ್ಟೇ ಚಿಕ್ಕದಾಗಿರುತ್ತಿತ್ತು. ಇದರ ಅರ್ಥವೇನು ? ಇದರಲ್ಲಿ ತತ್ವದ ಪ್ರಾಮುಖ್ಯತೆ ಏನಾದರೂ ಇದೆಯೇ ? ಹೌದು, ಅದರಲ್ಲಿ ತತ್ವವಿದೆ. ದೇವಕಿಯು ಸ್ವಲ್ಪ ಅಹಂಕಾರವನ್ನು ಹೊಂದಿದ್ದಳು ಮತ್ತು ಬಲವಾದ ಮಮತೆಯನ್ನೂ ಹೊಂದಿದ್ದಳು. ಆ ಮಗುವಿನ ಮೇಲೆ ಅವಳಿಗೆ ಅಪಾರವಾದ ಮೋಹವಿದ್ದಿತು. ಕೃಷ್ಣಭಗವಾನನು ಅವಳ ಅಹಂ ಮತ್ತು ಮಮಕಾರಗಳನ್ನು ಅವಳ ಮನಸ್ಸಿನಿಂದ ಸಮೂಲ ನಾಶಗೊಳಿಸಲು ಇಚ್ಛಿಸಿದನು. ಅವನು ಪರೋಕ್ಷವಾಗಿ ಅವಳಿಗೆ ಉಪದೇಶಿಸಿದನು. ಅಮ್ಮಾ, ನಾನು ಮತ್ತು ನನ್ನದು ಎಂಬುದನ್ನು ಬಿಡು. ಆಗ ಮಾತ್ರ ಪರಿಶುದ್ಧವಾದ ಪ್ರೇಮದಿಂದ ನನ್ನನ್ನು ಕಟ್ಟಬಲ್ಲೆ.

ನೀನು ರಾಣಿಜೇನನ್ನು ಕೊಂದರೆ ಐದು ಮೈಲಿ ದೂರದಲ್ಲಿ ಮಕರಂದವನ್ನು ಪುಷ್ಪಗಳಿಂದ ಸಂಗ್ರಹಿಸುತ್ತಿರುವ ಜೇನುಗಳು ಕೂಡಲೇ ಸಾಯುವುವು. ಹೀಗೆಯೇ ಗೆದ್ದಲುಗಳೂ ನಾಶವಾಗುವುವು. ಆಫ್ರಿಕದ ಆದಿವಾಸಿಯೊಬ್ಬನು ಯಾವುದಾದರೊಂದು ನೋವಿನಿಂದ ಭಾದೆಪಡುತ್ತಿದ್ದರೆ ನೂರಾರು ಮೈಲಿ ದೂರದಲ್ಲಿರುವ ಅವನ ಬಂಧುಗಳೆಲ್ಲಾ ನೋವನ್ನನುಭವಿಸುವರು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮನಶ್ಶಾಸ್ತ್ರಜ್ಞರು ಮೇಲ್ಕಂಡ ಘಟನೆಗಳ ಬಗ್ಗೆ ಅಂಕಿ, ಅಂಶಗಳನ್ನು ಸಂಗ್ರಹಿಸಿ, ಅವಲೋಕಿಸಿ ತೀರ್ಮಾನಿಸಿರುವರು. ಆದಿವಾಸಿ ಜನಗಳಲ್ಲಿ ಈ ಬಗೆಯ ಮನೋಭಾವಗಳು ಬಹಳ ಸೂಕ್ಷ್ಮವಾಗಿವೆ. ಅದರಿಂದಲೇ ಒಬ್ಬನಿಗಾಗುವ ನೋವಿನಿಂದ ಹಲವರು ನರಳುವರು. ಇದರಿಂದ ಸಿದ್ಧವಾಗುವುದೇನೆಂದರೆ ಒಂದೇ ವಿಶ್ವಭಾವನೆಯು ಇರುವುದು. ನೀವು ಆ ವಿಶ್ವದ ಅರಿವಿನೊಡನೆ ಅಹಂಕಾರವನ್ನು ಕಳೆಯುವುದರಿಂದ ಒಂದಾಗಬಹುದು ಮತ್ತು ಪರಮೋಚ್ಚವಾದ ದಿವ್ಯಜ್ಞಾನವನ್ನೂ ಹೊಂದಬಹುದು.

---

# 10

## ಬ್ರಹ್ಮವಿದ್ಯಾ

### ೧. ಶರೀರತ್ರಯಗಳು

### (ಕಾರಣ, ಸೂಕ್ಷ್ಮ ಮತ್ತು ಸ್ಥೂಲ)

ಅನಾದಿ ಅವಿದ್ಯೆಯು ಕಾರಣ ಶರೀರವೆನಿಸುವುದು. ಲಿಂಗ ಶರೀರವು ಹದಿನೇಳು ತತ್ವಗಳಿಂದ ಎಂದರೆ ಪಂಚಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ), ಪಂಚ ಕರ್ಮೇಂದ್ರಿಯಗಳು (ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥ), ಪಂಚ ಪ್ರಾಣಗಳು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ), ಮನಸ್ಸು ಮತ್ತು ಬುದ್ಧಿ. ಇವುಗಳಿಂದಾದ ದೇಹ ವುಳ್ಳದ್ದು. ಈ ಸೂಕ್ಷ್ಮ ಶರೀರವು ಸ್ಥೂಲಶರೀರದಿಂದ ಪ್ರತ್ಯೇಕವಾದಾಗ ನಾವು ಅದನ್ನು ಮರಣ ಎನ್ನುತ್ತೇವೆ. ಇವು ಅಪಂಚೀಕೃತವಾದುವು. ಇದು ಸುಖದ ಸಾಧನವು.

ಮನಸ್ಸು ಲಿಂಗಶರೀರದಲ್ಲಿ ಎಲ್ಲ ಕರ್ಮಗಳನ್ನೂ ಮಾಡುವುದಲ್ಲದೆ ಡೋಲಾಯಮಾನವಾಗುತ್ತಿರುವುದು. ಆದರೆ ಸ್ಥೂಲಶರೀರವು ಜಡವಾದುದ ರಿಂದ ಇವುಗಳ್ಯಾವುದನ್ನೂ ತಿಳಿಯದು.

ತನ್ಮಾತ್ರೆಗಳ ರಾಜಸಭಾಗದಿಂದ ಕರ್ಮೇಂದ್ರಿಯಗಳು ಆಗುವುವು. ಆಕಾಶದ ರಜೋಗುಣದ ಅಂಶದಿಂದ ವಾಗಿಂದ್ರಿಯವು, ವಾಯುವಿನಿಂದ ಪಾಣಿಗಳು, ಅಗ್ನಿಯಿಂದ ಪಾದಗಳು, ಜಲದಿಂದ ಪಾಯುವು ಮತ್ತು ಭೂಮಿ ಯಿಂದ ಉಪಸ್ಥೇಂದ್ರಿಯವೂ ಉಂಟಾಗುವುವು. ಈ ತನ್ಮಾತ್ರೆಗಳ ರಜಸ್ಸಿನ

ಮೊತ್ತದಿಂದ ಪಂಚಪ್ರಾಣಗಳುಂಟಾಗುವುವು. ಸೂಕ್ಷ್ಮಶರೀರವು ಹದಿನೇಳು ತತ್ವಗಳಿಂದಾಗಿದೆ. ಸ್ವಪ್ನಾವಸ್ಥೆಯಲ್ಲಿ ಲಿಂಗಶರೀರವು ಕ್ರಿಯಾತ್ಮಕವಾಗುವುದು. ಪ್ರಾಣಮಯಕೋಶವು ಮತ್ತು ವಿಜ್ಞಾನಮಯಕೋಶವು ಈ ಸೂಕ್ಷ್ಮಶರೀರಕ್ಕೆ ಸಂಬಂಧಿಸಿದುದು.

ಶ್ರೋತ್ರೇಂದ್ರಿಯಕ್ಕೆ ದಿಶೆಯು, ಸ್ಪರ್ಶೇಂದ್ರಿಯಕ್ಕೆ ವಾಯು, ದೃಷ್ಟಿಗೆ ಸೂರ್ಯನು, ರುಚಿಗೆ ವರುಣನು, ಘ್ರಾಣಕ್ಕೆ ಅಶ್ವಿನೀಕುಮಾರರು, ವಾಕ್ಕಿಗೆ ಅಗ್ನಿಯು, ಪಾಣಿಗೆ ಇಂದ್ರನು, ಪಾದಕ್ಕೆ ವಿಷ್ಣುವು, ಪಾಯುವಿಗೆ ಯಮನು ಮತ್ತು ಉಪಸ್ಥೆಗೆ ಪ್ರಜಾಪತಿಯು ದೇವತೆಯು.

ಪಂಚಜ್ಞಾನೇಂದ್ರಿಯಗಳು ಪಂಚಕರ್ಮೇಂದ್ರಿಯಗಳೂ ಆಗಿವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೂ ಕರ್ಮಗಳೇ. ದೃಷ್ಟಿಯು ಅಪವಿತ್ರವಾಗಿ, ದೋಷಯುಕ್ತವಾಗಿ ಒಬ್ಬ ಸ್ತ್ರೀಯನ್ನು ನೋಡಿದರೆ, ಕಣ್ಣು ಪಾಪಕರ್ಮವನ್ನು ಮಾಡಿದಂತೆ.

ಜ್ಞಾನೇಂದ್ರಿಯಗಳಾದ ಕಿವಿಗಳು, ಚರ್ಮ, ಕಣ್ಣುಗಳು, ನಾಲಿಗೆ ಮತ್ತು ಮೂಗು ಕ್ರಮವಾಗಿ ಕೇಳುವದು, ಮುಟ್ಟುವಿಕೆ, ನೋಟ, ರುಚಿ ಮತ್ತು ವಾಸನೆಯನ್ನು ಅನುಭವಿಸುವವು. ಇಂದ್ರಿಯಗಳು ವಸ್ತುಗಳೊಡನೆ ಒಂದಾಗಿ ಶಬ್ದಮುಂತಾದವುಗಳಿಂದ ಶೀತೋಷ್ಣ, ಸುಖ ದುಃಖಗಳನ್ನು ಅನುಭವಿಸುವವು. ದೇಹವನ್ನು ನಿಮ್ಮ ಅಧೀನದಲ್ಲಿಡಿರಿ. ದೇಹವು ಒಂದು ಉಪಕರಣ ಅಥವ ಸಾಧನಮಾತ್ರವಾಗಿರಲಿ.

ಆತ್ಮ ಅಥವ ಬ್ರಹ್ಮವು ಈ ಶರೀರತ್ರಯಗಳನ್ನು ಮೀರಿದುದು. ಮಾಯೆಯು ಈ ಕಾರಣ, ಸ್ಥೂಲ ಮತ್ತು ಸೂಕ್ಷ್ಮಶರೀರಗಳನ್ನು ಸಿದ್ಧಪಡಿಸಿತು. ಕಾರಣ ಶರೀರವು ಮನುಷ್ಯನು ಧರಿಸಿರುವ ಬಟ್ಟೆಗಳಲ್ಲಿ ಬಹಳ ಒಳಗಿನ ಬನಿಯನ್ನಿನಂತೆ. ಸೂಕ್ಷ್ಮಶರೀರವು ಒಂದು ಷರಟಿನಂತೆ ಮತ್ತು ಸ್ಥೂಲಶರೀರವು ದಪ್ಪನಾದ ಹೊರ ಕೋಟಿನಂತೆ. ಮಾಯೆಯಿಂದಾದ ಈ ಕೋಟುಗಳನ್ನು ಧರಿಸುತ್ತಿದ್ದಂತೆಯೇ ತನ್ನ ಸಹಜ ದಿವ್ಯಸ್ವಭಾವವನ್ನು ದಿವ್ಯತೆಯನ್ನು ಮರೆಯುವನು.

ಈಶ್ವರನ ಕಾರಣಶರೀರವೂ ಶುದ್ಧ ಸತ್ವ ಅಥವ ಮಾಯೆಯಿಂದಾಗುವದು. ಜೀವನ (ಸೂಕ್ಷ್ಮ) ಶರೀರವು ರಜಸ್ ಅಥವ ಅವಿದ್ಯ ಅಥವ

ಮಲಿನ ಸತ್ವದಿಂದಾದುದು. ಈಶ್ವರನು ಮಾಯೆಯನ್ನು ಹಿಡಿತದಲ್ಲಿಡುವನು. ಜೀವನು ಮಾಯೆಯಿಂದ ಆಳಲ್ಪಡುವನು.

ಕರ್ಮಫಲಗಳ ಒತ್ತಾಯದಿಂದ ಕಾರಣಶರೀರವಾಗುವದು. ಅದು ಕರ್ಮದ ಶಿಶುವು. ಕಾರಣ ಶರೀರವು ಕರ್ಮದೊಡನೆ ಬದುಕಿ, ಬಾಳಿ, ಬೆಳೆದು, ಕರ್ಮವು ನಾಶವಾದರೆ ಅದರೊಡನೆ ತಾನೂ ನಾಶವಾಗುವುದು.

ಇಡೀ ಗಿಡವನ್ನು ತನ್ನಲ್ಲಡಗಿಸಿಕೊಂಡಿರುವ ಸಣ್ಣ ಬೀಜದಂತೆ ಕಾರಣ ಶರೀರವಿರುವುದು. ಅದನ್ನು ಬೀಜಶರೀರವೆಂದೂ ಕರೆಯುವರು. ಸ್ಥೂಲ ದೇಹ, ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳು ಈ ಬೀಜ ಶರೀರದಿಂದಲೇ ಹೊರಬಂದಿರುವವು.

ಮಾನವನ ಬುದ್ಧಿಯೊಳಕ್ಕೆ ಸಹಜವಾಗಿ ಪ್ರವೇಶಿಸುವ ಎಲ್ಲ ಬಗೆಯ ಮನೋಭಾವಗಳೂ, ಆಕಾಂಕ್ಷೆಗಳೂ ಕಾರಣಶರೀರದಲ್ಲಿ ಸ್ಪಷ್ಟವಾಗಿ ಅಚ್ಚೊತ್ತಿ ದಂತೆ ಸಿಲ್ಲುವುವು.

ಯೋಗಿಯ ಲಿಂಗಶರೀರವು ಪೃಥ್ವಿಯಲ್ಲಿ ಪೃಥ್ವಿಯಾಗಿಯೂ, ಜಲದಲ್ಲಿ ಜಲವಾಗಿಯೂ, ಅಗ್ನಿಯಲ್ಲಿ ಅಗ್ನಿಯಾಗಿಯೂ ಪ್ರವೇಶಿಸಿ ಹೊರಡು ವುದು. ಅಗ್ನಿದೇಹದಿಂದ ವಾಯುಕೋಶವನ್ನು ಸೇರಿ, ವಾಯುಕೋಶದಿಂದ ಆಕಾಶಕೋಶಕ್ಕೂ ಹೋಗುವನು. ಆತನು ತನ್ಮಾತ್ರೆಗಳ ಮೂಲಕವೂ ಹಾದು ಹೋಗುವುದಲ್ಲದೆ ಅವುಗಳನ್ನು ಅರಿಯುವನು. ಅಷ್ಟಲ್ಲದೆ ಪ್ರಾಣನ ಮೂಲಕವೂ ನಡೆದು ಸರ್ವಕರ್ಮಗಳೂ ಆಗುವನು. ಹೀಗೆ ಸ್ಥೂಲ, ಸೂಕ್ಷ್ಮ ಶರೀರಗಳನ್ನು ಹಾದು, ಯೋಗಿಯು ಆರನೆಯದಾದ ಇಂದ್ರಿಯಗಳನ್ನೂ, ತನ್ಮಾತ್ರೆಗಳನ್ನೂ ರೂಪಾಂತರಗೊಳಿಸುವ ಅಹಂಕಾರ ತತ್ತ್ವವನ್ನು ಮುಟ್ಟು ವನು. ಅಲ್ಲಿಂದ ಮಹತ್ತತ್ತ್ವವನ್ನೂ ನಂತರ ಪ್ರಧಾನ (ಮೂಲ ಪ್ರಕೃತಿ) ವನ್ನೂ ತಲಪುವನು. ಪ್ರಧಾನದಲ್ಲಿ ಎಲ್ಲ ಗುಣಗಳೂ ವಿರಮಿಸುವುವು. ನಂತರ ತಾನೇ ಸರ್ವಪ್ರಧಾನವಾಗಿ ಎಲ್ಲ ಉಪಾಧಿಗಳನ್ನೂ ನಿಷ್ಪ್ರಾಣ ಗೊಳಿಸಿ, ಶಾಂತಿ, ಆನಂದಗಳ ಸ್ವರೂಪವಾಗಿರುವ ಶುದ್ಧಾತ್ಮನನ್ನು ಬಂದು ಸೇರುವನು.

ಈ ಸ್ಥೂಲ ಶರೀರವನ್ನು ತುಪ್ಪ, ಕೆನೆ, ಮೀನೆಣ್ಣೆಯು ಹೇಗೆ ಸ್ಥೂಲ ಗೊಳಿಸುವದೋ, ಹಾಗೆಯೇ ಮನೋಭಾವಗಳೂ, ಉತ್ಕಾಂಕ್ಷೆಗಳೂ ಸೂಕ್ಷ್ಮ

ಶರೀರವನ್ನು ಹಿಗ್ಗಿಸುವದು. ಆಶೆ, ಆಕಾಂಕ್ಷೆಗಳು ನಿರ್ನಾಮಗೊಳಿಸಲ್ಪಟ್ಟರೆ ಸೂಕ್ಷ್ಮಶರೀರವು ನಾಶವಾಗುವುದು.

ಸೂಕ್ಷ್ಮಶರೀರವು ಸ್ತ್ರೀ, ಪುಂ, ಮುಂತಾದ ಕಾಲ್ಪನಿಕ ಲಿಂಗಭೇದಗಳನ್ನು ಹೊಂದಿರುವುದು. ಸ್ವರ್ಗದಲ್ಲಿ ಮೈಥುನವುಂಟು, ಆದರೆ ಗರ್ಭಧಾರಣೆಯಿಲ್ಲವು. ಸ್ವರ್ಗದಲ್ಲಿ ಸುಖವನ್ನನುಭವಿಸಲು ಲಿಂಗಶರೀರಕ್ಕೆ ತೇಜೋಮಯವಾದ ದೇಹವಿರುವುದು.

ಸೂಕ್ಷ್ಮಶರೀರವು, ಸ್ಥೂಲಶರೀರದ ಪ್ರತ್ಯಾಕೃತಿಯ ಮಸಕಾದ ಅನಿಲ ರೂಪದಂತೆ ತೋರುವುದು. ಯಕ್ಷಿಣಿಗಾರರು ಸೂಕ್ಷ್ಮಶರೀರವನ್ನು ಸ್ಥೂಲಶರೀರದಿಂದ ಪ್ರತ್ಯೇಕಿಸಿ, ಈ ಸೂಕ್ಷ್ಮಶರೀರದಿಂದ ಅನೇಕ ಕಡೆಗಳಲ್ಲಿ ಓಡಾಡುವರು. ಮುಂದುವರೆದ ಯೋಗಿಗಳು ತಮ್ಮ ಸ್ಥೂಲದೇಹವನ್ನೇ ಸಂಕೋಚಪಡಿಸಿ ವಾಯುಮಂಡಲದಲ್ಲಿ ದೂರಪ್ರದೇಶಗಳಿಗೆ ಚಲಿಸುವರು. ಈ ವಿಧಾನಕ್ಕೆ ಬಹಳಷ್ಟು ಶಕ್ತಿಯು ವ್ಯಯವಾಗುವುದು.

ಬೆಂಕಿಯು ಸೂಕ್ಷ್ಮದೇಹವನ್ನು ದಹಿಸಲಾರದು. ಸೂಕ್ಷ್ಮದೇಹವು ಸುಲಭವಾಗಿ ಕಲ್ಲುಬಂಡೆಗಳ ಪದರಗಳಲ್ಲೂ ಒಳಹೋಗಬಲ್ಲುದು. ಗಾಳಿಯಲ್ಲಿ ಹಾರಬಲ್ಲುದು. ದಳ್ಳುರಿಯಲ್ಲಾಗಲಿ, ಆಳವಾದ ಸಾಗರದಲ್ಲಾಗಲೀ ಅದು ಧುಮುಕಬಲ್ಲುದು. ಮಿಂಚಿನ ವೇಗದಲ್ಲಿ ಚಲಿಸಬಲ್ಲುದು. ಕ್ಷಣಮಾತ್ರದಲ್ಲಿ ಕೊಲಂಬೋನಿಂದ ಲಂಡನ್‌ಗೆ ಪ್ರಯಾಣ ಮಾಡಬಲ್ಲುದು. ಪರ್ವತಾಗ್ರದಿಂದ ಜಾರಿಬಿದ್ದರೂ ಅದಕ್ಕೆ ಬಾಧೆಯಾಗದು.

ಸ್ಥೂಲದೇಹವು ಬರುವುದು, ಇರುವುದು ಮತ್ತು ಹೋಗುವುದು. ಅದು ಪಂಚಭೂತಗಳ ಮಿಲನವು. ಅತ್ಯಂತ ಅಗ್ರಾಹ್ಯವು, ಆದ್ಯಂತವು, ಆದ ಶುದ್ಧಾತ್ಮವು ಬರುವುದೂ ಇಲ್ಲ, ಹೋಗುವುದೂ ಇಲ್ಲ. ಅದಕ್ಕಾಗಿ ನೀನು ಏಕೆ ಶೋಕಿಸುವೆ? ನನ್ನ ಮಗುವೆ, ನೀನು ಶುದ್ಧ ಬುದ್ಧ ಆತ್ಮವೇ ಆಗಿರುವೆ.

ಈ ದೇಹವು ಒಂದು ರಥ ಅಥವ ಮೋಟಾರ್‌ಗಾಡಿಯಂತೆ. ಅದಕ್ಕೆ ಬುದ್ಧಿ ಇಲ್ಲವು. ಆತ್ಮನೇ ಅದರ ಬುದ್ಧಿವಂತ ಚಾಲಕನು. ಎಲ್ಲ ಬುದ್ಧಿವಂತಿಕೆಯು ಆತ್ಮನೇ ಈ ದೇಹದಲ್ಲಿರುವನು. ಈ ಆತ್ಮನ ಇರುವಿಕೆಯಿಂದ ದೇಹವು ಬುದ್ಧಿವಂತವಾಗಿ ಮಾಡಲ್ಪಟ್ಟಿರುವುದು.

ಸ್ಥೂಲಶರೀರವು ಅಗ್ರಾಹ್ಯವಾದರೂ, ಆತ್ಮನ ತಾತ್ಕಾಲಿಕ ಸಂಬಂಧ

ದಿಂದ, ದೇಹವು ಇಂದ್ರಿಯ ಜ್ಞಾನ ವಿಶಿಷ್ಟತೆಯಿಂದ ಕೂಡಿರುವಂತೆ ತೋರುವುದು. ಆತ್ಮನು ದೇಹವನ್ನು ಬಿಟ್ಟ ಕೂಡಲೇ, ಸ್ಥೂಲದೇಹವು ಒಂದು ಮರದ ದಿಮ್ಮಿಯಂತಾಗುವುದು. ಅದು ಶಿಥಿಲವಾಗುವುದು ಮತ್ತು ವಿಭಜಿಸಲ್ಪಡುವುದು. ಆತ್ಮವು ದೇಹದ ಎಲ್ಲ ಭಾಗದಲ್ಲಿ ವ್ಯಾಪಿಸಿದ್ದರೂ, ಅದರಿಂದ ಪ್ರತ್ಯೇಕವಾಗಿ ಉಳಿಯಬಲ್ಲ ಸಾಮರ್ಥ್ಯವನ್ನು ಹೊಂದಿರುವುದು. ಅದು ಜೀವಂತ ಸತ್ಯವು. ಅದು ಶುದ್ಧ ಜ್ಞಾನವು.

ತಾನು ಅಥವ ಆತ್ಮವು ಪಂಚಕೋಶಗಳೊಳಗೆ ಬಂಧಿಸಲ್ಪಟ್ಟಿರುವುದು. ಯಾರು ತನ್ನ ದಿವ್ಯಸ್ವಭಾವವನ್ನು ಬೆಳಸಿಕೊಳ್ಳುವನೋ, ಅವನಿಗೆ ಈ ಕೋಶಗಳು ಒಂದೊಂದಾಗಿ ಕಳಚಿ ಹೋಗುವುದು. ಅವನ ಪ್ರಜ್ಞೆಯು ಕೀಳು ಸ್ಥಿತಿಯಿಂದ ಉನ್ನತ ಮಟ್ಟಕ್ಕೆ ಏರುವುದು. ಅವನು ಆತ್ಮದ ಆನಂದ ಮತ್ತು ಸ್ವಾತಂತ್ರ್ಯವನ್ನು ಹೆಚ್ಚುಹೆಚ್ಚಾಗಿ ಅರಿತುಕೊಳ್ಳುವನು. ಅವನ ಸಂಕಲ್ಪವು ಶುದ್ಧವೂ, ಬಲಯುತವೂ ಆಗಿ ಪ್ರತಿಭಟಿಸಲಾಗದಂತಾಗುವುದು. ತನ್ನ ಬಲವಾದ ಸಂಕಲ್ಪಶಕ್ತಿಯಿಂದ ಅವನು ಮನಸ್ಸು ಮತ್ತು ಇಂದ್ರಿಯಗಳನ್ನು ಅಂಕೆಯಲ್ಲಿಡಬಲ್ಲನು. ಸಂಕಲ್ಪ ಶಕ್ತಿಯು ಆತ್ಮಬಲವಲ್ಲದೆ ಬೇರೆಯಲ್ಲ.

ಪಂಚಕೋಶಗಳ ಸ್ಪಷ್ಟವಾದ ಜ್ಞಾನವು ನಿನಗಿದ್ದರೆ ನಿನಗೆ ಭ್ರಮೆಯಾಗುವುದಿಲ್ಲ. ಆದ್ದರಿಂದ ಪಂಚಕೋಶಗಳ ಸ್ವಭಾವವನ್ನು ಮತ್ತು ಅವುಗಳ ಕಾರ್ಯವನ್ನು ಮೊದಲು ತಿಳಿಯಲು ಪ್ರಯತ್ನಿಸು. ಈ ಪಂಚಕೋಶಗಳಿಂದ ಪ್ರತ್ಯೇಕವಾಗಿರುವುದೇ ನಿನ್ನ ಆತ್ಮವಾದ ಸಚ್ಚಿದಾನಂದ ಆತ್ಮವು. ಈ ಆತ್ಮವು ಎಲ್ಲ ಜೀವಿಗಳಲ್ಲಿಯೂ ಸುಪ್ರಸಿದ್ಧವಾಗಿರುವುದು. ಅದು ಎಲ್ಲ ಕಾಲಗಳಲ್ಲಿಯೂ, ಎಲ್ಲೆಲ್ಲಿಯೂ ಇರುವುದು. ತೋರಿಕೆಯ ಉಪಾಧಿಗಳನ್ನು ಅಥವಾ ಕೋಶಗಳನ್ನು ಕಳಚಿ, ತಳ್ಳಿ ಬಾಷ್ಪೀಕರಿಸು ಮತ್ತು ಈ ಕೋಶಗಳ ಆಧಾರನಾದ, ಸಾಮರಸ್ಯನಾದ ಅಮೃತಾತ್ಮನೊಡನೆ ತಾದಾತ್ಮ್ಯವನ್ನು ಹೊಂದು. ಅನೇಕ ಜನ್ಮಗಳ, ವಾಸನೆಗಳ ಸಂಚಿತದ ಮೂಲಕ ಪಂಚಕೋಶಗಳೊಡನೆ ಮತ್ತು ಅವುಗಳ ಕ್ರಿಯೆಗಳೊಡನೆ ತಾದಾತ್ಮ್ಯವನ್ನು ಮಾಡಿಕೊಳ್ಳುವ ಆತ್ಮವು, ಪರಿಪೂರ್ಣಾನಂದದ ಸಾಕ್ಷಾತ್ಕಾರ ಮತ್ತು ಜ್ಞಾನೋದಯದ ಸ್ಥಿತಿಯು ವಾಹನಗಳಂತೆ ಮತ್ತು ಹೊದಿಕೆಗಳಂತಿರುವ ದೇಹದ ಭ್ರಮಾತ್ಮಕಜ್ಞಾನವನ್ನು ಚಾತುರ್ಯದಿಂದ ತಪ್ಪಿಸುವುದು. ಆದರೆ ಸಂತತ ಧ್ಯಾನ ಮತ್ತು

ವಿಚಾರದಿಂದ ಅಡ್ಡಿಗಳು ನಿವಾರಣೆಮಾಡಲ್ಪಡುವುದು ಮತ್ತು ಜೀವನದ ಪರಮಾರ್ಥವನ್ನು ಪಡೆಯಲು ನಿನಗೆ ಸಹಾಯ ಮಾಡುವುದು.

ಆ ಬ್ರಹ್ಮವು ಎಲ್ಲ ಜೀವಿಗಳೊಳಗಿನ ಆತ್ಮವಾಗಿದೆ. ಆ ಬ್ರಹ್ಮವು ಕಾರಣನಲ್ಲವು ಮತ್ತು ಪರಿಣಾಮನಲ್ಲವು, ಒಳಹೊರಗಿಲ್ಲದವನು, ದೋಷ, ಮಾಲಿನ್ಯ, ಉದ್ದ, ಅಗಲವಿಲ್ಲದವನು. ಬಣ್ಣ, ಆಕೃತಿ, ರೂಪಗಳಿಲ್ಲದವನು. ಆ ಬ್ರಹ್ಮನು ಅಂಗರಹಿತನು. ನಾಮ ಅಥವಾ ಜಾತಿ ಇಲ್ಲದವನು. ಹಸ್ತ, ಪಾದಗಳಿಲ್ಲದವನು. ಆ ಬ್ರಹ್ಮನು ಆನಂದ, ಶಾಂತಿ ಮತ್ತು ಜ್ಞಾನದ ಸ್ವರೂಪನು.

ಈ ಆತ್ಮ ಅಥವಾ ಬ್ರಹ್ಮನು ಶುದ್ಧನು, ಶಾಂತನು, ಸ್ವಯಂಪ್ರಕಾಶನು, ಅದೃಶ್ಯನು, ಅವಿನಾಶಿಯು, ನಿತ್ಯನು ಮತ್ತು ಮುಕ್ತನೂ ಆಗಿರುವನು. ಅವನು ದೇಹವಿಲ್ಲದವನು, ಪ್ರಾಣವಿಲ್ಲದವನು ಮತ್ತು ಅನಂತನು. ತನ್ನ ಸ್ವಮಹಿಮೆಯಲ್ಲಿಯೇ ಅವನು ನಿಂತಿರುವವನು. ಅವನು ನಿರಾಧಾರನು. ತನ್ನ ವೈಭವದಿಂದಲೇ ಪ್ರಕಾಶಿಸುತ್ತಿರುವವನು.

---

## ೨. ಅವಸ್ಥಾತ್ರಯವು

ಜಾಗ್ರದವಸ್ಥೆಯ ಅಭಿಮಾನಿಯು ವಿಶ್ವನು. ಸ್ವಪ್ನಾವಸ್ಥೆಯ ಅಭಿಮಾನಿಯು ತೈಜಸನು. ದೃಢ ಸುಷುಪ್ತಿಯ ಅಥವಾ ಗಾಢನಿದ್ದೆಯ ಅಭಿಮಾನಿಯು ಪ್ರಾಜ್ಞನು. ಇವಿಷ್ಟೂ ಪಿಂಡಾಂಡದಲ್ಲಿರುವುದು.

ಒಬ್ಬ ಮಾಯಾವಿಯು ಹಗ್ಗದ ಒಂದು ತುದಿಯನ್ನು ಆಕಾಶಕ್ಕೆ ಎಸೆಯುವನು, ಅದನ್ನೇ ಹಿಡಿದು ಮೇಲಕ್ಕೆ ಹತ್ತುವನು ಮತ್ತು ಸ್ವಲ್ಪ ಹೊತ್ತಿನಲ್ಲೇ ಅದೃಶ್ಯನಾಗುವನು ; ಅವನ ದೇಹವು ಭೂಮಿಗೆ ಚೂರುಚೂರಾಗಿ ಬೀಳುವುದು. ಆ ತುಂಡುಗಳು ಪುನಃ ಒಟ್ಟಾಗಿ ಅದೇ ಮಾಯಾವಿಯ ಆಕೃತಿಯಾಗುವುದು. ಪ್ರೇಕ್ಷಕರು ಈ ಮಾಯೆಯ ರಹಸ್ಯವನ್ನಾಗಲೀ, ಅರ್ಥವನ್ನಾಗಲೀ ತಿಳಿಯಲು ಇಚ್ಛಿಸರು. ಅವರು ತಾತ್ಕಾಲಿಕವಾಗಿ ಸ್ತಬ್ಧ

ರಾಗಿ ನಿಲ್ಲುವರು, ಆಶ್ಚರ್ಯದಿಂದ ಗರಬಡಿದಂತೆ ನಿಲ್ಲುವರು. ಹಾಗೆಯೇ ಜಾಗ್ರತ್, ಸ್ವಪ್ನ, ಸುಷುಪ್ತಿಯ ಅವಸ್ಥೆಗಳು ಹಗ್ಗವನ್ನು ಮೇಲಕ್ಕೆಸೆದಂತೆ, ವಿಶ್ವ, ತೈಜಸ ಮತ್ತು ಪ್ರಾಜ್ಞರು ಹಗ್ಗವನ್ನು ಹತ್ತಿ ಮೇಲಕ್ಕೇರಿದ ಮಾಯಾವಿಯನ್ನು ಪ್ರತಿನಿಧಿಸುವರು. ಇಡೀ ಮಾಯಾ ದೃಶ್ಯದ ನಿಜವಾದ ದಿಗ್ದರ್ಶಕನು ಹಗ್ಗ ಮತ್ತು ಹಗ್ಗವನ್ನು ಹತ್ತಿದ ಮನುಷ್ಯನಿಗಿಂತ ಬೇರೆಯಾಗಿರುವನು. ಹೇಗೆ ಮಾಯಾವಿಯು ಪ್ರೇಕ್ಷಕರ ಕಣ್ಣಿಗೆ ಸಂಪೂರ್ಣವಾಗಿ ಮಾಯಾ ಶಕ್ತಿಯಿಂದ ಕಾಣದೆ ಭೂಮಿಯ ಮೇಲೆ ಪ್ರತ್ಯೇಕವಾಗಿ ನಿಂತಿರುವನೋ ಹಾಗೆಯೇ ಬ್ರಹ್ಮನು ಸಂಪೂರ್ಣ ಸ್ವತಂತ್ರವಾಗಿ ಶಾಂತನೂ, ಸಾಕ್ಷಿಯೂ ಆಗಿ ನಿಂತಿರುವನು. ಅವಿದ್ಯೆಯ ಆವರಣದಿಂದ ಲೌಕಿಕರು ಬ್ರಹ್ಮನನ್ನು ಕಾಣರು. ಧ್ಯಾನದಿಂದ ಆವರಣವನ್ನು ತೆಗೆದೊಡನೆಯೇ ಬ್ರಹ್ಮನು ತನ್ನ ಸ್ವಪ್ರಕಾಶ ಮಹಿಮೆಯಿಂದ ಬೆಳಗುವನು. ಧ್ಯಾನಿಸುವ ಬ್ರಹ್ಮವನ್ನು ತಿಳಿದಾಗ ಬ್ರಹ್ಮವಾಗುವನು.

ಜಾಗ್ರದವಸ್ಥೆಯಲ್ಲಿ ಮನುಷ್ಯನು ತನ್ನ ಪಂಚೇಂದ್ರಿಯಗಳಿಂದ ಸ್ಥೂಲ ವಸ್ತುಗಳ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳನ್ನು ಅನುಭವಿಸುವನು. ಅವನು ಈ ವಿಶ್ವದ ಅರಿವನ್ನುಳ್ಳವನು. ಅವನು ಬಹಿಷ್ಪ್ರಜ್ಞನು. ಈ ಸ್ಥಿತಿಯಲ್ಲಿನ ಆತ್ಮನನ್ನು ವಿಶ್ವ ಎಂದು ಕರೆಯುವರು.

ಒಬ್ಬ ದೊರೆಯು ತನ್ನ ರಥದಲ್ಲಿ ಕುಳಿತು ನಗರದಲ್ಲೆಲ್ಲಾ ಸಂಚರಿಸುವನು. ಇದು ಎಚ್ಚರದ ಅವಸ್ಥೆಯಲ್ಲಿ ಅಲೆದಾಡುವ ಜೀವನಿಗೆ ಹೋಲುವುದು. ಅವನು ಮತ್ತೆ ಹಿಂತಿರುಗಿ ತನ್ನ ಅರಮನೆಯನ್ನು ಪ್ರವೇಶಿಸುವನು. ಇದು ಸ್ವಪ್ನದ ಸ್ಥಿತಿಗೆ ಹೊಂದಾಣಿಕೆಯಾಗಿರುವುದು. ಅವನು ನಂತರ ರಾತ್ರಿಯಲ್ಲಿ ಮಲಗುವ ಕೋಣೆಯನ್ನು ಪ್ರವೇಶಿಸುವನು. ಇದು ಗಾಢನಿದ್ರೆಯ ಹೊಂದಾಣಿಕೆಯು.

ಸರೋವರದ ಮೇಲ್ಪದರ ಅಥವಾ ಹೊರವಲಯವನ್ನು ಮನಸ್ಸಿನ ಅರಿವಿಗೆ ಹೋಲಿಸಲಾಗಿದೆ. ಸರೋವರದ ತಳವನ್ನು ನಿಗೂಢ ಮನಸ್ಸಿಗೆ ಹೋಲಿಸಿದೆ. ಸರೋವರದ ತಳದಿಂದ ಮೇಲಕ್ಕೆ ಬರುವ ವಸ್ತುಗಳು ನಿಗೂಢ ಮನಸ್ಸಿನಿಂದ ಮನಸ್ಸಿನ ಪ್ರಜ್ಞೆಗೆ ಬರುವ ಆಕೃತಿಗಳಿಗೆ ಹೋಲಿಸಲಾಗಿದೆ. ಸರೋವರದ ನೀರನ್ನು ಚಂಚಲಗೊಳಿಸುವ ಗಾಳಿಯನ್ನು ವಿಕ್ಷೇಪಶಕ್ತಿ ಎನ್ನಬಹುದು. ಎಚ್ಚರದ ಅವಸ್ಥೆಯಲ್ಲಿ ಮನುಷ್ಯನ ಸಂಕಲ್ಪಗಳು ಮತ್ತು

ಇಂದ್ರಿಯಗಳು ಮನಸ್ಸನ್ನು ಚಂಚಲಗೊಳಿಸುವುವು. ಸ್ವಪ್ನಾವಸ್ಥೆಯಲ್ಲಿ ವಿಕ್ಷೇಪ ಶಕ್ತಿಯೊಂದೇ ಮನಸ್ಸನ್ನು ಕ್ಷೋಭೆಗೊಳಿಸುವುದು. ಗಾಢನಿದ್ರೆ ಯಲ್ಲಿ ಮನಸ್ಸು ಪೂರ್ಣವಿಶ್ರಾಂತಿಯಲ್ಲಿರುವುದು.

ಕೆಲವು ವೇಳೆ ಎಚ್ಚರದ ಅವಸ್ಥೆಯಲ್ಲಿಯೂ ಸಹ ಮನಸ್ಸು ಸಂಕಲ್ಪದಿಂದ ಮತ್ತು ರಾಗ, ದ್ವೇಷವೆಂಬ ದ್ವಂದ್ವ ಪ್ರವಾಹಗಳಿಂದ ಮುಕ್ತವಾಗಿ ಕ್ಷಣ ಕಾಲ ಅನುಪಮವಾದ ಶಾಂತಿಯನ್ನೂ (quietude) ಅನುಭವಿಸುವುದು. ಈ ಅವಸ್ಥೆಯಲ್ಲಿ ಪ್ರಜ್ಞೆಯು ಒಳಗಿದ್ದು ಅಂತಃಪ್ರಜ್ಞೆ ಎನಿಸುವುದು (internal consciousness). ಅದು ಮನಸ್ಸಿನ ವೃತ್ತಿಗಳೊಡನೆ ಒಂದಾಗುವುದಿಲ್ಲವು.

ಜಾಗ್ರದವಸ್ಥೆಯ ಅನುಭವಗಳು ಸ್ವಪ್ನಾವಸ್ಥೆಯಲ್ಲಿ ಬದಲಾವಣೆ ಗಳಿಂದ, ಸಂಕಲನಗಳಿಂದ, ಆಶ್ಚರ್ಯಕರವಾದ ಸಂಯೋಜನೆಯಿಂದ (ವಾಸನೆ ಗಳನ್ನು ಮತ್ತು ಸಂಸ್ಕಾರಗಳನ್ನು) ನಕಲುಮಾಡುವುದು. ಸ್ವಪ್ನದೃಶ್ಯಗಳೆಲ್ಲ ವನ್ನೂ ಮನಸ್ಸು ಸೃಷ್ಟಿಸುವುದು. ಮನಸ್ಸೇ ಕರ್ತೃ ಮತ್ತು ಕರ್ಮವು. ಮನಸ್ಸು ತಾನಾಗಿಯೇ ಸ್ತ್ರೀ, ಪುರುಷ, ಅಶ್ವ, ರಥ, ಸಾರಥಿ, ಪಥ, ನದಿ ಮುಂತಾದ ರೂಪಗಳನ್ನು ಧರಿಸುವುದು.

ಎಚ್ಚರದ ಅವಸ್ಥೆಯಲ್ಲಿ ವಿಕ್ಷೇಪದಿಂದಲೂ ಮತ್ತು ನಿದ್ರಾವಸ್ಥೆಯಲ್ಲಿ ಆವರಣದಿಂದಲೂ ಆತ್ಮವು ಮರೆಮಾಡಲ್ಪಟ್ಟಿರುವುದು. ಆವರಣ ಮತ್ತು ವಿಕ್ಷೇಪಕ್ಕೂ ಮೇಲಿರುವುದೇ ಆತ್ಮವು. ಯೋಗಸೂತ್ರವು ಹೀಗೆ ಹೇಳುವುದು :

" ನಿದ್ರಲೂರ್ ಜಾಗರತ್ಯಂತೇ ಯೋ ಭಾವ ಉಪಜಾಯತೇ
ತಂ ಭಾವಂ ಭಾವಯನ್ ನಿತ್ಯಂ ಮುಚ್ಯತೇ ನೇತರೋಯತಿ "

ವಿಜ್ಞಾನಿಗಳು ತಮ್ಮ ಎಚ್ಚರದ ಅವಸ್ಥೆಯ ಅನುಭವಗಳು ಮತ್ತು ಅವಲೋಕನದಿಂದ ಮಾತ್ರ ತೀರ್ಮಾನಿಸುವರು. ಆದ್ದರಿಂದ ಅವರು ಸರಿ ಯಲ್ಲ. ಸರಿಯಾದ ಅನುಭವವು ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಒಟ್ಟು ಅನುಭವವನ್ನು ಒಳಗೊಂಡಿರುವುದು. ವೇದಾಂತಿಯು ಮೂರು ಅವಸ್ಥೆಗಳನ್ನೂ ಪರಿಶೀಲಿಸುವನು. ಅವನು ಸುಷುಪ್ತಿಯಿಂದ ನಿಜವಾದ ಜ್ಞಾನವನ್ನು ಹೆಚ್ಚಾಗಿ ಪಡೆಯುವನು. ಈ ಸುಷುಪ್ತ್ಯವಸ್ಥೆಯ ತಿಳುವಳಿಕೆಯಿಂದ ತುರೀಯಾವಸ್ಥೆಯ ಅಥವಾ ನಾಲ್ಕನೆಯ ಅವಸ್ಥೆಯ ಇರುವಿಕೆಗೆ ಸುಳಿವನ್ನು ಪಡೆಯುವನು.

ಸ್ವಪ್ನಾವಸ್ಥೆಯಲ್ಲಿ ಮನುಷ್ಯನು ಇಂದ್ರಿಯಗಳ ಪಂಚಭೂತಗಳನ್ನೂ ಅನುಭವಿಸುವನು ಮತ್ತು ಎಲ್ಲ ಇಂದ್ರಿಯಗಳೂ ವಿರಮಿಸುವುವು, ಮನಸ್ಸು ಮಾತ್ರ ಕಾರ್ಯವನ್ನು ನಡೆಸುವುದು. ಮನಸ್ಸೇ ಕರ್ತೃವೂ ಮತ್ತು ಕರ್ಮವೂ ಆಗಿರುವುದು. ಅದು ಸ್ವಪ್ನದ ಎಲ್ಲ ದೃಶ್ಯಗಳನ್ನು ಸೃಷ್ಟಿಸುವುದು. ಈ ಅವಸ್ಥೆಯಲ್ಲಿ ಜೀವನು ತೈಜಸನೆಂದು ಕರೆಯಲ್ಪಟ್ಟಿದ್ದಾನೆ. ಅಲ್ಲಿ ಅಂತಃ ಪ್ರಜ್ಞೆ ಇರುವುದು. ಉಪನಿಷತ್ತು ಹೀಗೆ ಹೇಳುವುದು : "ಅವನು ಗಾಢ ನಿದ್ದೆಯಲ್ಲಿದ್ದಾಗ ಅಲ್ಲಿ ರಥಗಳಿಲ್ಲ, ಕುದುರೆಗಳಿಲ್ಲ ಮತ್ತು ಪಥಗಳಿಲ್ಲ. ಆದರೆ ಅವನು ತಾನೇ ರಥಗಳನ್ನೂ, ಅಶ್ವಗಳನ್ನೂ, ಪಥಗಳನ್ನೂ ನಿರ್ಮಿಸಿಕೊಳ್ಳು ವನು" ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿದೆ.

ಸ್ವಪ್ನ ಪ್ರಪಂಚವು ಜಾಗ್ರತ್ತಿನ ಪ್ರಪಂಚಕ್ಕಿಂತ ಭಿನ್ನವಾದುದು. ಒಬ್ಬನು ಕಲ್ಕತ್ತೆಯಲ್ಲಿ ತನ್ನ ಮಂಚದ ಮೇಲೆ ಆರೋಗ್ಯವಾಗಿ ಮಲಗಿ ಕೊಂಡವನು ತನ್ನ ಸ್ವಪ್ನಾವಸ್ಥೆಯಲ್ಲಿ ರೋಗಿಯಾಗಿ ದೆಹಲಿಯಲ್ಲಿ ಅಲೆಯು ತ್ತಿರುವಂತೆ ಅನುಭವಿಸುವನು. ಸುಷುಪ್ತ್ಯವಸ್ಥೆಯು ಎಚ್ಚರ ಮತ್ತು ಕನಸಿನ ಎರಡು ಪ್ರಪಂಚಕ್ಕಿಂತಲೂ ಭಿನ್ನವಾದುದು. ಸ್ವಪ್ನವನ್ನು ಕಾಣುತ್ತಿರು ವವನಿಗೆ ಸ್ವಪ್ನವಸ್ತುಗಳೂ ಮತ್ತು ಸ್ವಪ್ನದ ಪ್ರಪಂಚವೂ ಎಚ್ಚರದ ಪ್ರಪಂಚದ ಅನುಭವದಂತೆಯೇ ತೋರುತ್ತಿರುವುದು. ಕನಸು ಕಾಣುತ್ತಿರುವವನು ಸ್ವಪ್ನ ಪ್ರಪಂಚದ ಅಸತ್ಯತೆಯನ್ನು ತಿಳಿಯುವುದಿಲ್ಲ.

ಅವನು ಜಾಗ್ರತ್ ಜಗತ್ತಿನ ಇರುವಿಕೆಯ ಅರಿವನ್ನು ಹೊಂದಿರುವುದಿಲ್ಲ. ಪ್ರಜ್ಞೆಯು ಬದಲಾಯಿಸುತ್ತಿರುವುದು. ಪ್ರಜ್ಞೆಯಲ್ಲಿನ ಈ ಬದಲಾವಣೆಯು ಎಚ್ಚರ ಅಥವಾ ಕನಸಿನ ಅನುಭವಗಳನ್ನು ಉಂಟುಮಾಡುವುದು. ವಸ್ತುಗಳು ತಾವಾಗಿಯೇ ಬದಲಾಯಿಸಲಾರವು. ಮನಸ್ಸಿನಲ್ಲಿ ಮಾತ್ರ ಬದಲಾವಣೆ ಯಾಗುವುದು. ಮನಸ್ಸು ತಾನೇ (ಸ್ವತಃ) ಎಚ್ಚರ ಮತ್ತು ಕನಸಿನ ಪಾತ್ರ ವನ್ನು ವಹಿಸುವುದು.

ಸ್ವಪ್ನವನ್ನು ಕಾಣುತ್ತಿರುವವನು ಅಲ್ಲಿನ ದೃಶ್ಯಗಳು ಎಷ್ಟೇ ಅಸಂಬದ್ಧವೂ, ಅರ್ಥಹೀನವೂ ಆಗಿದ್ದರೂ, ಎಚ್ಚರಕ್ಕೆ ಬರುವವರೆಗೂ ಅವುಗಳನ್ನು ನಿಜವೆಂದೇ ತಿಳಿಯುವನು. ತನ್ನ ತಲೆಯು ಕತ್ತರಿಸಲ್ಪಟ್ಟಂತೆಯೂ ಮತ್ತು ತಾನು ಗಾಳಿ ಯಲ್ಲಿ ಹಾರುತ್ತಿರುವಂತೆಯೂ ಅವನು ಕೆಲವು ಸಲ ಸ್ವಪ್ನವನ್ನು ಕಾಣುವನು.

ಕನಸು ಕಾಣುವವನು, ಕನಸಿನಲ್ಲಿ ತೋರುವ ವಸ್ತುಗಳು ಮತ್ತು ಆಗುವ ಅನುಭವಗಳು ಕನಸಿನ ಅವಸ್ಥೆಯಲ್ಲಿ ನಿಜವೆಂದೇ ನಂಬಿರುವನು. ಅವನು ಕನಸಿನಿಂದ ಎಚ್ಚರದ ಅವಸ್ಥೆಗೆ ಬಂದಮೇಲೆ ಮಾತ್ರ ತಾನು ಸ್ವಪ್ನ ದಲ್ಲಿ ಕಂಡ ವಸ್ತುಗಳು ಮತ್ತು ಪಡೆದ ಅನುಭವಗಳು ಕೇವಲ ಮಿಥ್ಯವೆಂದೂ, ತೋರಿಕೆ ಎಂದೂ ತಿಳಿಯುವನು. ಎಚ್ಚರದ ಅವಸ್ಥೆಯ ಜೀವನ ಸ್ಥಿತಿಯು ಹೀಗೆಯೇ ಇರುವುದು. ಅಜ್ಞಾನೀ ಜೀವನು, ಇಂದ್ರಿಯ ಸುಖ ಮತ್ತು ಇಂದ್ರಿಯ ಗೋಚರವಿಷಯವಾದ ತೋರಿಕೆಯ ಜಗತ್ತನ್ನು ನಿಜವೆಂದೇ ಭಾವಿಸುವನು. ವಸ್ತು ವಿಷಯಕವಾದ ಸಮ್ಯಕ್ ಜ್ಞಾನವು ಉಂಟಾದಾಗ ವಸ್ತುಗಳ ನೈಜಸ್ವರೂಪದ ಬಗ್ಗೆ ಅವನು ಎಚ್ಚರಗೊಂಡಾಗ, ಅವನ ದೃಷ್ಟಿ ಕೋನವು ಬದಲಾಯಿಸಿದಾಗ, ಅವನ ಅವಿದ್ಯೆಯ ಆವರಣವು ಸರಿಸಲ್ಪಟ್ಟಾಗ, ಈ ಎಚ್ಚರದ ಪ್ರಪಂಚವು ಕನಸಿನ ಪ್ರಪಂಚದಂತೆ ತೋರಿಕೆಯದೆಂಬ ಜ್ಞಾನ ವಾಗುವುದು.

ಸ್ವಪ್ನದಲ್ಲಿ ದರಿದ್ರನೊಬ್ಬನು ಮಹಾ ಬಲಿಷ್ಠನಾಗುವನು. ಅವನು ಅನೇಕ ವಿಧವಾದ ಸುಖಗಳನ್ನು ಅಲ್ಲಿ ಅನುಭವಿಸುವನು. ಮಹಾರಾಣಿಯನ್ನು ಮದುವೆಯಾಗುವನು, ಸುಂದರ ಅರಮನೆಯಲ್ಲಿ ವಾಸಿಸುವನು, ಅನೇಕ ಮಕ್ಕಳನ್ನು ಪಡೆಯುವನು. ತನ್ನ ಹಿರಿಯ ಮಗಳನ್ನು ರಾಜಕುಮಾರನಿಗೆ ಕೊಟ್ಟು ವಿವಾಹ ಮಾಡುವನು. ತನ್ನ ಪತ್ನೀ ಪುತ್ರರೊಡನೆ ಪ್ರಪಂಚ ಪರ್ಯಟನೆಗೆ ಹೊರಡುವನು. ನಂತರ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವನು. ಕಾಶಿಯಲ್ಲಿ ಶ್ವಾಸಕೋಶದ ರೋಗದಿಂದ ಸಾಯುವನು. ಐದೇ ನಿಮಿಷಗಳಲ್ಲಿ ಅವನಿಗೆ ಮೇಲ್ಕಂಡ ಅನುಭವಗಳಾಗುವುವು. ಎಷ್ಟು ಅದ್ಭುತವಾದ ದೃಶ್ಯಗಳು.

ಕನಸಿನಂತೆಯೇ ಎಚ್ಚರದ ಅವಸ್ಥೆಯಲ್ಲಿ, ತೋರಿಕೊಂಡ ವಸ್ತುಗಳು ಹುರುಳಿಲ್ಲದ್ದು (unsubstantial), ಎರಡು ಅವಸ್ಥೆಗಳೂ ಒಂದಕ್ಕಿಂತ ಮತ್ತೊಂದು ತೀರ ಭಿನ್ನವಾಗಿದ್ದರೂ, ಒಂದು ಸೂಕ್ಷ್ಮವಾದ ಅಂತಃಪ್ರಜ್ಞೆಯು. ಇನ್ನೊಂದು ಸ್ಥೂಲವಾದ ಬಹಿಷ್ಪ್ರಜ್ಞೆಯು, ಮತ್ತು ದೀರ್ಘವಾದುದು. ವಿವೇಕಿಯು ಎರಡನ್ನೂ ವಿವೇಚಿಸಿ, ವಿಂಗಡಿಸಿಕೊಂಡು, ಎಚ್ಚರ ಮತ್ತು ಕನಸಿನ ಸ್ಥಿತಿಯನ್ನು ವಸ್ತುಗಳ ಮತ್ತು ಅನುಭವಗಳ ಸಾದೃಶ್ಯದಿಂದ,

ಆ ಎರಡು ಅವಸ್ಥೆಗಳೂ ಒಂವೇ ಬಗೆಯವೆಂದು ತೀರ್ಮಾನಿಸುವನು. ಕನಸಿನಲ್ಲಿರುವ ಮಾಯೆಯಂತೆ ಅಥವ ಆಕಾಶ ನಗರಿಯಂತೆ ವಿಶ್ವವು ಎಚ್ಚರದಲ್ಲಿ ತೋರುತ್ತಿರುವುದೆಂದು ವೇದಾಂತಗಳು ಘೋಷಿಸುವುದೆಂದು ಜ್ಞಾನಿಗಳು ಹೇಳುವರು.

ಸ್ವಪ್ನಗಳು ವಿರುದ್ಧವಾದವುಗಳನ್ನೇ ಪ್ರತಿನಿಧಿಸುವವು. ಧನ, ಧಾನ್ಯ ಸಮೃದ್ಧನಾದ ದೊರೆಯೊಬ್ಬನು ಕನಸಿನಲ್ಲಿ ದರಿದ್ರನಾಗಿ ಬೀದಿಗಳಲ್ಲಿ ಆಹಾರಕ್ಕಾಗಿ ಅಲೆದಾಡುವಂತೆ ಕಾಣುವನು. ಪವಿತ್ರನೂ, ಶುದ್ಧನೂ ಆದ ಸಾಧಕನು ಕನಸಿನಲ್ಲಿ ಗುಹ್ಯವಾದ ಖಾಯಿಲೆಗಳಿಂದ ನರಳುತ್ತಿರುವಂತೆ ಅನುಭವಿಸುವನು. ಮಹಾವೀರನಾದ ಸೈನಿಕನು ಶತ್ರುಗಳಿಗೆ ಅಂಜಿ ಸಮರಾಂಗಣದಿಂದ ಓಡುತ್ತಿರುವಂತೆ ಕನಸು ಕಾಣುವನು. ದುರ್ಬಲನಾದ ರೋಗಿಯು ಬಲಶಾಲಿಯಾದ ಜಟ್ಟಿಯೊಡನೆ ಕಾಳಗವಾಡುತ್ತಿರುವಂತೆ ಭಾಸವಾಗುವುದು. ಬದುಕಿರುವವನು ತಾನು ಸತ್ತಂತೆ ಕನಸು ಕಾಣುವನು. ಅವನ ಜೀವಂತ ತಂದೆಯು ಮೃತನಾದುದರಿಂದ ತಾನು ಅಳುತ್ತಿರುವಂತೆ ತಿಳಿಯುವನು ಮತ್ತು ತಾನು ರುದ್ರಭೂಮಿಯಲ್ಲಿ ಅವನ ಅಂತ್ಯ ಸಂಸ್ಕಾರಗಳನ್ನು ಮಾಡುತ್ತಿರುವಂತೆ ಅನುಭವಪಡೆಯುವನು. ಊರಿನಲ್ಲಿ ವಾಸಿಸುತ್ತಿರುವವನು ಕೆಲವು ಸಲ ಕಾಡಿನಲ್ಲಿ ಹುಲಿ, ಸಿಂಹಕ್ಕೆ ಎದುರಾಗಿ ಬಂದು ಅರಚಿಕೊಂಡಂತೆ ಕನಸುಕಾಣುವನು. ತನ್ನ ತಲೆದಿಂಬನ್ನು ಪೆಟ್ಟಿಗೆಯೆಂದು ಹೊತ್ತು ರೈಲ್ವೆ ನಿಲ್ದಾಣಕ್ಕೆ ನಡೆದವರೂ ಉಂಟು. ದಾರಿಯ ಮಧ್ಯದಲ್ಲಿ ಅದು ಸ್ವಪ್ನವೆಂದು ತೋರಿದಾಗ ಮನೆಗೆ ಹಿಂತಿರುಗುವರು. ಕೆಲವರು ಪಾಯಖಾನೆಗಳಲ್ಲಿ ಕುಳಿತಂತಾಗಿ, ಮಲಮೂತ್ರಗಳನ್ನು ಹಾಸಿಗೆಯಲ್ಲೇ ವಿಸರ್ಜಿಸುವರು.

ರಾಜಾ ಜನಕನು ವಿದ್ವಾಂಸರನ್ನು ಕುರಿತು "ಇದು ಮಿಥ್ಯವೋ ಅಥವಾ ಅದು ಮಿಥ್ಯವೋ ?" ಎಂದು ಪ್ರಶ್ನಿಸಿದನು. ಒಬ್ಬ ವಿದ್ವಾಂಸನು, "ಅದು ಮಿಥ್ಯವು" ಎಂದನು. ಜನಕರಾಜನು ಪುನಃ "ಅದು ಮಿಥ್ಯವು ಎಂದರೆ ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದನು. ವಿದ್ವಾಂಸನು, "ಸ್ವಪ್ನವು ಮಿಥ್ಯವು. ಅದು ಎಂದರೆ ಸ್ವಪ್ನವು" ಎಂದನು. ಜನಕರಾಜನಿಗೆ ತೃಪ್ತಿಯಾಗಲಿಲ್ಲ. ಮತ್ತೊಬ್ಬ ವಿದ್ವಾಂಸನು "ಈ ಜಗತ್ತು ಮಿಥ್ಯವು" ಎಂದನು. ಅಷ್ಟಾವಕ್ರನು, "ಎರಡೂ ಮಿಥ್ಯವು" ಎಂದನು. ಆಗ ಜನಕನು, "ಓ

ಅಷ್ಟಾವಕ್ರಋಷಿಗಳೇ "ಎರಡೂ" ಎಂದರೆ ನಿಮ್ಮ ಅಭಿಪ್ರಾಯವೇನು ? ಅದಕ್ಕೆ ಅಷ್ಟಾವಕ್ರನು, "ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳು ಮಿಥ್ಯವು. ಬ್ರಹ್ಮವೊಂದೇ ಸತ್ಯವು" ಎಂದು ಹೇಳಿದನು. ಜನಕರಾಜನಿಗೆ ಈಗ ಪರಮ ಸಂತೋಷವಾಯಿತು.

ಸ್ವಪ್ನದಲ್ಲಿಯೂ ಕೂಡ ನೀನು ದೇವರೊಡನೆ ಒಂದಾಗಿ... ಏಕೆಂದರೆ ನೀನು ಈ ಪ್ರಪಂಚದ ದೃಶ್ಯಗಳನ್ನು ಕಾಣಲಾರೆ.

ರಾಜಾ ಅಜಾತಶತ್ರುವು ಗಾರ್ಗ್ಯ ಬ್ರಾಹ್ಮಣನ ಕೈ ಹಿಡಿದುಕೊಂಡು ನಿದ್ರಿಸುವವನ ಬಳಿಗೆ ಕರೆತಂದನು. ದೊರೆಯು ಅವನೊಡನೆ ಸಂಭಾಷಿಸಿದನು. ಆದರೆ ನಿದ್ರಿಸುತ್ತಿದ್ದವನು ಏಳಲಿಲ್ಲ. ಅಜಾತಶತ್ರುವು ತನ್ನ ಕೈಗಳಿಂದ ಅವನನ್ನು ಮುಟ್ಟಿದ ಕೂಡಲೇ ಅವನು ಎಚ್ಚರಗೊಂಡನು. ದೊರೆಯು ಆ ಬ್ರಾಹ್ಮಣನನ್ನು ಪ್ರಶ್ನಿಸಿದನು, "ಈ ಪುರುಷನು ಹೀಗೆ ನಿದ್ರಿಸುತ್ತಿದ್ದನಲ್ಲಾ, ಆಗ ಎಲ್ಲಿದ್ದನು ಮತ್ತು ಯಾವಾಗ ಅವನು ಹಿಂತಿರುಗಿದನು?" ಅದಕ್ಕೆ ಗಾರ್ಗ್ಯನು ಉತ್ತರವನ್ನು ಕೊಡಲಾಗಲಿಲ್ಲ. ನಂತರ ಅಜಾತಶತ್ರುವು ಆ ಬ್ರಾಹ್ಮಣನಿಗೆ ಹೀಗೆ ವಿವರಿಸಿದನು; ನಿದ್ರಿಸುವವನ ಮನಸ್ಸು ಹೇಗೆ ಸ್ವಪ್ನದಲ್ಲಿ ಸಂಚರಿಸುವುದು ? ಎಲ್ಲ ಪ್ರದೇಶಗಳೂ ಹೇಗೆ ಅವನಿಗೆ ಸೇರಿದವು ? ಅವನು ತನ್ನ ಸಂಕಲ್ಪದಿಂದ ಈಗ ದೊಡ್ಡ ದೊರೆಯಾಗಿ, ಒಬ್ಬ ಮಹಾಬ್ರಾಹ್ಮಣನಾಗಿ ಇರಬಲ್ಲನು. ಆದರೆ ಅವುಗಳೆಲ್ಲಕ್ಕೂ ಮೀರಿರುವ ಶ್ರೇಷ್ಠವಾದ, ಸಂತೋಷವಾದ ಸ್ಥಿತಿಯಲ್ಲಿ, ಕನಸುಗಳೇ ಇಲ್ಲದ ಸುಷುಪ್ತಿಯಲ್ಲಿ ಯಾವ ಅಂತರ್, ಬಾಹ್ಯ ಪ್ರಜ್ಞೆಗಳೂ ಇಲ್ಲದೆ ಇರುವನು ಎಂಬುದನ್ನು ವಿವರಿಸಿದನು. ಈ ಅವಸ್ಥೆಯಲ್ಲಿಯೇ ಮನುಷ್ಯನ ಆತ್ಮವು ಇಂದ್ರಿಯಗೋಚರವಾದ ಜಗತ್ತಿನಿಂದ ಅನಿರ್ಬಾಧಿತನಾಗಿ ತನ್ನ ಸಹಜವಾದ ಸ್ವರೂಪದಲ್ಲಿ ಬ್ರಹ್ಮಕ್ಕಿಂತ ಬೇರೆಯಿಲ್ಲದ ಆತ್ಮದಲ್ಲಿ ವಿರಮಿಸುವನು.

ಪಾಶ್ಚಾತ್ಯ ಮನಶ್ಶಾಸ್ತ್ರಜ್ಞರಂತೆ ಮನಸ್ಸಿನ ಉಪಪ್ರಜ್ಞೆಯು (sub-conscious mind) ಸುಷುಪ್ತಿಯಲ್ಲಿಯೂ ಚುರುಕಾಗಿ ಇದ್ದುಕೊಂಡಿರುವುದು ಮತ್ತು ಎಚ್ಚರಕ್ಕೆ ಬಂದನಂತರ ತಾನು ಸುಷುಪ್ತಿಯನ್ನು ಅನುಭವಿಸಿದೆನೆಂದು ಅರಿತಿರುವುದರಿಂದ, ಸುಷುಪ್ತಿಯಲ್ಲಿ ಸ್ವಲ್ಪಮಟ್ಟಿಗೆ ಅರಿವೂ ಇರುವುದು. ಇದು ಸರಿಯಲ್ಲವು. ಮನಸ್ಸಿನ ಉಪಪ್ರಜ್ಞೆಯು (subconscious mind) ಸ್ವಪ್ನದಲ್ಲಿ ಮಾತ್ರ ಕೆಲಸ ಮಾಡುವುದು. ಸುಷುಪ್ತ್ಯಾವಸ್ಥೆಯಲ್ಲಿ ಮನಸ್ಸೇ

ಇಲ್ಲವು. ಅದು ತಾತ್ಕಾಲಿಕವಾಗಿ ಆನಂದಮಯಕೋಶ ಅಥವಾ ಕಾರಣ ಶರೀರದಲ್ಲಿ ಲಯವಾಗಿರುವುದು. ಆದರೆ ಕಾರಣಶರೀರವು ಸುಷುಪ್ತಿಯಲ್ಲಿಯೂ ಕಾರ್ಯವೆಸಗುತ್ತಿರುವುದು. ಗಾಢನಿದ್ದೆಯಲ್ಲಿ ಪ್ರಜ್ಞೆಯೂ ಇರುವುದು. ಆ ಪ್ರಜ್ಞೆಯೇ ಸುಷುಪ್ತಿಯ ಆನಂದವನ್ನು ಎಚ್ಚರದಲ್ಲಿ ಸ್ಮರಿಸುವುದು. ಪ್ರಜ್ಞೆಯು ಸುಷುಪ್ತಿಗೆ ಸಂಬಂಧಿಸಿದುದು. ತೈಜಸವು ಸ್ವಪ್ನಾವಸ್ಥೆಗೆ ಸಂಬಂಧಿಸಿದುದು ಮತ್ತು ವಿಶ್ವವು ಎಚ್ಚರದ ಅವಸ್ಥೆಗೆ ಸಂಬಂಧಿಸಿದುದು. ಆದರೆ ಇದೆಲ್ಲವೂ ಒಬ್ಬ ಆತ್ಮನದೇ. ಕಾರಣಶರೀರ, ಲಿಂಗಶರೀರ, ಆನಂದಮಯ ಕೋಶ, ಮತ್ತು ಅಜ್ಞಾನವು ಸಮಾನಾರ್ಥಕ ಪದಗಳು.

ಜೀವನು ಮಾಯೆಯ ನವದ್ವಾರಪುರದಲ್ಲಿ ಸುಷುಪ್ತಿಯನ್ನು ಅನುಭವಿಸುವನು. ಈ ಸ್ಥಿತಿಯಲ್ಲಿ ವೃತ್ತಿಗಳೂ, ಸಂಕಲ್ಪಗಳೂ ಇಲ್ಲವು. ಇಂದ್ರಿಯಗಳ ಚೇಷ್ಟೆಗಳಾಗಲೀ, ಮಾನಸಿಕ ಸಂಬೋಧನೆಗಳಾಗಲೀ, ರಾಗ, ದ್ವೇಷ, ಪ್ರವಾಹಗಳ ಪ್ರಭಾವವಾಗಲೀ, ಬುದ್ಧಿಯ ಚಟುವಟಿಕೆಯಾಗಲೀ ಸುಷುಪ್ತಿಯಲ್ಲಿ ಇಲ್ಲವು. ಸತ್ಯ ಅಥವಾ ಮಿಥ್ಯಾಜ್ಞಾನವು ಅಲ್ಲಿರುವುದಿಲ್ಲ.

ಮನುಷ್ಯನು ತನ್ನ ಇಂದ್ರಿಯಗಳನ್ನು ಬಾಹ್ಯವಸ್ತುಗಳಿಂದ ಒಳಸರಿಸಿ ನಿದ್ದೆಮಾಡುವನು. ಶಿಶುವು ವಯಸ್ಕರಿಗಿಂತ ಹೆಚ್ಚು ನಿದ್ರಿಸುವುದು. ವಯಸ್ಕನು ವೃದ್ಧನಿಗಿಂತ ಹೆಚ್ಚು ನಿದ್ದೆಮಾಡುವನು. ಮನಸ್ಸು, ಇಂದ್ರಿಯಗಳು ಮತ್ತು ದೇಹಕ್ಕೆ ನಿದ್ದೆಯು, ವಿಶ್ರಾಂತಿಯನ್ನು ಕೊಟ್ಟು ಮುಂದಿನ ತೀವ್ರವಾದ ಚಟುವಟಿಕೆಗಳಿಗೆ ಮನುಷ್ಯನನ್ನು ಸಿದ್ಧಪಡಿಸುವುದು. ಮನಸ್ಸು ಕಾರಣಶರೀರದಲ್ಲಿ ಲಯವಾಗುವದು. ಈ ಅವಸ್ಥೆಯಲ್ಲಿ ಜೀವನನ್ನು ಪ್ರಾಜ್ಞ ಎಂದು ಕರೆಯುವರು. ಆನಂದಮಯಕೋಶವು ಕಾರ್ಯದಲ್ಲಿ ತೊಡಗಿರುವುದು. ಜೀವ ಮತ್ತು ಬ್ರಹ್ಮದ ನಡುವೆ ಒಂದು ತೆರೆಯಿರುವದು.

ಸುಷುಪ್ತಿಯಲ್ಲಿ ಪ್ರಜ್ಞಾ ಮತ್ತು ಮೂಲಾವಿದ್ಯೆಯು ಇರುವುದು. ಅಲ್ಲಿ ಮನಸ್ಸಿಲ್ಲವು. ಮನಸ್ಸು ಮೂಲಾಜ್ಞಾನದಲ್ಲಿ ಲಯವಾಗುವುದು. ಆನಂದಮಯಕೋಶ ಅಥವಾ ಕಾರಣಶರೀರವು ಮೂಲ ಅಜ್ಞಾನದ ಇನ್ನೊಂದು ಶಬ್ದವು. ಸುಷುಪ್ತಿಯಲ್ಲಿ ಆನಂದಮಯಕೋಶವು ಕ್ರಿಯಾತ್ಮಕವಾಗಿರುವದು. ಪ್ರಜ್ಞಾ ಎಂದರೆ ಸುಷುಪ್ತಿಯ ಆನಂದದ ಅರಿವು, ಅವನು ಮನುಷ್ಯನು. ಆನಂದವನ್ನು ನಿಜವಾಗಿ ಅನುಭವಿಸುತ್ತಿದ್ದರೂ ಸುಷುಪ್ತಿ

ಯಲ್ಲಿ ಅದನ್ನು ಹೇಳಲಾರನು. ಹೇಗೆಂದರೆ ಬಾವಿಯಲ್ಲಿ ಬಿದ್ದಿರುವ ಉಂಗುರ ವನ್ನು ತೆಗೆಯಲು ಹೋದವನು ಅಲ್ಲಿ ಆಳವಾಗಿ ಈಜುತ್ತಿದ್ದರೂ, ಉಂಗುರ ವನ್ನು ಹಿಡಿದುಕೊಂಡಿದ್ದರೂ ಅಲ್ಲಿ ಮಾತನಾಡಲಾರನು.

ಸುಷುಪ್ತಿಯಲ್ಲಿ ಅನುಭವಿಸುವ ಆನಂದವು ಸ್ಪಷ್ಟ ಆನಂದವು. ಅದು ಕೇವಲ ಅಸ್ಪಷ್ಟ ಸುಖವಲ್ಲವು. ಈ ಸುಖವು ಅತೀಂದ್ರಿಯವಾದುದು. ಅದು ಇಂದ್ರಿಯಗೋಚರ ವಿಷಯಗಳಿಂದ ಪ್ರತ್ಯಕ್ಷವಾಗಿ ಪಡೆದುದಲ್ಲವು. ಸುಷುಪ್ತಿ ಯಲ್ಲಿ ಆನಂದಮಯಕೋಶವೇ ಚಟುವಟಿಕೆಯಾಗಿರುವುದು. ಅವಿದ್ಯಾ ವೃತ್ತಿ ಮತ್ತು ಪ್ರಜ್ಞೆಯು ಸುಷುಪ್ತಿಯಲ್ಲಿರುವುದು. ಮನಸ್ಸು ಮತ್ತು ಅಹಂಕಾರವು ಅಜ್ಞಾನದಲ್ಲಿ ಲಯವಾಗಿರುವುದು. ಅವು ಸುಷುಪ್ತಿಯಲ್ಲಿ ಇರುವುದಿಲ್ಲವು. ಈ ಪ್ರಜ್ಞೆಯೇ ಸುಷುಪ್ತಿಯ ಆನಂದದ ಅರಿವು. ಆ ಪರಮಾತ್ಮನೇ ಜಾಗ್ರದವಸ್ಥೆ ಯಲ್ಲಿ ವಿಶ್ವದ ರೂಪಾಗಿ ಆನಂದವನ್ನು ಸ್ಮರಿಸುವನು. ಯಾರು ಏನನ್ನು ನಿಜ ವಾಗಿಯೂ ಅನುಭವಿಸಿರುವರೋ ಅದೇ ಅವರಿಂದ ಸ್ಮರಿಸಲು ಸಾಧ್ಯವು. ಬಾವಿಯಲ್ಲಿ ಬಿದ್ದಿರುವ ಉಂಗುರವನ್ನು ಕಂಡುಕೊಂಡವನು ನೀರಿನಲ್ಲಿದ್ದು ಕೊಂಡು ತನ್ನ ಭಾವನೆಗಳನ್ನು ನೋಡುವವರಿಗೆ ಹೇಳಲು ಹೇಗೆ ಅವನಿಂದ ಆಗುವುದಿಲ್ಲವೋ ಹಾಗೆಯೇ ಪ್ರಾಜ್ಞನು ತನ್ನ ಆನಂದವನ್ನು ವ್ಯಕ್ತಪಡಿಸ ಲಾರನು. ಆದರೆ ದೇಹತಾದಾತ್ಮ್ಯವನ್ನು ಹೊಂದಿರುವ ಚೈತನ್ಯವಾದ ವಿಶ್ವನು ಅದನ್ನು ಅನುಭವಿಸುವನು. ವಿಶ್ವ, ತೈಜಸ, ಪ್ರಾಜ್ಞ ಎಲ್ಲವೂ ಒಬ್ಬನೇ.

ನೀವು ಎದ್ದ ಕೂಡಲೇ ಸ್ವಪ್ನವು ಮಿಥ್ಯವಾಗುವುದು. ಎಚ್ಚರದ ಅವಸ್ಥೆಯು ಸ್ವಪ್ನದಲ್ಲಿಲ್ಲವು. ಸ್ವಪ್ನಗಳು ಮತ್ತು ಎಚ್ಚರವು ಸುಷುಪ್ತಿ ಯಲ್ಲಿಲ್ಲವು. ಸುಷುಪ್ತಿಯು ಸ್ವಪ್ನ ಮತ್ತು ಜಾಗ್ರದವಸ್ಥೆಗಳಲ್ಲಿಲ್ಲವು. ಒಂದು ಮತ್ತೊಂದು ಅವಸ್ಥೆಯಲ್ಲಿ ಇಲ್ಲದಿರುವುದರಿಂದ ಆ ಮೂರು ಅವಸ್ಥೆಗಳೂ ಮಿಥ್ಯವೇ. ಅವು ಮೂರೂ ಸತ್ವ, ರಜಸ್, ತಮೋಗುಣಗಳಿಂದಾದುವು. ಬ್ರಹ್ಮನು ಈ ಮೂರು ಅವಸ್ಥೆಗಳ ಶಾಂತ ಸಾಕ್ಷಿಯು. ಅವನು ಮೂರು ಗುಣ ಗಳನ್ನೂ ಮೀರಿದವನು. ಅದು ಪರಿಶುದ್ಧವಾದ ಸುಖವೂ ಮತ್ತು ಶುದ್ಧ ವಾದ ಅರಿವೂ ಆಗಿರುವುದು. ಅದು ಸಚ್ಚಿತ್ಸ್ವರೂಪವು.

ಇದು ಸುಷುಪ್ತಿಗೂ, ಸಮಾಧಿಗೂ ಇರುವ ವ್ಯತ್ಯಾಸವು. ಸುಷುಪ್ತಿ ಯಿಂದ ಹಿಂತಿರುಗಿದಾಗ ನಿನಗೆ ಆತ್ಮಜ್ಞಾನವಿರುವುದಿಲ್ಲ. ಅದೇ ಮನಸ್ಸು,

ವಾಸನೆಗಳು, ಚಿಂತನೆಗಳು ಮತ್ತು ಸಂಸ್ಕಾರಗಳು ನಿದ್ರೆಗೆ ಮುಂಚೆ ಇದ್ದಂತೆಯೇ ಈಗಲೂ ಇರುವುವು. ಆದರೆ ಸಮಾಧಿಯ ವಿಷಯದಲ್ಲಿ ಯೋಗಿ ಅಥವಾ ಋಷಿಯು ಪೂರ್ಣಬೆಳಕಿನಿಂದ ಹೊರಬರುವನು. ಅವನು ಆತ್ಮಜ್ಞಾನದಿಂದ ಕೂಡಿರುವನು. ಅವನ ಹಳೆಯ ಸಂಸ್ಕಾರಗಳೆಲ್ಲಾ ಸಂಪೂರ್ಣವಾಗಿ ಸುಟ್ಟು ಹೋಗಿರುವುವು. **ಸಮಾಧಿಯಲ್ಲಿ ಮನೋನಾಶವಾಗಿದೆ.** ಆತನು ಈಗ ಸಮದೃಷ್ಟಿಯುಳ್ಳ, ಸ್ಥಿತಪ್ರಜ್ಞನಾದ, ಬದಲಾಯಿಸಿದ ವ್ಯಕ್ತಿಯು. ಅವನು ಎಲ್ಲವಿಧವಾದ ಸಂಶಯ, ಭಯ ಮತ್ತು ಬಯಕೆಗಳಿಂದ ಮುಕ್ತನು. ಇತರರ ಸಂಶಯಗಳನ್ನೂ ಅವನು ಕಳೆಯಬಲ್ಲನು.

ಮೂರ್ಛೆಯು ಅರ್ಧ ನಿದ್ರಾಸ್ಥಿತಿಯು. ಹಾಗೆಂದಮಾತ್ರಕ್ಕೆ ಮೂರ್ಛೆಯಲ್ಲಿರುವವನು ಅರ್ಧ ಬ್ರಹ್ಮಾನಂದವನ್ನು ಹೊಂದುವನೆಂದೂ, ಬ್ರಹ್ಮದಲ್ಲಿ ಅರ್ಧ ಐಕ್ಯವಾಗುವನೆಂದೂ ಭಾವಿಸಬೇಡ.

ಮೂರ್ಛಾವಸ್ಥೆಯು ಅರೆನಿದ್ರೆಯನ್ನು ಹೋಲುವುದು. ಇಂದ್ರಿಯಗಳಿಂದಿಲ್ಲದಿರುವಿಕೆಯ ಅರ್ಧಭಾಗವು ನಿದ್ದೆಗೂ, ಉಳಿದರ್ಧವು ಸಾವಿನಕಡೆಗೂ ಇರುವುದು. ಅದು ಸಾವಿನ ದ್ವಾರವು. ಅಲ್ಲಿ ಕರ್ಮದ ಲೇಶವಿದ್ದರೆ ಅವನು ಜಾಗ್ರತ್ತಿಗೆ ಹಿಂತಿರುಗುವನು. ಅದು ಇಲ್ಲದಿದ್ದರೆ ಸಾಯುವನು. ಮೂರ್ಛೆಯಲ್ಲಿ ಮನಸ್ಸು ಕಾರಣಶರೀರ ಅಥವಾ ನಾಲಿಗೆಯಲ್ಲಿರುವ ಹಿತನಾಡಿಯಲ್ಲಿರುವುದಿಲ್ಲ. ಅದು ಒಂದು ಮರವಡಿಸುವ (ಜಡತೆಯ) ಸ್ಥಿತಿಯು. ಅದೊಂದು ದಿಗ್ಭ್ರಮೆಯ ಸ್ಥಿತಿಯು (state of stupifaction). ಅದು ಹಿತನಾಡಿ ಮತ್ತು ಕಾರಣಶರೀರದ ನಡುವೆ ವಿಶ್ರಾಂತಿಯನ್ನು ಅನುಭವಿಸುವುದು.

ಮೂರ್ಛೆಯಲ್ಲಿ ಜಾಗ್ರತ್ ಸ್ವಪ್ನಕ್ಕಿಂತ ಬೇರೆಯಾದ ಸುಷುಪ್ತಿಯ ಅರ್ಧಭಾಗವಿರುವುದು. ಮೂರ್ಛಿತನಾದವನು ಯಾವ ವಸ್ತುವನ್ನೂ ಗ್ರಹಿಸುವುದಿಲ್ಲ. ಮೂರ್ಛೆಗೊಳ್ಳುವವನ ದೇಹವು ನೆಲದ ಮೇಲೆ ಬೀಳುವುದು. ಆದ್ದರಿಂದ ಮೂರ್ಛೆಯಲ್ಲಿರುವವನಿಗೆ ಎಚ್ಚರವಿಲ್ಲವು. ಜೀವನಿಗೆ ಸಂಪೂರ್ಣ ಅಜ್ಞಾನವಿರುವುದರಿಂದ ಕನಸನ್ನು ಕಾಣನು. ಹಾಗಾದರೆ ಅವನು ಸತ್ತಿದ್ದಾನೆಯೇ? ಇಲ್ಲ. ಏಕೆಂದರೆ ಅವನ ಶರೀರದಲ್ಲಿ ಶಾಖವೂ, ಪ್ರಾಣವೂ ಇವೆ. ಅವನು ಉಸಿರಾಡುತ್ತಲೇ ಇರುವನು. ಮೂರ್ಛೆಯೆಂದರೆ ಗಾಢನಿದ್ದೆಯಲ್ಲವು. ಮೂರ್ಛೆಯಲ್ಲಿ ಅವನ ದೇಹವು

ಕಂಪಿಸುವುದು, ಮುಖವು ಭಯಂಕರವಾಗುವುದು. ಅವನ ಕಣ್ಣುಗಳು ವಿಶಾಲ ವಾಗಿ ದುರುಗುಟ್ಟುತ್ತಿರುವುವು, ಆದರೆ ಸುಷುಪ್ತಿಯಲ್ಲಿರುವವನು ಶಾಂತನೂ, ಗಂಭೀರನೂ ಆಗಿ ಕಾಣುವನು. ಅವನ ಕಣ್ಣುಗಳು ಮುಚ್ಚಿವೆ. ಅವನ ದೇಹವು ಕಂಪಿಸುವುದಿಲ್ಲ. ನಿದ್ರಿಸುವವನನ್ನು ಕೈಗಳಿಂದ ಸ್ಪರ್ಶಿಸಿದರೆ ಅಥವಾ ಹೆಸರಿನಿಂದ ಕರೆದರೆ ಕೂಡಲೇ ಎಚ್ಚರಗೊಳ್ಳುವನು. ಆದರೆ ಮೂರ್ಛೆ ಗೊಂಡವನನ್ನು ದೊಣ್ಣೆಯಿಂದ ಹೊಡೆದರೂ ಎಚ್ಚರಗೊಳ್ಳುವುದಿಲ್ಲ. ತಲೆಯ ಮೇಲೆ ದೊಣ್ಣೆಯಿಂದ ಪೆಟ್ಟನ್ನು ಕೊಟ್ಟರೆ ಮೂರ್ಛೆಯುಂಟಾಗುವುದು. ಆದರೆ ನಿದ್ದೆಯು ಆಯಾಸದಿಂದ ಅಥವಾ ಬಳಲಿಕೆಯಿಂದ ಉಂಟಾಗುವುದು.

ಸುಷುಪ್ತಿಯು ಬೀಜವು. ಸ್ವಪ್ನ ಮತ್ತು ಎಚ್ಚರವು ಅದರ ಫಲಗಳು. ಪರಮಾತ್ಮನಲ್ಲಿ ಒಂದಾಗುವ ಅಥವಾ ಸಮಾಧಿಯ ಲಕ್ಷಣಗಳಲ್ಲಿ ಬಹು ಸ್ವಲ್ಪ ಮಟ್ಟಿಗೆ ಪ್ರತ್ಯೇಕವಾಗಿರುವುದೇ ಸುಷುಪ್ತಿಯು. ಹಾಗಿಲ್ಲದಿದ್ದರೆ ಮತ್ತು ಪ್ರಜ್ಞೆಯು ಪುನಃ ಎಚ್ಚರದ ಮತ್ತು ಕನಸಿನ ಸ್ಥಿತಿಗೆ ಹಿಂದಿರುಗದಿದ್ದರೆ ಸುಷುಪ್ತಿಯು ಸಮಾಧಿ ಅಥವಾ ಶ್ರೇಷ್ಠ ಪ್ರಜ್ಞಾಸ್ಥಿತಿಯೇ ಆಗಿರುವುದು. ತುರೀಯ ಅಥವಾ ನಾಲ್ಕನೆಯ ಅವಸ್ಥೆಯು ಈ ಮೂರು ಅವಸ್ಥೆಗಳನ್ನೂ ಮೀರಿದುದು. ತನ್ನ ಮನಸ್ಸು, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟವನೂ, ಗುಣತ್ರಯ ಮತ್ತು ದೇಹಭಾವವನ್ನು ಮೀರಿದವನೂ, ಸಚ್ಚಿದಾನಂದ ಬ್ರಹ್ಮ ದಲ್ಲಿ ಐಕ್ಯಾನುಸಂಧಾನ ಮಾಡುತ್ತಿರುವವನೂ ಆದ ಋಷಿಯು ಅಥವಾ ಸಂತನು ಆನಂದಮಯವಾದ ದಿವ್ಯಜ್ಞಾನಾವಸ್ಥೆಯಲ್ಲಿರುವನು. ಇದೇ ಮೋಕ್ಷದ ಪರಾಸ್ಥಿತಿಯು.

ಸುಷುಪ್ತ್ಯವಸ್ಥೆಗೂ, ಜಾಗ್ರದವಸ್ಥೆಗೂ ಮಧ್ಯದ ಸಂಧಿಕಾಲವನ್ನು ತೂಷ್ಣೀಂಭೂತಾವಸ್ಥಾ ಅಥವಾ ಮನಸ್ಸಿನ ಸಮಾಧಾನದ ಸ್ಥಿತಿ ಎಂದು ಕರೆಯುವರು. ಹೀಗೆಯೇ ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳ ನಡುವೆ ಸಂಧಿ ಇರುವುದು. ಮೊದಲನೆಯ ಸಂಧಿಯಲ್ಲಿ ಮನಸ್ಸು ಸುಷುಪ್ತಿಯ ರಸಾನುಭವ ದಿಂದ ಹೊರಬರುವುದು. ಎರಡನೆಯ ಸಂಧಿಯಲ್ಲಿ ಪ್ರಪಂಚದ ವಸ್ತುಗಳ ರಸ ಅಥವಾ ಅನುಭವದೊಡನೆ ಹೃದಯಾಂತರಾಳವನ್ನು ಪ್ರವೇಶಿಸುವುದು. ಈ ಎರಡು ಸಂಧಿಗಳಲ್ಲಿ ಮನಸ್ಸು ಸಂಕಲ್ಪ ಮತ್ತು ಆಕರ್ಷಣೆಯಿಂದ ಮುಕ್ತ ವಾಗಿರುವುದು. ಶ್ರುತಿಗಳು ಹೇಳುವುದೇನೆಂದರೆ —

ಸ್ವಪ್ನಪ್ರಬೋಧಯೋಃ ಸಂಧಿವಾತ್ಮನೋ ಗತಿಮಾತ್ಮದೃಕ್....
ಪಶ್ಯಂ ಬಂಧಂ ಚ ಮೋಕ್ಷಂ ಚ ಮಾಯಾ ಮಾತ್ರಂ ನ ವಸ್ತುತಃ ||

ಆತ್ಮತತ್ವಾನ್ವೇಷಕನು ಜಾಗ್ರತ್ ಮತ್ತು ಸುಷುಪ್ತ್ಯವಸ್ಥೆಗಳು ಸೇರುವ ಸಂಧಿಯನ್ನು ನೋಡಬೇಕು. ಅವನು ಬಂಧ ಮೋಕ್ಷಗಳು ಜೀವನ ಮಾಯೆಯ ಭ್ರಮೆಯಿಂದಾದುದೆಂದೂ, ಅದು ಪರಮಾರ್ಥವಲ್ಲವೆಂದೂ ನೋಡಬೇಕು. (ಭಾಗವತ VII, ೩- V ).

---

# ೩. ಬ್ರಹ್ಮವಿದ್ಯಾ (ಜ್ಞಾನ)

ಬ್ರಹ್ಮವಿದ್ಯಾ ಅಥವಾ ಆತ್ಮಜ್ಞಾನವು ಶಾಸ್ತ್ರೋಕ್ತವಾದ ಕರ್ಮಗಳನ್ನು ಆಚರಿಸಿ ಚಿತ್ತಶುದ್ಧಿಯನ್ನು ಹೊಂದಿದ ಹಾಗೂ ಕರ್ಮಫಲ ಸಂಗವಿಲ್ಲದವನಿಗಾಗಿ ಹೇಳಲ್ಪಟ್ಟಿರುವುದು.

ಕೇವಲ ಜ್ಞಾನವು ಮೋಕ್ಷಕ್ಕೆ ಸಾಧನ ಮಾತ್ರವು. ಉಪನಿಷತ್ತುಗಳಲ್ಲಿ "ಜೀವಬ್ರಹ್ಮೈಕ್ಯ" ವನ್ನು ಹೇಳಿರುವ "ತತ್ವಂ ಅಸಿ" ಮುಂತಾದ ಮಹಾವಾಕ್ಯಗಳ ಪ್ರಮುಖವಾದ ಅರ್ಥಗಳನ್ನು ವಿಚಾರ ಮೂಲಕವಾಗಿ ಸರಿಯಾಗಿ ಅರಿತುಕೊಂಡವನಿಗೆ ಜ್ಞಾನೋದಯವಾಗುವುದು.

ಮೃತ್ಯುವಿನ ಅಗ್ನಿದಾಹವನ್ನು ಜ್ಞಾನಜಲದಿಂದ ತಣಿಸಬಹುದು. ಆತ್ಮಧ್ಯಾನದಿಂದ ಜ್ಞಾನವು ಪ್ರಾಪ್ತಿಯಾಗುವುದು. **ಆತ್ಮಜ್ಞಾನವು ಮೋಕ್ಷವನ್ನುಂಟುಮಾಡಲಾರದು. ಅದೇ ಮೋಕ್ಷವಾಗಿರುವುದು.**

"ಜಗತ್ತಿನಲ್ಲಿ ನಡೆಸಿದ ಸುಕೃತಗಳಲ್ಲೆಲ್ಲಾ ಮೋಕ್ಷಮಾರ್ಗವನ್ನು ಕೋರುವುದೇ ಬಹಳ ಪ್ರಬಲವಾದುದೆಂದು ಋಷಿಗಳು ಹೇಳಿದರು. ಎಲ್ಲ ಕರ್ತವ್ಯಗಳಲ್ಲಿ ಶಾಶ್ವತವಾದ ಆತ್ಮಜ್ಞಾನವನ್ನು ಗಳಿಸುವುದೇ ಪ್ರಮುಖವಾದುದು ಎಂದು ಭೃಗುವು ಉತ್ತರಿಸಿದನು. ಏಕೆಂದರೆ ಎಲ್ಲ ವಿಜ್ಞಾನಗಳನ್ನೂ ಹಿಂದಕ್ಕೆ ತಳ್ಳಿ ಅದು ಮೋಕ್ಷವನ್ನು ದೃಢಪಡಿಸುವುದು" (ಮನುಸ್ಮೃತಿ-ಅಧ್ಯಾಯ ೧೨.)

ಗಂಗೆಯು ಮೂರು ಅವಸ್ಥೆಗಳನ್ನು ಹೊಂದಿರುವಳು. ಚಳಿಗಾಲದಲ್ಲಿ ಶುದ್ಧಬ್ರಹ್ಮ ಸ್ವರೂಪಳು. ಆಗ ಅವಳು ತಿಳಿಯಾಗಿ, ಸ್ಪಷ್ಟವಾಗಿ ಹರಿಯುವಳು. ಅವಳು ಬೇಸಿಗೆಯಲ್ಲಿ ತನ್ನ ರೂಪವನ್ನು ಬದಲಾಯಿಸುವಳು. ಆಗ ಮಂಜಿನ ನೀರು ತುಂಬಿ ಹರಿಯುವುದು. ಅವಳು ಈಶ್ವರ ಸ್ವರೂಪವನ್ನು ಧರಿಸುವಳು ಎಂದರೆ ಮಾಯಾವಿಶಿಷ್ಟ ಚೈತನ್ಯಗಳಾಗುವಳು. ನಿಜವಾಗಿಯೂ ಮಳೆಗಾಲದಲ್ಲಿ ಬಹಳ ಕೊಳಕಾಗಿ ಹರಿಯುವಳು. ಅವಳು ಜೀವಸ್ವರೂಪವನ್ನು ಎಂದರೆ ಅವಿದ್ಯಾವಿಷ್ಟ ಚೈತನ್ಯಳಾಗುವಳು. ಹಾಗೆಯೇ ಜೀವನು ಭಕ್ತಿಯ ಮೂಲಕ ಪರಬ್ರಹ್ಮದಲ್ಲಿ ಒಂದಾಗುವನು.

ಬ್ರಹ್ಮವು ಸತ್ಯವು ಮತ್ತು ಶಾಶ್ವತವು. ಈ ದೇಹವು ಮಿಥ್ಯವು ಮತ್ತು ನಾಶವು. ಆತ್ಮಜ್ಞಾನದಿಂದ ಅನಾತ್ಮವು ಹೋಗಿ, ಅಮೃತತ್ವದ ಪ್ರವಾಹವು ಉಂಟಾಗುವುದೇ: ಉಪನಿಷತ್ತುಗಳ ಋಷಿಗಳ ಪ್ರಾಚೀನವಾದ ಜ್ಞಾನವು.

ಮಹತ್ಪ್ರಯತ್ನದಿಂದ ಮುಕ್ತಿಯನ್ನು ಕೊಡುವ ಆತ್ಮಜಾನವನ್ನು ನೀನು ಅವಶ್ಯಕವಾಗಿ ಗಳಿಸಲೇಬೇಕು. ಬ್ರಹ್ಮಜ್ಞಾನವೇ ಮೋಕ್ಷದ ಸಾಧನವಾಗುವುದು ಮತ್ತು ಪರತತ್ವ ಪ್ರಾಪ್ತಿಯನ್ನುಂಟುಮಾಡುವುದು. ಬ್ರಹ್ಮಜ್ಞಾನ ಪ್ರಾಪ್ತಿಯೇ ಪರಾವಿದ್ಯವು. ಬ್ರಹ್ಮಜ್ಞಾನವು ಸಂಸಾರದ ಮೂಲವಾದ ಅಜ್ಞಾನವನ್ನು ಪೂರ್ಣವಾಗಿ ನಾಶಗೊಳಿಸುವುದು. ಬಚ್ಚಿಟ್ಟಿರುವ ಐಶ್ವರ್ಯವು ತನ್ನದೇ ಆಗಿದ್ದರೂ, ಪ್ರತಿ ದಿನವೂ ಅದರ ಬಳಿಯೇ ಓಡಾಡಿದರೂ, ಅದರ ಸ್ಥಳವನ್ನು ತಿಳಿಯದಿರುವುದರಿಂದ ಅವನಿಗೆ ಹೇಗೆ ಆನಂದವು ಪ್ರಾಪ್ತಿಯಾಗಲಾರದೋ, ಹಾಗೆಯೇ ಅಮೃತಾತ್ಮನಾದ ಬ್ರಹ್ಮನನ್ನು ಪ್ರತಿ ದಿನವೂ ಸುಷುಪ್ತಿಯಲ್ಲಿ ಹೋಗಿ ಸೇರುತ್ತಿದ್ದರೂ, ಅವನನ್ನು ಕಾಣಲಾರೆ. ಅಜ್ಞಾನವು ಜ್ಞಾನದಿಂದ ಬಾಧಿಸಲ್ಪಟ್ಟರೆ ಆ ಶ್ರೇಷ್ಠ ತತ್ವವು ಪ್ರತ್ಯಕ್ಷವಾಗಿ ಗೋಚರಿಸುವುದು.

ಸೂರ್ಯೋದಯದಿಂದ ಗಾಢವಾದ ಅಂಧಕಾರವು ನಾಶವಾಗುವಂತೆ ಆತ್ಮಜ್ಞಾನದಿಂದ ಅಜ್ಞಾನವು ನಾಶವಾಗುವುದು.

ದೀಪದ ಜ್ವಾಲೆಯು ಅಜ್ಞಾನವನ್ನು ನಾಶಗೊಳಿಸುವುದು. ಹಾಗೆಯೇ ಜೀವನ ಎಲ್ಲ ಅನರ್ಥಗಳಿಗೂ ಮೂಲಕಾರಣವಾದ ಅವಿದ್ಯೆಯು, ಆತ್ಮಜ್ಞಾನದಿಂದ ನಾಶವಾಗುವುದು. ಆದ್ದರಿಂದ ಆತ್ಮಜ್ಞಾನವನ್ನು ಪಡೆದು ದಿವ್ಯಜ್ಯೋತಿಯಲ್ಲಿ ನಿಂತು ಸಂತೋಷವಾಗಿ ಇಷ್ಟಬಂದಂತೆ ವಿಹರಿಸಿರಿ.

ಬ್ರಹ್ಮವೆಂದರೆ ಹ್ರಸ್ವ ಅಥವ ದೀರ್ಘವಲ್ಲದ್ದು. ಇದು ಅಥವ ಅದಲ್ಲದ್ದು. ಮತ್ತು ಇಷ್ಟು ಅಷ್ಟಲ್ಲದ್ದೆಂದು ತಿಳಿಯಬೇಕು. ಬ್ರಹ್ಮವನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತಾಗುವುದು. ಇನ್ನು ತಿಳಿಯಬೇಕಾದುದು ಯಾವುದೂ ಉಳಿಯಲಾರದು.

ಬ್ರಹ್ಮಜ್ಞಾನದ ಲಾಭದಿಂದ ಚಿಂತಿಸದಿದ್ದುದು ಚಿಂತಿಸದಂತಾಗುವುದು ಮತ್ತು ತಿಳಿಯದುದು ತಿಳಿಯಲ್ಪಡುವುದು.

ವೈರಾಗ್ಯವು ತಾನೇ ಮೋಕ್ಷವನ್ನು ಕೊಡಲಾರದು ಮತ್ತು ಮೂಲಾಜ್ಞಾನವನ್ನು ನಾಶಮಾಡಲಾರದು. ಆತ್ಮಜ್ಞಾನವೊಂದೇ ಅವಿದ್ಯೆಯನ್ನು, ಅದರ ಕಾರ್ಯಗಳಾದ ಮನಸ್ಸು, ಇಂದ್ರಿಯಗಳು, ಪ್ರಾಣ ಮತ್ತು ಭೌತದೇಹವೆಂಬ ಅಜ್ಞಾನಗಳನ್ನು ನಾಶಗೊಳಿಸುವುದು.

ಬೆಳಕು ಕತ್ತಲೆಗಳಂತೆ ವಿದ್ಯೆ ಮತ್ತು ಅವಿದ್ಯೆಯು ಪರಸ್ಪರ ವಿರೋಧವಾದುದು. ಅವಿದ್ಯೆಯ ಇನ್ನೊಂದು ರೂಪ ಮಾಯಾ. ಅವಿದ್ಯೆಯು ಆ ಸಂಸಾರಕ್ಕೆ ಬಂಧಿಸುವುದು. ವಿದ್ಯೆಯು ಆ ಸಂಸಾರವನ್ನು ದಾಟಲು ಸಹಾಯ ಮಾಡುವುದು.

ಮಹಾಗೃಹಸ್ಥನಾದ ಶೌನಕನು ಅಂಗೀರಸನನ್ನು ಹೀಗೆ ಪ್ರಶ್ನಿಸಿದನು ; "ಓ ಭಗವಾನ್! ಯಾವುದನ್ನು ತಿಳಿಯುವುದರಿಂದ ಎಲ್ಲವೂ ತಿಳಿದಂತಾಗುವುದೋ ಅದನ್ನು ತಿಳಿಸಿರಿ." ಅಮರವಾದ ಬ್ರಹ್ಮವು ಪರಾವಿದ್ಯೆಯಿಂದ ತಿಳಿಯುವುದು. **ಕಸ್ಮಿನ್ ಭಗವೋ ವಿಜಾನತೇನ ಇದಂ ವಿಜಾನತಂ ಭವತಿ.**

ಜ್ಞಾನೋದಯವಾದಾಗ ಕೂಡಲೇ ಮೋಕ್ಷವನ್ನು ಪಡೆಯುವನು. ಅವನು ಸರ್ವ ದುಃಖಗಳಿಂದ ಮುಕ್ತನಾಗುವನು. ಅವನು ನಿತ್ಯವಾದ, ಶಾಂತವಾದ, ಏಕವಾದ, ಅತೀಂದ್ರಿಯವಾದ ಆನಂದವನ್ನು ಅನುಭವಿಸುವನು.

ವೇದಾಂತದ ಪ್ರಮಾಣಗಳು ಯಾವುವೆಂದರೆ: ೧. ಪ್ರತ್ಯಕ್ಷ ೨. ಅನುಮಾನ ೩. ಶಬ್ದ ೪. ಉಪಮಾನ ೫. ಅರ್ಥಾಪತ್ತಿ ಮತ್ತು ೬. ಅನುಪಲಬ್ಧಿ.

ಜಪ, ತಪಸ್ಸು ಮುಂತಾದ ಸಾಧನಗಳಿಂದ ಸಂಸ್ಕಾರಗಳು ಸವೆಯುವುವು. ಜ್ಞಾನವೊಂದೇ ಅವುಗಳನ್ನು ಪೂರ್ಣವಾಗಿ ನಾಶಮಾಡುವುದು.

ಧ್ಯಾನ ಮತ್ತು ಏಕಾಗ್ರತೆಯ ಅಭ್ಯಾಸವಿಲ್ಲದೆ ಆತ್ಮದ ಅಪರೋಕ್ಷ ಜ್ಞಾನವು ಅಸಾಧ್ಯವು. ನೀವು ಮನಃಪೂರ್ವಕವಾಗಿ ಒಳಸರಿದು ಹುಡುಕಿರಿ ಮತ್ತು ಶುದ್ಧವೂ, ಏಕಾಗ್ರವೂ ಆದ ಮನಸ್ಸನ್ನು ಸಾಧನ ಚತುಷ್ಟಯ ಸಂಪನ್ನಗೊಳಿಸಿ ಶ್ರೇಷ್ಠವಾದ ಆತ್ಮದಲ್ಲಿ ಸ್ಥಿರಗೊಳಿಸಿರಿ.

ಆತ್ಮಜ್ಞಾನಕ್ಕೆ ಸಮನಾದ ಬೆಳಕಿಲ್ಲವು. ತೃಪ್ತಿಗೆ ಸಮನಾದ ಸಂಪತ್ತಿಲ್ಲವು. ಸತ್ಯಕ್ಕೆ ಸಮವಾದ ಸದ್ಗುಣವಿಲ್ಲವು. ಆತ್ಮಕ್ಕೆ ಸಮವಾದ ಆನಂದವಿಲ್ಲವು. ತೃಪ್ತಿ ಸಮಾಧಾನವನ್ನು ಬೆಳೆಸಿಕೊಳ್ಳಿ. ಸತ್ಯವನ್ನು ನುಡಿಯಿರಿ. ಆತ್ಮಾನಂದವನ್ನು ಪಾನಮಾಡಿರಿ. ಆತ್ಮದ ಮಿತ್ರರಾಗಿ.

ಬ್ರಹ್ಮಜ್ಞಾನದಿಂದಲೇ ಮೋಕ್ಷವನ್ನು ಪಡೆಯಲಾಗುವುದು. ಶೃತಿಗಳು ಸ್ಪಷ್ಟವಾಗಿ ಘೋಷಿಸುತ್ತಿವೆ: **"ಬ್ರಹ್ಮವನ್ನು ಯಾರೇ ಅರಿತುಕೊಂಡರೂ, ಮೃತ್ಯುವನ್ನು ಗೆಲ್ಲುವರು. ಮೋಕ್ಷಕ್ಕೆ ಬೇರೆಯ ಮಾರ್ಗವೇ ಇಲ್ಲವು." "ಹೃದಯ ಜ್ಞಾನೇನ ಮುಕ್ತಿ"** :—ಸ್ವಾತ ಜ್ಞಾನದಿಂದ ಮೋಕ್ಷ ಪ್ರಾಪ್ತಿಯು. ಅವನು ಮತ್ತೆ ಹುಟ್ಟುವುದೇ ಇಲ್ಲವು.

ಯಜ್ಞಯಾಗಾದಿ ಕರ್ಮಗಳಿಂದ ಸಂಸಾರಕ್ಕೆ ಕಾರಣವಾದ ಅವಿದ್ಯೆಯು ನಾಶವಾಗುವುದಿಲ್ಲ, ಆದರೆ ಅವುಗಳನ್ನು ನಿಷ್ಕಾಮ್ಯಭಾವದಿಂದ ಆಚರಿಸಿದರೆ ಮಾತ್ರ ಚಿತ್ತಶುದ್ಧಿಯನ್ನುಂಟುಮಾಡಬಲ್ಲವು. ಆತ್ಮಜ್ಞಾನವೊಂದೇ ಅವಿದ್ಯೆಯನ್ನೂ ಅದರ ಕಾರ್ಯಗಳನ್ನೂ ಸಮೂಲ ನಾಶಗೊಳಿಸಬಲ್ಲುದು.

ಹಗ್ಗದಲ್ಲಿ ಹಾವನ್ನು ಆರೋಪಿಸಿದಂತೆ, ಅಜ್ಞಾನದಿಂದ ನಾಮ, ರೂಪ, ಕ್ರಿಯಾತ್ಮಕವಾದ ಜಗತ್ತನ್ನು ಅಮೃತವೂ, ಶುದ್ಧವೂ, ವ್ಯಾಪ್ಯವೂ ಆದ ಬ್ರಹ್ಮದ ಮೇಲೆ ಅಧ್ಯಾಸಮಾಡಲಾಗಿದೆ. ನೀನು ಆತ್ಮಜ್ಞಾನವನ್ನು ಪಡೆದುಕೊಂಡಾಗ ಕರ್ತೃ, ಭೋಕ್ತೃವೆಂಬ ತೋರಿಕೆಯ (ಹುಟ್ಟುಗಟ್ಟಿನ) ದ್ವಂದ್ವ ಭಾವಗಳು ಅದೃಶ್ಯವಾಗುವುವು.

———

# ೪. ಅಧ್ಯಾಸ

ಅಧ್ಯಾಸವೆಂದರೆ ಒಂದು ವಸ್ತುವು ಮತ್ತೊಂದರ ಧರ್ಮವನ್ನು ಪಡೆದಂತೆ ತೋರುವುದು. ಉದಾಹರಣೆಗೆ ಕಪ್ಪೆಯಚಿಪ್ಪು ಬೆಳ್ಳಿಯಂತೆ ತೋರುವುದು. ಯಾವ ಒಂದು ವಸ್ತುವಿನಲ್ಲಿ ಬೇರೆ ವಸ್ತುವಿನ ಧರ್ಮವು ತೋರಿಕೆಯಾಗಿವೆಯೋ ಅವೆರಡನ್ನೂ ಬೇರೆಬೇರೆಯಾಗಿ ವಿಂಗಡಿಸಿ ತಿಳಿದುಕೊಳ್ಳುವುದರ ಫಲವಾಗಿ ಉಂಟಾಗುವ ಭ್ರಾಂತಿಯು ಅಧ್ಯಾಸವೆನಿಸುವುದು. ಹಾವು, ಹಗ್ಗದಲ್ಲಿ ಆರೋಪಿಸಲ್ಪಟ್ಟಿರುವುದು ಅಧ್ಯಾಸವು. ಕಲ್ಪನಾ, ಭ್ರಾಂತಿ, ಅಧ್ಯಾಸವು ಸಮಾನಾರ್ಥಕ ಶಬ್ದಗಳು. ಈ ಜಗತ್ತು ಮತ್ತು ದೇಹವು ಬ್ರಹ್ಮ ಅಥವಾ ಆತ್ಮನಲ್ಲಿ ಅಧ್ಯಾಸಮಾಡಲ್ಪಟ್ಟಿರುವುವು.

ದೇಹದ ಮತ್ತು ಆತ್ಮದ ಸಂಬಂಧವು ಸಂಯೋಗ ಅಥವಾ ಸಮವಾಯ ಸಂಬಂಧವಲ್ಲವು. ಪ್ರಕೃತಿ ಪುರುಷರ ನಡುವೆ ಯಾವ ವಿಧವಾದ ಸತ್ಯ ಸಂಬಂಧವು ಇರುವುದು ಅಸಾಧ್ಯವು. ಅದು ಕೇವಲ ಅಧ್ಯಾಸ ಸಂಬಂಧ ಮಾತ್ರ. ಆತ್ಮವನ್ನು ದೇಹದೊಡನೆ ಮನಸ್ಸಿನಲ್ಲಿ ಸಂಬಂಧಿಸುವುದು ತಪ್ಪು ತಿಳುವಳಿಕೆಯೇ. **ಆತ್ಮನು ಯಾವಾಗಲೂ ಅಶರೀರಿಯು.**

ಎಲ್ಲಾ ಭೇದಗಳಿಗೂ ಉಪಾಧಿಗಳೇ ಕಾರಣಗಳು. ಉಪಾಧಿಗಳು ಭ್ರಾಂತಿಜನ್ಯವಾದುದರಿಂದ ಅವುಗಳಿಂದುಂಟಾದ ಭೇದವು ಮಿಥ್ಯವು ಆದ್ದರಿಂದ ಎಲ್ಲವನ್ನೂ ಕಳೆದುಳಿದ ಅದ್ವಿತೀಯವಾದ ಬ್ರಹ್ಮವೊಂದೇ ಇರುವುದು. ಅವನೊಬ್ಬನೇ ಮೂರು ಕಾಲಗಳಲ್ಲಿಯೂ ಇರುವವನು.

ಅಧ್ಯಾಸವು ಒಂದನ್ನು ಇನ್ನೊಂದಾಗಿ, ಸುಳ್ಳನ್ನು ನಿಜವಾಗಿ ತಿಳಿಯುವ ಮನಸ್ಸಿನ ಭಾವವು. ಜಗತ್ತಿನ ತೋರಿಕೆಗೆ ಅದು ಕಾರಣವಲ್ಲವು. ಆದರೆ ಅದನ್ನು ತಪ್ಪಾಗಿ ತಿಳಿಯುವುದಕ್ಕೆ ಅದು ಕಾರಣವಾಗಿರುವುದು. ಅದು ಅವಿದ್ಯೆಯಿಂದ ಹುಟ್ಟಿದುದು. ದೇಹವು ಆತ್ಮವೆಂದು ನೀನು ತಪ್ಪು ತಿಳಿದುಕೊಳ್ಳುವೆ. ದೇಹವೇ ನೀನೆಂದು ಗುರುತಿಸಿಕೊಂಡಿರುವೆ. ನೀನು ಅದರೊಡನೆ ಅಂಟಿಕೊಂಡಿರುವೆ ಮತ್ತು ದೇಹಾತ್ಮನೆಂದು ತಿಳಿದಿರುವೆ. ಇದು ದೇಹಾಧ್ಯಾಸವು. ಅಮೃತಾತ್ಮನ ಅರಿವಿನಿಂದ ಈ ದೇಹಾಧ್ಯಾಸವು ಕಳೆಯಲ್ಪಡುವುದು ಸರ್ವ

ವ್ಯಾಪಿಯಾದ ಶುದ್ಧಾತ್ಮನೊಡನೆ ಸದಾ ಐಕ್ಯಾನುಸಂಧಾನ ಮಾಡುವುದೆಂಬ ಪ್ರವಾಹವನ್ನು ಅಧ್ಯಾಸದ ವಿರುದ್ಧ ಪ್ರವಹಿಸುವಂತೆ ಮಾಡು.

ಈ ಪ್ರಪಂಚವು ಬ್ರಹ್ಮನಲ್ಲಿ ಅಧ್ಯಾರೋಪಿತವಾಗಿರುವುದು. ಈ ಅಧ್ಯಾಸವನ್ನು ಅಪವಾದಯುಕ್ತಿಯು ಕಳೆಯುವುದು. ಅಪವಾದವೆಂದರೆ ವಿಶ್ವವು ಬ್ರಹ್ಮದಲ್ಲಿಲ್ಲವು, ಕಪ್ಪೆಚಿಪ್ಪಿನಲ್ಲಿ ಬೆಳ್ಳಿ ಇಲ್ಲವು, ಮರೀಚಿಕೆಯಲ್ಲಿ ಜಲ ವಿಲ್ಲವು ಎಂಬುದಾಗಿ ತಪ್ಪು ತಿಳುವಳಿಕೆಯನ್ನು ಕಳೆದು ಸರಿಯಾದ ತಿಳುವಳಿಕೆ ಯನ್ನು ಕೊಡುವುದು. ಕಾರಣಕ್ಕಿಂತ ಭಿನ್ನವಾದ ಕಾರ್ಯವು ಯಾವುದು ಇಲ್ಲವು. ಮಡಕೆಯು ಮಣ್ಣಿಗಿಂತ ಪ್ರತ್ಯೇಕವಾಗಿಲ್ಲವು. ಬಟ್ಟೆಯು ನೂಲನ್ನು ಬಿಟ್ಟಿರಲಾರದು. ಹಾಗೆಯೇ ಆಭರಣಗಳು ಸುವರ್ಣವನ್ನು ಬಿಟ್ಟಿರಲಾರದು. ಈ ವಿಶ್ವವೂ ಸಹ ಬ್ರಹ್ಮನಿಂದ ಪ್ರತ್ಯೇಕವಾಗಿ, ಭಿನ್ನವಾಗಿ ಇರಲಾರದು.

ಜ್ಞಾನವನ್ನೊಳಗೊಂಡಿರುವುದೇ ಆತ್ಮವು. ಅದು ಜೀವಾತ್ಮ, ಪರಮಾತ್ಮ ಎಂದು ಎರಡು ವಿಧವು. ಸರ್ವಜ್ಞನಾದ ದೇವರು ಪರಮಾತ್ಮನು. ಅವನು ಏಕನು ಮತ್ತು ಸುಖ ದುಃಖಗಳಿಲ್ಲದವನು. ಜೀವಾತ್ಮವು ಪ್ರತಿಯೊಂದು ದೇಹದಲ್ಲಿಯೂ ಇರುವುದು. ಅದು ವ್ಯಾಪಕವೂ, ಶಾಶ್ವತವೂ ಆಗಿರುವುದು.

ಈ ದೇಹವು ನಿನ್ನ ಒಂದು ಉಪಕರಣವು. ಆದರೂ ಅದು ನೀನೇ ಅಲ್ಲವು. ಅಜ್ಞಾನಕ್ಕಿಂತ ಬಹುದೊಡ್ಡ ಪಾಪವಿಲ್ಲ. ಸ್ವಾರ್ಥಿಯಾಗಿರುವುದು ಮಹಾಪರಾಧವು. ದೇಹದೊಡನೆ ಒಂದಾಗುವುದು ಮಹದನರ್ಥವು. ತನ್ನ ಆತ್ಮನನ್ನೇ ಮರೆಯುವುದು ದೊಡ್ಡ ಅವಿವೇಕವು.

ನಿನಗೆ ಒಂದು ಸಣ್ಣ ಕಥೆಯನ್ನು ಹೇಳುವೆನು. ಏಕಾಗ್ರ ಮನಸ್ಸಿನಿಂದ ಕೇಳು. ಒಂದು ಸಿಂಹವು ತನ್ನ ಮರಿಯನ್ನು ಕುರಿಯ ಮಂದೆಯಲ್ಲಿ ಬಿಟ್ಟು ಪ್ರಾಣಬಿಟ್ಟಿತು. ಅವು ಆ ಮರಿಸಿಂಹವನ್ನು ರಕ್ಷಿಸುತ್ತಾ ಇದ್ದವು. ಮರಿಸಿಂಹವು ದೊಡ್ಡದಾಗಿ ಬೆಳೆದ ಮೇಲೆ " ಬ್ಯಾ – ಬ್ಯ – ಬ್ಯ " ಎಂದು ಕೂಗುತಿತ್ತು. ಒಂದು ದಿನ ದೊಡ್ಡ ಸಿಂಹವೊಂದು ಕುರಿಯಂತೆ ಅರಚುತ್ತಿರುವ ಈ ಸಿಂಹವನ್ನು ಕಂಡಿತು. ಅದಕ್ಕೆ ಪರಮಾಶ್ಚರ್ಯವಾಯಿತು. ಅದು ಕುರಿ ಸಿಂಹವನ್ನು ಕೇಳಿತು, " ತಮ್ಮಾ, ನಿನಗೇನಾಗಿದೆ? ಇಷ್ಟು ದೀನವಾದ ಸ್ಥಿತಿ ಯಲ್ಲಿ ಇಲ್ಲೇಕಿರುವೆ?" ಆ ಕುರಿಸಿಂಹವು ಹೇಳಿತು, " ನಾನು ಕುರಿಯು. ನನ್ನ ಸಹೋದರ ಸಹೋದರಿಯರೊಡನೆ ನಾನು ಸಂತೋಷವಾಗಿರುವೆನು " ಎಂದಿತು.

ಆಗ ಆ ಕಾಡಿನ ಸಿಂಹವು ಇದನ್ನು ನದಿಯ ಸಮೀಪಕ್ಕೆ ಕರೆದುಕೊಂಡು ಹೋಗಿ ನೀರಿನಲ್ಲಿ ಅದರ ಮುಖದರ್ಶನ ಮಾಡಿಸಿತು. "ನೀನು ಭ್ರಮೆ ಗೊಂಡಿರುವೆ. ನಿನ್ನ ಪ್ರತಿಬಿಂಬವನ್ನು ನೋಡು. ನೀನು ಸಿಂಹವು. ನಾನೂ ಸಿಂಹವೇ." ಕುರಿಯಂತಿದ್ದ ಸಿಂಹವೂ ನೀರಿನಲ್ಲಿ ತನ್ನ ಪ್ರತಿಬಿಂಬವನ್ನೂ, ತನ್ನ ಸ್ನೇಹಿತನ ಮುಖವನ್ನೂ ನೋಡಿತು ಮತ್ತು ಸಂತೋಷದಿಂದ ಹೇಳಿತು, "ನಾನು ಎಷ್ಟು ಭಯಂಕರವಾದ ತಪ್ಪನ್ನು ಮಾಡಿದ್ದೆನು. ನಾನು ನಿಜವಾಗಿಯೂ ಸಿಂಹವೇ. ಎಂದಿಗೂ ಕುರಿಯಲ್ಲವು" ಎಂದು ಸಿಂಹದಂತೆ ಗರ್ಜಿಸುತ್ತಾ ಸಿಂಹದೊಡನೆ ಹೋಯಿತು.

ಸಹೋದರ, ನೀನು ಕುರಿಯಂತೆ ದುರ್ಬಲನಾಗಿ ಅಳುತ್ತಿರುವೆ. ನಿನ್ನ ದಿವ್ಯಸ್ವಭಾವವನ್ನು ಮರೆತಿರುವೆ. ನೀನು ಮಾಯೆಯ ಕಟ್ಟಿಗೆ ಒಳಪಟ್ಟಿರುವೆ. ಆ ಕಟ್ಟನ್ನು ಕಳಚಿಕೊಂಡು ಓಂ, ಓಂ, ಓಂ, ಎಂದು ಗರ್ಜಿಸುತ್ತಾ ವೇದಾಂತ ಕೇಸರಿಯಾಗು. ನೀನು ಅಮೃತಾತ್ಮನು. ಈ ನಶ್ವರವಾದ ದೇಹವು ನೀನೆಂದು ತಿಳಿಯದಿರು. ನಿತ್ಯವಾದ ಬ್ರಹ್ಮದೊಡನೆ ಒಂದಾಗಿ ಮುಕ್ತನಾಗು.

ಕುರ್ಚಿಯನ್ನು ಸಾಕ್ಷಿಯಾಗಿ ನೋಡುವವನು, ತಾನು ಕುರ್ಚಿಗಿಂತ ಬೇರೆಯಾಗಿರುವುದಲ್ಲದೆ, ತಾನು ಕುರ್ಚಿಯೂ ಅಲ್ಲವೋ, ಹಾಗೆಯೇ ದೇಹಕ್ಕೆ ಸಾಕ್ಷಿಯಾದವನು ದೇಹಿಯಲ್ಲವು. ಸಾಕ್ಷಿಯ ಸ್ವಭಾವವು ಸತ್ಯವು, ಸುಖವು ಮತ್ತು ಜ್ಞಾನವು. ಕುರ್ಚಿ ಮತ್ತು ದೇಹವು ಜಡವು ಮತ್ತು ಇಂದ್ರಿಯಜ್ಞಾನವಿಲ್ಲದ್ದು. ಆದ್ದರಿಂದ ನೀನು ದೇಹವಲ್ಲವು. ಕೇವಲ ಜ್ಞಾನ ಸ್ವರೂಪನಾದ ಸಾಕ್ಷಿಮಾತ್ರನು.

ನಾಮರೂಪಗಳ ಈ ಜಗತ್ತು, ಅದರ ತೋರಿಕೆಯು, ಅಥವಾ ದ್ವೈತವು ಆತ್ಮಜ್ಞಾನದ ಹಾದಿಯಲ್ಲಿ ಅಡ್ಡಿಯಾಗಿರುವುದರಿಂದ ಅದನ್ನು ಅವಶ್ಯಕವಾಗಿ ತಳ್ಳಲೇಬೇಕು. ಆಗ ಮಾತ್ರ ಬ್ರಹ್ಮದ ನಿಜವಾದ ಸ್ವಭಾವವನ್ನು ಅರಿತುಕೊಳ್ಳುವೆ. ಹಾಗೆಂದಮಾತ್ರಕ್ಕೆ ಈ ಜಡ ಚೇತನ ವಸ್ತುಗಳನ್ನು ನಾಶ ಮಾಡಬೇಕೆಂದು ಅಭಿಪ್ರಾಯವಲ್ಲವು. ದ್ವೈತಭಾವವನ್ನು ನಾಶಮಾಡಬೇಕೆಂದು ಅಭಿಪ್ರಾಯವು. ನಾಮರೂಪಗಳನ್ನು ನಾಶಗೊಳಿಸಿ ನಮ್ಮ ಒಳಗಿನ ತಿರುಳಾದ ಆತ್ಮವನ್ನೇ ತಿಳಿದುಕೊಳ್ಳಬೇಕು. ಅಜ್ಞಾನವು ನಾಶವಾದ ಕೂಡಲೇ ಈ ಬ್ರಹ್ಮವನ್ನು ಮರೆಮಾಡಿರುವ ನಾಮರೂಪಗಳಿಂದ ಕೂಡಿದ ಜಗತ್ತು ಸ್ವಪ್ನದೊಳಗಿನ ಚಿತ್ರಗಳಂತೆ ನಿನ್ನಿಂದ ಕರಗಿಹೋಗುವುದು.

ಸಾಗರದಲ್ಲಿಡಲ್ಪಟ್ಟ ಮಡಕೆಯು ಒಡೆಯಲ್ಪಟ್ಟಾಗ ಮಡಕೆಯ ನೀರು ಸಾಗರದ ನೀರಿನೊಡನೆ ಒಂದಾಗುವಂತೆ ಆತ್ಮದ ಮೇಲಿನ ಧ್ಯಾನದಿಂದ ದೇಹ ಭಾವವು ನಾಶವಾದಾಗ ಜೀವಾತ್ಮನು ಪರಮಾತ್ಮನಲ್ಲಿ ಒಂದಾಗುವನು.

ಆತ್ಮನು ಅಭಿನ್ನನು, ಪೂರ್ಣನು ಮತ್ತು ಸರ್ವವ್ಯಾಪಿಯು. ಅವನು ಸಚ್ಚಿದಾನಂದನು. ದೇಹವು ಹಲವು ಭಾಗಗಳಿಂದಾಗಿದೆ. ಅದು ಅಪೂರ್ಣವು. ಅದು ಮಾಂಸಮಯವಾಗಿದೆ. ಅಜ್ಞಾನಿಗಳು ಅವೆರಡನ್ನೂ ಒಂದಾಗಿ ತಿಳಿಯುವರು. ಇದಕ್ಕಿಂತಲೂ ತುಚ್ಛವಾದ ಅಜ್ಞಾನವು ಉಂಟೇ ? ಆತ್ಮವು ಸದಾ ಸಾಕ್ಷಿಯಾದ ಕರ್ತೃವು. ಅದು ಎಂದಿಗೂ ಕರ್ಮವಾಗಲಾರದು. ಚಿತ್ ಸ್ವಭಾವದ ವಿಶ್ವಾತ್ಮನೇ ಕರ್ತೃವು. ಈ ಕರ್ತೃವು ಇಂದ್ರಿಯಗಳೂ, ವಿಷಯ ಗಳೂ, ದೇಹಗಳೂ ಮುಂತಾದ ಜಡಭಾವದ ಅಜ್ಞಾನವಲ್ಲದ ವಸ್ತುಗಳನ್ನೊಳ ಗೊಂಡಿರುವನು.

ಬ್ರಹ್ಮನ ಮಹಿಮೆ ಮತ್ತು ಹಿರಿಮೆಯನ್ನು ಹೇಗೆ ವರ್ಣಿಸಲು ಸಾಧ್ಯ ? ವೇದಗಳೂ ಸಹ ಶಕ್ತಿಯಿದ್ದಷ್ಟು ಮಾತ್ರವೇ ಅವನನ್ನು ಹೊಗಳಿರುವುವು. ಅವನ ಆದಿ ಅಥವಾ ಅಂತವನ್ನು ತಿಳಿಯಲು ಯಾರೂ ಸಮರ್ಥರಲ್ಲವು. ಅವನು ಕಾಲಿಲ್ಲದೆ ನಡೆಯುವನು. ಕೈಗಳಿಲ್ಲದೆ ಹಿಡಿಯುವನು, ಕಿವಿಗಳಿಲ್ಲದೆ ಕೇಳು ವನು, ಕಣ್ಣುಗಳಿಲ್ಲದೆ ನೋಡುವನು, ನಾಲಿಗೆಯಿಲ್ಲದೇ ತಿನ್ನುವನು, ಮೂಗಿಲ್ಲದೆ ಘ್ರಾಣಿಸುವನು, ಚರ್ಮವಿಲ್ಲದೇ ಸ್ಪರ್ಶಿಸುವನು, ಬಾಯಿಲ್ಲದೇ ಮಾತನಾಡು ವನು. ಏಕೆಂದರೆ ಅವನು ಎಲ್ಲ ಅರಿವುಗಳ ರಾಶಿಯು. ಅವನು ಎಲ್ಲೆಲ್ಲಿಯೂ ಇರುವನು. ಕೈಗಳು, ಕಾಲುಗಳು, ತಲೆಗಳು, ಮುಖಗಳನ್ನು ಎಲ್ಲೆಲ್ಲಿಯೂ ಹೊಂದಿರುವನು. ಆಶ್ಚರ್ಯಕರವಾದ ಸಮಷ್ಟಿಯಾಗಿರುವನು. ವಾಕ್ ಮತ್ತು ಮನಸ್ಸಿನಿಂದ ಮುಟ್ಟಲಾರದವನು.

ಬ್ರಹ್ಮವನ್ನು ವಿವರಿಸುವುದೆಂದರೆ ಬ್ರಹ್ಮವನ್ನು ತಿರಸ್ಕರಿಸಿದಂತೆ. ಬ್ರಹ್ಮನ ಸರಿಯಾದ ವಿವರಣೆಯೆಂದರೆ ನೇತಿ ನೇತಿಯ ಸರಣಿಯೊಂದೇ. ಆ ಕಾರಣ ದಿಂದಲೇ ಮಹರ್ಷಿ ಯಾಜ್ಞವಲ್ಕ್ಯರು ಬೃಹದಾರಣ್ಯಕ ಉಪನಿಷತ್ತಿನಲ್ಲಿ "ನೇತಿ, ನೇತಿ — ಇದಲ್ಲ ಇದಲ್ಲ" ಎಂದು ಉಪದೇಶಿಸಿದ್ದಾರೆ. ಇದರ ಅಭಿಪ್ರಾಯವು ನಾಮರೂಪ ಮುಂತಾದ ಅವಿದ್ಯೆಗಳೆಲ್ಲವನ್ನೂ ಕಳೆದುಳಿದುದೇ ಬ್ರಹ್ಮವೆಂದು.

ಬ್ರಹ್ಮದ ಸ್ವಭಾವವನ್ನರಿತು ಪರಿಪೂರ್ಣತೆ ಅಥವಾ ಮುಕ್ತಿಯನ್ನು ಪಡೆ. ದೇಹಿಯಲ್ಲವೆಂದು ನೀನೇ ಯೋಚಿಸು. ಶ್ರೇಷ್ಠಾತ್ಮನಲ್ಲಿ ನೀನು ಐಕ್ಯವಾಗುವುದರ ಮೂಲಕ ಸರ್ವವ್ಯಾಪಿಯಾದ ನಿನ್ನ ಆತ್ಮದ ನಿತ್ಯಾನಂದ ಮತ್ತು ಉತ್ಕೃಷ್ಟವಾದ ಶಾಂತಿಯನ್ನು ಅನುಭವಿಸು.

"ಸ್ವಾಮಿ, ಬ್ರಹ್ಮಕ್ಕೆ ರೂಪವಿಲ್ಲವು. ಇನ್ನು ಬ್ರಹ್ಮಾಕಾರ ವೃತ್ತಿಯನ್ನು ಹೇಗೆ ಹೇಳುವಿರಿ?" "ಹಾಗೆಂದರೆ ಮಗುವೇ, ಮಾಯಿಕ ವಸ್ತುಗಳಂತೆ ಬ್ರಹ್ಮನಿಗೆ ರೂಪವಿಲ್ಲವು. ಅವನ ಸ್ವರೂಪವೂ ಸಚ್ಚಿದಾನಂದವೇ. ಸತ್ಯಂ, ಜ್ಞಾನಂ, ಅನಂತಂ — ಇವು ಅವನ ರೂಪಗಳು."

ಬಟ್ಟೆಯಿಂದ ಚಿತ್ರಗಳನ್ನು ಹೇಗೆ ಬೇರ್ಪಡಿಸಲು ಅಸಾಧ್ಯವೋ, ಶಿಲೆಯಿಂದ ಶಿಲ್ಪಾಕೃತಿಗಳನ್ನು ಹೇಗೆ ಬೇರ್ಪಡಿಸಲಾರೆಯೋ ಹಾಗೆಯೇ ಬ್ರಹ್ಮದ, ಅಧಿಷ್ಠಾನದ, ಆಧಾರದಿಂದ ನಾಮರೂಪಗಳನ್ನು ನೀನು ಪ್ರತ್ಯೇಕಿಸಲಾರೆ. ಓಲೆಗಳು, ಝುಮುಕಿಗಳು, ಬಂದಿಗಳು, ಬಳೆಗಳು, ಕಂಠಾಭರಣಗಳು ಬಂಗಾರದಲ್ಲಿ ಅಧ್ಯಾಸಮಾಡಲ್ಪಟ್ಟಿವೆ. ಹಾಗೆಯೇ ಈ ತೋರಿಕೆಯ ಎಲ್ಲಾ ನಾಮರೂಪಗಳು ಎಲ್ಲಕ್ಕೂ ಮೂಲ ಅಥವಾ ಆಧಾರಭೂತವಾದ ಬ್ರಹ್ಮದಲ್ಲಿ ಅಧ್ಯಾಸಮಾಡಲ್ಪಟ್ಟಿವೆ.

ಎಲ್ಲ ಭೂತಗಳಲ್ಲಿಯೂ ಆತ್ಮವು ಒಂದೇ ಆಗಿ ಒಂದೇ ಸಮನಾಗಿರುವುದು. ಉಪಾಧಿ ಕಾರಣದಿಂದ, ಅಂತಃಕರಣಗಳಿಂದ ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆಯಾಗಿ ತೋರುವುದು. ಆಕಾಶವು ಒಂದೇ ಮತ್ತು ಅದೇ ಆಗಿರುವುದು. ಆದರೆ ಉಪಾಧಿಗಳಾದ ಮಡಕೆ, ಮೋಡ, ಕೊಠಡಿ ಮುಂತಾದವುಗಳಿಂದ ಅದನ್ನು ಘಟಾಕಾಶ, ಮೇಘಾಕಾಶ, ಮಠಾಕಾಶ ಮುಂತಾಗಿ ಬೇರೆ ಬೇರೆಯಾಗಿ ವ್ಯವಹರಿಸಲ್ಪಡುವುದು. ಉಪಾಧಿಯೆನ್ನಿಸಿದ ಮಡಕೆಯು ಒಡೆದಾಗ ಮಡಕೆಯೊಳಗಿನ ಅವಕಾಶವು ವಿಶ್ವಾಕಾಶದಲ್ಲಿ ಒಂದಾಗುವುದು. ಸಾಧನೆಯ ಮೂಲಕ ಅಂತಃಕರಣವೆಂಬ ಉಪಾಧಿಯು ಹೋದಾಗ ಜೀವನು ಸರ್ವವ್ಯಾಪಿಯಾದ ಆತ್ಮದೊಡನೆ ಒಂದಾಗುವನು.

ಜೀವ ಮತ್ತು ಬ್ರಹ್ಮವು ಒಂದಾಗಲಾರದೆಂದು ಮೂರ್ಖನಾದವನು ಮಾತ್ರ ಹೇಳುವನು. ಅವನು ಹೇಳುವುದೇನೆಂದರೆ ಜೀವನು, ದುಃಖಿಯು, ಬ್ರಹ್ಮನು ದುಃಖಾತೀತನು ಎಂದು. ಇದು ಸರಿಯಲ್ಲವು. ಜೀವನು ದೇಹ

ಮತ್ತು ಮನಸ್ಸುಗಳೊಡನೆ ಒಂದಾಗಿರುವುದರಿಂದ ಕಷ್ಟವನ್ನನುಭವಿಸುವನು. ಜೀವನು ಈ ಲೋಕದ ದುಃಖಗಳನ್ನು ಅನುಭವಿಸಲು ಕಾರಣವೆಂದರೆ ತನ್ನ ಮನಸ್ಸು ಮತ್ತು ದೇಹದೊಡನೆ ಸಂಬಂಧಿಸಿಕೊಂಡಿರುವ ಅಜ್ಞಾನವೇ. ಆತ್ಮಜ್ಞಾನದ ಮೂಲಕ ಯಾವಾಗ ತನ್ನ ದೇಹ ಮತ್ತು ಮನಸ್ಸಿನ ಸಂಬಂಧಗಳನ್ನು ಕಳೆದುಕೊಳ್ಳುವನೋ ಬ್ರಹ್ಮಜ್ಞಾನದ ಮೂಲಕ ಆಶೆಗಳನ್ನೂ, ಹಂಬಲಗಳನ್ನೂ, ಚಿಂತನೆಗಳನ್ನೂ, ಅಹಂಭಾವವನ್ನೂ, ನಾಶಪಡಿಸುವುದರಿಂದ ಜೀವನು ಬ್ರಹ್ಮದಲ್ಲಿ ತಾದಾತ್ಮ್ಯವನ್ನು ಹೊಂದಿದ ಕೂಡಲೇ ಜೀವಭಾವವು ಅದೃಶ್ಯವಾಗುವುದು. ಅವನು ಕೂಡಲೇ ಬ್ರಹ್ಮೈಕ್ಯವನ್ನು ಪಡೆಯುವನು.

ಕಪ್ಪೆಯಚಿಪ್ಪು (mother of pearl) ಕೆಲವರ ತಪ್ಪು ತಿಳುವಳಿಕೆಗೆ ಮಾತ್ರ ತನ್ನ ಸ್ವಭಾವವನ್ನು ಬಿಟ್ಟು ಬೇರೆಯದಾಗಿ ಕಾಣುವುದಿಲ್ಲ. ಆದರೆ ತಿಳಿಯುವವನೇ ಒಂದಕ್ಕಿಂತ ಬೇರೆಯಾದ ಮತ್ತೊಂದನ್ನು ತನ್ನ ಭ್ರಾಂತಿಯಿಂದ ತಿಳಿಯುವನು.

ಪ್ರಾಪಂಚಿಕ ಮನಸ್ಸುಳ್ಳ ದೇಹಾತ್ಮ ಬುದ್ಧಿಯುಳ್ಳ ಅಜ್ಞಾನಿಯು ಒಬ್ಬ ವಿಚಿತ್ರನಾದ ಕೂಲಿ ಅಥವಾ ರೈಲ್ವೆ ಪೋರ್ಟರಿನಂತೆ ತನ್ನ ಭಾರವಾದ ದೇಹವನ್ನು ಹೊತ್ತು ತಿರುಗುತ್ತಿರುವನು.

ಸತ್ಯವಾಗಿ ಮನುಷ್ಯನು ಆತ್ಮವೇ. ಅವನು ಮೂಲತಃ ಶಕ್ತಿಯಾಗಿರುವನು. ತನ್ನ ಹೃದಯದೊಳಗಡಗಿರುವ ಆತ್ಮನನ್ನು ಕಾಣಲು, ನಿತ್ಯಾನಂದವನ್ನು ಪಡೆಯಲು ಮತ್ತು ಆತ್ಮಭಾವದಿಂದ ಮಾನವರಿಗೆ ಸೇವೆ ಸಲ್ಲಿಸಲು ಅವನು ಈ ದೇಹವನ್ನು ಧಾರಣಮಾಡಿರುವನು.

'ಏಕೆ ಅಳುತ್ತಿಯೆ ? ಕಂದ' ನೀನು ಪರಮೋಚ್ಚಸತ್ಯವು. ನೀನು ನಿತ್ಯ ಸುಖವು. ನೀನು ವಿಪರಿಣಾಮವಲ್ಲದ ಅಸ್ತಿತ್ವವು, ಆಧಾರವು (entity). ಮನಸ್ಸು ಮತ್ತು ಇಂದ್ರಿಯಗಳು ಮುಟ್ಟಲಾರದವನು. ನೀನು ಪೂರ್ಣನು, ಅಖಂಡನು ಮತ್ತು ಅಮರನು. ಅದ್ವಿತೀಯವಾದ ಏಕಮಾತ್ರ ಸರ್ವವ್ಯಾಪಕವಾದ ಆತ್ಮನಾಗಿರುವೆ. ಕಾಲ ದೇಶಗಳ ಪರಿಮಿತಿಗೆ ಒಳಪಡದವನು. ನಿನಗೆ ಜನ್ಮ, ಮೃತ್ಯುಗಳಿಲ್ಲವು. ಹಿತಾಹಿತಗಳು ನಿನ್ನನ್ನು ಸ್ಪರ್ಶಿಸಲಾರವು.

ಮೋಕ್ಷವೆಂದರೆ ಜನನ ಮರಣಗಳಿಂದ ಮುಕ್ತವಾದುದು. ಅದು ನಿತ್ಯ ಸುಖದ ಪ್ರಾಪ್ತಿಯು. ಅದರಲ್ಲಿ ಕಾಲವಾಗಲೀ, ದೇಶವಾಗಲೀ ಇಲ್ಲವು,

ಅಥವ ಬಾಹ್ಯಾಭ್ಯಂತರ ಅವಸ್ಥೆಗಳಾಗಲೀ ಇಲ್ಲವು. ನೀನು ಮೋಕ್ಷವನ್ನು ತಪ್ಪದೆ ಪಡೆಯುವೆ. ಮೋಕ್ಷವೇ ನಿನ್ನ ಧ್ಯೇಯವು. 'ನಾನು ಯಾರು ?' ಎಂಬ ವಿಚಾರದಿಂದ ಈ ಪುಟ್ಟ 'ನಾನು' ಅಥವ ಸ್ವಾರ್ಥವನ್ನು ಕೊಲ್ಲು. ನೀನು ಮೋಕ್ಷವನ್ನು ಗಳಿಸಿ ಜಗತ್ತಿನ ಸಾರ್ವಭೌಮನಾಗಿ ಕಂಗೊಳಿಸು. ಈ ಜನ್ಮದಲ್ಲಿಯೇ ನಿನಗೆ ಮೋಕ್ಷವು ಲಭಿಸುವಂತಾಗಲಿ.

ದೇಹಾಧ್ಯಾಸವನ್ನು ಸಂಪೂರ್ಣವಾಗಿ ನಾಶಮಾಡಲು ಬಹಳ ಕಾಲವು ಬೇಕಾಗುವುದು. ನೀನು ಬ್ರಹ್ಮದಲ್ಲಿ ಪೂರ್ಣವಾಗಿ ಸ್ಥಿರಗೊಂಡರೆ ಅಧ್ಯಾಸವು ತಾನಾಗಿಯೇ ಅದೃಶ್ಯವಾಗುವುದು. ಬ್ರಹ್ಮಭಾವನೆಯು ಬೆಳೆದಷ್ಟೂ ದೇಹಾಧ್ಯಾಸವು ಕ್ಷೀಣಿಸುವುದು. ಆದುದರಿಂದ ನಿರಂತರ ಬ್ರಹ್ಮಚಿಂತನೆಯಿಂದ ದಿನವೂ ಬ್ರಹ್ಮಭಾವನೆಯನ್ನು ಬಲಪಡಿಸಿರಿ.



# 11

# ವೇದಾಂತ

## ೧. ವೇದಾಂತ ದರ್ಶನ

ವೇದಾಂತವು ತತ್ವಶಾಸ್ತ್ರಪದ್ಧತಿಗಳಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಮಾನವನು ತತ್ವದರ್ಶನದ ಪರ್ಯಾಲೋಚನೆಯಲ್ಲಿ ಉತ್ತುಂಗ ಶಿಖರವನ್ನು ಮುಟ್ಟಿದ್ದಾನೆ. ಅದು ನಿಜವಾಗಿಯೂ ಒಂದು ಅಪೂರ್ವವಾದ ಚಿಂತನ ಪದ್ಧತಿಯು. ಅದರ ಮೂಲತತ್ವಗಳನ್ನು ಅರಿತುಕೊಳ್ಳಲು ಬಹುಸೂಕ್ಷ್ಮ ಮತ್ತು ಚುರುಕಾದ ಬುದ್ಧಿಶಕ್ತಿಯನ್ನು ಅಪೇಕ್ಷಿಸುವುದು. ಅದರ ತೀರ್ಮಾನಗಳ ಧೈರ್ಯದಲ್ಲಿ ಅದು ಅಭೂತಪೂರ್ವವಾದುದು. ಅದು ಎಲ್ಲ ಶಾಸ್ತ್ರಾಂಧತೆಗಳ, ಮತ್ತು ಮತಾಂಧತೆಗಳ ಛಾಯೆಯಿಂದ ಸಂಪೂರ್ಣವಾಗಿ ಮುಕ್ತವಾದುದು.

**ವೇದಾಂತವು ಯಾವ ಒಂದು ಮತ, ಸಂಪ್ರದಾಯ ಅಥವಾ ಪೂಜಾರೀತಿಯಲ್ಲವು. ಅದೊಂದು ಪರಮಾರ್ಥದ ವಿಜ್ಞಾನವು.** ನೀನು ಅಮೃತನೂ, ಸರ್ವವ್ಯಾಪಿಯೂ, ವಿಶ್ವಾತ್ಮನೂ ಅಥವ ನಿಜವಾಗಿ ಪರಬ್ರಹ್ಮದ ತತ್ವವಾಗಿರುವೆಯೆಂದು ಧೈರ್ಯವಾಗಿ ಘೋಷಿಸುವುದು.

ವೇದಾಂತವು ಬಹಳ ಪ್ರಾಯೋಗಿಕವಾದುದು. ಅದು ಅಸಾಧ್ಯವಾದ ಆದರ್ಶವನ್ನು ಎಂದಿಗೂ ಉಪದೇಶಿಸದು. ವಾಮದೇವ, ಜಡಭರತ, ಶಂಕರ ಮತ್ತು ಅನೇಕರು ಸಾಕ್ಷಾತ್ಕರಿಸಿಕೊಂಡ, ವೇದಾಂತಗಳು ಉಪದೇಶಿಸಿದ ಸತ್ಯವನ್ನೇ ಸಂಕಲ್ಪಿಸಿದರೆ, ನೀನೂ ಕಂಡುಕೊಳ್ಳಬಹುದು. ಆದರೆ ಆದಕ್ಕೆ ಕ್ರಮ ತಪ್ಪದ ಅಭ್ಯಾಸವು ಅವಶ್ಯಕವು. ನೀನು ಶ್ರುತಿಗಳಲ್ಲಿಯೂ ಗುರುವಿನ ಉಪದೇಶಗಳಲ್ಲಿಯೂ, ನಿಶ್ಚಲವಾದ ನಂಬಿಕೆಯನ್ನು ಹೊಂದಿರಬೇಕು. **ಮೇಲಾಗಿ ಆತ್ಮವಿಶ್ವಾಸವುಳ್ಳವನಾಗಿರಬೇಕು.**

ವೇದಾಂತ ಅಥವಾ ಆತ್ಮಜ್ಞಾನವು ಸನ್ಯಾಸಿಗಳ ಅಥವ ಹಿಮಾಲಯದ ಗುಹೆಗಳಲ್ಲಿ ಅಥವ ಅರಣ್ಯಗಳಲ್ಲಿ ಏಕಾಂತವಾಗಿ ವಾಸಿಸುವವರ ಸ್ವತ್ತಲ್ಲವು. ಉಪನಿಷತ್ತುಗಳನ್ನು ಓದಿದರೆ ಅನೇಕ ಕ್ಷತ್ರಿಯರು ತಮ್ಮ ಕಾರ್ಯ ಗೌರವ ಗಳೊಡನೆ ಬ್ರಹ್ಮಜ್ಞಾನವನ್ನು ಹೊಂದಿದ್ದರೆಂಬುದನ್ನು ತಿಳಿದುಕೊಳ್ಳುವೆ. ಅವರು ಬ್ರಾಹ್ಮಣರಿಗೂ ತಿಳುವಳಿಕೆಯನ್ನು ನೀಡಿದ್ದರು.

ವೇದಾಂತವು ಉಪನಿಷದ್ಧರ್ಮವು. ಅದು ಎಲ್ಲರ ಆಸ್ತಿಯು. ಯಾವ ಮತದೊಡನೆಯೂ ಅದಕ್ಕೆ ಕಲಹವಿಲ್ಲವು. ಅದು ವಿಶ್ವಧರ್ಮಗಳನ್ನು ಬೋಧಿ ಸುವುದು ಮತ್ತು ಜಗತ್ತಿನ ಎಲ್ಲ ಧರ್ಮಗಳ ಉಗಮಸ್ಥಾನವು. ಅದು ಸಮಾಜ ದಲ್ಲಿನ ಭೇದಗಳನ್ನು ತೊಡೆದುಹಾಕುವ ದೊಡ್ಡ ದರ್ಶನವು. ಅದು ಎಲ್ಲರನ್ನೂ ಒಂದುಗೂಡಿಸುವುದು ಮತ್ತು ಎಲ್ಲರಿಗೂ ಸಮಾನಾವಕಾಶವನ್ನು ನೀಡುವುದು. ವೈರಾಗ್ಯ ಮಾರ್ಗದಲ್ಲಿರುವ ತ್ಯಾಗಿಗಳೂ, ನಿಜವಾದ ಸಾಧಕರೂ ಆದವರು ಮಾತ್ರ ವೇದಾಂತವನ್ನು ಅನುಷ್ಠಾನ ಮಾಡಬಲ್ಲರು. ತೀವ್ರ ವೈರಾಗ್ಯವಿಲ್ಲದ, ಇನ್ನೂ ಪತ್ನಿ, ಪುತ್ರರು ಮತ್ತು ಆಸ್ತಿಗೆ ಅಂಟಿಕೊಂಡಿರುವ ದುರ್ಬಲ ರೀತಿಯ ವೈರಾಗ್ಯವನ್ನು ಹೊಂದಿರುವ ಗೃಹಸ್ಥರು ನಿಸ್ವಾರ್ಥ ಸೇವೆಯನ್ನು ಮತ್ತು ಭಕ್ತಿಮಾರ್ಗವನ್ನು ಕೂಡಿಸಿಕೊಂಡು ಅಧ್ಯಾಸಮಾಡುವುದು ಉತ್ತಮವು.

ವೇದಾಂತವೆಂದರೆ ಗುಲಾಮಗಿರಿಯಲ್ಲವು. ಅದು ಎಲ್ಲರಿಗೂ ಸ್ವಾತಂತ್ರ್ಯ ವನ್ನು ನೀಡುವುದು. ಎಲ್ಲರನ್ನೂ ಆಲಂಗಿಸಿಕೊಳ್ಳುವುದು. ಅದು ಉಪನಿಷತ್ತಿನ ಧರ್ಮವು, ಪರಮಹಂಸ ಸನ್ಯಾಸಿಗಳ ಧರ್ಮವು.

ವೇದಾಂತದ ಸಮಸ್ತ ಸಾರವೆಂದರೆ "ನಾನು ಸರ್ವವ್ಯಾಪಿಯಾದ, ಸ್ವಯಂ ಪ್ರಕಾಶನಾದ, ಅಮರನಾದ, ಅವ್ಯಯನಾದ, ಅಖಂಡನಾದ ಸಚ್ಚಿದಾನಂದ ಬ್ರಹ್ಮವು." ಶಂಕರರ ವೇದಾಂತ ತತ್ವಗಳ ಪ್ರತಿಪಾದನೆಯು ಈ ಶ್ಲೋಕಾಭಿಪ್ರಾಯದಲ್ಲಿ ಸುಂದರವಾಗಿ ನಿರೂಪಿಸಲಾಗಿದೆ. "ಕೋಟ್ಯಾಂತರ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದನ್ನು ನಾನು ಅರ್ಧ ಶ್ಲೋಕ ದಲ್ಲಿ ಹೇಳುವೆನು : ಬ್ರಹ್ಮವೊಂದೇ ಸತ್ಯವು, ಜಗತ್ತು ಮಿಥ್ಯವು, ಜೀವನು ಬ್ರಹ್ಮವಲ್ಲದೆ ಬೇರೆ ಏನೂ ಅಲ್ಲವು."

ಆತ್ಮವು ಯೋಗ್ಯನಾದ ಸಾಧಕನಿಗೆ ಅತ್ಯಮೂಲ್ಯವಾದ ಭಂಡಾರವು. ಅಧ್ಯಾತ್ಮ ಸಂಪತ್ತು ಅಕ್ಷಯವಾದ ಸಂಪತ್ತು. ಭಗವಾನ್ ಏಸುವು ಹೇಳಿರುವು

ದೇನೆಂದರೆ, " ಪರಲೋಕರಾಜ್ಯವು ಹೊಲದಲ್ಲಿ ಹೂಳಿಟ್ಟ ದ್ರವ್ಯಕ್ಕೆ ಹೋಲಿಕೆಯಾಗಿದೆ. ಒಬ್ಬನು ಅದನ್ನು ಕಂಡುಕೊಂಡು, ಮುಚ್ಚಿಬಿಟ್ಟು ಅದರಿಂದಾದ ಸಂತೋಷದಿಂದ ತನ್ನ ಬದುಕನ್ನೆಲ್ಲಾ ಮಾರಿ ಆ ಹೊಲವನ್ನು ಕೊಂಡುಕೊಂಡನು. " (ಮ್ಯಾಥ್ಯೂ ೧೩–೪೪).

ಕರ್ಮದಿಂದ ಸಂಚಿತವಾದ ಫಲಗಳೆಲ್ಲವೂ ನಾಶವಾಗುವುದು. ಆದ್ದರಿಂದ ವಿವೇಕಿಯಾದವನು ಕರ್ಮಗಳ ಸಂಗವನ್ನು ಬಿಟ್ಟುಬಿಡುವನು. ಆತ್ಮಸಾಕ್ಷಾತ್ಕಾರವನ್ನು ಮಾತ್ರ ಪಡೆಯಲು ಅವನು ಹಂಬಲಿಸುವನು. ಮೈತ್ರೇಯಿಯು ಮಹರ್ಷಿಯಾಜ್ಞವಲ್ಕ್ಯರ ಪಾದಕಮಲಗಳ ಬಳಿ ಕುಳಿತು ಆತ್ಮವು ಅವಿನಾಶಿಯು, ಅಸಂಗನು ಮತ್ತು ದುಃಖ ಅಥವಾ ನಾಶಕ್ಕೆ ಅಧೀನನಲ್ಲವು ಎಂಬುದನ್ನು ಕಲಿತುಕೊಂಡಳು. ಇದೇ ನಿಜವಾದ ವಿದ್ಯೆಯು.

ಸುಪ್ರಸಿದ್ಧ ವಿಜ್ಞಾನಿಗಳಾದ ಸರ್ ಜೆ. ಸಿ. ಬೋಸ್ ಪ್ರಯೋಗಗಳ ಮೂಲಕ ಸಿದ್ಧಪಡಿಸಿರುವುದೆಂದರೆ ಲೋಹಗಳೂ ಮತ್ತು ಸಸ್ಯಗಳೂ ನರಮಂಡಲವನ್ನು ಹೊಂದಿವೆ, ರಕ್ತಪರಿಚಲನೆ ಮತ್ತು ಸಂವೇದನೆಗಳನ್ನೂ ಪಡೆದಿವೆ. ಒಂದು ಸಸ್ಯಕ್ಕೆ ಔಷಧಿ ಕುಡಿಸಬಹುದು, ವಿಷ ತುಂಬಬಹುದು, ಸಂತೋಷಪಡುವಂತೆ, ಕುಗ್ಗುವಂತೆ, ಆಯಾಸಗೊಂಡಂತೆ ಮಾಡಬಹುದು ಎಂದು ಅವರು ಹೇಳಿದ್ದಾರೆ. ಒಂದು ತುಂಡು ಚಿನ್ನವು ವೈಜ್ಞಾನಿಕ ಸಂಶೋಧನೆಗಳಿಗೆ ತಕ್ಕ ಪ್ರತಿಕ್ರಿಯೆಯನ್ನು ತೋರುವುದು. ಅದನ್ನು ಸಣ್ಣ ಸಣ್ಣ ಭಾಗಗಳಾಗಿ ಮಾಡಿದರೆ ಪ್ರತಿಯೊಂದು ಭಾಗವೂ ಪ್ರತಿಕ್ರಿಯೆಯನ್ನು ತೋರಿಸುವುದು. ಆದ್ದರಿಂದ ಸಸ್ಯಗಳಿಗೂ ಮತ್ತು ಪ್ರಾಣಿಗಳಿಗೂ ನಡುವೆ ಗಮನಾರ್ಹವಾದ ಭೇದವಿಲ್ಲವು. ಅವರ ಅದ್ಭುತವಾದ ಸಂಶೋಧನೆಗಳು ಪಾಶ್ಚಾತ್ಯ ವಿಜ್ಞಾನಿಗಳ ಕಣ್ಣುಗಳನ್ನು ತೆರೆಸಿವೆ. ಅವರು ಸಿದ್ಧಾಂತಮಾಡಿರುವ ಜೀವದ ಐಕ್ಯತೆ ಮತ್ತು ಜ್ಞಾನವು, ವೇದಾಂತ ತತ್ವಗಳನ್ನು ದೃಢೀಕರಿಸಿವೆ.

ನೀನು ಸಿಂಹವಾಗಿದ್ದರೂ ಸಣ್ಣಕುರಿಯೆಂದು ಬಹುಕಾಲದಿಂದ ಭಾವಬದ್ಧನಾಗಿದ್ದೆ. ಈಗ ಎದ್ದೇಳು. ನಿನ್ನ ಹಳೆಯ ಕಟ್ಟುಗಳನ್ನು ಕಳಚಿ ವೇದಾಂತಕೇಸರಿಯಾಗಿ ಎದ್ದುನಿಂತು ಓಂ, ಓಂ, ಓಂ ಎಂದು ಗರ್ಜಿಸು.

ಕೆಲವು ಬಾರಿ ನೀನು ಸತ್ತಂತೆಯು, ನಿನ್ನ ಬಂಧುಗಳು ಅಳುತ್ತಿರುವಂತೆಯೂ ಸ್ವಪ್ನಗಳನ್ನು ಕಾಣುವೆ. ಆ ಒಂದು ಕಾಲ್ಪನಿಕ ಸಾವಿನ ಸ್ಥಿತಿ

ಯಲ್ಲಿ ನೀನು ಬಂಧುಗಳನ್ನು ನೋಡುವೆ ಮತ್ತು ಅಳುವ ಧ್ವನಿಯನ್ನು ಕೇಳುವೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಈ ತೋರಿಕೆಯ ಸಾವಿನ ನಂತರವೂ ಜೀವವು ಸತ್ಯವಾಗಿ ಪಟ್ಟು ಹಿಡಿದು ನಿಲ್ಲುವುದು. ಈ ಭೌತ ದೇಹದ ಮರಣಾನಂತರವೂ ನೀನು ಇರುವೆ. ಆ ಇರುವಿಕೆಯೇ ಆತ್ಮ ಅಥವ ಮಹತ್ತಾದ ' ನಾನು '.

' ನಾನು ಇರುವೆನು ' ಎಂದು ನೀನು ಭಾವಿಸುವೆ. ದೇವರು ಇರುವ ನೆಂಬುವದಕ್ಕೆ ಇದೊಂದೇ ಆಧಾರವು ಸಾಕು. ಇರುವಿಕೆಯು ಬ್ರಹ್ಮವು ಅಥವ ದೇವರು. ನೀನು ಬಯಸಿದ ವಸ್ತುಗಳು, ಎಲ್ಲ ಬಗೆಯ ಸುಖಸಾಧನಗಳನ್ನೂ ತಿರಸ್ಕರಿಸುತ್ತಿರುವಂತೆ ನೀನು ಭಾವಿಸುವೆಯಾದರೂ ನಿನಗೆ ಪೂರ್ಣತೆಯ ಪರಿಜ್ಞಾನವಿಲ್ಲವು. ಪರಿಪೂರ್ಣನಾದ ಪರಮಾತ್ಮನನ್ನು ನಿನ್ನೊಡನೆ ಕೂಡಿಸಿ ಕೊಂಡರೆ ನೀನು ಪರಿಪೂರ್ಣತೆಯನ್ನು ಹೊಂದುವೆ. ದುಷ್ಕೃತ್ಯವನ್ನು ಮಾಡಿದಾಗ ನಿನಗೆ ಭಯವಾಗುವುದು, ನಿನ್ನ ಅಂತಃಕರಣವು ನಿನ್ನನ್ನು ಚುಚ್ಚುವುದು. ಇದರಿಂದ ದೇವರು ಇರುವನೆಂದು ಸಿದ್ಧವಾಗುವುದು ಮತ್ತು ನಿನ್ನ ಎಲ್ಲ ಚಿಂತನೆಗಳಿಗೂ ಸಾಕ್ಷಿಯಾಗಿರುವನೆಂದೂ ಸಿದ್ಧವಾಗುವುದು.

ಪಾಶ್ಚಾತ್ಯ ತತ್ವಶಾಸ್ತ್ರಜ್ಞರ ವಿಶ್ವಾತ್ಮನೇ ವೇದಾಂತಿಗಳ ಆತ್ಮವು ಅಥವಾ ಉಪನಿಷತ್ತುಗಳ ಬ್ರಹ್ಮವು. ಜೀವಾತ್ಮಗಳ ಆಧಾರನಾದ ಪರಮಾತ್ಮನನ್ನೇ ಪಾಶ್ಚಾತ್ಯರು (Over Soul) ವಿಶ್ವಾತ್ಮ ಎಂದು ಕರೆಯುವರು. ಅದು ಸ್ಪಿನೋಜಾನ ತಿರುಳು ಅಥವಾ ಕ್ಯಾಂಟನ ತಾನೇ ತಾನಾಗಿರುವ ವಸ್ತುವು. ವೇದಾಂತದ ಸಾರವು. ಪಾಶ್ಚಿಮಾತ್ಯ ತತ್ವಜ್ಞಾನಿಗಳ ಮನಸ್ಸಿನಲ್ಲಿ ನಿಧಾನವಾಗಿ ಇಳಿದಿರುವುದು. ಅವರು ದೇಹ ಮತ್ತು ಮನಸ್ಸಿಗಿಂತ ಪ್ರತ್ಯೇಕವಾದ ಅಮೃತಾತ್ಮನನ್ನು ಅಥವಾ ಅದ್ವಿತೀಯವಾದ ನಿತ್ಯತತ್ವ ವೊಂದನ್ನು ಒಪ್ಪಿಕೊಂಡಿರುವರು.

ಒಂದು ಊರಿನ ನಿವಾಸಿಯು ಮಹಾರಾಜನನ್ನು ಕಾಣದೇ ಇದ್ದರೂ ಆ ರಾಜ್ಯದಲ್ಲೆಲ್ಲಾ ಕ್ರಮವಾಗಿ ನಡೆಯುತ್ತಿರುವ ಆಡಳಿತಕ್ಕೆ ಕಾರಣನಾದ ಒಬ್ಬ ಮಹಾರಾಜನು ಇರಲೇಬೇಕೆಂದು ಅವನು ತಿಳಿದಿರುವನು. ಹೀಗೆಯೇ ನೀನು ದೇವರನ್ನು ಎದುರುಬದುರಾಗಿ ಕಾಣದಿದ್ದರೂ ಈ ವಿಶ್ವದ ಸುವ್ಯವಸ್ಥಿತವಾದ ಆಡಳಿತಕ್ಕೆ ಪರಮಾತ್ಮನು ಇದ್ದೇತೀರಬೇಕು ಎಂಬುದನ್ನು ಅರಿತುಕೊಳ್ಳಬಲ್ಲೆ.

ಮಣ್ಣಿನಿಂದ ಆಟದ ವಸ್ತುವಿನಂತಿರುವ, ನಾನಾ ರೀತಿಗಳಲ್ಲಿ ನರ್ತಿಸು ತ್ತಿರುವ ಸ್ಥೂಲದೇಹವನ್ನು ಮಾಡುತ್ತಿರುವವರು ಯಾರು ? ಈ ದೇಹದ ಸೂತ್ರಧಾರನು ಯಾರು ? ಅವನನ್ನು ಹುಡುಕಿ ನೋಡು.

ಮನಸ್ಸು, ಮಾತು, ಶ್ರೋತ್ರುಗಳು, ಕಣ್ಣುಗಳು ಮತ್ತು ಇತರ ಅಂಗಗಳು ನಿದ್ರಿಸುತ್ತಿರುವಾಗ ಪ್ರಾಣವು ಮಾತ್ರ ಎಚ್ಚರಗೊಂಡಿರುವುದು. ಅದು ಬ್ರಹ್ಮವು. ಈ ಪ್ರಾಣದ ಸ್ಪಂದನಗಳನ್ನುಂಟುಮಾಡುವವರು ಯಾರು ? ಈ ಪ್ರಾಣಕ್ಕೆ ಆಧಾರನು ಯಾರು ? ಎಲ್ಲಕ್ಕೂ ಕಾರಣನಾದ ಬ್ರಹ್ಮನೇ ಅವನು.

ಈ ಬಾಹ್ಯ ತೋರಿಕೆಯು ಪ್ರತಿಕ್ಷಣದಲ್ಲಿಯೂ ಬದಲಾಯಿಸುತ್ತಿದ್ದರೂ ಅಂತಿಮ ಸತ್ಯವು ಎಲ್ಲದರೊಡನೆ ಹೊಂದಿಕೊಂಡಿದ್ದರೂ ತಾನು ಮಾತ್ರ ಬದಲಾಯಿಸದೇ ಇರುವುದು.

ತೈತ್ತಿರೀಯ ಉಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿ ಹೀಗಿರುವುದು, "ಆತ್ಮನಿಂದ ಆಕಾಶವುಂಟಾಯಿತು, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಆಪವೂ, ಆಪದಿಂದ ಪೃಥ್ವಿಯೂ, ಪೃಥ್ವಿಯಿಂದ ಔಷಧಿಗಳೂ, ಔಷಧಿಗಳಿಂದ ಅನ್ನವೂ, ಅನ್ನದಿಂದ ಮನುಷ್ಯನೂ ಮತ್ತು ಈ ಮನುಷ್ಯನು ಅನ್ನದ ಸಾರದಿಂದಾಗಿರುವನು" (ಅಧ್ಯಾಯ ೧೧-೧).

ಈ ಸಂಸಾರವು ಆದಿ ಇಲ್ಲದ್ದು. ಕರ್ಮವೂ ಆದಿಯಿಲ್ಲದ್ದು. ಯಾವುದಕ್ಕೆ ಆದಿ ಇಲ್ಲವೋ ಅದಕ್ಕೆ ಅಂತ್ಯವಿಲ್ಲವು. ಇದು ವಿಶ್ವಮಾನ್ಯವಾದ ನಿಯಮವು. ಆದ್ದರಿಂದ ಈ ಸಂಸಾರಕ್ಕೆ ಅಂತ್ಯವಿಲ್ಲವು. ಆತ್ಮಜ್ಞಾನವನ್ನು ಪಡೆದು ಕೊಂಡಿರುವ ಋಷಿಗೆ ಮಾತ್ರ ಅದು ನಾಶವಾಗುವುದು.

ನೀನು ಇಂದ್ರಿಯಗಳಿಂದ ಮೋಸಹೋಗಿರುವೆ, ಅಥವಾ ಭ್ರಾಂತ ನಾಗಿರುವೆ. ಯಾವುದು ಬದಲಾಯಿಸುತ್ತಿರುವುದೊ ಮತ್ತು ನಾಶವಾಗು ತ್ತಿರುವುದೋ ಅದು ಎಂದಿಗೂ ನಿಜವಾಗಲಾರದು. ನಿಜವಾಗಿಯೂ ಮನಸ್ಸಾಗಲೀ, ದ್ರವ್ಯವಾಗಲೀ ಇಲ್ಲವು, ಜಗತ್ತಾಗಲೀ, ಸೃಷ್ಟಿಯಾಗಲೀ ಇಲ್ಲವು. ಬ್ರಹ್ಮವೊಂದೇ ತನ್ನ ನಿರ್ಮಲವಾದ ಮಹಿಮೆಯಿಂದ ಪ್ರಕಾಶಿಸು ವುದು. ಇದೇ ಪರಮಾರ್ಥ ಸತ್ಯವು.

ಬ್ರಹ್ಮದ ಅಪರೋಕ್ಷ ಅಂತರ್‌ಜ್ಞಾನವು ಮಾತ್ರ ನಮ್ಮನ್ನು ಜನನ ಮರಣ ಪ್ರವಾಹದ ಸುಳಿಯಿಂದ ತಪ್ಪಿಸಬಲ್ಲದು. ಅದಕ್ಕಿಂತಲೂ ಬೇರೆಯಾದ

ಮಾರ್ಗವಿಲ್ಲವು. ಶ್ರುತಿಗಳು ಸುಸ್ಪಷ್ಟವಾಗಿ ಘೋಷಿಸುವುದೇನೆಂದರೆ :

"ವೇದಾಹಮೇತಂ ಪುರುಷಂ ಮಹಾಂತಂ
ಆದಿತ್ಯ ವರ್ಣಂ ತಮಸಃ ಪರಸ್ತಾತ್
ತಮೇವ ವಿದಿತ್ವಾತಿಮೃತ್ಯುಮೇತಿ
ನಾನ್ಯಃ ಪಂಥಾ ವಿದ್ಯತೇ ಅಯನಾಯ"

"ಆದಿತ್ಯನಂತೆ ಪ್ರಕಾಶಮಯನೂ, ಅಜ್ಞಾನಾಂಧಕಾರದ ಆಚೆ ಇರುವವನೂ ಆದ ಆ ಪರಮ ಪುರುಷನನ್ನು ನಾನು ಅರಿತಿರುವೆನು. ಅವನನ್ನು ಅರಿಯುವುದರಿಂದಲೇ ಅಮರತೆಯು ದೊರೆಯುವುದು. ನಿತ್ಯ ಸುಖಕ್ಕೆ ಅದಕ್ಕಿಂತ ಬೇರೆಯಾದ ಮಾರ್ಗವಿಲ್ಲವು." **(ಶ್ವೇತಾಶ್ವತರ ಉಪನಿಷತ್ತು : III–೮).**

ಸತ್ಯವಾದ ಬ್ರಹ್ಮವು ಮನುಷ್ಯನಿಂದ ಅರಿಯಲ್ಪಡುವದು. ಅನೇಕರು ಆತ್ಮಸಾಕ್ಷಾತ್ಕಾರವನ್ನು ಪಡೆದಿರುವರು. ನಿರ್ವಿಕಲ್ಪ ಸಮಾಧಿಯನ್ನು ಹಲವರು ಅನುಭವಿಸಿರುವರು. ಶ್ರೀ ಶಂಕರ, ಶ್ರೀ ದತ್ತಾತ್ರೇಯ, ಮನ್ಸೂರ್, ಷ್ಯಾಮ್ಸ್ ತ್ಯಾಬ್ರೀಜ್, ಭಗವಾನ್ ಏಸು, ಭಗವಾನ್ ಬುದ್ಧನು ಅಪರೋಕ್ಷಾನುಭೂತಿಯನ್ನು, ವಿರಾಟ್‌ದರ್ಶನವನ್ನು, ಸತ್ಯಸಾಕ್ಷಾತ್ಕಾರವನ್ನು ನೇರವಾಗಿ ಪಡೆದ ಮಹಾತ್ಮರು. ಆದರೆ, ಅದನ್ನು ಅರಿತವನು ಇತರರಿಗೆ ಸಾಧನಾಪೇಕ್ಷೆಯಿಂದ, ಮಧ್ಯವರ್ತಿಯ ಅವಶ್ಯಕತೆಯಿಂದ ತಿಳಿಸಲಾರನು. ಪಂಚೇಂದ್ರಿಯಗಳಿಂದ ಪಡೆಯುವ ಎಲ್ಲರಿಗೂ ಸಾಮಾನ್ಯವಾದ ಅನುಭವಗಳನ್ನೇ ಇತರರಿಗೆ ತಿಳಿಸಲಾರೆವು. ಎಂದೂ ರುಚಿ ನೋಡದವನಿಗೆ ನೀನು ಕಬ್ಬಿನ ರುಚಿಯನ್ನು ಪರಿಚಯಮಾಡಿಕೊಡಲಾರೆ. ಹುಟ್ಟುಕುರುಡನಿಗೆ ಯಾವ ರೀತಿಯಿಂದಲೂ ಬಣ್ಣದ ಭಾವನೆಯು ಬರುವಂತೆ ಮಾಡಲಾರೆ. ಎಲ್ಲ ಶಿಕ್ಷಕರೂ ತಮ್ಮ ಶಿಷ್ಯರಿಗೆ ಸತ್ಯವನ್ನು ತಿಳಿಯುವ ರೀತಿಯನ್ನು ಅಥವಾ ಅಂತಃಶಕ್ತಿಯನ್ನು ಬಿಡಿಸಿಕೊಳ್ಳುವ ಉಪಾಯವನ್ನು ಮಾತ್ರ ತಿಳಿಸುವರು.

ಅನಾದಿಕಾಲದಿಂದಲೂ ವೇದವು ಹೇಳುತ್ತಿರುವುದು "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂದರೆ ಆತ್ಮನೊಬ್ಬನೇ ಇರುವುದು. ಋಷಿಗಳು ಅದನ್ನೇ ಅನೇಕ ಹೆಸರುಗಳಿಂದ ಕರೆಯುವರು. (ಋಗ್ವೇದ I, ೧೬೪–೪೬). ದೇವರು ಬ್ರಹ್ಮ, ಅಲ್ಲಾಹ್, ಈಶ್ವರ, ಯಹೋವ, ಅಹೂರ್‌ಮಜ್ದಾ ಎಲ್ಲವೂ ಒಬ್ಬನೇ. ಆ ಪರಮಾತ್ಮನಿಗೆ, ಸರ್ವದರ ಸಾರನಾದವನಿಗೆ, ಅವ್ಯಯನಾದ

ಆನಂದರಾಶಿಗೆ ಋಷಿಮುನಿಗಳು ತಮ್ಮ ಬುದ್ಧಿಗಳಿಗೆ ಗೋಚರವಾದ ನಾನಾ ರೀತಿಯಲ್ಲಿ ವರ್ಣಿಸಿರುವ ಒಬ್ಬ ಪರಮಾತ್ಮನಿಗೆ ನನ್ನ ನಮಸ್ಕಾರಗಳನ್ನು ಅರ್ಪಿಸುವೆನು.

ಅದನ್ನು ಈ ಯಾವ ಹೆಸರಿನಿಂದಲಾದರೂ, ವಿಶ್ರಾಂತಿ, ಶಾಂತಿ, ಸಮಾಧಾನ, ಪರಿಪೂರ್ಣತೆ, ಸ್ವಾತಂತ್ರ್ಯ, ಪೂರ್ಣಜೀವನ, ನಿರ್ವಾಣ, ನಿರ್ವಿಕಲ್ಪ ಸಮಾಧಿ, ಸಹಜಾವಸ್ಥೆ, ಕೈವಲ್ಯ ಅಥವಾ ಮೋಕ್ಷವು ಎಂದು ಕರೆಯಿರಿ. ಈ ನಶ್ವರವಾದ, ಚಂಚಲವಾದ ವಸ್ತುಗಳು ನೆಮ್ಮದಿಯನ್ನು ಕೊಡದಿರುವುದರಿಂದ ನಿಮ್ಮೆಲ್ಲ ಚಟುವಟಿಕೆಗಳೂ ಆತ್ಮಪ್ರಾಪ್ತಿಗಾಗಿ ನಡೆಯಲಿ. ಹೆಜ್ಜೆಯ ಪ್ರತಿಕ್ಷಣವೂ ಸಚ್ಚಿದಾನಂದ ಬ್ರಹ್ಮದ ಕಡೆಗೆ ಅಥವಾ ಬ್ರಹ್ಮದ ದಿಶೆಯಲ್ಲಿ ಇರುವುದು. ನೀಚನೂ, ದರೋಡೆಕಾರನೂ ಸಹ ತನ್ನದೇ ಆದ ವಕ್ರವಕ್ರವಾದ ಬಳಸಿನ ಮಾರ್ಗವನ್ನು ಹಿಡಿದರೂ ಅವನು ಬ್ರಹ್ಮದ ಶಾಶ್ವತ ನಗರಿಯ ಕಡೆಗೇ ನಡೆಯುತ್ತಿರುವನು.

ಬ್ರಹ್ಮವು ಪ್ರಜ್ಞಾನ ಘನವು. ಪ್ರಜ್ಞಾನವು ಮಾತ್ರ ಸತ್ಯವು. ಇತರ ವಸ್ತುಗಳು ನಶ್ವರವಾಗಿದ್ದರೂ ವ್ಯವಹಾರ ಸತ್ಯವು.

ಕಾಲವು ಸಮಯದ ಪ್ರವಾಹವು. ಕಾಲವು ಭಗವಂತನ ಶಕ್ತಿಯು. ಆತ್ಮ ಅಥವ ಬ್ರಹ್ಮವು ಕಾಲಾತೀತವು. ಕಾಲದಲ್ಲಿರುವ ದೇಶ, ಕಾರಣಗಳಿಂದ ಬಂಧಿಸಲ್ಪಟ್ಟ ಎಲ್ಲ ವಸ್ತುಗಳೂ ಅಸ್ಥಿರವು. ಕಾಲಕ್ಕೆ ಮೀರಿದುದು ಶಾಶ್ವತವು, ಅವಿನಾಶಿಯು.

ಬ್ರಹ್ಮವು ವಿಶೋಕವು. ಜೀವನು ಶೋಕಪೂರ್ಣನು. ಬ್ರಹ್ಮನು ನಿತ್ಯಮುಕ್ತನು. ಜೀವನು ಬದ್ಧನು. ಬ್ರಹ್ಮನು ಸರ್ವಶಕ್ತಿವಂತನು, ಸರ್ವಜ್ಞನು, ಅಪರಿಚ್ಛಿನ್ನ ಮತ್ತು ಸರ್ವವ್ಯಾಪಿಯು, ವಿಭುವು. ಜೀವನು ಅಲ್ಪಜ್ಞನು, ಅಲ್ಪಶಕ್ತನು, ಪರಿಚ್ಛಿನ್ನನ್ನು ಮತ್ತು ಏಕದೇಶಿಕನು. ಎಲ್ಲ ಪ್ರಾಣಿಗಳ ಹೃದಯದಲ್ಲಿ ಬೆಳಗುವ ಪರಮಪುರುಷನೇ ಬ್ರಹ್ಮನು. ಅವನು ಗುರುಗಳ ಗುರುವು, ದೇವರ ದೇವನು, ಸ್ವಾಮಿಗಳ ಸ್ವಾಮಿಯು, ಸೂರ್ಯರ ಸೂರ್ಯನು, ಜ್ಯೋತಿಗಳ ಜ್ಯೋತಿಯು. ಅವನು ಅಪರಿಮಿತನಾದ "ನಾನು", ಜ್ಞಾನ ಮತ್ತು ಆನಂದದ ಸಾಗರನು. ಆತನು ಸರ್ವಕ್ಕೂ ಮೂಲಾಧಾರನು. ಅವನು ನಿಮ್ಮ ಸತ್ಯವಾದ ಆತ್ಮನು. ಅವನು ಜನ್ಮರಹಿತನು, ಮರಣರಹಿತನು,

ಕಾಲರಹಿತನು, ದೇಶರಹಿತನು, ಕಾರಣರಹಿತನು, ಚಲನ ರಹಿತನು ಮತ್ತು ಪರಿಣಾಮರಹಿತನು.

ನೀನು ಅಮರನಾದ ಆತ್ಮನಾಗಿರುವೆ. ಆ ಆತ್ಮನನ್ನು ಶಸ್ತ್ರಗಳಿಂದ ಅಥವ ಬಾಂಬುಗಳಿಂದ ಬಾಧಿಸಲಾಗುವುದಿಲ್ಲ. ಅವನು ಅಜೇಯನು, ಅಭೇದ್ಯನು, ಅವಿನಾಶಿಯು. ಅಂತರಾತ್ಮದಲ್ಲಿ ನೆಲೆನಿಲ್ಲಿರಿ. ಮೇಲಿನ ತತ್ವಗಳಲ್ಲಿ ನಿಲ್ಲಿರಿ. ದುಃಖ ಅಥವಾ ಭಯಕ್ಕೆ ಕಾರಣವಿಲ್ಲವು. ಧೀರರಾಗಿ. ಸಂತೋಷವಾಗಿರಿ. " ನಾನು ಆ ಪರಮಪುರುಷನೇ ". ಸ್ವಯಂಪ್ರಕಾಶವೂ, ಶಾಶ್ವತವೂ, ಶುದ್ಧವೂ, ಪೂರ್ಣವೂ, ಅಪರಿಚ್ಛಿನ್ನವೂ, ವಿಭುವೂ ಆದ ಆ ಪರಮಪುರುಷನು ನಾನೆಂದು ಯಾರು ತಿಳಿದುಕೊಂಡಿರುವರೋ ಅವರು ಬಂಧನದಿಂದ ಮುಕ್ತರಾಗಿರುವರು. ಯಾರು ಇದನ್ನು ಅರಿತಿಲ್ಲವೋ ಅವರು ಬಂಧನದಲ್ಲಿರುವರು.

ನಿಮ್ಮ ಹೃದಯದಲ್ಲಿ ಅಡಗಿರುವ ಅಮೃತಾತ್ಮನನ್ನು ನೀವು ಅರಿತುಕೊಂಡರೆ ಅವಿದ್ಯಾಗ್ರಂಥಿಗಳಾದ ಕಾಮ, ಕರ್ಮ, ಮತ್ತು ಅವುಗಳ ಕಾರ್ಯಗಳಾದ ಅವಿವೇಕ, ಅಭಿಮಾನ, ಸಂಕಲ್ಪ, ವಿಕಲ್ಪಗಳು, ಕರ್ಮ, ದೇಹ ಮುಂತಾದವು ಕಡಿದುಹೋಗಿ, ಜನನ ಮರಣ ಸುಳಿಯ ಪ್ರವಾಹದಿಂದ ಬಿಡುಗಡೆಯನ್ನು ಹೊಂದುವೆ. ಸಾವಿಲ್ಲದ ನಗರವನ್ನು ಪ್ರವೇಶಿಸುವೆ. ಮಹತ್ ಎಂಬುದು ಪ್ರಕೃತಿಯಿಂದಾದ ವಿಕೃತಿಯು. ಅದು ವ್ಯಷ್ಟಿ ಮತ್ತು ಸಮಷ್ಟಿ ಎಂದು ಎರಡು ವಿಧವಾದುದು. ವಿಭುವಾದ ಮಹತ್ ಸೃಷ್ಟಿಕರ್ತನಾದ ಬ್ರಹ್ಮನು.

ಮೂಲಪ್ರಕೃತಿಯು ಮಾಯಾ ಅಥವಾ ಅವ್ಯಕ್ತದ ಇನ್ನೊಂದು ಶಬ್ದವು. ಇದು ವ್ಯಾಕೃತ ಪ್ರಪಂಚದ ಬೀಜವು ಅಥವ ಮೂಲವು. ಪ್ರಳಯಕಾಲದಲ್ಲಿ ಸಮಸ್ತ ವಿಶ್ವವು ಮೂಲಪ್ರಕೃತಿಯಲ್ಲಿ ಟಿಫಿನ್‌ಕ್ಯಾರಿಯರ್‌ನ ಎಲ್ಲ ಪಾತ್ರೆಗಳೂ ಒಂದರೊಳಗೊಂದು ಅಡಕವಾಗುವಂತೆ, ಬೆಡ್ ಹೋಲ್ಡರ್‌ನಲ್ಲಿ ದಿಂಬುಗಳು, ಜಮಖಾನೆ, ರಗ್ಗು, ಹೊದಿಕೆಗಳೂ ಅಡಗಿಕೊಳ್ಳುವಂತೆ ಎಲ್ಲವೂ ಮೂಲಪ್ರಕೃತಿಯಲ್ಲಿ ಒಂದಾಗುವುದು.

ಸ್ವರೂಪವೆಂದರೆ ಆತ್ಮ ಅಥವಾ ಬ್ರಹ್ಮವು. ಸ್ವರೂಪ ಧ್ಯಾನವು ಆತ್ಮ ಅಥವ ಸತ್ಯದ ಸಾಕ್ಷಾತ್ಕಾರಕ್ಕೆ ಸಾಧನವು. ವೇದಾಂತವೆಂದರೆ ವೇದಗಳ

ಕೊನೆಯು. ನಾಲ್ಕು ವೇದಗಳೂ ಬ್ರಹ್ಮನ ನಿಶ್ವಾಸದಿಂದ ಹೊರಬಂದುವು. ಬ್ರಹ್ಮದ ವಿಷಯವನ್ನು ಸಂಗ್ರಹವಾಗಿ ತಿಳಿಯಲು ಮಾಂಡೂಕ್ಯ ಉಪನಿಷತ್ತಿನ ಅಧ್ಯಯನ ಒಂದೇ ಸಾಕು.

ಬ್ರಹ್ಮದ ವ್ಯಾಕೃತವಾದ ಪ್ರಪಂಚವು ತಾನು ವಿಕಾರವಾದರೂ, ಬಹ್ಮವು ಮಾತ್ರ ವಿಕಾರಿಯಲ್ಲವು. ಬ್ರಹ್ಮವು ಕಿಂಚಿತ್ತೂ ಇದರಿಂದ ಬಾಧಿಸಲ್ಪಡಬೇಕಾಗಿಲ್ಲವು. ಅದು ಒಂದು ರಾಸಾಯನಿಕ ಬದಲಾವಣೆ ಯಲ್ಲವು. ತಾನು ಯಾವ ರೀತಿಯಲ್ಲಿಯೂ ವಿಕಾರವಾಗದೆ ಈ ವಿಶ್ವ ವನ್ನು ಬ್ರಹ್ಮವು ವ್ಯಾಕೃತ ಮಾಡಿರುವುದು. ಸರ್ವಶಕ್ತನಾದ ಬ್ರಹ್ಮನು ಅಸಂಖ್ಯಾತವಾದ ನಾಮರೂಪಗಳಿಂದ ನಾನಾ ಆಗಿ ತೋರುವನು. ಆದರೂ ಅವನಲ್ಲಿ ಯಾವ ಬದಲಾವಣೆಯೂ ಆಗಿಲ್ಲವು. ಈ ಜಗತ್ತು ಕೇವಲ ತೋರಿಕೆಯು. ಬ್ರಹ್ಮವೇ ಕಲ್ಲು, ಮರ, ನಕ್ಷತ್ರ ಮುಂತಾಗಿ ತೋರುವದು. ಈ ರೂಪಗಳನ್ನು ತೋರಲು ಬ್ರಹ್ಮನಿಗೆ ಯಾವ ಕೈಗಳು ಅಥವ ಸಾಧನ ಗಳು ಬೇಕಿಲ್ಲವು. ಅವನು ಚೈತನ್ಯವು, ಸ್ವಯಂ ಪ್ರಕಾಶವು ಮತ್ತು ಜ್ಞಾನವು. ಇಚ್ಛಾಮಾತ್ರದಿಂದ ಅಸಂಖ್ಯಾತ ಜಗತ್ತುಗಳನ್ನು ಸೃಷ್ಟಿಸುವನು. ಬೀಜ ದಲ್ಲಿನ ಅಂತಸ್ಸತ್ವವು ಹೇಗೆ ಮರವನ್ನು ಹೊರತೋರುವದೋ ಹಾಗೆಯೇ ಬ್ರಹ್ಮದ ಸ್ವಭಾವವು ವಿಶ್ವವನ್ನು ಹೊರತರುವುದು. ವ್ಯಕ್ತತೆ ಅಥವ ವ್ಯಾಕೃತಿಯು ಸತ್ಯದೊಡನೆ ಇರುವುದು. ಸತ್–ಚಿತ್ ಆನಂದಸ್ವರೂಪ ಬ್ರಹ್ಮದಲ್ಲಿ ವಿಶ್ವವು ಏಕೆ, ಹೇಗೆ ಆಯಿತು ಮತ್ತು ಹೇಗಿರಬಲ್ಲದು ಎಂಬುದನ್ನು ಪರಿಮಿತವಾದ ಬುದ್ಧಿಯು ತಿಳಿಯಲಾರದು. ಬ್ರಹ್ಮಜ್ಞಾನ ವನ್ನು ಗಳಿಸಿರಿ. ಆಗ ಮಾತ್ರವೇ ನಿಮ್ಮ ಈ ಅತಿಪ್ರಶ್ನೆಗೆ ಉತ್ತರವು ದೊರೆಯುವುದು.

ಶ್ರುತಿಗಳಲ್ಲಿ ಒಂದು ಕಡೆ " ಅವಾಙ್ಮಾನಸಗೋಚರ " —ವಾಕ್ಕು ಮತ್ತು ಮನಸ್ಸಿಗೆ ಗೋಚರಿಸುವುದಿಲ್ಲವೆಂದೂ, ಮತ್ತು ಇನ್ನೊಂದು ಕಡೆ, ' ಮನಸ್ಯೈವ ದ್ರಷ್ಟವ್ಯಮ್ ' – ಮನಸ್ಸಿನಿಂದಲೇ ನೋಡಬೇಕು ಎಂದು ಒಂದಕ್ಕಿಂತ ಒಂದು ವಿರುದ್ಧವಾದ ಅಭಿಪ್ರಾಯಗಳನ್ನು ಹೇಳುವುವು. ಎಂದರೆ, ಬ್ರಹ್ಮವನ್ನು ದಂಭ, ಮೋಹ, ಕಾಮ, ಕ್ರೋಧ ಮುಂತಾದವುಗಳಿಂದ ಮುಕ್ತವಾದ ಶುದ್ಧ ಸೂಕ್ಷ್ಮ ಮತ್ತು ಚುರುಕಾದ ಮನಸ್ಸಿನಿಂದ ಸಾಧನ ಚತುಷ್ಟಯ ಸಂಪನ್ನವಾದ

ಮನಸ್ಸಿನಿಂದ ಮಾತ್ರ ಬ್ರಹ್ಮವನ್ನು ನೋಡಬೇಕು ಎಂದು ಅಭಿಪ್ರಾಯವು. ಶುದ್ಧವಾದ ಮನಸ್ಸು ಬ್ರಹ್ಮವೇ ಆಗಿರುವದು.

ಪ್ರಕೃತಿಯ ತೋರಿಕೆಗಳೊಂದೂ ನಿಜವಲ್ಲವು. ಅವು ಜಲ ಮರೀಚಿಕೆಯಂತೆ ಮಿಥ್ಯವು. ಪರಿಣಾಮವಾಗುವದು ಅನಿತ್ಯವು ಮತ್ತು ಶಾಶ್ವತವಾದುದು ನಿತ್ಯವು. ಪರಮಾರ್ಥ ಸತ್ಯವು ಕಾರ್ಯವೂ ಅಲ್ಲ. ಕಾರಣವೂ ಅಲ್ಲ. ಅದು ಪರಮ ಕಾರಣವು. ಆ ಸದ್ವಸ್ತುವಿನಲ್ಲಿ ವಿಶ್ರಮಿಸಿರಿ. ಸತ್ಯವನ್ನು ಸ್ಮರಿಸುತ್ತಿರಿ.

ದೇಶ, ಕಾಲ, ಚಿತ್ತ, ಮನ, ಜೀವ ಮತ್ತು ಮಾಯೆಯು ಸತ್ಯವಲ್ಲವು. ನಿರ್ವಿಕಲ್ಪವೂ ಅದ್ವಿತೀಯವೂ ಆದ ಬ್ರಹ್ಮವೊಂದೇ ಇರುವುದು ಮತ್ತು ತನ್ನ ಸಹಜ ಶ್ರೇಷ್ಠ ಮಹಿಮೆಯಿಂದ, ಚಂಚಲತೆ, ಆದಿ, ಮಧ್ಯ, ಅಂತಗಳಿಲ್ಲದೆ, ತಾನೇ ತಾನಾಗಿ ಪ್ರಕಾಶಿಸುವುದು. ಸದಾ ಚಿಂತಿಸಿ "ಬ್ರಹ್ಮವೊಂದೇ ಇರುವುದು. ಬ್ರಹ್ಮವೊಂದೇ ಸತ್ಯವು. ನಾನು ಬ್ರಹ್ಮವು" ಎಂದು ತಿಳಿಯಿರಿ.

ಎಲ್ಲವೂ ಬ್ರಹ್ಮವೇ. ಆದರೆ ಕ್ರಿಯಾ ಅದ್ವೈತವು ಸಾಧ್ಯವಲ್ಲವು. ನಾವು ಭಾವನಾ ಅದ್ವೈತವನ್ನು ಹೊಂದಿರಬಹುದು. ಸಮಾಜದಿಂದ ಸಂಪೂರ್ಣ ದೂರನಾಗಿ, ದೂರದ ಗುಹೆಯಲ್ಲಿ ವಾಸಿಸುವ ಯಾವ ಕರ್ಮಗಳನ್ನೂ ಮಾಡದವನಿಗೆ ಕ್ರಿಯಾ ಅದ್ವೈತವು ಸಾಧ್ಯವು. ಕೇವಲ ಅದ್ವೈತವನ್ನು ಉಪದೇಶಿಸಿದ ಶ್ರೀ ಶಂಕರಾಚಾರ್ಯರು ಬೌದ್ಧಮತೀಯರನ್ನು ಎದುರಿಸಲು ನಾಗಾಗಳ ಗುಂಪನ್ನು ರಚಿಸಿದರೆಂದು ಹೇಳುತ್ತಾರೆ.

ಶ್ರೀ ಶಂಕರರು ಹೇಳುವುದೇನೆಂದರೆ "ಬಾಹ್ಯದಲ್ಲಿ ಕಾಣುವ ಜಗತ್ತು ತೋರಿಕೆಯು. ಅದಕ್ಕೆ ಸ್ವತಂತ್ರವಾದ ಇರುವಿಕೆ ಇಲ್ಲವು. ಅದು ವಿವರ್ತ ಮಾತ್ರವು. ಹಗ್ಗದಲ್ಲಿ ಹಾವು, ಚಿನ್ನದಲ್ಲಿ ಉಂಗುರ, ಈ ಜಗತ್ತು, ಈ ದೇಹ, ಈ ಪ್ರಾಣ, ಈ ಮನಸ್ಸು, ಈ ಇಂದ್ರಿಯಗಳು ಎಲ್ಲವೂ ಬ್ರಹ್ಮದ ವಿವರ್ತವೇ.

ನೀರಿನ ಕೊಳದಲ್ಲಿ ಸೂರ್ಯನು ಪ್ರತಿಬಿಂಬಿಸುವಂತೆ ಬ್ರಹ್ಮಚೈತನ್ಯವು ಅವಿದ್ಯೆ, ಅಥವ ಮನಸ್ಸು ಮತ್ತು ಬುದ್ಧಿಯಲ್ಲಿ ಪ್ರತಿಫಲಿಸುವುದು. ಕೊಳದ ನೀರು ಆವಿಯಾದಕೂಡಲೇ (ಬತ್ತಿದ ಕ್ಷಣವೇ) ಸೂರ್ಯನು ಅದೃಶ್ಯನಾಗುವಂತೆ, ಜ್ಞಾನದಿಂದ ಅಂತಃಕರಣವೆಂಬ ತೊರೆಯು ಬತ್ತಿದ ಕೂಡಲೇ ಮನಸ್ಸಿನಲ್ಲಿ ಪ್ರತಿಫಲಿತವಾದ ಚೈತನ್ಯವು ಅದೃಶ್ಯವಾಗುವುದು. ಇದನ್ನು ವೇದಾಂತದಲ್ಲಿ

ಆಭಾಸವಾದ ಎನ್ನುವರು. ಇದನ್ನು ಪ್ರತಿಬಿಂಬವಾದವೆಂದೂ ಕರೆಯುವರು. ಆಭಾಸವೆಂದರೆ ಛಾಯೆಯು. ಬ್ರಹ್ಮ ಅಥವ ಕೂಟಸ್ಥನು ಬಿಂಬವು. ಜೀವ ಅಥವ ಆಭಾಸ ಶಿಶುವು ಪ್ರತಿಬಿಂಬವು. ದರ್ಪಣವು ಅವಿದ್ಯೆ ಅಥವ ಮನಸ್ಸು. ಇದನ್ನೂ ಸಹ ಬಿಂಬ ಪ್ರತಿಬಿಂಬವಾದವೆಂದು ಕರೆಯುವರು.

ಆತ್ಮನು ನಿತ್ಯ ಶುದ್ಧನು, ಅಪರಿಣಾಮನು, ಅಮೃತನು ಮತ್ತು ಆತ್ಮ ಪ್ರಕಾಶನು. ಆದರೆ ದೇಹವು ಅಶುದ್ಧವು, ಪರಿಣಾಮವು, ವಿನಾಶಿಯು ಮತ್ತು ಜಡವು. ಅವಿದ್ಯಾವಂತರು ಎರಡನ್ನೂ ಅಧ್ಯಾಸಮಾಡುವರು, ಐಕ್ಯಮಾಡಿ ಕೊಳ್ಳುವರು. ಇದಕ್ಕಿಂತ ಹೆಚ್ಚಿನ ಮೌಢ್ಯವಿರುವುದೆ?

ಮಡಕೆಯು ಒಡೆಯಲ್ಪಟ್ಟಾಗ, ಅದರೊಳಗಿನ ಅವಕಾಶವು ವಿಶ್ವಾಕಾಶ ದಲ್ಲಿ ಬೆರೆಯುವಂತೆ, ಉಪಾಧಿಗಳೆನ್ನಿಸಿದ ಪರಿಚ್ಛಿನ್ನವೂ ಸಾಂತವೂ ಆದ ದೇಹ, ಮನಸ್ಸುಗಳು ಲಯವಾದಾಗ ಜೀವಾತ್ಮನು ಪರಬ್ರಹ್ಮದಲ್ಲಿ ಒಂದಾಗುವನು.

ಭೌತಾಕಾಶ, ನಂತರ ಮನಸ್ಸಿನಿಂದಾವೃತವಾದ ಚಿದಾಕಾಶ, ಅನಂತರ ಜ್ಞಾನಾಕಾಶವೂ ಇರುವುದು. ಬಟ್ಟೆಯಲ್ಲಿ ನೂಲು ಹಾಸುಹೊಕ್ಕಾಗಿರುವಂತೆ ಈ ಮೂರು ಆಕಾಶಗಳು ಓತಪ್ರೋತವಾಗಿವೆ.

ಉರಿಯುತ್ತಿರುವ ಕೊಳ್ಳಿಯನ್ನು ಹಿಡಿದು ತಿರುಗಿಸಿದಾಗ ಜ್ವಾಲೆಯ ಚಕ್ರಗಳು ಕಂಡುಬರುವಂತೆ (ಅಲಾತ ಚಕ್ರ), ಜಗತ್ತು ನಾನಾ ಆಗಿ ತೋರುವುದು. ಬೆಂಕಿಯ ಚಕ್ರವೆಂಬುದು ಭ್ರಮೆಯು. ಹಾಗೆಯೇ ಜಗತ್ತು ಭ್ರಮೆಯು ಅಥವ ಮಿಥ್ಯವು. ಈ ಜಗತ್ತಿನ ತೋರಿಕೆಗೆ ಆಧಾರವೂ ಏಕಮಾತ್ರ ಸಾಕ್ಷಿಯೂ ಆಗಿರುವದು ಬ್ರಹ್ಮವು. ಈ ಭ್ರಮೆಗೆ ಕಾರಣವು ಅವಿದ್ಯೆಯು. ಆತ್ಮಜ್ಞಾನದಿಂದ ಅವಿದ್ಯೆಯು ನಾಶವಾದಾಗ ನಾಮರೂಪ ಗಳು ಮಾಯವಾಗುವವು. ನೀನು ಎಲ್ಲೆಲ್ಲಿಯೂ ಆ ಆತ್ಮವೊಂದನ್ನೇ ಕಾಣುತ್ತೀಯೆ.

ಓ, ಮಾನವಾ! ನೀನು ದಿವ್ಯನು. ನೀನು ಅಮೃತಾತ್ಮನು, ದೊರೆಗಳ ದೊರೆಯು; ನೀನು ದೇಹವೆಂಬ ಭ್ರಾಂತಿಯನ್ನು ಕೊಡವಿಕೊ. ಸರ್ವವ್ಯಾಪಿ ಯಾದ ಜ್ಞಾನಸ್ವರೂಪವಾದ ಆತ್ಮ ಅಥವ ಬ್ರಹ್ಮದೊಡನೆ ಒಂದಾಗು. ನಿನ್ನ ಸಹಜವಾದ ಸ್ವರೂಪವು ಸತ್ – ಚಿತ್ –ಆನಂದವು. ಇದನ್ನು ಭಾವಿಸು. ಇದನ್ನು ಚಿಂತಿಸು.

ಹೃದಯದಲ್ಲಿ ಯಾವ ಆಶೆಗೂ ಎಡೆಕೊಡಬೇಡ. ಯಾರ ಬಗ್ಗೆಯೂ ಮೋಹ ಅಥವ ಪ್ರೀತಿಯನ್ನು ಹೊಂದಬೇಡ. ಅಕ್ಷರ ಅಥವಾ ಅವಿನಾಶಿ ಬ್ರಹ್ಮನನ್ನು ಪ್ರೀತಿಸು. ದ್ವೈತದಿಂದ ಬಿಡಲ್ಪಟ್ಟ ಮಾರ್ಗವನ್ನು ಅನುಸರಿಸು. ಜಗತ್ತಿನಲ್ಲಿರು. ಆದರೆ ಅದಕ್ಕೆ ಹೊರತಾಗಿರು. ದೇಹ ಮತ್ತು ಮನಸ್ಸಿನಿಂದ ನಿನ್ನನ್ನು ಪ್ರತ್ಯೇಕಿಸಿಕೊ. ಆತ್ಮದೊಡನೆ ಸಾಮ್ಯವನ್ನು ಹೊಂದು. ನಾನು ಮತ್ತು ನೀನು ಎಂಬ ಬೇಧ ಭಾವವನ್ನು ಮಾಡಬೇಡ. ವೃತ್ತಿಗಳ ಸಾಕ್ಷಿಯಾಗು. ಅನೇಕಗಳಲ್ಲಿ ಏಕವನ್ನು ಕಾಣು. ಎಲ್ಲ ವಸ್ತುಗಳಲ್ಲಿ ಅವಿನಾಶಿಯಾದ ಆತ್ಮನನ್ನು ನೋಡು.

ಯಾವುದಾದರೊಂದು ಸಾಧನವಿದ್ದರೆ ಅದನ್ನು ಉಪಯೋಗಿಸಲು ಒಬ್ಬರಿರುವರು. ಮನಸ್ಸು, ಬುದ್ಧಿ ಮೊದಲಾದವು ಉಪಕರಣಗಳು. ಆದ್ದರಿಂದ ಈ ಸಾಧನಗಳನ್ನು ಬಳಸಲು ಅಥವಾ ಅವುಗಳಿಗೆ ದಾರಿತೋರಲು ಒಬ್ಬನಿದ್ದೇ ಇರಬೇಕು. ಹೇಗೆ ಮನೆಯು ಒಬ್ಬನ ವಾಸಕ್ಕಾಗಿ ಇರುವುದೋ ಹಾಗೆಯೇ ವಾಹನಗಳು, ಕಣ್ಣುಗಳು, ಕೈಗಳು, ಕಾಲುಗಳು, ಅವುಗಳಿಗಿಂತ ಪ್ರತ್ಯೇಕನಾದ, ಅವುಗಳನ್ನು ನಿರ್ದೇಶಿಸುವವನಿಗಾಗಿ ಇರುವುವು. ಆ ನಿರ್ದೇಶಕನೇ 'ನಾನು' ಎನ್ನಿಸಿದ ಅಪರಿಚ್ಛಿನ್ನನು. ಅವನು ಅಂತರ್ಯಾಮಿಯು. ಅವನು ಅಮರನು. ಅವನು ಶುದ್ಧ ಜ್ಞಾನವು. ಕಣ್ಣುಗಳಿಂದ ನೋಡುವ ಶಕ್ತಿ, ಕಿವಿಗಳಿಂದ ಕೇಳುವ ಸಾಮರ್ಥ್ಯವು, ಅವುಗಳನ್ನು ಬಳಸಿಕೊಳ್ಳುವ ಬುದ್ಧಿಶಕ್ತಿಯೂ ಆ ಆತ್ಮನದೇ. ಚಂದ್ರನು ಯಾವ ರೀತಿ ಸೂರ್ಯನಿಂದ ಬೆಳಕನ್ನು ತೆಗೆದುಕೊಳ್ಳುವನೋ ಹಾಗೆಯೇ ಈ ಇಂದ್ರಿಯಗಳು ತಮ್ಮ ಬೆಳಕು, ಬುದ್ಧಿ ಮತ್ತು ಬಲವನ್ನು ಸೂತ್ರಧಾರನಾದ ಆತ್ಮನಿಂದ ಪಡೆಯುವುವು. ಆದ್ದರಿಂದಲೇ ಆತ್ಮನನ್ನು ಕಿವಿಗಳ ಕಿವಿಯು, ಕಣ್ಣುಗಳ ಕಣ್ಣು, ಪ್ರಾಣಗಳ ಪ್ರಾಣವು, ಮನಸ್ಸುಗಳ ಮನಸ್ಸು ಎಂದು ಹೇಳಿರುವುದು ಸೂಕ್ತವಾಗಿರುವುದು.

ಬೆಂಕಿಯು ಬೂದಿಯಿಂದ ಮುಚ್ಚಲ್ಪಟ್ಟಂತೆ, ಖಡ್ಗವು ಒರೆಯಲ್ಲಿ ಮರೆಯಾಗಿರುವಂತೆ, ಸೂರ್ಯನು ಮೋಡಗಳಿಂದ, ನಿಂಬೆಯ ಹಣ್ಣುಗಳು ಅಥವಾ ಬದನೇಕಾಯಿಗಳು ಎಲೆಗಳಿಂದ, ವಜ್ರಗಳು ಭೂಮಿಯಿಂದ, ಎಗರು ಕಟ್ಟಿಗಳು (springs)ಮೆತ್ತೆಯಿಂದ (cushion) ಮುಚ್ಚಲ್ಪಟ್ಟಿರುವಂತೆ, ಸುಪ್ಪತ್ತಿಗೆಯು ಮೇಲುಹೊದಿಕೆಯಿಂದ ಮುಚ್ಚಲ್ಪಟ್ಟಿರುವಂತೆ ಈ ಅತ್ಮವು ಮೂಳೆ, ಮಾಂಸ ಮುಂತಾದ ವಸ್ತುಗಳಿಂದ ಮರೆಮಾಡಲ್ಪಟ್ಟಿರುವುದು.

ನಿನ್ನ ಪ್ರಜ್ಞೆಯು ಈ ಸ್ಥೂಲ ದೇಹಕ್ಕಿಂತ ಪ್ರತ್ಯೇಕವಾಗಿರುವುದೆಂದು ಭಾವಿಸು ಮತ್ತು ವಿಚಾರಿಸು. ಆಗ ಸರ್ವಜ್ಞನೊಡನೆ ಒಂದಾಗುವೆ. ನೀನು ಕೂಡಲೆ ಸಾಕ್ಷಿಯಾಗುವೆ. ನಿನ್ನ ದೇಹವು ನಿನ್ನ ಕೈಯಲ್ಲಿರುವ ಒಂದು ಸಾಧನವೆಂದು ತಿಳಿ. ನಿನ್ನ ಕೈಕೋಲಿನಂತೆ (walking stick) ನಿನ್ನ ದೇಹವು ಒಂದು ಕೈಗೋಲಾಗಿರುವುದೆಂದು ತಿಳಿ.

ಒಂದು ಕ್ರಿಕೆಟ್ ಪಂದ್ಯದಲ್ಲಿ ಆಟಗಾರರಿಗಿಂತ ಪ್ರೇಕ್ಷಕರಿಗೇ ಹೆಚ್ಚು ಆನಂದವಾಗುವುದು. ಆಟಗಾರರ ಮನಸ್ಸು ಸೋಲು — ಗೆಲವುಗಳೆಂಬ ಚಿಂತನೆಗಳ ಆತಂಕದಿಂದ ತುಂಬಿರುವುದು. ಅವರು ಮನೋಶಾಂತಿಯನ್ನು ಹೊಂದಲಾರರು. ನೀನು ಜಗತ್ತಿನ ಸಾಕ್ಷಿಯಾಗಿ ಉಳಿದರೆ ಮತ್ತು ಮನಸ್ಸಿಗೂ ಸಾಕ್ಷಿಯಾದರೆ ಮತ್ತು ಸಾಕ್ಷಿಯೊಡನೆ ಸಾಮ್ಯವನ್ನು ಹೊಂದಿದರೆ ನಿನಗೆ ಆತ್ಮಾನಂದವಾಗುವುದು. ನಿನಗೆ ಆತ್ಮಜ್ಞಾನವು ಪ್ರಾಪ್ತಿಯಾಗುವುದು.

ಪ್ರಾರಬ್ಧವೆಂದರೆ ಪೂರ್ವಜನ್ಮಗಳ ಪುರುಷಾರ್ಥವು ಮಾತ್ರ. ಸಂಚಿತ ಕರ್ಮವು ಅವಿದ್ಯೆಯನ್ನು ಆಶ್ರಯಿಸಿದೆ. ಕ್ರಿಯಮಾಣ ಕರ್ಮಗಳು ಅಹಂಕಾರವನ್ನು ಆಶ್ರಯಿಸುವುವು. ಪ್ರಾರಬ್ಧಕರ್ಮಗಳು ಸ್ಥೂಲದೇಹವನ್ನು ಆಶ್ರಯಿಸುವುವು. ಜೀವನ್ಮುಕ್ತನಲ್ಲಿ ಜ್ಞಾನೋದಯವಾಗಿರುವುದರಿಂದ ಅಜ್ಞಾನವು ನಾಶಮಾಡಲ್ಪಟ್ಟಿರುವುದು. ಆದ್ದರಿಂದ ಸಂಚಿತ ಕರ್ಮಗಳು ನಾಶವಾಗಿವೆ. ಅವನಿಗೆ ಅಹಂಕಾರವಿಲ್ಲ. ಕ್ರಿಯಮಾಣ ಕರ್ಮಗಳು ಸಹ ನಾಶಮಾಡಲ್ಪಟ್ಟಿವೆ. ವಿಭುವಾದ ಆತ್ಮನೊಡನೆ ಅವನು ಐಕ್ಯನಾಗಿರುವುದರಿಂದ ಅವನಿಗೆ ದೇಹವಿಲ್ಲವು. ಆದ್ದರಿಂದ ಆತ್ಮಜ್ಞಾನ ಸಂಪನ್ನನಿಗೆ ಮೂರು ವಿಧವಾದ ಕರ್ಮಗಳೂ ನಾಶವಾಗಿರುವುವು. ವಿಧಿ ಅಥವಾ ಅದೃಷ್ಟವು ಅವನವನ ಕರ್ಮಗಳಿಂದಾದ ಸೃಷ್ಟಿಯು. ನಿನ್ನ ಅದೃಷ್ಟಕ್ಕೆ ನೀನೇ ಯಜಮಾನನು. ನಿನ್ನ ಈ ಚಿಂತನ ರೀತಿಯನ್ನು ಬದಲಾಯಿಸಿಕೊ. ಮೂರ್ಖನಂತೆ "ನಾನು ದೇಹವು" ಎಂದು ಚಿಂತಿಸುವುದಕ್ಕಿಂತ "ನಾನು ಆತ್ಮವು" ಎಂದು ಚಿಂತಿಸು.

ಈಗ ನಿನ್ನ ಆಲೋಚನೆಗಳ ಅಭ್ಯಾಸವು "ನಾನು ದೇಹವು, ನಾನು ಪ್ರಾಣವು, ನಾನು ಇಂದ್ರಿಯವು" ಎಂಬ ರೀತಿಯಾಗಿರುವುದು. ಈ ಬಗೆಯ ಚಿಂತನೆಯನ್ನು ಬಿಟ್ಟು "ನಾನು ಬ್ರಹ್ಮನು, ನಾನು ವಿಭುವಾದ ಜ್ಞಾನವು" ಎಂದು ಚಿಂತಿಸು. ನಿನ್ನ ಅದೃಷ್ಟವನ್ನು ಗೆಲ್ಲುವೆ. ನೀನು ಓರೆಯಾಗಿ

ಬರೆಯುವ ಅಭ್ಯಾಸವನ್ನಿಟ್ಟುಕೊಂಡಿದ್ದರೆ ಅದನ್ನು ನೇರವಾಗಿ ಬರೆಯುವ ರೀತಿಗೆ ಬದಲಾಯಿಸಿಕೊಳ್ಳಬಲ್ಲೆ. ಹಾಗೆಯೇ ನಿನ್ನ ಚಿಂತನೆಯ ರೀತಿಗಳನ್ನೂ ಬದಲಾಯಿಸಬಲ್ಲೆ. ಅಭ್ಯಾಸದ ಜಯವೇ ಅದೃಷ್ಟದ ಜಯವು. ವಿಪರೀತ ಭಾವನೆಯಿರುವಾಗ, ಮನಸ್ಸಿನಲ್ಲಿ ಹಗ್ಗದ ಹಾವೂ ಬುಸುಗುಟ್ಟುವಾಗ, ಬ್ರಹ್ಮ ಭಾವನೆಯೆಂಬ ದೊಣ್ಣೆಯನ್ನು ಹಿಡಿ. " ನಾನು ಬ್ರಹ್ಮವು " ಎಂಬ ಅವಿಚ್ಛಿನ್ನವಾದ ಆತ್ಮಚಿಂತನೆಯನ್ನು ನಡೆಸು.

ದೇಹಾಧ್ಯಾಸವು ನೋವನ್ನು ತರುವುದು. ಆತ್ಮಜ್ಞಾನವನ್ನು ಪಡೆದುಕೊಂಡಾಗ ದೇಹದಲ್ಲಿ ಯಾವುದೇ ರೋಗವಿದ್ದರೂ ಅವನು ನೋವನ್ನು ಅನುಭವಿಸುವುದಿಲ್ಲ. ಅವನು ದೇಹಭಾವವನ್ನು ಮೀರಿರುವನು. ಬಹಳ ಮುಂದುವರೆದ ಹಠಯೋಗಿಯು ಮಾತ್ರ ಅಣುಗಳ ಮೇಲಿನ ಹಿಡಿತದಿಂದ ಕಾಯಸಿದ್ಧಿಯನ್ನು ಪಡೆದು ತನ್ನ ದೇಹವು ಬಾಧೆಯನ್ನು ಹೊಂದದಂತೆ ಮಾಡಬಲ್ಲನು. ದೇಹವನ್ನು ಮೀರಿನಿಂತು ಸದಾ ಬಾಧೆಯಿಲ್ಲದ, ರೋಗವಿಲ್ಲದ ನಿನ್ನ ಆತ್ಮದೊಡನೆ ಸಮತೆಯನ್ನು ಹೊಂದು. ನೀನು ನೋವಿನಿಂದ ಬಿಡಲ್ಪಡುವೆ. ಗಾಢ ನಿದ್ದೆಯಲ್ಲಿರುವಾಗ ಖಾಯಿಲೆಗಳಿಂದ ನರಳುತ್ತಿದ್ದರೂ ನಿನಗೆ ಬಾಧೆಯಾಗುವುದಿಲ್ಲ. ಕ್ಲೋರೋಫಾರಮ್‌ನ ಪ್ರಭಾವಕ್ಕೆ ಒಳಪಟ್ಟವನ ಕಾಲನ್ನು ಕತ್ತರಿಸಿದಾಗಲೂ ನೋವು ಕಾಣುವುದಿಲ್ಲ. ಮನಸ್ಸು ದೇಹದೊಡನೆ ಸಂಬಂಧಿಸಿದಾಗ ಮಾತ್ರ ನೋವನ್ನುಂಟುಮಾಡುವುದು. ದೇಹದಿಂದ ಮನಸ್ಸನ್ನು ಪ್ರತ್ಯೇಕಿಸಿದರೆ ಮತ್ತು ಸಚ್ಚಿದಾನಂದ ಆತ್ಮದಲ್ಲಿ ಭದ್ರವಾಗಿ ಧ್ಯಾನದ ಮೂಲಕ ನಿಲ್ಲಿಸಿದರೆ, ದೇಹವು ಎಷ್ಟೇ ರೋಗಗಳಿಂದ ನರಳುತ್ತಿದ್ದರೂ ಬಾಧೆಯುಂಟಾಗುವುದಿಲ್ಲ. ಇದು ಜ್ಞಾನಯೋಗ ಸಾಧನ. ಪ್ರಾರಬ್ಧವು ತನ್ನ ಫಲವನ್ನು ಕೊಟ್ಟೇತೀರುವುದು. ಆದ್ದರಿಂದ ದೇಹವು ಖಾಯಿಲೆಯಿಂದ ನರಳುವುದು. ಜೀವನ್ಮುಕ್ತನು ಯಾವ ನೋವನ್ನೂ ಅನುಭವಿಸುವುದಿಲ್ಲ. ನೋಡುವವರು ಜೀವನ್ಮುಕ್ತನು ನರಳುತ್ತಿರುವನೆಂದು ತಪ್ಪಾಗಿ ಭಾವಿಸುವರು. ಇದು ದೊಡ್ಡ ದೋಷವು. ರಾಮಕೃಷ್ಣಪರಮಹಂಸರು ಗಂಟಲಿನಲ್ಲಿ ವ್ರಣವನ್ನು (cancer) ಹೊಂದಿದ್ದರು. ಬುದ್ಧನಿಗೆ ವಿಷಮಿಸಿದ ಆಮಶಂಕೆ ರೋಗವಿದ್ದಿತು. ಶ್ರೀ ಶಂಕರರಿಗೆ ಮೂಲವ್ಯಾಧಿಯಿದ್ದಿತು. ಆದರೆ ಅವರು ನೋವನ್ನು ಅನುಭವಿಸಲಿಲ್ಲ. ವೈದ್ಯರು ರಾಮಕೃಷ್ಣಪರಮಹಂಸರನ್ನು " ನೀವು

ಏಕೆ ಹೀಗೆ ನರಳುವಿರಿ ? ಶಸ್ತ್ರಚಿಕಿತ್ಸೆಗೆ ಏಕೆ ಒಳಪಡಬಾರದು ? " ಎಂದು ಪ್ರಶ್ನಿಸಿದಾಗ ಅವರ ಉತ್ತರ "ನನ್ನ ಮನಸ್ಸನ್ನು ಕಾಳೀಮಾತೆಗೆ ಒಪ್ಪಿಸಿದ್ದೇನೆ. ದೇಹವನ್ನು ಹೇಗೆ ಚಿಂತಿಸಲಿ ? ನನ್ನ ಮನಸ್ಸನ್ನು ಈ ಮಾಂಸದ ಗೂಡಿಗೆ ಹೇಗೆ ತರಲಿ ? ನಾನು ಸದಾ ಆನಂದದಲ್ಲಿರುವೆನು. "

---

## ೨. ವೇದಾಂತದ ಉಪದೇಶಗಳು

ವೇದಾಂತವೆಂದರೆ ಶ್ರೇಷ್ಠ ತತ್ವವು. ಜೀವಾತ್ಮನು ಪರಮಾತ್ಮನೊಡನೆ ಒಂದಾಗುವನೆಂದೂ, ಜೀವ ಎಂಬುದು ಮಾಯೆಯು ಎಂದೂ ಉಪದೇಶಿಸುವುದು. ವೇದಾಂತವು ಆತ್ಮಶಾಸ್ತ್ರವು. ಅದು ಸಾಧಕನ ಭಯ, ದುಃಖ, ವ್ಯಥೆ, ಭ್ರಮೆಯನ್ನು ಕಳೆಯಲು ಮತ್ತು ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಸಹಾಯ ಮಾಡುವುದು. ಅಜ್ಞಾನೀ ಜೀವನನ್ನು ಶ್ರೇಷ್ಠವಾದ ಬ್ರಾಹ್ಮೀಸ್ಥಿತಿಗೆ ಕರೆದುಕೊಂಡುಹೋಗುವ ಉದಾರ ತತ್ವಶಾಸ್ತ್ರವೇ ವೇದಾಂತವು. ಮಾನವನ ಎಲ್ಲ ವಿಧವಾದ ದುಃಖಗಳಿಗೂ ವೇದಾಂತವು ದಿವ್ಯೌಷಧವು. ಹುಟ್ಟುಸಾವುಗಳೆಂಬ ರೋಗಕ್ಕೆ ವೇದಾಂತವು ಸಂಜೀವಿನಿಯು. ಕೇವಲ ವೇದಾಂತ ವಿಚಾರಸರಣಿಯು ಫಲಕಾರಿಯಲ್ಲವು. ನೀನು ವೇದಾಂತ ಚೈತನ್ಯದಲ್ಲಿ ಬಾಳು. ನೀನು ನಿಜವಾಗಿಯೂ ಅನುಷ್ಠಾನ ವೇದಾಂತಿಯಾಗು. ವೇದಾಂತ ಪ್ರತಿಪಾದ್ಯವಾದ ಆತ್ಮನನ್ನೇ ಸಾಕ್ಷಾತ್ಕಾರಮಾಡಿಕೊ. ಆಗ ಮಾತ್ರ ನೀನು ಜೀವನ್ಮುಕ್ತನಾಗುವೆ.

ದೇಹ, ಪತ್ನಿ, ಮಕ್ಕಳು ಮತ್ತು ಸಂಪತ್ತಿನ ಮೋಹವನ್ನು ನೀನು ತ್ಯಜಿಸಬೇಕೆಂದು ವೇದಾಂತವು ನಿರೀಕ್ಷಿಸುವುದು. ಎಲ್ಲಾ ಆಕಾಂಕ್ಷೆಗಳನ್ನೂ, ವಸ್ತುಗಳ ಮೇಲಿನ ಬಯಕೆಗಳನ್ನೂ ನೀನು ಬಿಡಬೇಕೆಂದು ವೇದಾಂತವು ಹೇಳುವುದು. ಬಲ, ಖ್ಯಾತಿಗಳ ವ್ಯಾಮೋಹವನ್ನು ಬಿಡಬೇಕು. ಮಾನಸಿಕ ಪ್ರಪಂಚದ ಸಂಬಂಧಗಳನ್ನೂ ಮತ್ತು ಬಂಧನಗಳನ್ನೂ ನೀನು ಕಳಚಬೇಕು. ವಿಚಾರವೆಂಬ ಖಡ್ಗದಿಂದ ಲೌಕಿಕವಾದ ಎಲ್ಲ ಬಂಧನಗಳನ್ನೂ ನಿರ್ದಾಕ್ಷಿಣ್ಯವಾಗಿ ಛೇದಿಸಬೇಕೆಂದು ವೇದಾಂತವು ನಿನ್ನಿಂದ ಅಪೇಕ್ಷಿಸುವುದು.

ಕೆಲವು ಅಜ್ಞಾನಿಗಳು ಮಾತ್ರ ಹೀಗೆ ಹೇಳುವರು: ವೇದಾಂತವು ಅಮರತೆಯನ್ನು, ದ್ವೇಷವನ್ನು ಮತ್ತು ನಿರಾಶಾವಾದವನ್ನು ಬೋಧಿಸುವುದು. ಇದು ಬಹಳ ಶೋಚನೀಯವಾದ ದೋಷವು. ವೇದಾಂತವು ಅನ್ಯತತ್ವ ವನ್ನಾಗಲೀ ಅಥವಾ ನಿರಾಶೆಯನ್ನಾಗಲೀ ಉಪದೇಶಿಸುವುದಿಲ್ಲ. ನೀತಿಬಾಹಿರ ರಿಗೆ ಬ್ರಹ್ಮಸಾಕ್ಷಾತ್ಕಾರವು ಸರ್ವಥಾಸಾಧ್ಯವಿಲ್ಲವು. ನೀತಿಪೂರ್ಣನೂ, ಸಾಧನೆ ಚತುಷ್ಟಯ ಸಂಪನ್ನನೂ ಆದ ಸಾಧಕನೇ ವೇದಾಂತದ ವಿದ್ಯಾರ್ಥಿಯಾಗ ಬಲ್ಲನು. ವಿವೇಕ, ಅನಾಸಕ್ತಿ, ಶಾಂತಿ, ಆತ್ಮಸಂಯಮ, ತಾಳ್ಮೆ, ಸಹಿಷ್ಣುತೆ, ಶ್ರದ್ಧೆ, ಚಿತ್ತೈಕಾಗ್ರತೆ, ಮುಕ್ತಿಯ ಹಂಬಲವನ್ನು ಹೊಂದಿರುವ ಸಾಧಕನಿಂದ ಅನೈತಿಕ ಜೀವನವನ್ನು ಹೇಗೆ ನಿರೀಕ್ಷಿಸಬಹುದು? ಅದು ಶುದ್ಧ ಹಾಸ್ಯಾಸ್ಪದವು. ಮೋಹ ಅಥವಾ ಸ್ವಾರ್ಥಪ್ರೇಮ, ಕಾಮವಾಸನೆಗಳನ್ನು ನಾಶಮಾಡುವುದನ್ನು ಮತ್ತು ಪರಿಶುದ್ಧತೆ, ಅನಾಸಕ್ತವಾದ ವಿಶ್ವಪ್ರೇಮ, ಔದಾರ್ಯದ ಬೆಳವಣಿಗೆಯನ್ನು ವೇದಾಂತವು ನಿನ್ನಿಂದ ಅಪೇಕ್ಷಿಸುವುದು. ವೇದಾಂತವು ನಿರಾಶಾವಾದಕ್ಕೆ ಬದಲಾಗಿ ಆಶಾವಾದದ ಅಂತಿಮ ಗುರಿಯನ್ನು ಉಪದೇಶಿಸುವುದು. "ಈ ಸುಖದ ಭ್ರಾಂತಿಯನ್ನು ಬಿಡು. ನಿನಗೆ ನಿತ್ಯ ಸುಖವು ದೊರೆಯುವುದು. ಈ ಅಲ್ಪವಾದ 'ನಾನು' ಎಂಬುದನ್ನು ಕೊಲ್ಲು ಪೂರ್ಣಬ್ರಹ್ಮದಲ್ಲಿ ಒಂದಾಗುವೆ, ಅಮರನಾಗುವೆ. ಈ ಜಗತ್ತಿನ ಭ್ರಾಂತಿ ಯನ್ನು ಬಿಡು. ವಿಶಾಲವಾದ ಭಗವಂತನ ಸಾಮ್ರಾಜ್ಯವನ್ನು ಪಡೆದು ಕೊಳ್ಳುವೆ" ಎಂದು ವೇದಾಂತವು ಉಪದೇಶಿಸುವುದು. ಇದು ನಿರಾಶಾ ವಾದವೇ? ನಿಜವಾಗಿಯೂ ಅಲ್ಲ. ಅದು ಆಶ್ಚರ್ಯಕರವಾದ ಆಶಾವಾದವು.

ದೇಹಕಾಮನೆಯಲ್ಲಿ ಆಳವಾಗಿ ಬೇರೂರಿದ ಮನಸ್ಸುಳ್ಳವನಿಗೆ ವೇದಾಂತದ ಅರ್ಥವು ಸ್ವಪ್ನಸದೃಶವಾಗುವುದು. ಶತಕೋಟಿ ಜನ್ಮಗಳ ನ್ನೆತ್ತಿದರೂ ಬ್ರಹ್ಮಸಾಕ್ಷಾತ್ಕಾರವಾಗುವುದಿಲ್ಲ.

ನೀನು ಈಗ ನಶ್ವರವಾದ ಸ್ಥೂಲದೇಹದೊಡನೆ ತಾದಾತ್ಮ್ಯವನ್ನು ಹೊಂದಿರುವೆ. ನಿನಗೆ ದೇಹಾಧ್ಯಾಸವು ಪ್ರಬಲವಾಗಿರುವುದು. ನಿನಗೆ ಈಗ ಆತ್ಮಭಾವನೆಯೇ ಇಲ್ಲವು. ಸತ್ಯದ ಬಗ್ಗೆ ಅಚಲವಾದ ನಂಬಿಕೆಯಿಲ್ಲವು. ನೀನು ದೇಹವೊಂದೇ ಆಗಿರುವೆ. ನೀನು ಒಬ್ಬ ಶ್ರೀಮಾನ್ ಅಥವಾ ಶ್ರೀಮತಿ ಯಾಗಿರುವೆ. ನಿನ್ನ ಮನಸ್ಸು ಅಹಂಕಾರ ಮತ್ತು ಆಸೆಗಳಿಂದ ತುಂಬಿರುವುದು.

ನಿನಗೆ ಸಾವಿನ ಅಂಜಿಕೆಯಿರುವುದು. ಪ್ರತ್ಯಕ್ಷಾನುಭವದಿಂದ ಅವಿನಾಶಿಯಾದ ಆತ್ಮನನ್ನು ಕಾಣು. ಆಗ ಮಾತ್ರ ಆತ್ಮವು ಅಮೃತನೆಂದು ತಿಳಿದುಕೊಳ್ಳುವೆ.

ಎಲ್ಲಿಯವರೆಗೆ ಜೀವನು ಸಂಸಾರದ ಅವಸ್ಥೆಯಲ್ಲಿರುವನೋ ಅಲ್ಲಿಯವರೆಗೆ ಸಂಸಾರದ ಅವಸ್ಥೆಯೂ ಕೊನೆಗಾಣುವುದಿಲ್ಲ. ಆತ್ಮಜ್ಞಾನವಾಗದವರೆಗೂ ಬುದ್ಧಿಯು ಸ್ತಬ್ಧವಾಗದು. ಎಲ್ಲಿಯವರೆಗೆ ಆತ್ಮವು ಬುದ್ಧಿ, ಅದರ ಉಪಾಧಿಗಳೊಡನೆ ಸಂಬಂಧವನ್ನು ಹೊಂದಿರುವುದೋ ಅಲ್ಲಿಯವರೆಗೆ ಜೀವನು ಈ ಸಂಸಾರದಲ್ಲಿ ದುಃಖ, ವೃದ್ಧಾಪ್ಯ, ರೋಗ ಮೊದಲಾದ ತಾಪತ್ರಯಗಳಿಂದ ಸುತ್ತುವನು. ಸತ್ಯವಾಗಿಯೂ ಜೀವಾತ್ಮನಿಲ್ಲವು. ಭ್ರಾಂತಿ, ಭ್ರಮಾ, ಅಧ್ಯಾಸ ಅಥವಾ ಕನ್ನಡಿಯಲ್ಲಿನ ಪ್ರತಿಬಿಂಬದ ಅಥವ ಆಕಾಶದ ನೀಲಿಬಣ್ಣದ ಕಲ್ಪನೆಯಂತೆ ಜೀವವೆಂಬುದು ನಿಜವಲ್ಲದ ತೋರಿಕೆಯು ಮಾತ್ರ. ಪರಿಣಾಮವು ಯಾವಾಗಲೂ ಅನಿತ್ಯವು. ಇದು ನಿಮ್ಮ ಜೀವನದಲ್ಲಿ ನಿತ್ಯದ ಅನುಭವವಲ್ಲವೇ ?

ಬ್ರಹ್ಮ ಅಥವಾ ಆತ್ಮವು ಮನಸ್ಸು, ದೇಹ ಇಂದ್ರಿಯಗಳ ತಿರುಳಾಗಿದ್ದು ಅಪರಿಚ್ಛಿನ್ನವೂ, ನಿತ್ಯವೂ ಆದ ಆತ್ಮವೇ ಆಗಿರುವುದು. ಆದ್ದರಿಂದ ಓಂಕಾರದ ಧ್ಯೇಂಕಾರದಿಂದ ಆತ್ಮನನ್ನು ಕಂಡುಕೊ. ಎಲ್ಲ ತೊಂದರೆಗಳೂ ಕೊನೆಗಾಣುವುದು. ನೀನು ದತ್ತಾತ್ರೇಯ ಅಥವಾ ಶಂಕರರಾಗಬಲ್ಲೆ.

ಸಂಪ್ರದಾಯವು ಬುದ್ಧಿಯನ್ನು ಕುಂಠಿತಗೊಳಿಸುವುದು. ಹೃದಯವನ್ನು ಸಂಕುಚಿತಮಾಡುವುದು. ನಶ್ವರ ಜೀವನದ ಸಂಪ್ರದಾಯ ಭೇದಗಳನ್ನು ಮೀರಿ ನಿಲ್ಲಿರಿ. ನಿಮ್ಮ ಸ್ವಭಾವವಾದ ಸತ್-ಚಿತ್-ಆನಂದ ಸ್ವರೂಪವನ್ನು ಧಾರಣಮಾಡಿ. ಕೀಳು ಭಾವನೆಯನ್ನು ಬಿಡಿ. ಸಂಪ್ರದಾಯದ ಅಂಕೆಗೆ ಒಳಪಡದಿರಿ. ಬ್ರಹ್ಮವನ್ನು ಕುರಿತು ಚಿಂತಿಸಿ ಅಥವ ಧ್ಯಾನಿಸಿ. ಜ್ಞಾನ ಸೂರ್ಯೋದಯದ ಮೂಲಕ ಅಜ್ಞಾನ ತಿಮಿರವೆಂಬ ಮೇಘಮಾಲೆಯನ್ನು ವಿಚ್ಛಿದ್ರಗೊಳಿಸಿ. ಶರೀರತ್ರಯಗಳಿಂದ ಅಥವ ಪಂಚಕೋಶಗಳಿಂದ ನಿಮ್ಮ ಆತ್ಮನನ್ನು ಬಿಡಿಸಿಕೊಳ್ಳಿ. ಪರಮಶಾಂತಿಯಲ್ಲಿ ನೆಲಸಿ. ಓ, ರಾಮನೇ! ಅಪಾರವಾದ ಆನಂದಸಾಗರದಲ್ಲಿ ಕ್ರೀಡಾಲೋಲನಾಗಿರು.

ಅಂತರ್ದೃಷ್ಟಿಯುಳ್ಳ ಮನಸ್ಸನ್ನು ಬೆಳಸಿದರೆ, ಆತ್ಮಜ್ಞಾನವನ್ನು ಪಡೆದುಕೊಂಡರೆ, ಪರಂಜ್ಯೋತಿ ಸ್ವರೂಪವಾದ ಬ್ರಹ್ಮವು ನಿನ್ನಲ್ಲಿ ಪ್ರಕಾಶವಾಗು

ವುದು. ನಿನ್ನ ಆತ್ಮದ ಬಗ್ಗೆ ನಿನಗೆ ಪರಿವೆ (ಅರಿವು) ಇರಬೇಕು. ಆಗ ಮಾತ್ರ ನೀನು ಶ್ರೇಷ್ಠವಾದ ಜ್ಞಾನವನ್ನು ಹೊಂದುವೆ. ವರಿಷ್ಠವಾದ ಅಂತರಾತ್ಮವು ಸತ್ಯವು ಮತ್ತು ಅಪರಿಮಿತವಾದ ಅರಿವು.

ಪ್ರತಿಯೊಬ್ಬನೂ ಸ್ವತಂತ್ರನಾಗಿರಬೇಕೆಂದು ಅಪೇಕ್ಷಿಸುವನು. ಶ್ರೇಷ್ಠ ಆಡಳಿತಗಾರನಾಗಬೇಕೆಂದು ಇಚ್ಛಿಸುವನು. ಇನ್ನೊಬ್ಬರ ಇಚ್ಛೆಯಂತೆ, ಮಾರ್ಗದರ್ಶನದಂತೆ ನಡೆಯಲು ಇಚ್ಛಿಸುವುದಿಲ್ಲ. ತನ್ನ ವಾಂಛಿತಗಳಂತೆ ಇತರರು ನಡೆಯಬೇಕೆಂದೂ, ತನ್ನನ್ನು ಅನುಸರಿಸಬೇಕೆಂದೂ ಆಶಿಸುವನು. ಎಲ್ಲರನ್ನೂ ತಾನು ಆಳಬೇಕೆಂದೂ, ತನ್ನ ಮಾತಿನಂತೆಯೇ ಅವರು ನಡೆಯಬೇಕೆಂದೂ ಪ್ರತಿಯೊಬ್ಬನೂ ತನ್ನ ಅಂತರಾಳದಲ್ಲಿ ಚಿಂತಿಸುವನು. ತನಗೆ ಸರಿಸಮನಾದವನು ಇರಕೂಡದೆಂದು ಇಷ್ಟಪಡುವನು. ಇದಕ್ಕೆ ನಿಜವಾದ ಕಾರಣವು ಎಲ್ಲರಲ್ಲಿರುವ ಸ್ವಯಂಪ್ರಕಾಶನಾದ ಏಕಮಾತ್ರನಾದ ಆತ್ಮನೇ ವಿಶ್ವಾಧಾರನಾಗಿರುವುದು. ಸತ್ಯವಾಗಿ ನೀನು ಈ ಆತ್ಮವೇ ಆಗಿರುವೆ. ಈ ಕಾರಣದಿಂದಲೇ ನಿನಗೆ ಈ ವಿಧದ ಭಾವನೆ ಮತ್ತು ಆಸೆಯುಂಟಾಗುವುದು. ಸಾರ್ವಭೌಮತ್ವವು (Suzerainship) ನಿನಗೆ ಸಹಜವಾಗಿರುವುದು. ಪರಮ ಪ್ರಭುತ್ವವು ಪರಮಾತ್ಮನ ಒಂದು ಚಿಹ್ನೆಯು. ಅವಿದ್ಯೆಯ ಕಾರಣದಿಂದ ಈ ದೇಹವನ್ನು ಆತ್ಮವೆಂದು ತಪ್ಪಾಗಿ ತಿಳಿದು ಪ್ರತಿಸ್ಪರ್ಧಿಗಳನ್ನು ದೇಹದಲ್ಲಿ, ವ್ಯವಹಾರದಲ್ಲಿ, ಕಾರ್ಯಾಲಯದಲ್ಲಿ, ಕಾಲೇಜಿನಲ್ಲಿ, ಆಟಗಳಲ್ಲಿ, ರಾಜ್ಯಗಳಲ್ಲಿ ಅಷ್ಟೇಕೆ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಹೊಂದಲು ಬಯಸುವುದಿಲ್ಲ. ಆತ್ಮಜ್ಞಾನದಿಂದ ಮಾತ್ರವೇ ನೀನು ಸಾರ್ವಭೌಮತ್ವವನ್ನು ಹೊಂದಬಲ್ಲೆ. ಆತ್ಮಸ್ವಾರಾಜ್ಯವು ನಿನಗೆ ಶುದ್ಧವಾದ ಸ್ವಾತಂತ್ರ್ಯವನ್ನು ನೀಡುವುದು. ಆತ್ಮ ಸ್ವಾರಾಜ್ಯವೇ ವಿಶ್ವದ ಶ್ರೇಷ್ಠ ಆಡಳಿತಗಾರನಾಗಿ ಮಾಡಬಲ್ಲದು. ಆದ್ದರಿಂದ ಈ ವಿಚಿತ್ರನಾದ ಆತ್ಮನನ್ನು ಕಂಡು ಮೂರು ಲೋಕಗಳಲ್ಲಿಯೂ ಮಹಾ ಪರಾಕ್ರಮಿಯಾಗು.

ಓ, ಮಾನವ! ಸ್ವಭಾವತಃ ನೀನು ದಿವ್ಯಾತ್ಮನಾಗಿರುವೆ. ನೀನು ಆತ್ಮಾನಂದ ಅಮೃತಸ್ವರೂಪನು. ನೀನು ಏತಕ್ಕಾಗಿ ಈ ಭೌತದೇಹದ ಸೌಂದರ್ಯ, ಪ್ರಕೃತಿಸೌಂದರ್ಯಗಳ ಕಡೆಗೆ, ನೀನೇ ಸೌಂದರ್ಯದ ಸೌಂದರ್ಯವಾಗಿರುವಾಗ ಆಕರ್ಷಿಸಲ್ಪಟ್ಟಿರುವೆ. ನೀನೇ ಸೌಂದರ್ಯಗಳ

ಮೂಲವು ಮತ್ತು ಆಧಾರವು. ನೀನು ನಿತ್ಯನಾಗಿರುವಾಗ ಏಕೆ ಪರಿಮಿತ ವಾದ ಕಾಲದೊಡನೆ ಏಕನೆಂದುಕೊಳ್ಳುವೆ? "ನನಗೆ ನಲವತ್ತು ವರ್ಷ" ಎಂದು ಏಕೆ ಹೇಳುವೆ? ಸಾವಿಗೆ ಏಕೆ ಅಂಜುವೆ? "ಕಾಲವು ಕಳೆಯಿತು" ಎಂದು ನೀನೇ ಅಖಂಡನಾಗಿರುವಾಗ (infinite) ಏಕೆ ಹೇಳುವೆ? "ನಾನು ಸ್ಥೂಲನು, ಐದು ಅಡಿ ಆರು ಅಂಗುಲ ಉಳ್ಳವನು" ಎಂದೇಕೆ ಹೇಳುತ್ತೀಯೆ? ನೀನು ಸೂರ್ಯರ ಸೂರ್ಯನಾಗಿ, ಜ್ಯೋತಿಗಳ ಜ್ಯೋತಿಯಾಗಿರುವಾಗ ಸೂರ್ಯ, ಚಂದ್ರ, ನಕ್ಷತ್ರಗಳು ಮತ್ತು ಮಿಂಚನ್ನು ಪ್ರಶಂಸಿಸಲು ಕಾರಣ ವೇನು? ನೀನೇ ಸಾರ್ವಭೌಮರಿಗೆ ಸಾರ್ವಭೌಮನಾಗಿ, ಸಕಲ ಐಶ್ವರ್ಯಗಳ ಒಡೆಯನಾಗಿದ್ದು, "ನನ್ನಲ್ಲಿ ಹಣವಿಲ್ಲ, ನಾನು ಬಹಳ ಬಡವನು, ನನ್ನಲ್ಲಿ ಬಿಡಿಕಾಸೂ ಇಲ್ಲವು" ಎಂದು ಏಕೆ ಬೇಡುವೆ? ಸಮಸ್ತ ಪ್ರಪಂಚದ ಅಧಿಕಾರಿ ಯಾಗಿದ್ದರೂ, ಆಡಳಿತಗಾರನಾಗಿದ್ದರೂ, "ನಾನು ಅಸಹಾಯಕನು, ನಾನು ತಮ್ಮ ದೀನನಾದ ಸೇವಕನು" ಎಂದು ಹೇಳುವೆಯಲ್ಲಾ? ನೀನು ಶಾಂತಿ ಮತ್ತು ಆನಂದದ ಪ್ರತಿರೂಪವಾದರೂ "ನಾನು ಬಹಳ ತೊಂದರೆಯಲ್ಲಿರುವೆನು, ಅಶಾಂತನು" ಎಂದೇಕೆ ಹೇಳುವೆ?

ನೀನು ಸತ್ಯಸ್ವರೂಪನಾದರೂ ಯಮನಿಗೆ ಏಕೆ ಅಂಜುವೆ? ನೀನು ಸರ್ವಶಕ್ತಿವಂತನಾದರೂ "ನಾನು ದುರ್ಬಲನು" ಎನ್ನುವೆ. ನೀನು ಆರೋಗ್ಯ ವಂತನಾಗಿದ್ದರೂ "ನನಗೆ ಹುಷಾರಿಲ್ಲವು, ನಾನು ಭಯಂಕರವಾದ ಖಾಯಿಲೆ ಯಿಂದ ನರಳುತ್ತಿರುವೆನು" ಎಂದು ಏಕೆ ಹೇಳುವೆ? ನೀನು ಜ್ಞಾನಪೂರ್ಣ ನಾಗಿದ್ದರೂ "ನಾನು ಅಜ್ಞಾನಿಯು, ಏನೂ ತಿಳಿಯದು" ಎನ್ನುವೆ? ಆಶ್ಚರ್ಯಕರನಾದ ಸಚ್ಚಿದಾನಂದಾತ್ಮನನ್ನು ಪರಿಶುದ್ಧತೆ, ಏಕಾಗ್ರತೆ, ಧ್ಯಾನ ಮತ್ತು ತಾದಾತ್ಮ್ಯತೆಯಿಂದ ಅರಿತುಕೊ. ಈ ಆಶ್ಚರ್ಯಾತ್ಮನಲ್ಲಿ ಆನಂದವನ್ನು ಕಂಡು ತೃಪ್ತನಾಗು. ಹೇ, ಧೀರನಾದ ಪ್ರಿಯ ಸತ್ಯಕಾಮನೇ "ತತ್ ತ್ವಂ ಅಸಿ." ನೀನು ಅದೇ ಆಗಿರುವೆ.

ನೀನು ಸರ್ವವ್ಯಾಪಿಯೂ, ಅನಂತನೂ, ಅಮರನೂ, ಅರಿವಿನ ಸ್ವರೂಪನೂ, ಅವಿನಾಶಿಯೂ ಆದ ನಿತ್ಯಾತ್ಮನೆಂದು ತಿಳಿದು ಸದಾ ಭಾವಿಸು ತ್ತಿರು. ನಿನಗೆ ಇದೊಂದೇ ನಿಜವಾದ ಸ್ವಾತಂತ್ರ್ಯವನ್ನು ಮತ್ತು ಶಾಶ್ವತ ಆನಂದವನ್ನೂ ಕೊಡಬಲ್ಲದು. ಈ ಸಂದೇಶವನ್ನು ನಿನ್ನ ಮಿತ್ರರಿಗೂ,

ನಿನ್ನ ಸಹವಾಸದಲ್ಲಿರುವವರಿಗೂ ಹರಡು. ನೀನು ಒಂದು ಹೊಸ ಪಂಥವನ್ನು ಕಟ್ಟಬಲ್ಲೆ. ಶಾಂತಿ, ಸಮಾಧಾನಗಳನ್ನು ಕೋಟ್ಯಂತರ ಜನಗಳಿಗೆ ನೀಡಬಲ್ಲೆ ಹೃದಯದ ಹಣತೆಯಲ್ಲಿ ವೈರಾಗ್ಯವೆಂಬ ತೈಲವನ್ನು ಹಾಕು, ಭಕ್ತಿ ಯೆಂಬ ಬತ್ತಿಯನ್ನಿಡು, ಸಂತತ ಧ್ಯಾನದಿಂದ ಜ್ಞಾನವೆಂಬ ಬೆಳಕನ್ನು ಹಚ್ಚು ಮತ್ತು ನೋಡು. ಈಗ ಅಜ್ಞಾನಾಂಧಕಾರವು ಚದುರಿಹೋಗುವುದು. ನಿನಗೆ ಅದ್ಭುತವಾದ ಸತ್ಯದ ದರ್ಶನವಾಗುವುದು. ನಿನಗೆ ಜ್ಞಾನೋದಯ ವಾಗುವುದು.

ವಿಚಾರವಮಾಡುವುದನ್ನು ಅರಿತುಕೊ. ಅನಾಸಕ್ತನಾಗು. ವಾಸನೆ ಗಳನ್ನು ತೊಳೆದುಹಾಕು. ಇಂದ್ರಿಯಗಳನ್ನು ಸಂಯಮಿಸು. ಮನಸ್ಸನ್ನು ಏಕಾಗ್ರಮಾಡು. ಮುಕ್ತಿಗಾಗಿ ಹಂಬಲಿಸು. ಅಹಂಕಾರವನ್ನು ಕೊಲ್ಲು. ಸಂಕಲ್ಪಗಳನ್ನು ಬಿಡು. ಈ ಪ್ರಪಂಚವನ್ನು ಲಯಮಾಡು, ಅವಿದ್ಯೆಯನ್ನು ತೆಗೆದುಹಾಕು, ಬ್ರಹ್ಮವನ್ನು ಪಡೆದುಕೊ. ಇದೇ ವೇದಾಂತ ಸಾರವು.

ಬ್ರಹ್ಮವನ್ನು ಕಂಡುಕೊ. ಅವಿದ್ಯೆಯನ್ನು ನಾಶಮಾಡು. ಜಗತ್ತನ್ನು ಲಯಮಾಡು. ದ್ವೈತವನ್ನು ನಾಶಗೊಳಿಸು. ನಿರ್ಭಯನಾಗು. ಸಂತೋಷ ವಾಗಿರು. ಆತ್ಮದಲ್ಲಿ ಆನಂದವನ್ನು ಪಡೆ. ನಿನ್ನ ಸ್ವರೂಪದಲ್ಲೇ ವಿಶ್ರಮಿಸು. ಅದನ್ನು ತಿಳಿ. ಅದರಲ್ಲಿ ಒಂದಾಗು. ಅದೇ ಆಗು.

ಹಗಲಿನಲ್ಲಿ ನಿನಗೆ ಯಾವುದು ಬೆಳಕನ್ನು ನೀಡುವುದು ? ಸೂರ್ಯ ನಿಲ್ಲದ ರಾತ್ರಿಯಲ್ಲಿ ಯಾವುದು ಬೆಳಕನ್ನು ಕೊಡುವುದು ? ಚಂದ್ರ, ನಕ್ಷತ್ರ ಗಳು ಮತ್ತು ಹಣತೆಗಳು. ಸೂರ್ಯ, ಚಂದ್ರ, ನಕ್ಷತ್ರಗಳಿಲ್ಲದಿರುವಾಗ ಯಾವುದು ಬೆಳಕು ? ಕಣ್ಣುಗಳನ್ನು ಮುಚ್ಚಿದಾಗ ಬೆಳಕನ್ನು ಕೊಡುವುದು ಯಾವುದು ? ಬುದ್ಧಿಯಲ್ಲಿ ಕ್ಷುಬ್ಧತೆ ಅಥವ ನಿಶ್ಚಯತೆ (clarity) ಇದೆಯೇ, ದೋಷವಿದೆಯೇ ಎಂಬುದನ್ನು ಯಾರು ಕಂಡುಹಿಡಿಯುವರು ? ಅಹಂ (ನಾನು)—ಆ ಅಹಂ (ನಾನುವೇ) ಬೆಳಕುಗಳ ಬೆಳಕು. ಶಾಶ್ವತವಾದ ಆತ್ಮವು ಅಥವಾ ಅನಂತವು.

ರೂಪುಗಳನ್ನು ಕಾಣುವುದೇ ಕಣ್ಣುಗಳ ಧರ್ಮವು. ಎಲ್ಲ ರೂಪುಗಳ ಆಧಾರವು ಬ್ರಹ್ಮವು. ಒಂದು ವಸ್ತುವನ್ನು ನೋಡಿದಾಗ ಅದರ ನಶ್ವರವಾದ, ತೋರಿಕೆಯ ರೂಪವನ್ನು ಬಿಟ್ಟು ಆಧಾರವಾದ ಬ್ರಹ್ಮವನ್ನೇ ಕಾಣು.

ಹೀಗೆಯೇ ಇತರ ಇಂದ್ರಿಯಗಳಿಂದ ಗ್ರಹಿಸಲ್ಪಡುವ ವಿಷಯಗಳಲ್ಲಿ ಬ್ರಹ್ಮವನ್ನು ಕಾಣುವ ಭಾವವನ್ನು ಹೊಂದು. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಶ್ಲೋಕದ ಅರ್ಥವು— ಎಲ್ಲ ಧರ್ಮಗಳನ್ನು ಬಿಟ್ಟು ಆಶ್ರಯಕ್ಕಾಗಿ ನನಗೆ ಶರಣುಹೋಗು.

ವಿವೇಕವು ಬೀಜವು. ವೈರಾಗ್ಯವು ಬೇರು. ಗುರುಕೃಪೆಯು ಮಳೆಯು. ಬ್ರಹ್ಮಜ್ಞಾನವು ಫಲವು. ಇದು ಜ್ಞಾನಯೋಗದ ಮಾರ್ಗವು. ನಿತ್ಯಾನಿತ್ಯಗಳ ವಿಂಗಡಣೆಯನ್ನು ತಿಳಿದುಕೊ. ಎಲ್ಲ ವಸ್ತುಗಳಲ್ಲಿ ಮತ್ತು ಪ್ರಾಣಿಗಳಲ್ಲಿ ಆತ್ಮನನ್ನು ಕಾಣು. ನಾಮರೂಪಗಳು ಮಾಯೆಯು. ಆದ್ದರಿಂದ ಅವುಗಳನ್ನು ತ್ಯಾಗಮಾಡು. ಆತ್ಮಕ್ಕಿಂತ ಅನ್ಯವಾಗಿ ಬೇರೊಂದಿಲ್ಲವೆಂಬ ದೃಢವಾದ ಭಾವವನ್ನು ಹೊಂದು. ಭೌತ, ಮಾನಸಿಕ, ನೈತಿಕ ಅಥವಾ ಅಧ್ಯಾತ್ಮಿಕ ಸಂಪತ್ತುಗಳನ್ನು ಎಲ್ಲರೊಡನೆ ಹಂಚಿಕೊ. ಎಲ್ಲರೊಳಗಿರುವ ಆತ್ಮನಿಗೆ ಸೇವೆ ಮಾಡು. ಇತರರಿಗೆ ಸೇವೆಮಾಡುವಾಗ ನಿನ್ನ ಆತ್ಮಕ್ಕೇ ಸೇವೆ ಮಾಡುತ್ತಿರುವುದಾಗಿ ಭಾವಿಸು. ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸು. ಭ್ರಾಂತಿಯ ಭೇದಗಳನ್ನು ಲಯಮಾಡು. ಮನುಷ್ಯನನ್ನು ಮನುಷ್ಯನಿಂದ ಪ್ರತ್ಯೇಕಿಸುವ ಆತಂಕಗಳನ್ನು ತೆಗೆದುಹಾಕು. ಎಲ್ಲರೊಡನೆ ಸೇರು. ಎಲ್ಲರನ್ನೂ ಆಲಂಗಿಸು. ಸ್ತ್ರೀಪುರುಷ ಮತ್ತು ದೇಹಭಾವವನ್ನು ದೇಹಿಯಲ್ಲದ ಆತ್ಮಭಾವದಿಂದ ನಾಶಮಾಡು. ದುಡಿಯುತ್ತಿರುವಾಗ ಆತ್ಮದಮೇಲೆ ಚಿತ್ತವನ್ನಿಡು. ಇದು ಅನುಷ್ಠಾನ ವೇದಾಂತವು. ಇದು ಪ್ರಾಚೀನ ಮಹರ್ಷಿಗಳು ಮತ್ತು ಉಪನಿಷತ್ತುಗಳ ಉಪದೇಶ ಸಾರವು. ನಿತ್ಯ ಜೀವನದ ಹೋರಾಟದಲ್ಲಿ ಇವುಗಳ ಅನುಷ್ಠಾನಮಾಡು. ನೀನು ಜೀವನ್ಮುಕ್ತನಾಗಿ ಕಂಗೊಳಿಸುವೆ. ಇದರಲ್ಲಿ ಸಂಶಯವೇ ಇಲ್ಲವು.

ನೀನು ಅನುಷ್ಠಾನವೇದಾಂತಿಯಾಗಬೇಕು. ಸಿದ್ಧಾಂತಗಳು ಮತ್ತು ಭಾಷಣಗಳು ಬುದ್ಧಿಶಕ್ತಿಯ ವ್ಯಾಯಾಮದಂತೆ ಅಥವಾ ವಾಗ್ಯುದ್ಧದಂತೆ. ಇದಷ್ಟೇ ಸಾಲದು. ಅನುಷ್ಠಾನವಿಲ್ಲದ ವೇದಾಂತದಿಂದ ಸಿದ್ಧಾಂತಕ್ಕೆ ಬೆಲೆಯಿಲ್ಲವು. ನೀನು ವೇದಾಂತವನ್ನು ನಿತ್ಯವೂ, ನಿನ್ನ ಪ್ರತಿಯೊಂದು ಕಾರ್ಯಗಳಲ್ಲಿಯೂ ಅನುಷ್ಠಾನಕ್ಕೆ ತರಬೇಕು. ವೇದಾಂತವು ಐಕ್ಯತೆಯನ್ನು ಅಥವಾ ಆತ್ಮದ ಏಕತೆಯನ್ನು ಉಪದೇಶಿಸುವುದು. ನೀನು ಎಲ್ಲರಲ್ಲಿಯೂ

ಪ್ರೇಮವನ್ನು ಹರಡು. ವೇದಾಂತ ಶಕ್ತಿಯು ನಿನ್ನ ಪ್ರತಿಯೊಂದು ಕೋಶ ಗಳು, ನಾಳಗಳು, ನರಗಳು, ಮೂಳೆ ಮತ್ತು ಸ್ನಾಯುಗಳಲ್ಲಿ ಚೆನ್ನಾಗಿ ಪ್ರವೇಶಿಸುವಂತೆ ಮಾಡು. ಅದು ನಿನ್ನ ಸ್ವಭಾವದ ಒಂದು ಅಂಗವಾಗಿರಲಿ. ನೀನು ಏಕತ್ವದ ಬಗ್ಗೆ ಮಾತನಾಡು ಮತ್ತು ದುಡಿ. ನೀನು ಪೀಠದಲ್ಲಿ ಕುಳಿತು “ ನಾನೇ ಎಲ್ಲವು, ಎಲ್ಲದರ ಆತ್ಮವು ನಾನೇ, ನನ್ನ ಆತ್ಮವನ್ನು ಬಿಟ್ಟು ಬೇರಿಲ್ಲವು ” ಎಂದು ವೇದಾಂತದ ಬಗ್ಗೆ ಪ್ರಭಾವ ಪೂರ್ಣವಾದ ಭಾಷಣ ವನ್ನು ಮಾಡಿ ಮರುಕ್ಷಣವೇ ಸ್ವಾರ್ಥ ಮತ್ತು ಪ್ರತ್ಯೇಕತಾ ಮನೋಭಾವ ವನ್ನು ತೋರಿದರೆ ಸಮಾಜದ ಮನಸ್ಸಿನಲ್ಲಿ ನೀನು ಪರಿಣಾಮವನ್ನುಂಟು ಮಾಡಲಾರೆ. ನಿನ್ನನ್ನು ಶುಷ್ಕ ವೇದಾಂತಿ ಎಂದು ಕರೆಯುವರು. ನಿನ್ನನ್ನು ಯಾರೂ ಲಕ್ಷಿಸುವುದಿಲ್ಲ.

**ಅದ್ವೈತವು ತನ್ನ ಮಧುರವಾದ ಪರಿಮಳವನ್ನು ವೇದಾಂತ ದಿಂದ ಹೊರಪಡಿಸಿ ದೂರ ಪ್ರದೇಶಗಳಲ್ಲಿಯೂ ವಿಸ್ತಾರವಾಗಿ ಪ್ರಸಾರಮಾಡುವುದು.** ನಿಜವಾದ ವೇದಾಂತಿಯ ಸಂಗವನ್ನು ಪಡೆದವರು ಈ ಸೊಗಸಾದ ಪರಿಮಳದ ಅನುಭವವನ್ನು ಪಡೆಯುವರು. “ ನಾನು ವೇದಾಂತಿಯು. ನಾನು ವೇದಾಂತವನ್ನು ಅನುಷ್ಠಾನ ಮಾಡುವೆನು ” ಎಂದು ಹೇಳುವ ಅವಶ್ಯಕತೆಯಿಲ್ಲವು. ಈ ಆಹ್ಲಾದಕರವಾದ ವೇದಾಂತ ಕಂಪನ್ನು ಸಮತೆಯ ಅಥವಾ ಏಕತ್ವದ ಸುಗಂಧವನ್ನು ಒಬ್ಬ ಉಪದೇಶಕ ಅಥವ ವೇದಾಂತೋಪನ್ಯಾಸಕ (ಪ್ರಚಾರಕ) ಪಡೆಯದಿದ್ದರೆ ಅವನು ಕೇವಲ ಡಾಂಭಿಕ ಮತ್ತು ಗ್ರಾಮೋಫೋನಿನಂತೆ ಮಣಮಣಗುಟ್ಟುವ ಮನುಷ್ಯನೆಂದು ತಿಳಿ. ಅವನ ಮಾತುಗಳು ಗಾಳಿಯಲ್ಲಿ ಬಿಟ್ಟ ನಿಷ್ಪ್ರಯೋಜಕವಾದ ಸಿಡಿ ಮದ್ದುಗಳಂತೆ. ಶ್ರೋತೃಗಳ ಮನಸ್ಸಿನಲ್ಲಿ ಯಾವ ಪರಿಣಾಮವನ್ನೂ ಮಾಡುವುದಿಲ್ಲವು.



# ೩. ವೈವಿಧ್ಯತೆಯಲ್ಲಿ ಐಕ್ಯತೆ

ಈ ವಿಶ್ವದಲ್ಲಿ ಜೀವದ್ರವ್ಯದ ವಿನಃ ಮತ್ತೇನೂ ಇಲ್ಲವೆಂದು ನೀನು ಮನಸ್ಸಿಗೆ ತಂದುಕೊ. ಆಗ ಎಲ್ಲ ರೂಪುಗಳೂ ಅದೃಶ್ಯವಾಗುವುವು. ಎಲ್ಲ ಬಗೆಯ ವಸ್ತುಗಳೂ ಒಂದೇ ಬಗೆಯ ದ್ರವ್ಯದಿಂದಾಗಿವೆ. ಮರ, ಮನುಷ್ಯ, ನಾಯಿ, ತಿಗಣೆ, ಅಥವ ಸೊಳ್ಳೆಯು ಒಂದೇ ವಿಧದ ಜೀವದ್ರವ್ಯದಿಂದಾಗಿವೆ. ಜೀವದ್ರವ್ಯ (protoplasm) ವೆಂದರೆ, ಸಸ್ಯಗಳ ಮತ್ತು ಪ್ರಾಣಿಗಳ ಜೀವನಕ್ಕೆ ಆಧಾರವಾದ ಅರ್ಧ ದ್ರವವೂ ಅರ್ಧ ಪಾರದರ್ಶಕವೂ ನಿರ್ವರ್ಣವೂ ಆದ ವಸ್ತು, ಜೀವವನ್ನಿಡಲ್ಪಟ್ಟ ದ್ರವ್ಯದ ರೂಪವು. ಅದು ಒಂದೇ ಬಗೆಯ, ರಚನರಹಿತವಾದ, ಮೂಲವಸ್ತುವಾ ಜೀವದ ಸ್ಥೂಲರೂಪದ ಆಧಾರವಾದ ಸಸಾರಜನಕಕ್ಕೆ ಸಂಬಂಧಿಸಿದ (Albumen) ರಾಸಾಯನಿಕ ಸಂಯುಕ್ತತೆಯಿಂದ ಸಂಕುಚಿತವಾಗುವ ಜೀವದ್ರವ್ಯವು. ದ್ರವ್ಯದ ಸೂತ್ರವು ಎಲ್ಲ ರೂಪುಗಳನ್ನೂ ಸೇರಿಸುವುದಲ್ಲದೆ ಅದೇ ಆಗಿರುವುದು. ಅಷ್ಟಲ್ಲದೆ ಈ ವಿಶ್ವದಲ್ಲಿ ಶಕ್ತಿ ಅಥವ ಮನಸ್ಸು ಒಂದೇ ಇರುವುದೆಂಬುದನ್ನು ನೀನು ಊಹಿಸಬಲ್ಲೆ. ಜ್ಞಾನಯೋಗದ ದಾರಿಯಲ್ಲಿರುವ ಶಿಷ್ಯನು ಶುದ್ಧಜ್ಞಾನವೆಂಬ ಏಕಸೂತ್ರವೊಂದೇ ಇರುವುದೆಂದು ಚಿಂತಿಸುವನು. ಶ್ರೀಕೃಷ್ಣನು ಅರ್ಜುನನಿಗೆ "ಧನಂಜಯನೇ ನನಗಿಂತ ಹೆಚ್ಚಿನ ಮತ್ತೊಂದು ವಸ್ತು ಯಾವುದೂ ಇರುವುದಿಲ್ಲ. ಇದೆಲ್ಲವೂ ದಾರದಲ್ಲಿ ಪೋಣಿಸಿದ ಮುತ್ತುಗಳ ಗುಂಪಿನಂತೆ ನನ್ನಲ್ಲಿ ಪೋಣಿಸಲ್ಪಟ್ಟಿರುವುದು" (ಗೀತಾ— VII-೭) ಎಂದು ಹೇಳಿದ್ದಾನೆ.

ನಾಮರೂಪಗಳ ಹಿನ್ನೆಲೆಯಲ್ಲಿ ವಿಶ್ವಾತ್ಮವು ಅಥವ ಬ್ರಹ್ಮವು ಅಥವ ದೇವರು ಅಂತಸ್ಥನಾಗಿರುವನು. ರೂಪಗಳ ಮೂಲದಲ್ಲಿರುವ ಸತ್ಯವನ್ನು ಅಥವ ನೈಜತೆಯನ್ನು ತಿಳಿಯಲು ಯತ್ನಿಸು. ಸಣ್ಣಪುಟ್ಟ ಜೀವಿಗಳನ್ನೂ, ಇನ್ನೂ ಬೆಳೆಯದ ಪ್ರಾಣಿಗಳನ್ನು ಕಂಡು ತಿರಸ್ಕರಿಸದಿರು. ನಿನ್ನಲ್ಲಿ ಸ್ಪಂದಿಸುತ್ತಿರುವ ಒಂದೇ ಪ್ರಾಣಶಕ್ತಿಯು, ಇರುವೆಗಳು, ನಾಯಿಗಳು ಮತ್ತು ಎಲ್ಲಾ ಪ್ರಾಣಿಗಳಲ್ಲಿಯೂ ಸ್ಪಂದಿಸುತ್ತಿರುವುದು. ಎಲ್ಲಾ ಪ್ರಾಣಿಗಳೊಡನೆಯೂ ನಿಕಟ ಸಂಬಂಧವನ್ನು ಮತ್ತು ಐಕ್ಯತೆಯನ್ನು ಕಂಡುಕೊ. ಸೃಷ್ಟಿಯಲ್ಲಿ ಅಥವ

ವ್ಯಕ್ತತೆಯಲ್ಲಿ ಮಾತ್ರ ಪರಿಮಾಣವಿರುವುದು. ಎಲ್ಲ ರೂಪುಗಳೂ ದೇವರು ಅಥವ ಸಗುಣಬ್ರಹ್ಮನಿಗೆ ಸೇರಿದೆ. ಒಂದು ಗಿಡ ಅಥವ ಪ್ರೊದೆ, ಒಂದು ನಾಯಿ ಅಥವ ಒಂದು ವಾಹನವನ್ನು ನೋಡಿದಾಗ ರೂಪದ ಹಿಂದೆ ಅಡಗಿರುವ ಪ್ರಾಣವನ್ನು ಅಥವಾ ಆಧಾರಭೂತವಾಗಿರುವ ಜ್ಞಾನವನ್ನು ನೋಡಲು ಪ್ರಯತ್ನಿಸು. ನೀನು ಇದನ್ನೇ ಕೆಲವು ಕಾಲ ಹೀಗೆ ಅಭ್ಯಾಸಮಾಡಿದರೆ ನಿನಗೆ ಅನಿರ್ವಚನೀಯವಾದ ಆನಂದವು ದೊರೆಯುವುದು. ಎಲ್ಲ ದ್ವೇಷಗಳೂ ನಿಲ್ಲುವುವು. ವಿಶ್ವಪ್ರೇಮವನ್ನು, ಅರಿವಿನ ಸಮತ್ವವನ್ನೂ ಬೆಳೆಸಿಕೊ. ಇದು ಅತ್ಯಂತ ಅಪರೂಪವಾದ ಮತ್ತು ಹೆಚ್ಚಿನ ಅನುಭವವು. ತತ್ಪರಿಣಾಮವಾಗಿ ವೇದಾಂತ ವಿಜ್ಞಾನದ, ಏಕತೆಯ ಸಾಕ್ಷಾತ್ಕಾರವಾಗುವುದು.

ಗಿಡಗಳೂ, ಇರುವೆಗಳೂ, ಪಕ್ಷಿಗಳೂ, ಪ್ರಾಣಿಗಳೂ ಮತ್ತು ಮಾನವರಲ್ಲಿ ಪ್ರಾಣವು ಸಮಾನವಾಗಿರುವುದು. ಸೂರ್ಯ, ಚಂದ್ರ, ತಾರೆಗಳು, ಆಸನಗಳು, ಗೋಡೆಗಳು, ಕಲ್ಲುಗಳು, ಪ್ರಾಣಿಗಳು, ಪಕ್ಷಿಗಳು ಮತ್ತು ಮಾನವ ಜೀವಿಗಳಲ್ಲಿ ಸಮಾನವಾಗಿರುವುದೇನು ? ಸತ್ಯ. ಒಂದು ಮೇಜು ಇದೆ. ಒಂದು ಗಿಡವೂ ಇದೆ. ಇದೆ ಎಂಬ ಸತ್ಯವು ಸಚ್ಚಿದಾನಂದ ಬ್ರಹ್ಮವು. ಸಚ್ಚಿದಾನಂದ ಬ್ರಹ್ಮದ ಸತ್ ವಿಷಯವೇ ಇರುವಿಕೆಯು.

ದೇಹಗಳು ಮತ್ತು ಮನಸ್ಸುಗಳಲ್ಲಿ ಇರುವ ಭೇದಗಳು ಕಾಲ್ಪನಿಕವು ಮತ್ತು ತೋರಿಕೆಯವು. ಬಣ್ಣಗಳಲ್ಲಿ ಮತ್ತು ಅಭಿಪ್ರಾಯಗಳಲ್ಲಿ ವ್ಯತ್ಯಾಸಗಳೇನಿಲ್ಲವು. ಎಲ್ಲದರಲ್ಲಿ ಸಮಾನವಾಗಿರುವುದು ಆತ್ಮವು. ಒಬ್ಬ ಕಳ್ಳ, ಒಬ್ಬ ವೇಶ್ಯೆ, ಒಬ್ಬ ಜಲಗಾರ, ದೊರೆ, ನೀಚ, ಸಂತ, ನಾಯಿ, ಬೆಕ್ಕು ಮತ್ತು ಇಲಿ —ಎಲ್ಲವೂ ಸಮಾನವಾದ ಆತ್ಮವನ್ನೇ ಹೊಂದಿವೆ. ದ್ವೈತವನ್ನು ಮತ್ತು ಸುಳ್ಳಾದ ತೋರಿಕೆಯನ್ನು ಅಲಕ್ಷಿಸು. ಶುದ್ಧವಾದ ಅಥವಾ ಸಾರವಾದದ್ದನ್ನು ಹೊರತೆಗೆದು ಅರಿಯಿರಿ.

ಅದ್ವಿತೀಯವೆಂಬ ಭಾವನೆಯಿಂದ ದ್ವೈತಭಾವನೆಯನ್ನು ಮೂಲೋತ್ಪಾಟನಮಾಡಿ. ಬೇಧಭಾವಗಳನ್ನು, ತಾರತಮ್ಯಗಳನ್ನು ಮತ್ತು ಪ್ರತ್ಯೇಕತೆಯನ್ನುಂಟುಮಾಡುವ ಬೇಧ ಬುದ್ಧಿಯನ್ನು ನಾಶಮಾಡಿ. ಈಗ ನೀವು ಶಾಶ್ವತ ಅದ್ವೈತಾನಂದವನ್ನು ಅನುಭವಿಸಬಹುದು. ಈಗ ನೀವು ಜೀವನ್ಮುಕ್ತರು.

ಒಬ್ಬ ಸೂರ್ಯನು ಅನೇಕ ಪಾತ್ರೆಗಳ ನೀರಿನಲ್ಲಿ ತೋರುವಂತೆ ಒಂದೇ ಆತ್ಮವು ಅನೇಕವಾಗಿ ತೋರುವುದು. ಅನೇಕ ಸೂರ್ಯರೆಂಬುದು ಸುಳ್ಳು. ಅವು ಪ್ರತಿಬಿಂಬಗಳು ಮಾತ್ರ. ಹಾಗೆಯೇ ಅನೇಕ ಜೀವರು ಎಂಬುದು ಭ್ರಮೆಯು ಒಬ್ಬ ಸೂರ್ಯನೇ ನಿಜವಾದವನು. ಹಾಗೆಯೇ ಬ್ರಹ್ಮವೊಂದೇ ಸತ್ಯವು.

ಮಾನವರ ಹೃದಯಗಳಲ್ಲಿ, ವಾಸಿಸುವ ವಿಶ್ವದ ಪ್ರತಿಯೊಂದು ಅಣುವಿನಲ್ಲೂ ಸ್ಪಂದಿಸುವುದೇ ದಿವ್ಯಜೀವನವು. ಇರುವೆಯ ಆತ್ಮವೇ ಮನುಷ್ಯನ ಆತ್ಮವು. ಪಾಪಿಯ ಆತ್ಮವೇ ಸಂತನ ಆತ್ಮವು. ಭಿಕ್ಷುಕನ ಆತ್ಮವೇ ಸಾರ್ವಭೌಮನ ಆತ್ಮವು. ಪ್ರಕೃತಿಯಲ್ಲಿರುವ ಪರಮಾರ್ಥ ಸತ್ಯವು ಮಾನವನಲ್ಲಿರುವ ಪರಿಪೂರ್ಣ ಸತ್ಯವು. ನೇರವಾದ ಅಂತರ್‌ದೃಷ್ಟಿಯಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಜೀವನದ ಗುರಿಯು.

ಮಾನವ ಜನಾಂಗವೆಲ್ಲ ಒಂದೇ ಎಂಬುದನ್ನು ಮೊದಲು ಅರಿತುಕೊ. ಮನುಷ್ಯ ಮನುಷ್ಯನನ್ನು ಪ್ರತ್ಯೇಕಿಸುವ ಭ್ರಾಂತಿಯ ಅಡ್ಡಗೋಡೆಗಳನ್ನು ನಿಸ್ಸಂಕೋಚವಾಗಿ ಕೆಡವಿಹಾಕು. ಸರ್ವಧರ್ಮಗಳಲ್ಲಿ ಅಡಗಿರುವ ಮೂಲ ತತ್ವಗಳು ಒಂದೇ ಎಂಬುದನ್ನು ತಿಳಿದುಕೊ.

ಎಲ್ಲರೊಡನೆ ತಾದಾತ್ಮ್ಯವನ್ನು ಹೊಂದು. ಸೂರ್ಯ, ಆಕಾಶ, ವಾಯು, ಪುಷ್ಪ, ವೃಕ್ಷ, ಮೊಗ್ಗು, ಪ್ರಾಣಿಗಳು, ಕಲ್ಲುಗಳು ಮತ್ತು ಸಾಗರದೊಡನೆ ಒಂದಾಗು. ಜೀವನದ ಏಕತೆಯನ್ನೂ, ಜ್ಞಾನದ ಐಕ್ಯತೆಯನ್ನೂ ತಿಳಿದುಕೊ. ಎಲ್ಲ ಪ್ರಾಣಿಗಳಲ್ಲೂ, ಜೀವಿಗಳಲ್ಲೂ, ಸಸ್ಯಗಳಲ್ಲೂ ಒಂದೇ ರೀತಿಯಲ್ಲಿರುವ ಆತ್ಮನನ್ನು ನೋಡು.

ಎಲ್ಲರೊಡನೆ ಸೇರು. ಪಾರ್ಸಿಗಳು, ಅಮೆರಿಕನ್ನರು, ಇಟಾಲಿಯನ್ನರು, ಜಪಾನೀಯರು, ರಷ್ಯನ್ನರು ಎಲ್ಲರೂ ನಿನಗೆ ಸೇರಿದವರು. ನೀನೂ ಅವರಿಗೆ ಸೇರಿದವನು. ಅವರೊಡನೆ ಒಂದಾಗಿರು.

ಮೊದಲು ನಿಮ್ಮ ಸಂಸಾರದ ಸಂಬಂಧದೊಡನೆ, ನಂತರ ನಿಮ್ಮ ಸಮಾಜದ ಸದಸ್ಯರೊಡನೆ, ಜಿಲ್ಲೆಯ ಜನರೊಡನೆ, ಪ್ರಾಂತ್ಯದ ಪೌರರೊಡನೆ ಹಾಗೂ ಇಡೀ ರಾಷ್ಟ್ರ ಮತ್ತು ಜಗತ್ತಿನ ಎಲ್ಲ ಜನಾಂಗಗಳೊಡನೆ ಆತ್ಮೀಯತೆಯನ್ನು ಹೊಂದು. ಈ ರೀತಿಯಲ್ಲಿ ನೀನು ಐಕ್ಯತೆಯ ಅರಿವನ್ನು ಪಡೆದುಕೊಂಡರೆ ನೀನು ದೇವರಲ್ಲಿಯೂ ಒಂದಾಗುವೆ.

ಬ್ರಹ್ಮಜ್ಞಾನಿಗಳು ವಿದ್ಯಾ ವಿನಯ ಸಂಪನ್ನನಾದ ಬ್ರಾಹ್ಮಣ, ಗೋವು, ಆನೆ, ನಾಯಿ ಮತ್ತು ಚಂಡಾಲನಲ್ಲಿಯೂ ಬ್ರಹ್ಮದೃಷ್ಟಿಯುಳ್ಳವರು. ಈ ಸಮ ದೃಷ್ಟಿಯ ಸ್ವಭಾವವೇಂತಹುದು? ಆನೆಯು ನಾಯಿಯಂತೆ ಕಾಣುವುದೇ? ಗುಣಗಳು ಅಥವಾ ತೋರಿಕೆಗಳಲ್ಲಿ ಸಮಾನ ರೂಪವಿರುವುದೆ? ಗುಣಗಳು ಯಾವಾಗಲೂ ಭಿನ್ನವು ಮತ್ತು ವೈವಿಧ್ಯವು. ಜ್ಞಾನಿಯು ಯೋಗದಲ್ಲಿ ಸಾಮರಸ್ಯವನ್ನು ಮಾಡಿಕೊಂಡು ಬ್ರಾಹ್ಮಣ, ಆನೆ, ನಾಯಿ ಮತ್ತು ಚಂಡಾಲನಲ್ಲಿ ಆತ್ಮನನ್ನು ಕಾಣುವನು. ಎಲ್ಲೆಲ್ಲಿಯೂ ಆ ಆತ್ಮನನ್ನೇ ಕಾಣು ವುದರಿಂದ, ಬ್ರಹ್ಮಭಾವದಲ್ಲಿ ಇರುವುದರಿಂದ, ಅವನು ಸಮದರ್ಶನವನ್ನು ಅನುಭವಿಸುವನು. ಯೋಗಿಯು ಒಂದೇ ವಿಧವಾದ ಆತ್ಮನನ್ನೇ ಪ್ರತಿಯೊಂದ ರಲ್ಲಿಯೂ ನೋಡುವನು. ಈ ವಿಷಯವನ್ನು ಸ್ಪಷ್ಟವಾಗಿ ತಿಳಿದುಕೊ. ನೀನು ಏನನ್ನು ನೋಡಿದರೂ ಅದು ದೇವರು, ಏನನ್ನು ಕೇಳಿದರೂ ದೇವರೇ, ಯಾವು ದರ ರುಚಿ ನೋಡಿದರೂ ಅದು ದೇವರೆ. ನೀನು ಆಘ್ರಾಣಿಸುವುದೂ ದೇವರೇ. ನೀನು ಭಾವಿಸುವುದೂ ದೇವರೆ. ಇದು ಭಗವಂತನ ವ್ಯಕ್ತರೂಪವು. ಈ ಸ್ಥೂಲ ದೇಹವು ವಿರಾಟ್‌ಗೆ ಸೇರಿದದು. ಸೂಕ್ಷ್ಮಶರೀರವು ಹಿರಣ್ಯಗರ್ಭನಿಗೆ ಸೇರಿದದು. ಕಾರಣಶರೀರವು ಈಶ್ವರನಿಗೆ ಸೇರಿದದು. ಈಗ ಈ ಸಣ್ಣ "ನಾನು" ಎಲ್ಲಿದೆ?

ಸಂಯೋಜಿತ ವಿಶ್ವದೃಷ್ಟಿಯನ್ನು ಹೊಂದು. ನಾನಾತ್ವದಲ್ಲಿ ಏಕತ್ವ ವನ್ನು — ವಿವೇಕ, ವಿಚಾರ ಮತ್ತು ಜ್ಞಾನದ ಮೂಲಕ ಭೇದವೆಂಬ ಗೋಡೆ ಗಳನ್ನು ಉರುಳಿಸು. ಆಧ್ಯಾತ್ಮ ದೃಷ್ಟಿಯನ್ನು ಗಳಿಸು. ನಿತ್ಯಾನಂದ ಸಾಮ್ರಾಜ್ಯದಲ್ಲಿ ಮೇಲೇರು, ಅದ್ಭುತನಾದ ಆತ್ಮನ ಶ್ರೇಷ್ಠದೃಷ್ಟಿಯಿಂದ ಒಬ್ಬನೇ ಆದ ಆತ್ಮನನ್ನು ಕಂಡು ಸಂತೋಷವಾಗಿರು. ಸೃಷ್ಟಿಯಲ್ಲೆಲ್ಲಾ ಪರಮಾತ್ಮನು ಇರುವುದನ್ನು ನೋಡು. ಎಲ್ಲರಿಗೂ ಮಿತ್ರನಾಗು. ಎಲ್ಲರನ್ನೂ ಪ್ರೀತಿಸು. ಎಲ್ಲರಿಗೂ ದಯಾವಂತನಾಗು. ವಿಶ್ವಪ್ರೇಮವನ್ನು ಅಭ್ಯಾಸ ಮಾಡು. ಮನುಷ್ಯರಲ್ಲಿರುವ ಅಂತರ್ಭೇದಗಳನ್ನು ನಾಶಮಾಡು. ವಿಭುವಾಗು. ಎಲ್ಲರೊಡನೆ ಕಲೆತುಕೊ. ಉತ್ತಮನೆಂಬ ಭಾವನೆಯನ್ನು ಬಿಡು. ಅನ್ಯಾಯ, ಅಧರ್ಮಗಳನ್ನು ಕೊನೆಗಾಣಿಸು. ಶುದ್ಧಜ್ಞಾನವನ್ನು ಬೆಳೆಸು. ಜ್ಞಾನ, ಸಂತೋಷ, ಶಾಂತಿಯನ್ನು ಮಾನವರಲ್ಲಿ ಪ್ರಸಾರಮಾಡು. ಪ್ರಾಮಾಣಿಕತೆ ಯನ್ನೂ, ಧಾರ್ಮಿಕತೆಯನ್ನೂ ಅಭ್ಯಾಸಮಾಡು.

ಜೀವನ್ಮುಕ್ತನಂತೆ ಮಗುವು ಸಮದೃಷ್ಟಿಯನ್ನು ಹೊಂದಿರುವುದು. ಆ ಮಗುವಿಗೆ ಶತ್ರು ಅಥವ ಮಿತ್ರನ ಭಾವವಿಲ್ಲ. ಈಗ ನೀನು ಹೊಡೆದು ಆಮೇಲೆ ಒಂದು ಕಲ್ಲುಸಕ್ಕರೆಯನ್ನು ಹಿಡಿದು ಅವನನ್ನು ಕರೆದರೆ ಕೂಡಲೇ ಆ ಮಗುವು ಅತಿಸಂತೋಷದಿಂದ ನಿನ್ನ ಬಳಿಗೆ ಓಡಿಬರುವುದು. ಈ ಸಮದೃಷ್ಟಿಯಲ್ಲಿ ಅಜ್ಞಾನವಿದೆ. ಆದರೆ ಜ್ಞಾನಿಯ ಸಮದೃಷ್ಟಿಯು ಆತ್ಮೈಕ್ಯದ ಜ್ಞಾನದಿಂದಾದುದು.

ಓ, ಅಮೃತಪುತ್ರನೇ, ಸರ್ವಾಂತರ್ಯಾಮಿಯಾದ ಆತ್ಮನನ್ನು ನೋಡು. ಈ ಮಂತ್ರಸೂತ್ರವನ್ನು ಮನಸ್ಸಿನಲ್ಲಿ ಜಪಿಸು. "ಓಂ ಏಕ ಸತ್–ಚಿತ್–ಆನಂದ–ಆತ್ಮ" ಎಂದು ಯಾವುದೇ ರೂಪವನ್ನು ಕಂಡಾಗ ಉಚ್ಚರಿಸು ಈ ನಾಮರೂಪಗಳ ಮಾಯೆಯನ್ನು ಕಳೆದು ಆ ತೋರಿಕೆಗಳ ಆಧಾರನೂ, ಮೂಲವೂ, ತಿರುಳೂ ಆದ ಆತ್ಮನಲ್ಲಿ ಒಂದಾಗಲು ಯತ್ನಿಸು. ಎಲ್ಲರಿಗೂ ಆತ್ಮಭಾವದಿಂದ ಸೇವೆಮಾಡು. ಭ್ರಾಂತಿಯ ಭೇದಗಳನ್ನು ತೊಲಗಿಸು. ಪ್ರತ್ಯೇಕತೆಯನ್ನು ತಳ್ಳಿಹಾಕು. ತರ್ಕಹೀನವಾದ ದ್ವೇಷಾಸೂಯೆಗಳನ್ನು ನಾಶ ಮಾಡು. ಎಲ್ಲರೊಡನೆ ಬೆರೆಯುತ್ತಿರು. ಎಲ್ಲರನ್ನೂ ಸೇರಿಸಿಕೊ. ಎಲ್ಲರನ್ನೂ ಆಲಂಗಿಸು. ನಿನ್ನಲ್ಲಿರುವುದನ್ನು ಎಲ್ಲರಿಗೂ ಹಂಚು. ಒಂದು ಕ್ಷಣವೂ ಸೋಮಾರಿಯಾಗಬೇಡ ಅತ್ಯಂತ ಚಟುವಟಿಕೆಯ ಜೀವನವನ್ನು ನಡೆಸಿದರೂ ಮನಸ್ಸಿನಲ್ಲಿ ಸದಾ ಶಾಂತಿಯನ್ನು ಧರಿಸಿ ಅನುಷ್ಠಾನ ವೇದಾಂತಿಯಾಗು. ಅಂತಹ ಅನುಷ್ಠಾನ ವೇದಾಂತಿಗಳಿಗೆ ಶುಭವಾಗಲಿ. ಅವರು ಸಂತೋಷ ಶಾಂತಿ ಮತ್ತು ಪ್ರೇಮವನ್ನು ಎಲ್ಲೆಲ್ಲಿಯೂ ಬೆಳಗುವಂತಾಗಲಿ. ಅವರು ಸತ್ಯ, ದಿವ್ಯ ಜ್ಯೋತಿ ಮತ್ತು ಶ್ರೇಷ್ಠ ಪ್ರಕಾಶಗಳಿಂದ ಕೂಡಿದ ಜ್ಞಾನ ದೀವಿಗೆಯನ್ನು ಹಿಡಿದು ನಡೆಯುವಂತಾಗಲಿ. ತಮ್ಮ ಆದರ್ಶ ಜೀವನದಿಂದ ವೇದಾಂತಾನುಷ್ಠಾನವನ್ನು ಇತರರಿಗೆ ಬೋಧಿಸುವಂತಾಗಲಿ.

ದ್ವೈತವಿಲ್ಲದ, ಸರ್ವಾತ್ಮಭಾವವನ್ನು ಹೊಂದಿರುವ ಯೋಗಿಗೆ ಭ್ರಾಂತಿಯಾಗಲೀ, ದುಃಖವಾಗಲೀ ಇಲ್ಲವು. ಅಂತಹ ಯೋಗಿಯು ಬ್ರಹ್ಮವೇ ಆಗಿರುವನು. ಎಲ್ಲವನ್ನೂ ಬ್ರಹ್ಮವೆಂದು ಕಂಡುಕೊಂಡಿರುವಾಗ ಬ್ರಹ್ಮಕ್ಕಿಂತ ಅನ್ಯವಾಗಿ ಒಂದು ಕಣವೂ ಇಲ್ಲವು. ಆ ಕಾರಣದಿಂದಲೇ ಶ್ರುತಿಗಳು "ಸರ್ವಂ ಖಲ್ವಿದಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ"—ಇದೆಲ್ಲವೂ ಬ್ರಹ್ಮವೇ. ಇಲ್ಲಿ ಕಿಂಚಿತ್ತೂ ಬೇರೆ ಇಲ್ಲವು, ಎಂದು ಉದ್ಘೋಷಿಸುತ್ತಿವೆ.

ಜೀವನು ಬ್ರಹ್ಮವಾಗುವನು. ಆದರೆ ಅವನು ಈಶ್ವರನಾಗಲಾರನು. ಅವಿದ್ಯೆಯು ಎಂದರೆ ಜೀವನ ಉಪಾಧಿಯು ಅದೃಶ್ಯವಾದ ಕೂಡಲೇ ಜೀವನು ಬ್ರಹ್ಮವಾಗುವನು. (ಇದು ಒಂದು ಸಂಪ್ರದಾಯ).

ಗಂಗೆಯ ನೀರು ನದಿಯಲ್ಲಿ ಹರಿಯುತ್ತಿದ್ದಾಗಲೂ ಅಥವಾ ಒಂದು ಶೀಷೆಯಲ್ಲಿ ಇಡಲ್ಪಟ್ಟಾಗಲೂ ಒಂದೇ ಆಗಿರುವುದು. ಹಾಗೆಯೇ ಜೀವಾತ್ಮ, ಪರಮಾತ್ಮರು ಒಂದೇ ಮತ್ತು ಅದೇ ಆಗಿರುವರು.

ವೈವಿಧ್ಯತೆಯಲ್ಲಿ ಒಂದನ್ನೇ ನೋಡುವವನು ನಿಜವಾದ ಧಾರ್ಮಿಕ ಪುರುಷನು. ನಮ್ಮನ್ನು ತನ್ನಂತೆಯೇ ಮಾಡುವ ವಸ್ತುಗಳು, ತನಗಿಂತ ಬೇರೆಯಾಗಿ ಮಾಡುವ ವಸ್ತುಗಳಿಗಿಂತ ಸುಂದರವೂ, ಗಾಢವೂ ಆದುದು.

ಎಲ್ಲಿ ದ್ವೈತವಿರುವುದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ನೋಡುವನು. ಆದರೆ ಯಾವಾಗ ಇದೆಲ್ಲವೂ ಆತ್ಮನೇ ಆಗಿರುವುದೋ ಒಬ್ಬನು ಇನ್ನೊಬ್ಬನನ್ನು ಹೇಗೆ ನೋಡುವನು ? ದ್ವೈತದಲ್ಲಿ ಭಯವಿರುವುದು. ದ್ವೈತದಲ್ಲಿ ಜಗಳಗಳೂ, ಯುದ್ಧಗಳೂ ಆಗುವುವು. ದ್ವೈತವು ಅವಿದ್ಯೆಯು. ದ್ವೈತವು ಶೋಕ, ದುಃಖ, ರೋಗಗಳು ಮತ್ತು ಸಾವನ್ನು ತರುವುದು. ಈ ಆವರಣಗಳನ್ನು ಒಡೆದುಹಾಕು. ಕೋಶಗಳನ್ನು ಹರಿದುಹಾಕು. ನನ್ನ ಪ್ರಿಯ ಮೋಹನ್ ! ಅದ್ವೈತದಲ್ಲಿ ಈಗ ವಿಶ್ರಾಂತಿಯನ್ನು ಹೊಂದು.

ನಿರ್ದಯವಾದ ಚಿಂತನೆಗಳನ್ನು ಸ್ವಾಗತಿಸಬೇಡ. ಕಠಿಣವಾದ ಮಾತುಗಳನ್ನು ಆಡಬೇಡ. ಇತರರಿಂದ ನಿನ್ನನ್ನು ಬೇರ್ಪಡಿಸಿರುವ ಗೋಡೆಗಳನ್ನು ಒಡೆದುಹಾಕು. ನೀನು ಭೇದವನ್ನು ಕಂಡ ಕಡೆ ಪ್ರೇಮವಿರುವುದಿಲ್ಲ. ಗಿಡದಲ್ಲಿ, ಕಲ್ಲಿನಲ್ಲಿ, ಸೂರ್ಯನಲ್ಲಿ, ಚಂದ್ರನಲ್ಲಿ, ಪ್ರಾಣಿಗಳಲ್ಲಿ ನೀನೇ ಇರುವೆ ಎಂದು ತಿಳಿ. ತಾನೇ ಎಲ್ಲವು. ಎಲ್ಲವೂ ಒಂದೇ. ಸಮಸ್ತ ಜಗತ್ತು ನಿನ್ನ ದೇಹವು. ಇದನ್ನು ಚೆನ್ನಾಗಿ ಭಾವಿಸು. ಎಲ್ಲ ಜೀವಿಗಳೊಡನೆ ಒಂದಾಗಿರುವೆನೆಂದು ಚಿಂತಿಸು.

ನಿನ್ನ ಮನಸ್ಸಿನಲ್ಲಿ ಆಳವಾಗಿ ಅಚ್ಚೊತ್ತಲೆಂದು ನಾನು ಮೇಲಿಂದ ಮೇಲೆ, ಆಗಿಂದಾಗ್ಯೆ, ಪುನಃ ಪುನಃ ನಾನು ಹೇಳುತ್ತೇನೆ. ಪ್ರಪಂಚವು ಇಲ್ಲವು. ನೀನು ದೇಹವಲ್ಲವು. ನೀನು ಸರ್ವವ್ಯಾಪಿಯಾದ ಆತ್ಮವು. ನೀನು ಅಕರ್ತನು. ನೀನು ಸುಮ್ಮನಿರುವ ಸಾಕ್ಷಿಯು. ಇಂದ್ರಿಯಗಳು ಅವುಗಳ ಧರ್ಮವನ್ನು

ಮಾಡುವವು. ಎಲ್ಲೆಲ್ಲಿಯೂ ಆತ್ಮನೇ ಇರುವನು. ಅಂತರ್ಯದಲ್ಲಿದರುವ ಪ್ರಜ್ಞೆ ಯನ್ನು ಅನುಭವಿಸು. ಒಂದು ಹಣ್ಣನ್ನು ಕಂಡಾಗ "ಇದು ಏಕಾತ್ಮವು" ಎಂದು ಹೇಳು. ಎಲ್ಲ ರೂಪುಗಳಲ್ಲಿಯೂ ತಿರುಳನ್ನು ನೋಡು. ಹೊರಗಿನ ಕವಚಗಳನ್ನು ಕಳಚಿ ಭ್ರಾಂತಿಯ ತೋರಿಕೆಗಳನ್ನು ನಿರಾಕರಿಸು. ಇದು ನಿನ್ನನ್ನು ಬಹಿರ್ನಿರ್ವಿಕಲ್ಪ ಸಮಾಧಿಗೆ ಕರೆದೊಯ್ಯುವುದು. ಅಲ್ಲಿ ಕಣ್ಣು ಗಳನ್ನು ಮುಚ್ಚುವ ಆವಶ್ಯಕವಿಲ್ಲವು. ಈ ಬಗೆಯ ಸಾಧನೆಗೆ ಆಸನಗಳು ಬೇಕಿಲ್ಲ. ಕೊಠಡಿಯ ಆವಶ್ಯಕತೆಯಿಲ್ಲ. ಈ ಸಾಧನವು ಪ್ರಜ್ಞಾವಂತ ಲೋಕದ ಜನರಿಗೆ ಅನುಕೂಲವು. ಜಗತ್ತು ಮನಸ್ಸಲ್ಲದೆ ಬೇರೆಯಲ್ಲ. ಪ್ರಪಂಚವು ಒಂದು ಉದ್ದವಾದ ಕನಸು. ನಾನು ನಿನಗೆ ಜ್ಞಾನಯೋಗ ಅಥವ ವೇದಾಂತಸಾರ ವನ್ನು ಅತ್ಯಂತ ಸಂಗ್ರಹವಾಗಿ, ಬಹಳ ಅಡಕಮಾಡಿ ನೀಡಿರುವೆನು. ಅದನ್ನು ಜೀರ್ಣಿಸಿಕೊ, ಹೀರಿಕೊ, ಹೊಂದಿಸಿಕೊ. ಎಲ್ಲೆಲ್ಲಿಯೂ ಧೈರ್ಯವಾಗಿ ಅದನ್ನು ಘೋಷಿಸು. ಭಯರಹಿತನಾಗು. ಬ್ರಹ್ಮದಂತೆ ಪ್ರಕಾಶಿಸು. ನನ್ನ ಪ್ರೀತಿಯ ಜ್ಯೋತಿ! ಧೈರ್ಯದಿಂದ ಸಂಚರಿಸು. ಒಳಗೆ ಸದಾ ಸಚ್ಚಿದಾನಂದಾತ್ಮನಲ್ಲಿ ಹರ್ಷಿಸು, ಸಂತೋಷಿಸು.

---

## ೪. ವೇದಾಂತದ ಮಹಿಮೆ

ವೇದಾಂತವು ನಿರ್ದೋಷವಾದ ಪರಮಸುಖದ ಸಾಮ್ರಾಜ್ಯದ ರಾಜ ನಗರದಲ್ಲಿ ನೇರವಾದ ರಾಜಬೀದಿಯು ಮತ್ತು ಶ್ರೇಷ್ಠವಾದ ಅಮೃತತ್ವದ ಮತ್ತು ನಿತ್ಯಾನಂದದ ಬೀಡು. ಸಾಯುತ್ತಿರುವ ಮನುಷ್ಯನಿಗೆ ಶೀಘ್ರವಾಗಿ ಪ್ರಾಣವನ್ನು ಕೊಡುವ ಸಂಜೀವಿನಿಯು ವೇದಾಂತವು. ಅದು ದೊರೆಗಳ ದೊರೆಯ, ಸಾರ್ವಭೌಮರ ಸಾರ್ವಭೌಮನ ಸ್ಥಾನಕ್ಕೆ ತಿನ್ನುವುದಕ್ಕೆ ಏನೂ ಇಲ್ಲದಿದ್ದರೂ ಚಿಂದಿಬಟ್ಟೆಯನ್ನುಟ್ಟಿದ್ದರೂ ಅವನನ್ನು ಕೂಡಲೆ ಏರಿಸುವುದು. ಅದು ನಿಜವಾದ ಅಂತರ್ಬಲವನ್ನು ಕೊಡುವುದು. ಅದು ಸ್ಫೂರ್ತಿಗೊಳಿಸು ವುದು. ನವೀನೀಕರಿಸುವುದು. ಚೈತನ್ಯಗೊಳಿಸುವುದು. ವೀರ್ಯವಂತನನ್ನಾಗಿ

ಮಾಡುವುದು ಮತ್ತು ಶಕ್ತಿಶಾಲಿಯಾಗಿಸುವುದು. ನಿರಾಶೆಯಾದವನಿಗೆ ಆಸೆಯನ್ನು ಕೊಡುವುದು. ಅಧಿಕಾರವಿಲ್ಲದವನಿಗೆ ಅಧಿಕಾರವನ್ನು ಕೊಡುವುದು. ಶಕ್ತಿಹೀನನಿಗೆ ಶಕ್ತಿಯನ್ನು ಕೊಡುವುದು ಮತ್ತು ಆನಂದವಿಲ್ಲದವನಿಗೆ ಆನಂದವನ್ನು ಕೊಡುವುದು.

ಮನುಷ್ಯನನ್ನು ಉದ್ಧಾರಮಾಡುವ ಏಕೈಕ ತತ್ವಶಾಸ್ತ್ರವೆಂದರೆ ವೇದಾಂತವು. ಅದು ವೇದಗಳ ಧರ್ಮವು. ಅದು ಎಲ್ಲವನ್ನೂ ಒಳಗೊಂಡಿರುವುದು. ಭರವಸೆ, ಬಲ, ಶಾಂತಿ, ಸ್ಫೂರ್ತಿಯನ್ನು ದಿಕ್ಕುಗೆಟ್ಟವನಿಗೆ, ನಿರುತ್ಸಾಹಿಗೆ ಮತ್ತು ಹತಾಶನಿಗೆ ಕೊಡುವುದು. ವೇದಾಂತ ಅಧ್ಯಯನವು ಎಷ್ಟು ಆಹ್ಲಾದಕರವು ! ವೇದಾಂತ ಅನುಷ್ಠಾನವು ಇನ್ನೂ ಎಷ್ಟು ಪರಮಾನಂದಕರವು. ವೇದಾಂತೋಪದೇಶಕರಿಗೂ ಮತ್ತು ಬ್ರಹ್ಮವಿದ್ಯಾ ಗುರುಗಳಿಗೂ ಪ್ರಣಾಮಗಳು.

ದ್ವೈತವು ಬೆಳೆದಷ್ಟೂ ಭೂಮಿಯಲ್ಲಿರುವ ಅಂಜಿಕೆಯು ಹೆಚ್ಚುವುದು. ನೀನು ಆತ್ಮವನ್ನೇ ಎಲ್ಲೆಲ್ಲಿಯೂ ಕಾಣುತ್ತಿರುವಾಗ ಬ್ರಹ್ಮದೊಡನೆ ಒಂದಾದ (ಬ್ರಹ್ಮೈಕ್ಯವಾದ) ಅದ್ವೈತ ಸ್ಥಿತಿಯನ್ನು ಹೊಂದಿರುವಾಗ, ನೋಡಲು ಅಥವಾ ಕೇಳಲು ಅಥವಾ ಮುಟ್ಟಲು ಬೇರೆ ಯಾವುದೂ ಇಲ್ಲದಿರುವಾಗ ಹೆದರಿಕೆಯು ಹೇಗೆ ಉಂಟಾಗುವುದು ? ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲವೆಂದು ಜ್ಞಾನಿಗಳು ಅರ್ಥವತ್ತಾಗಿ ಘೋಷಿಸುವರು. ಯಾವಾಗ ಆತ್ಮಸಾಕ್ಷಾತ್ಕಾರವಾಗುವುದೋ ಆಗ ಅವನ ಕಾಮಗಳೆಲ್ಲವೂ ತೃಪ್ತಿಯಾಗುವುದು. ಅವನು ಆತ್ಮದ ಶ್ರೇಷ್ಠಾನಂದವನ್ನು ಅನುಭವಿಸುವನು. ಅವನು ಆತ್ಮದಲ್ಲಿ ಸಂತುಷ್ಟನಾಗಿರುವನು.

ವೇದಾಂತವು ಎಲ್ಲವನ್ನೂ ಆವರಿಸಿಕೊಳ್ಳುವುದು, ಎಲ್ಲವನ್ನೂ ಒಳಗೊಳ್ಳುವುದು. ಅದು ಉಪನಿಷತ್ತುಗಳ ಧರ್ಮವು. ಅದು ಎಲ್ಲರ ಸಂಪತ್ತು. ಯಾವ ಮತದೊಡನೆ ಯಾವ ಕಾರಣಕ್ಕಾಗಿಯೂ ಅದಕ್ಕೆ ಕಲಹವಿಲ್ಲವು. ಅದು ವಿಶಾಲವಾದ (ವಿಶ್ವ) ತತ್ವಗಳನ್ನು ಬೋಧಿಸುವುದು. ಜಗತ್ತಿನ ಎಲ್ಲ ಮತಗಳ ಉಗಮಸ್ಥಾನವಾದ ವಿಶಾಲ ಧರ್ಮವನ್ನು ಮನಸ್ಸಿಗೆ ಹತ್ತುವಂತೆ ಬಿತ್ತಿ ಹೇಳುವದು. ಭೇದಗಳನ್ನೆಲ್ಲ ಕಿತ್ತುಹಾಕುವ ಧರ್ಮವು. ಅದು ಎಲ್ಲರನ್ನೂ ಒಂದುಗೂಡಿಸುವುದು. ಎಲ್ಲರಿಗೂ ಅವಕಾಶ ಕೊಡುವುದು.

ವೇದಾಂತವು ಎಲ್ಲ ಜಾತಿ, ಮತ, ಪಂಥ, ಪಂಗಡ ಮತ್ತು ರಾಷ್ಟ್ರಗಳನ್ನು ಒಳಗೊಳ್ಳುವುದು. ಭಾರತದ ಪ್ರಾಚೀನ ಮಹರ್ಷಿಗಳ ಅಪೂರ್ವ ಅನುಭವಗಳನ್ನು ಅರುಹುವುದು. ಅದು ಹೃದಯ ವೈಶಾಲ್ಯಗೊಳಿಸುವುದಲ್ಲದೆ ಕಣ್ಣುಗಳನ್ನು ತೆರೆಯುವುದು. ಅದು ಹೊಸ ಜೀವನವನ್ನು ತರುವುದು. ಪರಮಾನಂದವನ್ನು ಮತ್ತು ನಿತ್ಯಸುಖವನ್ನು ಕೊಡುವುದು. ಮನುಷ್ಯರಲ್ಲಿರುವ ಅಂತರಗಳನ್ನು ಕಳೆದು ಎಲ್ಲರನ್ನೂ ಒಂದುಗೂಡಿಸುವುದು. ಅದು ಸಮಾಧಾನ, ಬಲ, ಶಾಂತಿಯನ್ನು ಕೊಡುವುದಲ್ಲದೆ ಭಯ, ಸಂಶಯ, ಕುತೂಹಲ, ಭ್ರಾಂತಿ ಮತ್ತು ಮಾಯೆಯನ್ನು ಕಳೆಯುವುದು.

ಸೂರ್ಯನು ಕತ್ತಲೆಯನ್ನು ಕಳೆಯುವಂತೆ ಆತ್ಮಜ್ಞಾನವು ಅಜ್ಞಾನವನ್ನು ಕಳೆಯುವುದು. ಬ್ರಹ್ಮವನ್ನು ನಿನ್ನಿಂದ ಮರೆಮಾಚಿದ್ದ ನಾಮರೂಪಗಳಿಂದ ಕೂಡಿದ ಜಗತ್ತು ಆಗ ಕರಗಿಹೋಗುವುದು. (ಲಯವಾಗುವುದು).

ಬ್ರಹ್ಮವಿದ್ಯೆಯು ಬ್ರಹ್ಮನಿಂದ ಇತರರಿಗೆ ಪರಂಪರಾನುಗತವಾಗಿ ಕೊಡಲ್ಪಟ್ಟಿದೆ. ಗೌಡಪಾದರು ಗೋವಿಂದಪಾದರಿಗೆ ಉಪದೇಶಿಸಿದರು. ಅವರು ಬ್ರಹ್ಮಜ್ಞಾನವನ್ನು ಶ್ರೀ ಶಂಕರಾಚಾರ್ಯರಿಗೂ ಮತ್ತು ಶ್ರೀ ಶಂಕರಾಚಾರ್ಯರು ತಮ್ಮ ನಾಲ್ವರು ಶಿಷ್ಯರಿಗೂ ಉಪದೇಶಿಸಿದರು. (ಶ್ರೀ ಪದ್ಮಪಾದ ಶ್ರೀ ಸುರೇಶ್ವರ, ಶ್ರೀ ತ್ರೋಟಕ ಮತ್ತು ಶ್ರೀ ಹಸ್ತಾಮಲಕ)

ನ್ಯಾಯಶಾಸ್ತ್ರದಲ್ಲಿ ಏಳು ವರ್ಗಗಳಿವೆ: ೧) ದ್ರವ್ಯ ೨) ಗುಣ ೩) ಕರ್ಮ ೪) ಸಾಮಾನ್ಯ ೫) ವಿಶೇಷ ೬) ಸಮವಾಯ ಮತ್ತು ೭) ಅಭಾವ.

ನ್ಯಾಯಶಾಸ್ತ್ರದಲ್ಲಿ ನಾಲ್ಕು ಪ್ರಮಾಣಗಳಿವೆ. ಅವು:—೧) ಪ್ರತ್ಯಕ್ಷ ೨) ಅನುಮಾನ ೩) ಶಬ್ದ ೪) ಉಪಮಾನ.

ಯಾವುದು ತಿಳಿಯುವುದೋ ಅದು ಪ್ರಮಾತ. ಯಾವುದು ವಸ್ತುವಿನ ಜ್ಞಾನವನ್ನುಂಟುಮಾಡುವುದೊ ಅದು ಪ್ರಮಾಣವು. ಯಾವ ವಸ್ತುವು ತಿಳಿಯಲ್ಪಡುವುದೊ ಅದು ಪ್ರಮೇಯವು.

ಪ್ರತ್ಯಕ್ಷ ಪ್ರಮಾಣವನ್ನು (direct perception) ಹೆಚ್ಚು ಅವಲಂಬಿಸುವುದು ಅಸಾಧ್ಯವು. ಆಕಾಶವನ್ನು ನೋಡು. ಅದು ಗೋಳಾಕಾರದಂತೆ ತೋರುವುದು. ನೀಲಿಯಾಗಿರುವಂತೆ ಕಾಣುವುದು. ಇದು ಹೇಗೂ ನಿಜವಲ್ಲವು.

ನೀನು ತೀರ್ಮಾನವನ್ನೂ ಅವಲಂಬಿಸುವಂತಿಲ್ಲವು. ಪ್ರಮಾಣಗಳೆಲ್ಲೆಲ್ಲಾ ಶಬ್ದ ಪ್ರಮಾಣವನ್ನು ವಿಶೇಷವಾಗಿ ಮೆಚ್ಚಬಹುದು. ಏಕೆಂದರೆ ಅದು ಆತ್ಮಜ್ಞಾನಿಗಳ ಪ್ರತ್ಯಕ್ಷಾನುಭವವು. ಅದು ಸಂಪೂರ್ಣವಾಗಿ ಋಜುಮಾರ್ಗ ಬಿಟ್ಟು ಹೋಗದದ್ದು ಅಥವಾ ಸರಿಯಾದದ್ದು. ಶ್ರುತಿಗಳು ಬ್ರಹ್ಮದ ಸಮ್ಯಕ್ ಜ್ಞಾನವನ್ನು ಸ್ವಲ್ಪವೂ ತಪ್ಪಿಲ್ಲದೆ ತಿಳಿಸತಕ್ಕ ಅಧಿಕಾರವನ್ನು ಹೊಂದಿದೆ.

ಆತ್ಮಜ್ಞಾನವೆಂಬುದು ಸಾಕ್ಷಾತ್ಕಾರಕಾಗಿಯೇ ವಿನಃ ಅದು ಕೇವಲ ಸಂಭಾಷಣೆಗಲ್ಲ. ಅದು ಅನುಭವಜ್ಞಾನವು. ಉಪನಿಷತ್ತುಗಳ ಮತ್ತು ಬ್ರಹ್ಮಸೂತ್ರದ ಅಧ್ಯಯನವು ಮಾತ್ರ ಆತ್ಮಜ್ಞಾನಕ್ಕೆ ಸಹಾಯ ಮಾಡಲಾರದು. ಕೇವಲ ಉಪನ್ಯಾಸವೂ ಸಹ ಹೆಚ್ಚು ಸಹಾಯ ಮಾಡಲಾರದು. ಬಾವಿಯಲ್ಲಿರುವ ಕಪ್ಪೆಯು ಸಾಗರದ ಆಳವನ್ನು ತಿಳಿಯಬಲ್ಲುದೇ? ಕುರುಡನು, ನೀವು ಸೂರ್ಯನ ಬೆಳಕನ್ನು ಎಷ್ಟೇ ಉಪಮಾನಗಳು ಮತ್ತು ದೃಷ್ಟಾಂತಗಳಿಂದ ವರ್ಣಿಸಿದರೂ ಕಾಣಬಲ್ಲನೇ? ಕಲ್ಲುಸಕ್ಕರೆಯನ್ನೇ ನೋಡದವನಿಗೆ ನೀವು ಎಷ್ಟೇ ವಿಧವಾಗಿ ಅದರ ರುಚಿಯನ್ನು ವಿವರಿಸಿದರೂ ಅವನಿಗೆ ಕಲ್ಲುಸಕ್ಕರೆಯ ರುಚಿಯು ಗೊತ್ತಾಗುವುದೇ? ಆತ್ಮಜ್ಞಾನವು ತಿಳಿಯಲ್ಪಡಬೇಕು ಮತ್ತು ಶ್ರವಣ, ಮನನ ಮತ್ತು ನಿದಿಧ್ಯಾಸನಗಳಿಂದ ಅರಿಯಲ್ಪಡಬೇಕು.

---

## ೫. ವೇದಾಂತದ ಅನುಷ್ಠಾನ

ಜ್ಞಾನದ ಮೊದಲ ಹೆಜ್ಜೆಯು ದರಿದ್ರರು ಮತ್ತು ರೋಗಿಗಳಿಗೆ ಸದಾ ಸೇವೆ ಮಾಡುವುದು. ಎರಡನೆಯ ಹೆಜ್ಜೆಯು ಇಂದ್ರಿಯಗಳನ್ನು ಹತೋಟಿಯಲ್ಲಿಡುವುದು. ಮೂರನೆಯ ಹೆಜ್ಜೆಯು ಸದ್ಗುಣಗಳಾದ ವಿನಯ, ಸಹನೆ, ದಯಾ, ಸತ್ಯನಿಷ್ಠತೆ ಮತ್ತು ಸಂಯಮಗಳ ಅಭ್ಯಾಸ. ನಾಲ್ಕನೆಯ ನಿಯಮ ತಪ್ಪದ ಧ್ಯಾನ. ಆನಂತರ ಆತ್ಮದ ಸುಮಧುರ ಅಂತರ್ವಾಣಿಯನ್ನು ಕೇಳುವೆ. ನಂತರ ನಿನ್ನ ಮೂರನೆಯ ಕಣ್ಣಾದ ಅಂತರ್ದೃಷ್ಟಿಯು ತೆರೆಯಲ್ಪಡುವುದು. ನಿನಗೆ ಜ್ಞಾನೋದಯವಾಗುವುದು.

ಉಪದೇಶ ಸಾಹಸ್ರಿಯಲ್ಲಿ ಶ್ರೀ ಶಂಕರರು ಬರೆದಿರುವ ಉಪದೇಶವನ್ನು "ಶಾಂತಮನಸ್ಕನೂ, ಇಂದ್ರಿಯ ನಿಗ್ರಹವುಳ್ಳವನೂ, ಕಾಮಕ್ರೋಧಾದಿ ದೋಷರಹಿತನೂ, ವಿನಯನೂ, ಸದ್ಗುಣಗಳ ಗಣಿಯೂ, ನಮ್ರನೂ, ಮತ್ತು ಮುಕ್ತಿಗಾಗಿ ಹಂಬಲಿಸುವವನೂ ಆದವನಿಗೆ ವೇದಾಂತವನ್ನು ಉಪದೇಶಿಸಲೇ ಬೇಕು," ಎಂಬುದನ್ನು ನೆನಪಿಡಬೇಕು.

ವೇದಾಂತದ ವಿದ್ಯಾರ್ಥಿಗಳು ದಿನವೂ ಕಠೋಪನಿಷತ್ತನ್ನು ಅಧ್ಯಯನ ಮಾಡಬೇಕು. ಅದರಲ್ಲಿ ಆತ್ಮಜ್ಞಾನದ ವಿಷಯವಾಗಿ ಯಮ ಮತ್ತು ನಚಿಕೇತಸ್ಸಿಗೆ ನಡೆದ ಸಂಭಾಷಣೆಯು ಇರುವುದು.

ವೇದಾಂತದ ಕೆಲವು ವಿದ್ಯಾರ್ಥಿಗಳು ತಮ್ಮ ದೇಹದ ಬಗ್ಗೆ ಗಮನವನ್ನು ತೆಗೆದುಕೊಳ್ಳುವುದಿಲ್ಲ. ಅದು ಬಹಳ ದೊಡ್ಡ ತಪ್ಪು. ದೇಹದ ಮೇಲೆ ಅವರಿಗೆ ಯಾವ ವಿಧವಾದ ಮೋಹವೂ ಇರಕೂಡದು. ಅಂತಹವರು ಪ್ರಹ್ಲಾದ ಮತ್ತು ಭಗವಾನ್ ವಿಷ್ಣುವಿನ ನಡುವೆ ನಡೆದ ಸಂಭಾಷಣೆಯನ್ನು ಕೇಳಲಿ. "ಎಲೈ ನಿರ್ಮಲನಾದ ಪ್ರಹ್ಲಾದನೇ, ನಿನ್ನ ದೇಹಕ್ಕೆ ಗಮನಕೊಡು. ಈ ನಿನ್ನ ಇನ್ನೂ ಬೆಳೆಯದ ದೇಹವನ್ನು ತ್ಯಜಿಸುವ ಯೋಚನೆಯನ್ನು ಏಕೆ ಮಾಡುತ್ತಿಯೇ ? ಎಲ್ಲಿಯವರಿಗೆ ಆಕರ್ಷಕವಾದ ಸಂಕಲ್ಪಗಳು ನಿನ್ನನ್ನು ಬಾಧಿಸುವುದಿಲ್ಲವೋ ಮತ್ತು ವಸ್ತುಗಳಿಂದ ಹಿಮ್ಮೆಟ್ಟುವುದೋ ಅದರಿಂದ ನಿನ್ನ ದೇಹವು ಇದ್ದರೂ, ಇಲ್ಲದಿದ್ದರೂ ನಿನಗೇನು ? ಈಗ ಸಮಾಧಿಯಿಂದ ಉತ್ತಿಷ್ಠನಾಗು. ಈ ದೇಹದಿಂದಲೇ ಜೀವನ್ಮುಕ್ತಿಯ ಅವಸ್ಥೆಯಲ್ಲಿದ್ದುಕೊಂಡು ಸಂಸಾರದ ಜಂಜಡತೆಯ ಭಾರವಿಲ್ಲದೇ ಈ ಲೋಕದಲ್ಲಿ ನ್ಯಾಯವನ್ನು ಪಾಲಿಸು."

ಈ ಸ್ಥೂಲವಾದ ಗಂಗೆಯು ಸ್ಥೂಲವಾದ ಕಣ್ಣಿಗೆ, ಹೊರಗಡೆ ಕಾಣುತ್ತಿರುವುದು ನಿಜವಲ್ಲವು. ನಿಜವಾದ ಗಂಗೆಯು ಅಮರತೆಯನ್ನುಂಟುಮಾಡುವ ಶಿವಜ್ಞಾನವು. ಆ ಗಂಗೆಯು ಆಕಾಶದಂತೆ ಓತಪ್ರೋತವು. ಉತ್ತರ ಪ್ರದೇಶದ ಗುರು ಮುಕ್ತೇಶ್ವರದ ದಡದಲ್ಲಿ ಕಾರ್ತೀಕ ಪೂರ್ಣಿಮೆಯಂದು ಗಂಗೆಯಲ್ಲಿ ಮುಳುಗಿದರೆ ನಿಸ್ಸಂಶಯವಾಗಿ ಅಂದು ಮಹಾ ಪರಿಶುದ್ಧಮಾಡುವ ಪರಿಣಾಮ ಶಕ್ತಿಯುಳ್ಳದ್ದು. ಕೇವಲ ಮುಳುಗೊಂದೇ ಸಾಲದು. ಶ್ರವಣ, ಮನನ, ನಿಧಿಧ್ಯಾಸನದ ಮೂಲಕ ಚಿತ್ತಶುದ್ಧಿಯನ್ನು ಪಡೆದು ಆತ್ಮಗಂಗೆಯಲ್ಲಿ ಮುಳುಗುವುದು ಆವಶ್ಯಕ.

ಮನಸ್ಸು ಅಶುದ್ಧವಾದುದರಿಂದ ಬ್ರಹ್ಮವು ಕಾಣುವುದಿಲ್ಲ. ಮನಸ್ಸು ಮತ್ತು ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟು ಶುದ್ಧರಾದವರು ಸಮಾಧಿಯಲ್ಲಿ ಬ್ರಹ್ಮವನ್ನು ನೋಡಬಲ್ಲರು. "ಯೋಗಿಗಳು ನಿದ್ರೆಯನ್ನು ತ್ಯಜಿಸಿ, ಶ್ವಾಸವನ್ನು ಬಂಧಿಸಿ ಸಮಾಧಾನ ಚಿತ್ತದಿಂದ ಇಂದ್ರಿಯ ನಿಗ್ರಹಮಾಡಿ ಧ್ಯಾನಿಸುತ್ತಾ ಆ ದಿವ್ಯಪುರುಷನ ದರ್ಶನವನ್ನು ಪಡೆಯುವರು" ಎಂದು ಸ್ಮೃತಿಯು ಹೇಳುವುದು.

ಆತ್ಮನ ಸಹಜ ಸ್ವಭಾವವನ್ನು ತಿಳಿದುಕೊ. ಕರ್ಮಗಳು, ದುಃಖಯಾತ್ರೆಗಳು ಮತ್ತು ಪಾಪವು ಆತ್ಮನನ್ನು ಮುಟ್ಟಲಾರವು. ಆತ್ಮನು ಏಕನು, ವಿದೇಹಿಯು, ವಿಭುವು, ಸ್ವತಂತ್ರನು, ಅಪರಿಣಮನು (unchanging) ಸ್ವಯಂಪ್ರಕಾಶನು, ಸ್ವತಃಸಿದ್ಧನು ಮತ್ತು ಸ್ವಯಂಪೂರ್ಣನು.

ವಿಷಯೇಂದ್ರಿಯಗಳು, ಸ್ಥೂಲದೇಹವು, ಮನಸ್ಸು, ಪ್ರಾಣಗಳು, ಬುದ್ಧಿ ಮೊದಲಾದವು ಅವಿದ್ಯೆಯಿಂದಾದುವು. ಅವು ಉಪಾಧಿಗಳು. ಅವುಗಳನ್ನು ತ್ಯಾಗಮಾಡು. "ನೇತಿ ನೇತಿ" ಎಂಬ ಶ್ರುತಿವಾಕ್ಯದಂತೆ ವಿಚಾರಮಾಡಿ ತಳ್ಳು. ಅವುಗಳನ್ನು ಕಳೆದುಳಿದ ಸದ್ವಸ್ತುವೇ ಬ್ರಹ್ಮವು. ಭಾವದಿಂದ, "ಕೇವಲೋಹಂ" ಎಂದು ಉಚ್ಚರಿಸು. ಆತ್ಮಾನಂದವನ್ನು ಈಗಲೇ ಪಡೆದುಕೊ. ಈಗಲೇ ಸಾಧನೆಯನ್ನು ಆರಂಭಿಸು.

ಆಂತರಿಕ ಜೀವನವು ಬಹು ಪ್ರಮುಖವಾದುದು. ಜಗತ್ತು ಮಿಥ್ಯವು. ಅದು ಒಂದು ಛಾಯೆ, ಮಾಯೆಯ ಇಂದ್ರಜಾಲ. ಅದು ಸ್ವಪ್ನವು ೧) ಬ್ರಹ್ಮವೊಂದೇ ಸತ್ಯವು. ೨) ನೀನು "ಉಪಾಧಿಯನ್ನು ಕಳೆದುಳಿದ ಬ್ರಹ್ಮವು ೩) "ತತ್ ತ್ವಂ ಅಸಿ" — ನೀನು ಅದೇ ಆಗಿರುವೆ. ಈ ಮೂರು ಭಾವಗಳನ್ನು ಪುನಃ ಪುನಃ ಉಚ್ಚರಿಸಿದರೂ ನನಗೆ ಆಯಾಸವಿಲ್ಲವು. ಅವು ನಿನ್ನ ಕೋಶಗಳು, ರಕ್ತಕಣಗಳು, ನರಗಳು ಮತ್ತು ಮೂಳೆಗಳನ್ನೂ ಪ್ರವೇಶಿಸಬೇಕು. ನಿನ್ನ ಸಹವಾಸಕ್ಕೆ ಬರುವವರ ಮನಸ್ಸಿನಲ್ಲೂ ಈ ಮೂರು ಭಾವನೆಗಳು ಚೆನ್ನಾಗಿ ನಿಲ್ಲುವಂತೆ ಮಾಡು. ಭಕ್ತಿ ಮತ್ತು ನಿಸ್ವಾರ್ಥ ಕರ್ಮವನ್ನು ಉಪದೇಶಿಸು.

ಒಮ್ಮೆ ಪಾರ್ವತಿಯು ಶಿವನನ್ನು ಕೇಳಿದಳು: "ಹೇ ನನ್ನ ಪ್ರಭು! ಮೋಕ್ಷವು — ಜನನ ಮರಣಗಳಿಂದ ಬಿಡುಗಡೆಯು — ಜ್ಞಾನದಿಂದ

ದೊರೆಯುವುದು ಎಂದು ಕೆಲವರು ಹೇಳುವರು. ಹಾಗಾದರೆ ಯೋಗದಿಂದ ಏನು ಪ್ರಯೋಜನವು?" ಶಿವಭಗವಾನನು ಹೇಳಿದನು: "ಯುದ್ಧದಲ್ಲಿ ಜಯವು ಶಕ್ತಿಯಿಂದ ದೊರೆಯುವದು. ಆದರೆ ಸೈನಿಕನು ಮತ್ತು ಶೌರ್ಯ ದಿಂದ ಪ್ರಯೋಜನವೇನು? ಆದ್ದರಿಂದ ಜ್ಞಾನ ಮತ್ತು ಯೋಗ, ಎರಡೂ ಸಹ ಅತ್ಯವಶ್ಯವಾದುವು. ನೀನು ಕೇಳಬಹುದು: "ಆತ್ಮಜ್ಞಾನವನ್ನು ಪಡೆದಿರುವ ಅನೇಕ ಪ್ರಾಜ್ಞರು ಯೋಗವನ್ನೇಕೆ ಅಭ್ಯಾಸಮಾಡಲಿಲ್ಲ?" ಇದಕ್ಕೆ ಸ್ಪಷ್ಟವಾದ ಉತ್ತರವೆಂದರೆ, "ಅವರು ಹಿಂದಿನ ಜನ್ಮದಲ್ಲಿ ಯೋಗವನ್ನು ಅಭ್ಯಾಸಮಾಡಿದ್ದರು."

ಶ್ರೀ ಶಂಕರರು ಹೇಳಿದರು: "ಅಲೆಗಳು ಸಾಗರಕ್ಕೆ ಸೇರಿದವು, ಮತ್ತು ಸಾಗರವು ಅಲೆಗಳಿಗಲ್ಲವು. ಹಾಗೆಯೇ ನಾನು ಬ್ರಹ್ಮಕ್ಕೆ ಸೇರಿದವನು ಮತ್ತು ಬ್ರಹ್ಮವು ನನಗಲ್ಲ." ಶ್ರೀ ಶಂಕರರು ಅತ್ಯಂತ ಪರಮೋಚ್ಚವಾದ ಅದ್ವೈತಜ್ಞಾನ ವನ್ನು ಹೊಂದಿದ್ದರೂ, ಕೇವಲಾದ್ವೈತ ತತ್ವವನ್ನು ಪ್ರತಿಪಾದನೆ ಮಾಡಿದ್ದರೂ, ಅವರು ಭಕ್ತಿಯನ್ನು ಕಡೆಗಾಣಿಸಲಿಲ್ಲವು. ಅವರು ದಕ್ಷಿಣಾಮೂರ್ತಿ, ಹರಿ, ದೇವಿ ಮುಂತಾದ ಅನೇಕ ಸ್ತೋತ್ರಗಳನ್ನು ರಚಿಸಿದ್ದಾರೆ. ಅವುಗಳು ಅವರ ಅತ್ಯುನ್ನತ ಶುದ್ಧ ಭಕ್ತಿಭಾವವನ್ನು ಹೇಳುತ್ತವೆ. ಅವರು ಶುಷ್ಕ ವೇದಾಂತಿ ಯಾಗಿರಲಿಲ್ಲವು.

ಶ್ರೀ ಶಂಕರಾಚಾರ್ಯರ ಪ್ರಕಾರ: "ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ"— ಅವರು ಇನ್ನೂ ಹೇಳಿರುವುದೇನೆಂದರೆ: "ಮೋಕ್ಷ ಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸಿ."

ಜೀವನು ಎಚ್ಚರಗೊಂಡಕೂಡಲೇ, ಅವನು ಹೇಳುತ್ತಾನೆ: "ನಾನು ಸುಖನಿದ್ರೆಯನ್ನು ಅನುಭವಿಸಿದೆನು. ನನಗೆ ಮತ್ತೇನೂ ತಿಳಿಯದು." ಮನಸ್ಸು ತನ್ನ ವಿಶ್ರಾಂತಿ ಸ್ಥಾನದಿಂದ ಹೊರಕ್ಕೆ ಬಂದ ಕೂಡಲೇ ಪ್ರಾಜ್ಞನ ಅನುಭವಗಳು ಮನಸ್ಸಿನಲ್ಲಿ ಪ್ರತಿಫಲಿಸುವದು ಮತ್ತು ಚೈತನ್ಯದೊಡನೆ ಹೊಂದಿಕೊಂಡಿರುವುದು.

ಆತ್ಮ, ಸೋಹಂ, ಓಂ ನ್ನು ಸ್ಮರಿಸು. ನಿಶ್ಶಬ್ದವೇ ಆತ್ಮವು. ಆತ್ಮವು ಅಕ್ಷರವು. ಅಕ್ಷರದಲ್ಲೇ ನೆಲೆಸಿ ಶಾಂತಿ, ಬಲ, ಆಕಾಂಕ್ಷೆಯನ್ನು ಪಡೆದುಕೊಳ್ಳಿ. ಉಸಿರನ್ನು ಒಳಗೆ ತೆಗೆದುಕೊಳ್ಳುವಾಗ 'ಸೋ' ಎಂಬುದನ್ನು ಉಚ್ಚರಿಸಲು

ಕಷ್ಟವೆಂದು ಕಂಡುಬಂದರೆ 'ರಾ' ಅಥವಾ 'ಅಹಂ ಅಸ್ಮಿ' ಅಥವಾ 'ಶಿವೋ', 'ಓ' ಎಂದು ಉಚ್ಚರಿಸಿ. ಉಸಿರನ್ನು ಹೊರಕ್ಕೆ ಬಿಡುವಾಗ 'ಮ', 'ಬ್ರಹ್ಮ', 'ಹಂ' ಅಥವಾ 'ಪರ್' ಎಂದು ಸೇರಿಸಿ. ಸೋಹಂ 'ಸಃ' ಎಂದರೆ ಅವನು. 'ಅಹಂ' ಎಂದರೆ ನಾನಾಗಿರುವೆನು. ಅವನೇ ನಾನಾಗಿರುವೆನು ಎಂಬುದೇ ಅರ್ಥವು. ಜೀವನು ಬ್ರಹ್ಮದೊಡನೆ ಐಕ್ಯಹೊಂದು ವುದನ್ನು ನಿನಗೆ ತೋರಿಸಿಕೊಟ್ಟಿನು.

ನನ್ನ ಪ್ರೀತಿಯ ಪ್ರಕಾಶ, ನಿನ್ನ ಮನಸ್ಸು ಮತ್ತು ಇಂದ್ರಿಯಗಳಿಗೆ ಬಲ ಮತ್ತು ಬೆಳಕನ್ನು ಕೊಡುವ ಸರ್ವಾಧಾರನಾದ ಆತ್ಮ–ರಾಮನನ್ನು ನೀನು ಮರೆತಿಲ್ಲವೆಂದು ನಂಬುವೆನು. ಪರಮಾತ್ಮನ ಇರುವಿಕೆಯನ್ನು ನಿನ್ನ ಛಾಯಾ ಚಿತ್ರಗಳಲ್ಲಿ, ಚಿತ್ರದ ರಾಸಾಯನಿಕ ವಸ್ತುಗಳಲ್ಲಿ ಮತ್ತು ವ್ಯಾಪಾರಿಗಳಲ್ಲಿ ನೀನು ಭಾವಿಸುವೆಯಾ ? ಆತ್ಮಸಾಕ್ಷಾತ್ಕಾರವಾಗಲು ನಿನಗೆ ಇದು ಸುಲಭ ಸಾಧನವು.

ಶ್ರೀಕೃಷ್ಣನ ದರ್ಶನವನ್ನು ನೀನು ಕಣ್ಣಾರೆ ಕಾಣಬಹುದು. ಅವ ನೊಡನೆ ಅನೇಕಬಾರಿ ನೀನು ಮಾತನಾಡಲೂಬಹುದು. ಅವನೊಡನೆ ಆಟ, ಊಟಗಳನ್ನು ಮಾಡಬಹುದು. ಆದರೆ ನಿನಗೆ ಆತ್ಯಂತಿಕ ಮುಕ್ತಿಯಾಗ ಬೇಕಾದರೆ ಆತ್ಮಸಾಕ್ಷಾತ್ಕಾರವನ್ನೇ ಹೊಂದಬೇಕು. ನಾಮದೇವನು ಅನೇಕ ಸಲ ಶ್ರೀಕೃಷ್ಣನ ದರ್ಶನವನ್ನು ಹೊಂದಿದ್ದರೂ ಭಕ್ತ ಗೋರಕುಂಬಾರನ ದೃಷ್ಟಿಯಲ್ಲಿ ಅರ್ಧ ಬೆಂದವನು. ನಾಮದೇವನು ಕೈವಲ್ಯಪ್ರಾಪ್ತಿಗೆ ವಿಶೋಬಾ ಕಿಶೋರನ ಬಳಿಗೆ ಹೋಗಬೇಕಾಯಿತು.

ಭಗವಂತನ ಆರಾಧನೆ, ವೇದಗಳ ಅಧ್ಯಯನ, ಗುರುಗಳ ಸೇವೆಯು ಚಿತ್ತಶುದ್ಧಿಯನ್ನು ಮಾಡುವುದು. ಮತ್ತು ನಿತ್ಯಾನಂದ ಪ್ರಾಪ್ತಿಗೆ ಮಾರ್ಗ ದರ್ಶಕವಾಗುವುದು.

ಸಮದೃಷ್ಟಿ, ಸಂತೋಷ, ಶಾಂತಿ, ತೃಪ್ತಿ, ಮತ್ತು ಜ್ಞಾನ ಪುಷ್ಪಗಳಿಂದ ಆತ್ಮನ ಆರಾಧನೆ ಮಾಡು. ಇದೇ ನಿಜವಾದ ರೀತಿಯ ಆರಾಧನೆಯು. ಗುಲಾಬಿ, ಮಲ್ಲಿಗೆ, ಗಂಧ, ಧೂಪ, ದೀಪ, ಭಕ್ಷ್ಯಗಳು ಮತ್ತು ಹಣ್ಣುಗಳ ಸಮರ್ಪಣೆ ಗಿಂತ ಜ್ಞಾನ, ತೃಪ್ತಿ, ಮೊದಲಾದುವನ್ನು ಅರ್ಪಿಸುವುದು ಉತ್ಕೃಷ್ಟವಾದುದು. ಗಂಧ, ಪುಷ್ಪ, ಧೂಪ, ದೀಪಗಳನ್ನು ಸಾಧಕರು ಆರಂಭದಲ್ಲಿ ಅರ್ಪಿಸುವರು.

ಪರಮಾತ್ಮನು ನಿನಗಿಂತ ಬೇರೆ ಎಂದು ತಿಳಿದು ನೀನು ಅಜ್ಞಾನದಿಂದ ಆರಾಧಿಸುತ್ತಿದ್ದವನು ಈಗ ಆ ದೇವರು ನಿನಗಿಂತ ದೂರವಿಲ್ಲವೆಂದು ಮತ್ತು ಹೊರಗಿಲ್ಲವೆಂದೂ ತಿಳಿಯುವೆ. ನಿನ್ನ ಹೃದಯಮಂದಿರದಲ್ಲೇ ವಾಸಿಸುತ್ತಿರುವ ಆತ್ಮನು, ಅವನು ಅಂತರ್ನಿಯಾಮಕನು.

ಮನದಟ್ಟುಮಾಡಿಕೊ : " ಯಾವುದೂ ಇಲ್ಲವು. ನನಗೆ ಏನೂ ಸೇರದವು. ಎಲ್ಲದರಲ್ಲಿರುವ ಆತ್ಮನೂ ನಾನೇ. " ಇದೇ ವೇದಾಂತ ಸಾಧನವು. ಈ ಸಾಧನೆಯು ಅದ್ವೈತ ಸಾಕ್ಷಾತ್ಕಾರ ಮತ್ತು ಪರಮಾತ್ಮ ಜ್ಞಾನಕ್ಕೆ (ಸರ್ವಜ್ಞತೆಗೆ) ಕೊಂಡೊಯ್ಯುವುದು.

ಏನಾದರೂ, ಅನುಷ್ಠಾನದ ನಿಷ್ಠೆಯನ್ನು ಎಲ್ಲವೂ ಅವಲಂಬಿಸಿದೆ. ಅನುಷ್ಠಾನದಿಂದ ಪರಿಪೂರ್ಣತೆಯ ಪ್ರಾಪ್ತಿಯು ಎಂಬುದನ್ನು ತಿಳಿದಿರುವೆ. ಧ್ಯೇಯಕ್ಕೆ ಸಮೀಪನಾದಂತೆ ರೋಮಾಂಚನ ಮತ್ತು ಹೆಚ್ಚಿನ ಆನಂದವನ್ನು ಅನುಭವಿಸುವೆ. ಅದ್ಭುತವಾದ ಶಾಂತಿಯನ್ನು ನೀನು ಈಗ ಅನುಭವಿಸುವೆ. ಹೃದಯ ಪುಷ್ಪವು ಸಂಪೂರ್ಣವಾಗಿ ವಿಕಾಸವಾಗುವುದು. ಶಾಂತನಾಗಿ ಅಮೃತಪಾನಮಾಡು. ಆ ಗಂಭೀರವಾದ ಶಾಂತಿಯಲ್ಲಿ ಆತ್ಮನ ಗೂಢತತ್ವಗಳು ಅಂಗೈಯೊಳಗಣ ನೆಲ್ಲಿಯಕಾಯಿಯಂತೆ ನಿನಗೆ ತಿಳಿಯಲ್ಪಡುವುವು. ಅವಿದ್ಯೆ ಅಥವಾ ಮಾಯೆಯ ಪರಿಣಾಮಗಳಾದ ಮೋಹ, ಭಯ ಮುಂತಾದವು ಕಾಲಿಗೆ ಬುದ್ಧಿ ಹೇಳುವುವು. ಎಲ್ಲೆಲ್ಲಿಯೂ ಬೆಳಕು, ಜ್ಞಾನ, ಸ್ವಚ್ಛತೆ ಮತ್ತು ಸುಖವೇ ಇರುವುದು.

ಜಟಾಧಾರಣ, ಸ್ಫೂರ್ತಿಯ ಭಾಷಣಗಳು, ವಿದ್ವತ್ತು, ಪವಾಡಗಳ ಪ್ರದರ್ಶನದಿಂದ ಪೂರ್ಣತೆಯು ದೊರೆಯುವುದಿಲ್ಲವು. ಆತ್ಮಜ್ಞಾನದಿಂದಲೇ ಪೂರ್ಣತೆಯು ಸಾಧ್ಯವು. ರಾಗ, ದ್ವೇಷ, ಅಹಂಕಾರ, ಕಾಮ, ಕ್ರೋಧ ಎಂಬ ದ್ವಂದ್ವ ಪ್ರವಾಹಗಳು ಹರಿಯುವುದು ನಿಂತಕೂಡಲೇ ಅವನು ಸಂತೋಷಿಯೂ, ಬ್ರಹ್ಮನೂ, ಜೀವನ್ಮುಕ್ತನೂ ಎನ್ನಿಸುವನು.

ಸತ್ಯ ಅಥವಾ ಬ್ರಹ್ಮವನ್ನು ವಿವೇಚಿಸದೆ ಅರಿತುಕೊಳ್ಳುವುದು ಅಸಾಧ್ಯವು. " ನಾನು ಯಾರು ? ಆತ್ಮನ ಸ್ವರೂಪವೇನು " ಎಂಬ ವಿಚಾರವನ್ನೇ ಚಿಂತನೆ ಎಂದು ಕರೆಯುವರು. ಬ್ರಹ್ಮಚಿಂತನೆಯು ನಿತ್ಯಸುಖ ಮತ್ತು ಅಮೃತತ್ವಕ್ಕೆ ಸೇತುವಾಗಿರುವುದು. ಆದ್ದರಿಂದ ಸಂತತವಾಗಿ ಬ್ರಹ್ಮಚಿಂತನೆ

ಯನ್ನು ಮಾಡು. "ನೀನು ಚಿಂತಿಸಿದಂತೆ ಆಗುವೆ." ನೀನು ಬ್ರಹ್ಮನನ್ನು ಚಿಂತಿಸಿದರೆ ಬ್ರಹ್ಮವೇ ಆಗುವೆ **ಬ್ರಹ್ಮನಾಗುವುದೆಂದರೆ ನಿತ್ಯಶಾಂತಿಯನ್ನು ಮತ್ತು ಅಮೃತತ್ವವನ್ನು ಪಡೆಯುವುದು.**

ಅನುಸಂಧಾನವೆಂದರೆ ವಿಚಾರ, ಜಿಜ್ಞಾಸೆ. ಅನು = ಅನಂತರ, ಸಂ = ಪರಿಣಾಮಕಾರಿಯಾಗಿ, ಧಾನ = ಗಮನಕೊಡು. ಆತ್ಮಾನುಸಂಧಾನವು ಎಂದರೆ ಆತ್ಮನ ಸ್ವಭಾವವನ್ನು ಕುರಿತು ಜಿಜ್ಞಾಸೆ ಮಾಡುವುದು. ಅದು ವಿಚಾರ ಶಬ್ದದ ಸಮಾನಾರ್ಥವು. ನಿತ್ಯಾನಿತ್ಯ ವಸ್ತುವಿವೇಕವು ಜ್ಞಾನಯೋಗ ಮಾರ್ಗದಲ್ಲಿರುವ ಸಾಧಕನಿಗೆ ಇಂದ್ರಿಯ ವಿಷಯಗಳ ತೋರಿಕೆಯನ್ನು ನಾಶಗೊಳಿಸಲು ಇರುವ ಯಂತ್ರಫಿರಂಗಿಯು (Machine gun).

ನಾನು ಯಾರು? ಬ್ರಹ್ಮವೆಂದರೇನು? ಈ ಸಂಸಾರವೆಂದರೇನು? ಜೀವನದ ಗುರಿಯಾವುದು? ಈ ಧ್ಯೇಯವನ್ನು ಸಾಧಿಸುವುದು ಹೇಗೆ? ಜನನ – ಮರಣಗಳಿಂದ ಬಿಡುಗಡೆಯನ್ನು ಪಡೆಯುವುದೆಂತು? ಮೋಕ್ಷದ ಸ್ವರೂಪವೇನು? ಯಾವಾಗ? ಎಲ್ಲಿ? ಯಾವ ಕಡೆಗೆ? ಹೀಗೆ ಮುಮುಕ್ಷುವು ಜೀವನದ ಉದ್ದೇಶವನ್ನು ಹುಡುಕುತ್ತಿರುವಾಗ ಜಿಜ್ಞಾಸೆ ಮಾಡಬೇಕು.

ಸೃಷ್ಟಿಯು ಎರಡು ವಿಧವು – ಜೀವಸೃಷ್ಟಿ ಮತ್ತು ಈಶ್ವರ ಸೃಷ್ಟಿ. ನಾನು, ನನ್ನದು ಎಂಬುದು ಜೀವಸೃಷ್ಟಿಯು. ಜೀವಸೃಷ್ಟಿಯು ಮನುಷ್ಯನನ್ನು ಈ ಸಂಸಾರಕ್ಕೆ ಬಂಧಿಸುವುದು. ಇದನ್ನು ಮನೋಮಯ ಸೃಷ್ಟಿ ಎಂದೂ ಕರೆಯುವುದುಂಟು. ಪಂಚಭೂತಗಳು ಪರಮಾತ್ಮನಿಂದ ಸೃಷ್ಟಿಸಲ್ಪಟ್ಟವೆ. ಈಶ್ವರ ಸೃಷ್ಟಿಯು ಮನುಷ್ಯನನ್ನು ಬಂಧಿಸಲಾರದು. ಅದಕ್ಕಿಂತ ಅವನು ಮೋಕ್ಷವನ್ನು ಪಡೆಯಲು ಸಹಾಯಮಾಡುವುದು.

ಶ್ರುತಿಗಳು ಒತ್ತಿ ಹೇಳುವುದೇನೆಂದರೆ, ದ್ವಂದ್ವಾತೀತವು ಯಾವುದೋ, ಕಾರ್ಯ ಕಾರಣವಲ್ಲದ ಅಜವು ಯಾವುದೋ, ಮನಸ್ಸು, ಮಾತು ಯಾವುದರಿಂದ ಹಿಂತಿರುಗುವುದೋ, ಇದು, ಅದು ಎಂಬುದು ಅಲ್ಲದ್ದು ಯಾವುದೋ ತಿಳಿಯುವುದು ಮತ್ತು ತಿಳಿಯಲ್ಪಡತಕ್ಕದ್ದು, ಈ ಎರಡಕ್ಕಿಂತ ಬೇರೆಯಾದುದು ಯಾವುದೋ ಅದೇ ಬ್ರಹ್ಮವು, ಸತ್ಯವು. ಅವನೇ ಕಾರ್ಯಕಾರಣ ರಹಿತನಾದ ಸತ್ಯನು. ಅವನು ಸತ್ಯಗಳ ಸತ್ಯನು.

ವೇದಾಂತ ವಿದ್ಯಾರ್ಥಿಯು ತನ್ನ ನಿತ್ಯಜೀವನದಲ್ಲಿ ನೇತಿ – ನೇತಿ ತತ್ವವನ್ನು ಬಳಸುವನು. "ನಾನು ಈ ನಶ್ವರವಾದ ದೇಹವಲ್ಲ. ನಾನು ಮನಸ್ಸಲ್ಲವು. ನಾನು ಇಂದ್ರಿಯಗಳಲ್ಲವು" ಎಂದು ಹೇಳುವನು. "ನೇತಿ – ನೇತಿ" ಎಂದರೆ ಇದಲ್ಲ – ಇದಲ್ಲ. ಇದನ್ನು ನಿಷೇಧಕ ತತ್ವವೆನ್ನುವರು. ಆದರೆ ಸರ್ವವ್ಯಾಪಿಯಾದ ಆತ್ಮನಲ್ಲಿ ಐಕ್ಯತೆಯನ್ನು ಅಭ್ಯಾಸಮಾಡುವನು. ಅಭ್ಯಾಸವು ಆತ್ಮಜ್ಞಾನದಲ್ಲಿ ಪರ್ಯವಸಾನವಾಗುವುದು. ಸರ್ವಪರಿಪೂರ್ಣವಾದ ಬ್ರಹ್ಮವು ಕೂಡಲೇ ಅಂತರ್ಬೋಧವಾಗುವುದು (intuition).

ಒಂದು ಮನೆಯಲ್ಲಿ ಹತ್ತು ಕೊಠಡಿಗಳಿವೆ ಎಂದುಕೊಳ್ಳೋಣ. ರಾತ್ರಿ ಆ ಕೋಣೆಗಳಲ್ಲಿ ಕತ್ತಲೆಯು ಒಂದೇಸಮನಾಗಿರುವುದು. ಒಂದೇ ಕತ್ತಲೆಯು ಅಲ್ಲೆಲ್ಲಾ ಇರುವುದು. ನೀವು ಬೆಳಕನ್ನು ಒಂದು ಕೋಣೆಗೆ ತಂದರೆ ಆ ಕೋಣೆಯ ಕತ್ತಲೆಯು ಮಾತ್ರ ಅಲ್ಲಿನ ಬೆಳಕಿನಿಂದ ಮರೆಯಾಗುವುದು. ಹಾಗೆಯೇ ಚೈತನ್ಯವು ಎಲ್ಲ ಜೀವಗಳಲ್ಲೂ ಒಂದೇಸಮನಾಗಿರುವುದು. ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಸಮನಾದ ಮನೋಭಾವವಿರುವುದು. ಅಜ್ಞಾನವೆಂಬ ಕತ್ತಲೆಯು ಒಬ್ಬ ಜೀವನಲ್ಲಿ ನಾಶವಾದರೆ ಅವನು ಮಾತ್ರ ಆತ್ಮಜ್ಞಾನವನ್ನು ಹೊಂದುವನು. ಇತರ ಜೀವರು ಜೀವನ್ಮುಕ್ತಿಯನ್ನು ಹೊಂದುವುದಿಲ್ಲ, ಏಕೆಂದರೆ ಅಂತಃಕರಣದ ಪರಿಚ್ಛಿನ್ನತೆಯಿಂದ ಅಥವ ಜೀವನ ಪ್ರತ್ಯೇಕತಾಭಾವದಿಂದ.

ಆತ್ಮನು ಅಪರಿಚ್ಛಿನ್ನನಾದ ವಿಭುವು. ಯಾವಾಗ ಎರಡನೆಯದನ್ನು ಕಾಣುವುದಿಲ್ಲವೋ, ಕೇಳುವುದಿಲ್ಲವೋ, ಆಘ್ರಾಣಿಸುವುದಿಲ್ಲವೋ, ತಿನ್ನುವುದಿಲ್ಲವೋ, ಚಿಂತಿಸುವುದಿಲ್ಲವೋ, ತಿಳಿಯುವುದಿಲ್ಲವೊ ಆಗ ಅದೇ ಆತ್ಮವು. ಅದು ಮೇಲೂ, ಕೆಳಗೂ, ಹಿಂದೆಯೂ, ಮುಂದೆಯೂ, ಬಲಕ್ಕೂ, ಎಡಕ್ಕೂ ಆತ್ಮವೊಂದೇ ಇರುವುದು. ಎಲ್ಲ ಪ್ರಾಣಿಗಳ ಚೈತನ್ಯವೇ ಆತ್ಮವು. ಮನಸ್ಸು ಗಾಢನಿದ್ದೆಯಲ್ಲಿ ಆತ್ಮನಲ್ಲಿ ವಿಶ್ರಮಿಸುವುದು. ಮನಸ್ಸು ಚಿಂತಿಸುವಂತೆ ಆತ್ಮನು ಪ್ರೇರಿಸುವನು. ಆತ್ಮನು ವಿಶುದ್ಧನಾದ, ವಿಶ್ವವ್ಯಾಪಿಯಾದ ಸೂಕ್ಷ್ಮ ಚೈತನ್ಯವಾದುದರಿಂದ ಅದಕ್ಕೆ ರೂಪವಿಲ್ಲ; ಬಣ್ಣವಿಲ್ಲ, ಗುಣವಿಲ್ಲ, ನಾಮವಿಲ್ಲ, ದೇಹವಿಲ್ಲ. ಆದರೆ ಜ್ಞಾನ ಮತ್ತು ಸುಖದ ರಾಶಿಯು.

ಈ ದೇಹದಲ್ಲಿ ಅಡಗಿರುವ ಚೈತನ್ಯದ ನೆರವಿಲ್ಲದೆ ನೀನು ಕೇಳಲಾರೆ, ನೋಡಲಾರೆ, ತಿನ್ನಲಾರೆ, ಮಾತನಾಡಲಾರೆ, ನಡೆಯಲಾರೆ, ಚಿಂತಿಸಲಾರೆ

ಮತ್ತು ಭಾವಿಸಲಾರೆ. ಒಂದು ಶವವು ಮಾತನಾಡಲಾರದು, ನೋಡಲಾರದು ಅಥವಾ ಕೇಳಲಾರದು. ಏಕೆಂದರೆ ಅದರಲ್ಲಿ ಜೀವಚೈತನ್ಯವಿಲ್ಲವು.

ಸೂರ್ಯ, ಚಂದ್ರ, ನಕ್ಷತ್ರಗಳು, ಹಿಮಾಲಯದ ಮಂಜಿನ ಶಿಖರಗಳು, ಮಲ್ಲಿಗೆ, ಗುಲಾಬಿ, ನಯಾಗರ ಜಲಪಾತ ಮತ್ತು ವಿಶಾಲ ಸಾಗರವನ್ನು ಸ್ತುತಿಸುವೆ, ಶ್ಲಾಘಿಸುವೆ (admire). ವಿಮಾನ, ಹಬೆಯ ದೋಣಿ, ಹೊಗೆಯಬಂಡಿ, ತಂತೀ ಸಮಾಚಾರ, ಆಕಾಶವಾಣಿಯನ್ನು ಮೆಚ್ಚುವೆ. ಆದರೆ ಮೆದುಳಿನಲ್ಲಿ ಕುಳಿತಿರುವ ಮನಸ್ಸು ಇನ್ನೂ ಪರಮಾಶ್ಚರ್ಯಕರ ವಾದುದು. ಕಣ್ಣು ಮಿಟುಕಿಸುವುದರೊಳಗೆ ಮನಸ್ಸು ಕೊಲಂಬೋದಿಂದ ಲಂಡನ್ನಿಗೂ, ಹಿಮಾಲಯದಿಂದ ಬರ್ಲಿನ್ನಿಗೂ ಚಲಿಸುವುದು. ಅತ್ಯಂತ ಆಶ್ಚರ್ಯಕರವಾದುದು ವಿಶ್ವವ್ಯಾಪಿಯಾದ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಮತ್ತು ಮನಸ್ಸನ್ನು ಬೆಳಗುವ ಅಮರವಾದ ಬ್ರಹ್ಮವು.

ಜೀವನು ನವದ್ವಾರಗಳಿಂದ ಕೂಡಿದ ಮಾಯಾನಗರಿಯಲ್ಲಿ ಸುಷುಪ್ತಿ ಯನ್ನು ಅನುಭವಿಸುವನು. ಈ ಅವಸ್ಥೆಯಲ್ಲಿ ವೃತ್ತಿಗಳಾಗಲಿ, ಸಂಕಲ್ಪಗ ಗಳಾಲಿ ಇಲ್ಲವು. ಇಂದ್ರಿಯಗಳ ಚೇಷ್ಟೆಯಾಗಲಿ, ವರ್ತನ-ಪರಿವರ್ತನಗಳಾಗಲಿ ಇಲ್ಲವು. ರಾಗ-ದ್ವೇಷ ಪ್ರವಾಹಗಳ ಕ್ರಿಯೆಯಾಗಲೀ, ಬುದ್ಧಿಯ ಚಟುವಟಿಕೆ ಯಾಗಲೀ ಇಲ್ಲವು. ಈ ಅವಸ್ಥೆಯಲ್ಲಿ ಸತ್ಯ ಅಥವ ಮಿಥ್ಯಾಜ್ಞಾನವು ಇರು ವುದಿಲ್ಲ. ಎಚ್ಚರದವಸ್ಥೆಯ ಅನುಭವಗಳು ಬದಲಾವಣೆಯಾದ, ಹೊಸದಾಗಿ ಸೇರಿಸಲ್ಪಟ್ಟ ಮತ್ತು ವಿಚಿತ್ರವಾದ ಮಿಶ್ರಣಗಳ ವಾಸನೆಗಳ ಮೂಲಕ ಸ್ವಪ್ನದಲ್ಲಿ ತೋರಿಕೊಳ್ಳುವುವು. ಸ್ವಪ್ನ ದೃಶ್ಯಗಳನ್ನೆಲ್ಲಾ ಸೃಷ್ಟಿಮಾಡುವುದು ಮನಸ್ಸು. ಅವು ಪರಸ್ಪರ ವಿರುದ್ಧವಾದುವು (ಅಥವಾ ದ್ವಂದ್ವಗಳು). ಅವು ಸ್ವತಂತ್ರವಾಗಿ ಇರುವುದಿಲ್ಲವು. ಒಳ್ಳೆಯದರ ಹಿರಿಮೆಯನ್ನು ತೋರಿಸು ವುದಕ್ಕಾಗಿಯೇ ದೋಷಗಳು ಇರುವುವು. ಇದು ಅದರ ಮೂಲೋದ್ದೇಶ ವಾಗಿದೆ (raison d'etre). ದೋಷವು ಒಳ್ಳೆಯದರ ವಿರುದ್ಧವು. ಅದರ ಜನ್ಮಕಾರಣವು. ದೋಷವು ವಿನಾಶಕ ಶಕ್ತಿಯು. ಒಳ್ಳೆಯದು ಸೃಷ್ಟಿಕಾರಕ ಶಕ್ತಿಯು. ಈ ವಿಶ್ವದಲ್ಲಿ ಪೂರ್ಣ ಒಳ್ಳೆಯದಾಗಲೀ, ಅಥವಾ ಪೂರ್ಣ ಕೆಟ್ಟದ್ದಾಗಲೀ ಇಲ್ಲವು. ಒಳ್ಳೆಯದನ್ನು ಬಿಟ್ಟು ದೋಷಕ್ಕೆ ಸ್ವತಂತ್ರವಾದ ಇರುವಿಕೆಯಿಲ್ಲವು. ಎಲ್ಲಿ ದೋಷವಿದೆಯೊ ಅಲ್ಲಿ ಒಳ್ಳೆಯದಿರುವುದು. ಎಲ್ಲಿ

ಒಳ್ಳೆಯದಿರುವುದೊ ಅಲ್ಲಿ ಕೆಟ್ಟದ್ದು ಇರುವುದು. ಈ ಸಾಪೇಕ್ಷ ಜಗತ್ತಿನಲ್ಲಿ ಪೂರ್ಣವಾಗಿ ಒಳ್ಳೆಯದನ್ನೇ ನೀನು ನಿರೀಕ್ಷಿಸಲಾರೆ. ಸಂಪೂರ್ಣ ಹಿತವನ್ನು ಬ್ರಹ್ಮವೊಂದರಲ್ಲೇ ನೋಡಬಹುದು. ಹಿತಾಹಿತಗಳ ಹಿನ್ನೆಲೆಯಲ್ಲಿ ಅಡಗಿರುವ ಮೂಲಸತ್ಯದ ದೃಷ್ಟಿಯಿಂದ ದೋಷಗಳೂ ಮತ್ತು ಒಳ್ಳೆಯವೂ ನಿರರ್ಥಕವಾಗಿ ಸವೆಯುವುದು. ಹಿತಾಹಿತಗಳು ಮನಸ್ಸಿನ ಸೃಷ್ಟಿಗಳು. ಈ ದ್ವಂದ್ವಗಳನ್ನು ದಾಟಿಹೋಗಿ ಪರಮಶಾಂತಿಯನ್ನೂ, ಅಮೃತತ್ವವನ್ನೂ ಹೊಂದು. ಜ್ಞಾನಿಗೆ ಶುಭಾಶುಭಗಳೆಂಬ ಭೇದವಿಲ್ಲವು.

ಈ ಲೋಕದಲ್ಲಿ ಅಶುಭವಾದುದು ಯಾವುದೂ ಇಲ್ಲವು. ಮಲವು ಹೀನವಾದದ್ದೆಂದು ನೀನು ಹೇಳಬಹುದು. "ಇಲ್ಲ" ಎಂದು ನಾನು ಹೇಳುತ್ತೇನೆ. ಅದು ತರಕಾರಿಗಳ ತೋಟಕ್ಕೆ ಗೊಬ್ಬರವಾಗಿ ಉಪಯೋಗಿಸಲ್ಪಡುವುದು. ಮಲದ ದೂರನ್ನು ಕೇಳು, "ಮಿತ್ರನೇ ನನ್ನನ್ನು ನಿಂದಿಸಬೇಡ. ನಿನ್ನ ನಾಲಿಗೆ, ಜಠರ ಮತ್ತು ಕರುಳುಗಳ ಸಂಪರ್ಕದಿಂದ ನಾನು ಕೆಡಿಸಲ್ಪಟ್ಟೆನು. ಹಿಂದಿನ ಸ್ಥಿತಿಯಲ್ಲಿ ನಾನು ಸಿಹಿಯಾದ ಕಿತ್ತಳೆಯಾಗಿದ್ದೆನು, ರುಚಿಕರವಾದ ರಸಗುಲ್ಲವಾಗಿದ್ದೆನು, ಕಾಲ್ಮೀ ಮಾವಿನ ಹಣ್ಣಾಗಿದ್ದೆನು." ಶುಭಾಶುಭಗಳು ಸಂಬಂಧವಾಚಕಗಳು. ಅವು ಮಾನಸಿಕ ಸೃಷ್ಟಿಯು. ಮಾವು ಸಿಹಿಯಾಗಿಲ್ಲ. ಕಲ್ಪನೆಯು ಸಿಹಿಯಾಗಿರುವುದು. ಹೆಂಗಸು ಸುಂದರವಾಗಿಲ್ಲ. ಭಾವನೆಯು ಸುಂದರವಾಗಿರುವುದು. ಮಲಮೂತ್ರಗಳು ಅಶುದ್ಧವಲ್ಲವು. ಚಿಂತನೆಯು ಅಶುದ್ಧವು. ಮನಸ್ಸನ್ನು ತಿದ್ದಿಕೊ. ಅದಕ್ಕೆ ಆಧಾರವಾದ ಆತ್ಮನ ವಿಚಾರಮಾಡು. ನಂತರ ಎಲ್ಲವೂ ಪವಿತ್ರವೇ, ಎಲ್ಲವೂ ಶುದ್ಧವೇ, ಎಲ್ಲವೂ ಶುಭವೇ, ಎಲ್ಲವೂ ಸುಂದರವೇ. ದೋಷವನ್ನು ನಿರ್ದೋಷವಾಗಿ ಪರಿವರ್ತಿಸು. ಸ್ವರ್ಗವನ್ನು ಭೂಮಿಗೆ ಇಳಿಸುವ ಮಾರ್ಗವು ಇದೇ ಆಗಿರುವುದು.

ಒಬ್ಬ ವೈದ್ಯನು ವಕೀಲಿ ವೃತ್ತಿಯು ಒಳ್ಳೆಯದು ಮತ್ತು ಲಾಭಧಾಯಕವು ಎಂದು ಭಾವಿಸುವನು. ಹಾಗೆಯೇ ಒಬ್ಬ ವಕೀಲನು ವೈದ್ಯವೃತ್ತಿಯು ಸೊಗಸಾದುದು ಮತ್ತು ಲಾಭದಾಯಕವೆಂದು ಭಾವಿಸುವನು. ಇಬ್ಬರೂ ಭ್ರಾಂತಿಯಲ್ಲಿ ಭ್ರಮಿಸುತ್ತಿರುವರು. ಇದೇ ಮಾಯೆಯು. ಇದು ಮನಸ್ಸಿನ ಮತ್ತೊಂದು ರೀತಿಯ ವಂಚನೆಯು. ಎಚ್ಚರಿಕೆ, ವಿವೇಕವನ್ನು ಹೊಂದು.

ಆಸೆ, ನೋವು, ಇಚ್ಛೆ, ದ್ವೇಷವು ಮನಸ್ಸಿನ ಗುಣಗಳು. ಸಾಂಖ್ಯರು ಅಥವ ಜ್ಞಾನಿಗಳು " ದೇಹದಲ್ಲಿ ಹುಟ್ಟುವ ಯಾವುದೇ ವಿಧವಾದ ನೋವನ್ನು ಆತ್ಮನು ತಿಳಿಯುವುದಿಲ್ಲ. ಪ್ರಕೃತಿಯು ಇವೆಲ್ಲವನ್ನು ನಡೆಸುತ್ತಿದೆ. ಆತ್ಮವು ಕೇವಲ ಸಾಕ್ಷಿಯಾಗಿದೆ " ಎಂದು ಹೇಳುವರು. ಕರ್ಮವು ಗುಣಗಳಿಗೆ ಸಂಬಂಧಿಸಿದುದೆಂದು ಅವರು ಚೆನ್ನಾಗಿ ತಿಳಿದು " ನಾನು ಏನನ್ನೂ ಮಾಡುವುದಿಲ್ಲ " ಎಂದು ಹೇಳುವರು.

ಈ ಆತ್ಮನು ಸ್ವಯಂಭುವು ಮತ್ತು ಸ್ವಯಂಪ್ರಕಾಶನು. ಅವನು ಕಿವಿಯ ಕಿವಿಯು, ಕಣ್ಣಿನ ಕಣ್ಣು, ನಾಲಿಗೆಯ ನಾಲಿಗೆ, ಮನಸ್ಸಿನ ಮನಸ್ಸು. ಸರ್ವೇಂದ್ರಿಯಗಳು, ಮನಸ್ಸು, ಪ್ರಾಣವು, ಸರ್ವಕ್ಕೂ ಆಧಾರನಾದ ಬ್ರಹ್ಮದಿಂದ ತಮಗೆ ಬೇಕಾದ ಶಕ್ತಿಯನ್ನು ಪಡೆಯುವುವು. ಅವನಿಲ್ಲದೆ ಕೇಳಲಾರೆ, ಅವನಿಲ್ಲದೆ ನೀನು ಚಿಂತಿಸಲಾರೆ. ಅವನು ಅಂತರ್ಯಾಮಿ (Inner Ruler).

ಅಪರಿಚ್ಛಿನ್ನನೂ, ವಿಭುವೂ ಆದ ಆತ್ಮನಿಂದ ಯಾವುದು ಚಿಂತನ ಶಕ್ತಿಯನ್ನು ಪಡೆದಿರುವುದೊ ಅದೇ ಮನಸ್ಸು. ಮನಸ್ಸು ಸೃಷ್ಟಿಸುವುದು ಮತ್ತು ನಾಶಗೊಳಿಸುವುದು. ತನ್ನ ಚಿಂತನ ಶಕ್ತಿಯಿಂದ ಸಮಸ್ತ ವಿಶ್ವವನ್ನೂ ಸೃಷ್ಟಿಸುವುದು. ಮನಸ್ಸಿನ ಪ್ರಧಾನವಾದ ಗುಣವು ಕಲ್ಪಿಸುವುದು. ಅದು ಸುಖ ದುಃಖಗಳನ್ನು ಸೃಷ್ಟಿಸುವುದು ಮತ್ತು ಅನುಭವಿಸುವುದು. ಅದು ಬಂಧನ ಮತ್ತು ಮುಕ್ತಿಗೆ ಕಾರಣವಾದುದು. ಎಲ್ಲವೂ ಮನಸ್ಸೇ. ಅದೇ ಎಲ್ಲವೂ ಆಗಿದೆ. ಅದು ನಿನ್ನ ನಿಜವಾದ ಮಿತ್ರನು ಮತ್ತು ದುಷ್ಟಶತ್ರುವು. ಕೀಳುಮನಸ್ಸು ನಿನ್ನ ಶತ್ರುವು. ಅದು ನಾನಾ ಬಗೆಯ ಬಂಧನಗಳನ್ನುಂಟು ಮಾಡುವುದು. ನಾನಾ ಬಗೆಯ ವ್ಯರ್ಥ ಆಸೆ – ಆಕಾಂಕ್ಷೆಗಳನ್ನು ತುಂಬುವುದು. ಅತ್ಯುತ್ತಮವಾದ ಮನಸ್ಸು ನಿನ್ನ ಸ್ನೇಹಿತನು ಮತ್ತು ಹಿತ ರಕ್ಷಕನು. ಏಕೆಂದರೆ ಜೀವನದ ಶ್ರೇಷ್ಠ ಧ್ಯೇಯವನ್ನು ಪ್ರಾಪ್ತಿಮಾಡಿ ಕೊಡುವ ದಾರಿಯಲ್ಲಿ ಉಪಯುಕ್ತವಾದ ಸಲಹೆಗಳನ್ನು ನೀಡುವುದು. ಉತ್ತಮ ಮನಸ್ಸು ನಿನಗೆ ನೆರವು ಕೊಡುವ ಗುರುವು. ಅದರ ಸುಮಧುರವಾದ ಸೂಕ್ಷ್ಮವಾಣಿಯನ್ನು ಕೇಳು ಮತ್ತು ಅದರ ಸಲಹೆಗಳನ್ನು ಅನುಸರಿಸು. ಶುದ್ಧ ಮನಸ್ಸಿನ ಮಾತು ಭಗವಂತನ ವಾಣಿಯು. ಅದು ನಿರ್ದೋಷ ವಾಣಿಯು. ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು, " ತನ್ನ

ಉದ್ಧಾರವನ್ನು ತನ್ನಿಂದಲೇ ಮಾಡಿಕೊಳ್ಳಬೇಕು. ತನ್ನನ್ನು ತಾನೇ ತಗ್ಗಿಸಿ ಕೊಳ್ಳಬಾರದು, ಏಕೆಂದರೆ ತನಗೆ ತಾನೇ ಬಂಧುವು ಮತ್ತು ತನಗೆ ತಾನೇ ಶತ್ರುವು. ಯಾವನು ದೇಹೇಂದ್ರಿಯಾದಿ ಗುಂಪನ್ನು ತಾನೇ ಜಯಿಸಿಕೊಂಡಿ ರುವನೊ ಅವನು ತನಗೆ ತಾನೇ ಬಂಧುವು. ಆತ್ಮನನ್ನು ಜಯಿಸದವನಿಗೆ " ತಾನೇ ತನಗೆ ಶತ್ರುವಿನಂತೆ ಇರುವನು" ಎಂದು ಹೇಳಿರುವನು. (ಅಧ್ಯಾಯ VI— ೫, ೬.)

ಈ ಸಂಸಾರ ಸಾಗರವನ್ನು ದಾಟಲು ದುಷ್ಟ ಮನಸ್ಸನ್ನು ಹಿಡಿತದಲ್ಲಿಡು ವುದಕ್ಕಿಂತ ಉತ್ತಮವಾದ ನಾವೆಯಿಲ್ಲವು.

ಬಡುಲಿಲ್ಲದ ಬ್ರಹ್ಮನಿಂದ (ಆಕಾಶ) ಬಯಲು ಹೇಗಾಯಿತು ? ಪೂರ್ವ –ಪಶ್ಚಿಮ, ಉತ್ತರ-ದಕ್ಷಿಣಗಳೂ ಹೇಗಾದವು ? ಇದೂ ಸಹ ಮನಸ್ಸಿನ ಮೋಸವೇ, ಸೃಷ್ಟಿಯೇ. ನಿನಗೆ ಆಯಾಸವಾದಾಗ ಒಂದು ಫರ್ಲಾಂಗ್ ಒಂದು ಮೈಲಿಯಂತೆ ತೋರುವುದು. ನೀನು ದೃಢಕಾಯನಾಗಿದ್ದರೆ ಅದೇ ಒಂದು ಮೈಲಿಯು ಒಂದು ಫರ್ಲಾಂಗಿನಂತೆ ಕಾಣುವುದು. ಜೀವನ್ಮುಕ್ತನಿಗೆ ಅಥವಾ ಯೋಗಿಗೆ ಕಾಲ, ದೇಶಗಳಿಲ್ಲವು. ಅವರುಗಳಿಗೆ ಕಾಲದೇಶಾತೀತವಾದ ಬ್ರಹ್ಮ ವೊಂದೇ ಕಾಣುವುದು.

ಮನಸ್ಸಿನ ವೃತ್ತಿಗಳಿಗೆ ಸಾಕ್ಷಿಯಾದವನು ಯಾರೋ, ಮನಸ್ಸಿನ ವೃತ್ತಿ ಗಳು ಹುಟ್ಟುವುದಕ್ಕೆ ಮುಂಚೆ ಇರುವವನು ಯಾರೋ, ಮನಸ್ಸಿನ ವೃತ್ತಿ ಗಳಲ್ಲಿರುವವನು ಯಾರೋ ಅವನು ಬ್ರಹ್ಮವು.

ಮೇಲೆ ಕೆಳಗೆ, ಒಳಗೆ ಹೊರಗೆ, ಉತ್ತಮ ಕೀಳು, ದೊಡ್ಡ ಸಣ್ಣ, ತೆಳು ದಪ್ಪ, ಸುಖ ದುಃಖ, ಸುಂದರ ಕುರೂಪ, ಈಗ ಆಗ, ಇಲ್ಲಿ ಅಲ್ಲಿ, ಎಂಬುವು ಸಂಬಂಧವಾಚಕಗಳು. ಇವು ಮನಸ್ಸಿನ ಕಲ್ಪನೆಗಳು ಮಾತ್ರ. ಮೇಲೆ ಕೆಳಗಾಗಬಹುದು, ಕೆಳಗೆ ಮೇಲಾಗಬಹುದು. ಅದಕ್ಕೆ ಹೋಲಿಸಿದಾಗ ಇದು ಸಣ್ಣ ಕೋಲು, ಆ ದೊಡ್ಡ ಕೋಲು ಇನ್ನೂ ದೊಡ್ಡ ಕೋಲಿಗೆ ಹೋಲಿಸಿದಾಗ ಸಣ್ಣದಾಗುವುದು. ' ಒಳಗೆ ' ಎಂಬುದು ' ಹೊರಗೆ ' ಆಗುವುದು ಅಥವ ' ಹೊರಗೆ ' ಎಂಬುದು ' ಒಳಗೆ ' ಆಗುವುದು. ಒಂದು ಕಾಲದಲ್ಲಿನ ' ಒಳ್ಳೆ ಯದು ' ಇನ್ನೊಂದು ಕಾಲಕ್ಕೆ ಕೆಟ್ಟದ್ದಾಗುವುದು. ಒಬ್ಬನಿಗೆ ಒಳ್ಳೆಯದು ಇನ್ನೊಬ್ಬನಿಗೆ ಕೆಟ್ಟದ್ದಾಗುವುದು. ಒಬ್ಬನಿಗೆ ಯಾವುದು ಧರ್ಮವೊ ಅದು

ಇನ್ನೊಬ್ಬನಿಗೆ ಅರ್ಥವಾಗಿರುವುದು. ಬ್ರಹ್ಮವು ತೆಳುವೂ ಅಲ್ಲ, ದಪ್ಪವೂ ಅಲ್ಲ. ಚಿಕ್ಕದೂ ಅಲ್ಲ ದೊಡ್ಡದೂ ಅಲ್ಲ. ಬ್ರಹ್ಮದಲ್ಲಿ ಒಳ ಹೊರಗೆಂಬುದಿಲ್ಲ. ಗುಣಾವಗುಣಗಳಿಲ್ಲವು, ಸುಖ ದುಃಖಗಳಿಲ್ಲವು, ಹಿತಾಹಿತಗಳಿಲ್ಲವು. ಅದು ಜ್ಞಾನ ಮತ್ತು ಸುಖದ ಸಮಾನ ಸಾರವು. ಮನಸ್ಸಿನ ಆಟಗಳೆಲ್ಲ ನಿಂತಿರುವಾಗ, ಎಲ್ಲಿ ಕಾಲ, ದೇಶಗಳಿಲ್ಲವೋ, ಪೂರ್ವ ಪಶ್ಚಿಮವಿಲ್ಲವೋ, ಭೂತ ಭವಿಷ್ಯತ್ತುಗಳಿಲ್ಲವೋ, ಗುರುವಾರ ಶುಕ್ರವಾರಗಳಿಲ್ಲವೋ, ಆ ಆನಂದದ ಶಾಂತಿಯು ಬ್ರಹ್ಮವು.

ನಿನ್ನ ಪ್ರೀತಿಯ ಸಹೋದರ ಶ್ರೀ ಬ್ಯಾನ್ಯರ್ಜಿಯನ್ನು ನೋಡು. ಯಾವುದನ್ನು ಗುರುತು ಹಿಡಿದು ಬ್ಯಾನರ್ಜಿ ಎಂದು ಕರೆಯುತ್ತಿ ? ಬ್ಯಾನರ್ಜಿಯು ನಿಜವಾಗಿ ಅವನ ಕೈಗಳಲ್ಲ, ಕಾಲುಗಳಲ್ಲ, ತಲೆ, ಎದೆ, ಅಥವ ಹೊಟ್ಟೆಯಲ್ಲ. ಅವನ ಕೈ ಅಥವ ಕಾಲುಗಳನ್ನು ಕತ್ತರಿಸಿದರೂ, ಅವನು ಕುಷ್ಠರೋಗವನ್ನು ಹೊಂದಿದರೂ, ಅವನ ಕಣ್ಣುಗುಡ್ಡೆಗಳನ್ನು ಕಿತ್ತರೂ, ಅವನಲ್ಲಿ ನಿನಗೆ ಅದೇ ಪ್ರೇಮವಿರುವದು. ಅವನನ್ನು ಬ್ಯಾನರ್ಜಿ ಎಂಬ ಅದೇ ಹೆಸರಿನಿಂದ ಕರೆಯುವೆ. ಮಿ|| ಬ್ಯಾನರ್ಜಿಯು ದೇಹವಲ್ಲವೆಂದು ಸಿದ್ಧವಾಯಿತು. ಸ್ಥೂಲದೇಹವು ಪಂಚಭೂತಗಳಿಂದಾದುದು, ಅದಕ್ಕೆ ಹುಟ್ಟು ಸಾವುಗಳುಂಟು. ಮಿ|| ಬ್ಯಾನರ್ಜಿಗೆ ಚಿಂತನೆಗಳು, ಭಾವನೆಗಳು, ಮನೋವಿಕಾರಗಳು, ವೇದನೆಗಳು ಮತ್ತು ಅಭಿಪ್ರಾಯಗಳು ಇರುವುದರಿಂದ ಮಿ|| ಬ್ಯಾನರ್ಜಿಯನ್ನು ಮನಸ್ಸು ಎಂದು ಹೇಳಬಹುದು. ಚಿಂತನೆಗಳು ಬದಲಾಯಿಸುವುವು. ಮನಸ್ಸು ಬದಲಾಯಿಸುವದು. ಮನಸ್ಸು ಸೂಕ್ಷ್ಮವಸ್ತುವಿನಿಂದ ಮಾಡಲ್ಪಟ್ಟಿದೆ. ತನ್ಮಾತ್ರೆಗಳ, ಪಂಚಭೂತಗಳಲ್ಲದ ಅಥವ ಮೂಲವಸ್ತುಗಳು ಅಥವ ಸೂಕ್ಷ್ಮ ಭೂತಗಳು ಮನಸ್ಸನ್ನುಂಟುಮಾಡುವುವು ಮನಸ್ಸು ಅವಿದ್ಯೆಯ ಪರಿಣಾಮವು. ಅದು ಆದ್ಯಂತವುಳ್ಳದ್ದು. ಮಿ|| ಬ್ಯಾನರ್ಜಿಯ ಯೋಚನೆಗಳೂ ನಡತೆಯೂ ಬದಲಾಯಿಸಿದರೂ ನೀನು ಅವನ ವ್ಯಕ್ತಿತ್ವವನ್ನೇ ನೋಡುವೆ. ಆದ್ದರಿಂದ ಅವನು ಭಾವನೆಗಳಲ್ಲಿಲ್ಲವು. ಅವನು ಮನಸ್ಸು, ಇಂದ್ರಿಯಗಳು ಮತ್ತು ದೇಹವಲ್ಲವು. ಆ ಮನಸ್ಸು ಮತ್ತು ಇಂದ್ರಿಯಗಳಿಗೆ ಅವನು ಬೆಳಕು ಕೊಡುವವನು. ನಿಜವಾದ ಬ್ಯಾನರ್ಜಿಯು ಅಮರನಾದ ಆತ್ಮನು. ಮನಸ್ಸು, ಮಾತು, ಕಾಲ, ದೇಶ

ಮತ್ತು ಕಾರಣಗಳಿಗೆ ಮೀರಿದವನು. ದೇಹ, ಮನಸ್ಸು, ಇಂದ್ರಿಯಗಳು ಅವಿದ್ಯೆಯಿಂದಾದ ಅವನ ಉಪಾಂಗಗಳು.

ಸರೋವರದ ಮೇಲ್ಭಾಗವನ್ನು ಮನಸ್ಸಿನ ಸ್ಥಿತಿಗೆ ಹೋಲಿಸುವರು. ಸರೋವರದ ತಳವನ್ನು ಸುಪ್ತ ಪ್ರಜ್ಞೆಗೆ ಹೋಲಿಸುವರು. ಸರೋವರದ ತಳದಿಂದ ಮೇಲಕ್ಕೆ ಬರುವ ವಸ್ತುಗಳನ್ನು ಸುಪ್ತ ಪ್ರಜ್ಞೆಯಿಂದ ಜಾಗ್ರತ್ತಿಗೆ ಬರುವುದಕ್ಕೆ ಹೋಲಿಸುವರು. ಮನಸ್ಸನ್ನು ಚಂಚಲಗೊಳಿಸುವ ವಿಕ್ಷೇಪ ಶಕ್ತಿಯನ್ನು ಸರೋವರದ ನೀರನ್ನು ಚಂಚಲಗೊಳಿಸುವ ಗಾಳಿಯೆನ್ನಬಹುದು. ಎಚ್ಚರದ ಅವಸ್ಥೆಯಲ್ಲಿ ವಿಕ್ಷೇಪಶಕ್ತಿಯು, ಇಂದ್ರಿಯಗಳು ಮತ್ತು ಜೀವಾತ್ಮದ ಸಂಕಲ್ಪಗಳು, ಮನಸ್ಸನ್ನು ಚಾಂಚಲ್ಯಗೊಳಿಸುವವು. ಸುಷುಪ್ತಿಯಲ್ಲಿ ಮನಸ್ಸು ಪೂರ್ಣ ಶಾಂತವಾಗಿರುವುದು.

ಮನಸ್ಸು ಮದಿಸಿದ ದುಂಬಿಯಂತೆ ಸುತ್ತಾಡುವುದು. ಇಂದ್ರಿಯಗಳನ್ನು ವಿಷಯಗಳಿಂದ ಪ್ರತ್ಯೇಕಿಸು. ಎಲ್ಲ ಆಕರ್ಷಣೆಗಳಿಂದ ಬಿಡಲ್ಪಡು. ಪ್ರಾಣವನ್ನು ಹಿಡಿ. ಇಂದ್ರಿಯದ ದಾರಿಗಳನ್ನು ಬಂಧಿಸು. ಆನೆಯನ್ನು ಹಿಡಿಯುವಂತೆ ಈಗ ಮನಸ್ಸನ್ನು ಹಿಡಿಯಬಲ್ಲೆ. ಸೈನಿಕನು ತನ್ನ ಕತ್ತಿಯಿಂದ ಮೇಲೆ ಬರುವ ಶತ್ರುಗಳನ್ನೆಲ್ಲಾ ಕೊಲ್ಲುವಂತೆ ಮೇಲಿಂದ ಮೇಲೆ ಬರುವ ಎಲ್ಲ ಭಾವನೆಗಳನ್ನೂ, ವಿಷಯಗಳನ್ನೂ, ವಸ್ತುಗಳನ್ನೂ ಕೊಲ್ಲು. ಎಲ್ಲ ವೃತ್ತಿಗಳೂ ನಾಶವಾದಾಗ ಮನಸ್ಸು ಕತ್ತಲೆಯ ಸ್ಥಿತಿಯನ್ನು ಹೊಂದುವದು. ಈ ಕತ್ತಲೆಯನ್ನು ವಿಚಾರದಿಂದ ಕಳೆದುಬಿಡು. ಆಗ ನೀನು ಪ್ರಕಾಶಮಾನವಾದ ಬೆಳಕನ್ನು ಪಡೆಯುವೆ. ಈ ಸ್ಥಿತಿಯನ್ನು ದಾಟಿ ಹೋಗು. ನೀನು ಶೂನ್ಯಪ್ರದೇಶವನ್ನು ಹಾದು ಹೋಗಬೇಕು. ಆನಂತರ ನಿದ್ದೆ ಮತ್ತು ಮೋಹವನ್ನು ಗೆಲ್ಲಬೇಕು. ಕೊನೆಯಲ್ಲಿ ನಿರ್ವಿಕಲ್ಪ ಸಮಾಧಿಯನ್ನು ಪ್ರವೇಶಿಸುವೆ.

ಕಣ್ಣು, ಮನಸ್ಸು, ಮಾತು ಅಲ್ಲಿಗೆ ಹೋಗಲಾರದು. ಸೂರ್ಯನೂ ಅಲ್ಲಿ ಪ್ರಕಾಶಿಸುವುದಿಲ್ಲ. ಅಗ್ನಿಯು ಉರಿಯುವುದಿಲ್ಲ. ಅಲ್ಲಿ ಗಾಳಿಯು ಬೀಸುವುದಿಲ್ಲ.

ಆ ಶಾಶ್ವತವಾದ, ಶ್ರೇಷ್ಠನಾದ ಆತ್ಮನನ್ನು ಈ ಚರ್ಮ ಚಕ್ಷುಸ್ಸಿನಿಂದ ನೋಡಲಾರೆ. ಕೈಗಳು ಹಿಡಿಯಲಾರವು. ಯಾರಿಗೆ ಕಿವಿಗಳಿಲ್ಲವೊ, ಕಣ್ಣು

ಗಳಿಲ್ಲವೊ, ಬಾಯಿ ಅಥವಾ ಮೂಗಿಲ್ಲವೊ, ಮೂಳೆ, ಮಾಂಸ ಮತ್ತು ರಕ್ತ ವಿಲ್ಲವೊ, ಗಟ್ಟಿ ಅಥವಾ ಮೃದುವಿಲ್ಲವೊ, ಆದಿ ಅಂತಗಳಿಲ್ಲವೊ, ದೇಶ-ಕಾಲಗಳಿಲ್ಲವೊ, ಈ ಜಗದಾಧಾರನಾಗಿರುವನೊ, ವೇದಗಳ ಮಾತೆಯೊ, ಅವನೇ ಪ್ರಭುಗಳ ಪ್ರಭುವಾದ ಪರಬ್ರಹ್ಮನು. ಆ ಪರಮಾತ್ಮನು ನಮಗೆ ನಿಸ್ಪೃಷ್ಟವಾದ ಬುದ್ಧಿಯನ್ನೂ, ಸಮದೃಷ್ಟಿಯನ್ನೂ ಕೊಡುವಂತಾಗಲಿ.

ವಾಸನಾಕ್ಷಯದಿಂದ ಮನೋನಾಶವಾಗುವುದು. ಮನೋನಾಶದಿಂದ ಸಂಸ್ಕಾರಗಳೆಲ್ಲವೂ, ನಾಶವಾಗುವುವು. ಆಗ ಜೀವನ್ಮುಕ್ತಿಯು ಪ್ರಾಪ್ತಿಯಾಗುವುದು.

ಎರಡು ತುಟಿಗಳಿವೆ. ಆದರೆ ಮಾತು ಒಂದೇ. ಎರಡು ಕಾಲುಗಳಿವೆ. ಆದರೆ ನಡೆ ಒಂದೆ. ಎರಡು ಕಣ್ಣುಗಳಿವೆ, ನೋಡುವವನು ಒಬ್ಬನೆ. ಸೂಕ್ಷ್ಮ, ಸ್ಥೂಲವೆಂದು ಎರಡು ದ್ರವ್ಯಗಳಿವೆ, ಆದರೆ ಆತ್ಮನು ಒಬ್ಬನೆ. ಅಪರಾಪ್ರಕೃತಿ, ಪರಾಪ್ರಕೃತಿಯೆಂದು ಎರಡು ಪ್ರಕೃತಿಗಳಿವೆ. ಆದರೆ ಪರಬ್ರಹ್ಮನು ಒಬ್ಬನೆ. ಶುದ್ಧ ಮನಸ್ಸು, ಅಶುದ್ಧ ಮನಸ್ಸು ಎಂದು ಎರಡು ವಿಧವಾದ ಮನಸ್ಸುಗಳಿವೆ. ಆದರ ಮೂಲವಾದ ಶಕ್ತಿಯು ಒಂದೆ. ಕ್ಷರಪುರುಷ ಅಕ್ಷರಪುರುಷ ಎಂದು ಎರುಡು ಬಗೆಯ ಪುರುಷರಿರುವರು. ಆದರೆ ಪುರುಷೋತ್ತಮನು ಒಬ್ಬನೇ.

ಸುಷುಪ್ತಿಯಲ್ಲಿ ನಿನ್ನ ಅನುಭವವೇನು ? ನೀನೊಬ್ಬನೆ ಇರುವೆ. ಅಲ್ಲಿ ಎರಡನೆಯ ವಸ್ತುವೇ ಇಲ್ಲ. ಸಂಯೋಗದಲ್ಲಿ ನಿನ್ನ ಅನುಭವವೇನು ? ಎರಡೂ ಒಂದಾಗಿರುವುದು. ಆತ್ಮೀಯರಾದ ಮಿತ್ರರು ಒಂದೇ ಮನಸ್ಸು, ಒಂದೇ ಹೃದಯ, ಒಂದೇ ಆದ ಆತ್ಮವನ್ನು, ಬೇರೆಯಾದ ದೇಹಗಳಿದ್ದರೂ ಹೊಂದಿರುವರು. ಆತ್ಮನೊಬ್ಬನೇ ಇರತಕ್ಕವನು. ಮಾಯೆಯ ತಂತ್ರದಿಂದ ಒಂದು ಅನೇಕವಾಗಿ ತೋರುತ್ತಿರುವುದು. ಹಗ್ಗದಲ್ಲಿನ ಹಾವಿನಂತೆ ಒಂದು ಅನೇಕವಾಗಿ ತೋರುವುದು.

ತಿಳಿಯುವವನು ಮತ್ತು ತಿಳಿಯಲ್ಪಡತಕ್ಕದ್ದು ಮೊದಲಾದ ಎಲ್ಲ ಅನುಭವಗಳೂ ಮನಸ್ಸಿನ ಕಲ್ಪನೆಯು ಮಾತ್ರ. ಯಾವುದು ಕಲ್ಪನೆಯಲ್ಲಿರುವುದೊ ಅದು ನಿಜವಾಗಿಯೂ ಇರುವುದಲ್ಲವು. ಕರ್ತೃ, ಕರ್ಮಗಳಿಂದ ಕೂಡಿರುವ ದ್ವೈತವು ಮನಸ್ಸು ಮತ್ತು ಬಾಹ್ಯೇಂದ್ರಿಯಗಳ ಸೃಷ್ಟಿಯು.

ಜೀವನು ಅಜ್ಞಾನವೆಂಬ ಆವರಣದಿಂದ ಮುಚ್ಚಲ್ಪಟ್ಟಿರುವನು. ಈ ಆವರಣದಿಂದಲೇ ತಾನು ಪರಮಾತ್ಮನಿಗಿಂತ ತೀರ ಭಿನ್ನನೆಂದು ಸುಳ್ಳಾದ ದ್ವೈತವನ್ನು ಕಲ್ಪಿಸುತ್ತಿರುವನು. ಬ್ರಹ್ಮದೊಡನೆ ಐಕ್ಯತೆಯನ್ನು ಹೊಂದುವ ಮುನ್ನ ಈ ಆವರಣವನ್ನು ಕತ್ತರಿಸಿಹಾಕು. ಈ ಅವಿದ್ಯಾಗ್ರಂಥಿಯನ್ನು ಆತ್ಮಜ್ಞಾನವೆಂಬ ಖಡ್ಗದಿಂದ ಕತ್ತರಿಸಿ ನಿತ್ಯಾನಂದ ಸಾಮ್ರಾಜ್ಯವನ್ನು ಪ್ರವೇಶಿಸಿ ವೇದಾಂತ ಗೀತೆಯ ಸಹಜವಾದ ವೈಭವದಿಂದ, "ಓಂ ಅಹಂ ಬ್ರಹ್ಮಾಸ್ಮಿ, ಶಿವೋಽಹಂ, ಸೋಽಹಂ, ಸಚ್ಚಿದಾನಂದ ಸ್ವರೂಪೋಽಹಂ" ಎಂದು ಗರ್ಜಿಸು.

---

## ೬. ಆಧ್ಯಾತ್ಮಿಕ ಧ್ಯಾನವು

ಬ್ರಹ್ಮನಿಷ್ಠನು ಎಂದರೆ ಬ್ರಹ್ಮದಲ್ಲಿ ಭಕ್ತಿಯುಳ್ಳವನು. ಬ್ರಹ್ಮದಲ್ಲಿ ಸ್ಥಿರವಾಗಿ ತಾನು ನಿಲ್ಲುವುದು. ಸಂಪೂರ್ಣವಾಗಿ ಎಲ್ಲಿ ಬಾಹ್ಯ ಚಟುವಟಿಕೆಗಳನ್ನು ಬಿಟ್ಟು ತನ್ನನ್ನು ಬ್ರಹ್ಮಕ್ಕೇ ಸಮರ್ಪಿಸಿಕೊಂಡು ಎಲ್ಲ ಚಿಂತನೆಗಳನ್ನೂ ಬ್ರಹ್ಮದ ಕಡೆಗೆ ತಿರುಗಿಸಿ ಅನ್ಯವನ್ನು ಆಲೋಚಿಸದಿರುವುದೇ ಧ್ಯಾನವು.

ಜ್ಞಾನವೆಂದರೇನು ? ಅಭೇದ ದರ್ಶನವೇ ಜ್ಞಾನವು. ಪರಮಾತ್ಮನಲ್ಲಿ ಜೀವಾತ್ಮನು ಐಕ್ಯತೆಯನ್ನು ಪಡೆದುಕೊಂಡ ಅಪರೋಕ್ಷಾನುಭವವು ಜ್ಞಾನವು. ಧ್ಯಾನವೆಂದರೇನು ? "ಧ್ಯಾನಂ ನಿರ್ವಿಷಯಂ ಮನಃ"—ಇಂದ್ರಿಯ ವಿಷಯಗಳನ್ನು ಸ್ವಲ್ಪವೂ ಚಿಂತಿಸದ ಮುಕ್ತವಾದ ಮನಸ್ಸಿನ ಸ್ಥಿತಿಯು.

ಬ್ರಹ್ಮವೊಂದೇ ಸತ್ಯವು. ಅವನು ನಿಮ್ಮ ಅಂತರಾತ್ಮನು. ಅವನು ತ್ರಿಕಾಲದಲ್ಲಿರುವನು. ಅವನು ಸ್ವಯಂಪ್ರಕಾಶನು, ಸ್ವಯಂಭುವು ಮತ್ತು ಸಚ್ಚಿದಾನಂದ ಪೂರ್ಣನು. ಅವನು ಜಗದಾಧಾರನು. ಅವನು ಅಮರನು, ವ್ಯಾಪಿಯು, ಅವಿಭಾಜ್ಯನು, ನಿತ್ಯನು, ಅಜನು, ಪರಿಣಾಮರಹಿತನು, ವಿಮೃತ್ಯುವು, ಕಾಲರಹಿತನು, ದೇಶರಹಿತನು. ಚಿತ್ತ ಶುದ್ಧಿಯನ್ನು ಪಡೆ. ಧ್ಯಾನದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಮುಕ್ತಿ, ಅಮೃತತ್ವ, ಹಾಗೂ ಆನಂದವನ್ನು ಅನುಭವಿಸು.

ತಿಳಿಯುವವನನ್ನು ನೀನು ಹೇಗೆ ತಿಳಿಯುವೆ? ತಿಳಿಯುವವನು ಯಾವಾಗಲೂ ಸಾಕ್ಷಿಯು ಅಥವಾ ಕರ್ತೃವು. ನೀನು ಬಾಹ್ಯವಸ್ತುಗಳನ್ನು ತಿಳಿಯಬಲ್ಲೆ. ಗಾಢವಾದ ಧ್ಯಾನದಿಂದ ಅಂತರ್ದೃಷ್ಟಿಯಿಂದ ಆತ್ಮನನ್ನು ತಿಳಿಯಬೇಕು.

ಪರಿಪೂರ್ಣನಾದ ಬ್ರಹ್ಮನನ್ನು ತಿಳಿಯುವುದೆಂದರೆ ಅವನಲ್ಲಿ ಒಂದಾಗಿರುವುದು. ಬ್ರಹ್ಮವನ್ನು ತಿಳಿಯುವುದೆಂದರೆ ಬ್ರಹ್ಮವೇ ಆಗುವುದು. ಅವನನ್ನು ತಿಳಿಯುವುದೇ ನಿತ್ಯತ್ವವು. ಆದ್ದರಿಂದ ಪರಸ್ಪರ ಅನ್ವಯ ಮಾಡುವ ಮಾನಸಿಕ ಶಕ್ತಿಯಿಂದ ಮತ್ತು ಧ್ಯಾನದಿಂದ ದೇವರನ್ನು ತಿಳಿದುಕೊ.

ಈ ಅಮೃತಾತ್ಮನನ್ನು ಎಡೆಬಿಡದೆ ಅಭ್ಯಾಸವಿಲ್ಲದೆ ತಿಳಿಯಲು ಸಾಧ್ಯವಿಲ್ಲ. ಯಾರು ಅಮೃತತ್ವವನ್ನೂ, ಸ್ವಾತಂತ್ರ್ಯವನ್ನೂ ಬಯಸುವರೊ ಅವರು ದೀರ್ಘಕಾಲ ಆತ್ಮಚಿಂತನೆಯನ್ನು ಮಾಡಬೇಕು.

ನೀನು ಉಪ್ಪಿನ ಪರ್ವತದಲ್ಲಿ ಯಾವ ಒಂದು ಭಾಗವನ್ನು ರುಚಿ ನೋಡಿದರೂ ಅವೆಲ್ಲವೂ ಉಪ್ಪೆಂದು ತಿಳಿಯುವಂತೆ ಶುದ್ಧ ಮನಸ್ಸಿನ ಗಾಢವಾದ ಧ್ಯಾನದಿಂದ ಸಚ್ಚಿದಾನಂದವೆಂಬ ಪರ್ವತವನ್ನು ಕಂಡು ಬ್ರಹ್ಮದ ರುಚಿ ನೋಡಿದರೆ ನಿನಗೆ ಬ್ರಹ್ಮಾನಂದದ ಅನುಭವವೇ ಆಗುವುದು.

ನನ್ನ ಪ್ರೀತಿಯ ಮಲ್ಲಿಕಾ, ನಿನ್ನ ಧ್ಯಾನದ ಅಂತರಾಳದಲ್ಲಿ ಕಾರ್ತೀಕ ದೀಪದ ವೈಭವವನ್ನು ಕಂಡು ಶಾಂತಿಯಲ್ಲಿ ನೆಲೆಸು. ನೀನು ಆ ಆಧ್ಯಾತ್ಮ ಜ್ಯೋತಿಯಾಗು. ಆ ಪ್ರಕಾಶಮಯನಾದ ಆತ್ಮನೊಡನೆ ಐಕ್ಯತೆಯನ್ನು ಕಾಣು. ನೀನು ಸೂರ್ಯರ ಸೂರ್ಯನೂ, ಜ್ಯೋತಿಗಳ ಜ್ಯೋತಿಯೂ ಆಗಿರುವೆ. ನೀನು ಜಗಜ್ಯೋತಿಯಾಗಿರುವೆ. ಇದನ್ನೇ ಭಾವಿಸು. ಇದನ್ನೇ ಕಂಡುಕೊ. ಓ ಸ್ವಯಂಜ್ಯೋತಿಯಾದ ಅರ್ಜುನ. ರೇಡಿಯೋ ತರಂಗಗಳ ಮಧ್ಯವರ್ತಿಯ ಮೂಲಕ ನೀನು ದೆಹಲಿಯಲ್ಲಿದ್ದರೂ ಕಾನ್‌ಸ್ಟಾಂಟಿನೋಪಲ್, ಕಲ್‌ಕತ್ತ, ಬೊಂಬಾಯಿ, ಲಂಡನ್, ಬರ್ಲಿನ್‌ಗಳಲ್ಲಿ ಹಾಡಿದ ಹಾಡುಗಳನ್ನೂ ಕೇಳಬಲ್ಲೆ. ಇದು ಕಾರ್ಯಕ್ರಮಗಳನ್ನು ಗ್ರಾಹಕ ಸಾಧನವನ್ನುಳ್ಳವರಿಗೆ ನಿಸ್ತಂತುವಿನ ಮೂಲಕ ಹರಡುವುದು. ಈ ಭೌತಿಕ ಮಟ್ಟದಲ್ಲಿ ರೇಡಿಯೊ ತರಂಗಗಳ ಮೂಲಕ ಐಕ್ಯತೆಯು ಇರುವುದು. ಹೀಗೆಯೇ ವೇದಾಂತದ ನಿದಿಧ್ಯಾಸನ ಅಥವಾ ಅಹಂಗ್ರಹ ಉಪಾಸನೆಯ ಮೂಲಕ ಆತ್ಮನ ಐಕ್ಯತೆಯನ್ನು ನೀನು ಪಡೆಯಬಲ್ಲೆ.

ಒಂದು ಸಲ ಬಾಸ್ಕಲಿಯು ತನ್ನ ಗುರುವನ್ನು ಸಂಧಿಸಿ, ಉಪನಿಷತ್ತು ಗಳಲ್ಲಿ ಹೇಳಲ್ಪಟ್ಟಿರುವ ನಿತ್ಯ, ಪರಿಪೂರ್ಣವಾದ, ಬ್ರಹ್ಮವು ಎಲ್ಲಿರುವುದು ಎಂದು ಪ್ರಶ್ನಿಸಿದನು. ಗುರುವು ಒಂದು ಮಾತನ್ನೂ ಆಡಲಿಲ್ಲ. ಶಿಷ್ಯನು ಮತ್ತೆ ಮತ್ತೆ ಕೇಳಿದರೂ ಗುರುವು ಬಾಯಿ ತೆರೆಯಲಿಲ್ಲ. ಮೌನವಾಗಿದ್ದನು. ಕೊನೆಗೆ ಹೇಳಿದನು : "ನಾನು ಪುನಃ ಪುನಃ ನಿನಗೆ ಹೇಳುತ್ತಿದ್ದರೂ ನೀನು ಅರಿತುಕೊಳ್ಳುವುದಿಲ್ಲ. ನಾನೇನು ಮಾಡಲಿ ? ಆ ಪರಿಪೂರ್ಣವಾದ ಬ್ರಹ್ಮವು ಪರಮ ಶಾಂತಿಯು."

ಅಮೃತನೂ, ಸಚ್ಚಿದಾನಂದನೂ ಆದ ಬ್ರಹ್ಮವನ್ನು ಕೇವಲ ಒಂದೇ ಕ್ಷಣ ವಿಭುವೆಂದು ಭಾವಿಸಿದರೆ ಅದರಿಂದ ಪವಿತ್ರ ತ್ರಿವೇಣಿಯಲ್ಲಿ ಒಂದು ಸಾವಿರದ ಎಂಟು ಸಲ ಸ್ನಾನ ಮಾಡಿದಷ್ಟು ಫಲವು ದೊರೆಯುವುದು. ತ್ರಿವೇಣಿಯು ಪ್ರಯಾಗದಲ್ಲಿ, ಗಂಗಾ, ಯಮುನಾ, ಸರಸ್ವತಿಯರ ಸಂಗಮ ದಿಂದಾದುದು. ಬ್ರಹ್ಮಚಿಂತನೆಯೇ ಸತ್ಯವಾಗಿ ಪವಿತ್ರವಾದ ಮಾನಸಿಕ ಸ್ನಾನವು. ಈ ಜ್ಞಾನ ಸ್ನಾನಕ್ಕೆ ಹೋಲಿಸಿದಾಗ ಬಾಹ್ಯಸ್ನಾನಕ್ಕೆ ಬೆಲೆಯೇ ಇಲ್ಲವು. ಅದ್ಯಾತ್ಮ ಜ್ಞಾನದ ಉನ್ನತ ಸ್ಥಿತಿಗೆ ಏರು.

ಜ್ಞಾನಿಯು ಮೌನದ ಮೂಲಕ ಉಪದೇಶಿಸುವನು. ಮೌನವು ಅತ್ಯಂತ ಶಕ್ತಿಯುತವಾದ ಪ್ರಾರ್ಥನೆಯು. ಮೌನವು ಬಹಳ ಪ್ರಬಲ ವಾದ ಭಾಷೆಯು. ಅದು ಹೃದಯದ ಭಾಷೆ. ಭಗವಾನ್ ದಕ್ಷಿಣಾ ಮೂರ್ತಿಯು ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ನಾಲ್ಕು ಮುದ್ದು ಕುಮಾರರಿಗೆ ಮೌನದಿಂದಲೇ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು.

ಅದ್ವಿತೀಯವಾದ ಬ್ರಹ್ಮವೇ ನಿಜವಾಗಿಯೂ ಏಕಾಂತವಾದ ಶಾಂತ ಸ್ಥಳವು. ಅಲ್ಲಿ ಶಬ್ದವಾಗಲಿ, ವರ್ಣವಾಗಲೀ ಇಲ್ಲವು. ಯಾವ ವಿಧವಾದ ಚಂಚಲತೆಗಳಿಲ್ಲವು. ಅನುಷ್ಠಾನದ ಆರಂಭದಲ್ಲಿ ನಿನ್ನ ಜೊತೆಯಲ್ಲಿರುವವನು ಬ್ರಹ್ಮನು. ಗಾಢವಾದ ಧ್ಯಾನದಲ್ಲಿ ತನ್ಮಯನಾಗಿರುವಾಗ ನೀನೊಬ್ಬನೇ **'ಶಿವಃಕೇವಲೋಽಹಮ್.'**

ಕಠಿಣವಾದ ಆತ್ಮಸಂಯಮ ಮತ್ತು ಧ್ಯಾನ ನಿಷ್ಠೆಯು ಮನಸ್ಸನ್ನು ಪೂರ್ಣವಾಗಿ ನಿತ್ಯಾತ್ಮನಲ್ಲಿ ನಿಲ್ಲಿಸಲು ಸಹಾಯವಾಗುವುದು.

ನೀರುಗುಳ್ಳೆಗಳು ಒಡೆದು ಸಾಗರದಲ್ಲಿ ಒಂದಾಗುವವು. ದೇಹವು ಸಿಡಿದು, ಮನಸ್ಸು ಕರಗಿದಾಗ ಜೀವಾತ್ಮನು ಬ್ರಹ್ಮದಲ್ಲಿ ಒಂದಾಗುವನು. ನಿಮ್ಮ ನಿರಾಕಾರ ಧ್ಯಾನದಲ್ಲಿ ಈ ಸೂತ್ರಗಳು ನಿಮಗೆ ಸಹಕಾರಿಯಾಗುವುವು.

ನಾನು ಸಚ್ಚಿದಾನಂದ ಸಾಗರನು ಓಂ, ಓಂ, ಓಂ.
ನಾನು ಜ್ಯೋತಿಯ ಸಾಗರನು ಓಂ, ಓಂ, ಓಂ.

ಇದರೊಡನೆ ಮೇಲಿನ ದೃಷ್ಟಾಂತವನ್ನು ಚೆನ್ನಾಗಿ ನೆನಪಿನಲ್ಲಿಡಿ.

ವೇದಾಂತದ ವಿದ್ಯಾರ್ಥಿಗಳು ಧ್ಯಾನಕ್ಕಾಗಿ ಆಸನದಲ್ಲಿ ಕುಳಿತ ಕ್ಷಣವೇ ಬ್ರಹ್ಮವಿದ್ಯಾ ಗುರುಗಳನ್ನು ನಮಸ್ಕರಿಸಬೇಕು. ಅವರು ಬ್ರಹ್ಮ, ವಸಿಷ್ಠ, ಶಕ್ತಿ, ಪರಾಶರ, ವ್ಯಾಸ, ಶುಕ, ಶಂಕರ, ಸುರೇಶ್ವರಾಚಾರ್ಯ, ಪದ್ಮಪಾದ, ತ್ರೋಟಕ, ದತ್ತಾತ್ರೇಯ, ದಕ್ಷಿಣಾಮೂರ್ತಿ, ಶ್ರೀಕೃಷ್ಣ ಮತ್ತು ಇತರರು. ಇದರಿಂದ ಪಾಪಗಳು, ಅಡ್ಡಿಗಳು ಕಳೆಯುವುವು. ವಿದ್ಯಾರ್ಥಿಗಳು ಉಪ ನಿಷತ್ತುಗಳ, ಬ್ರಹ್ಮಸೂತ್ರಗಳ ಮತ್ತು ಇತರ ವೇದಾಂತ ಗ್ರಂಥಗಳ ರಹಸ್ಯಾ ರ್ಥವನ್ನು ತಿಳಿಯಲು ಮತ್ತು ಅಧ್ಯಯನದ ಮುಂಚೆ ಅವರನ್ನು ಸ್ಮರಿಸುವುದ ರಿಂದ ಅನುಗ್ರಹವೂ ದೊರೆಯುವುದು.

ನಿರ್ಗುಣಧ್ಯಾನಕ್ಕೆ ಸತ್, ಚಿತ್, ಆನಂದ ಅಥವಾ ಜ್ಯೋತಿ ಎಂಬ ನಾಲ್ಕು ಕಾಲ್ಪನಿಕ ಶಬ್ದಗಳಲ್ಲಿ ಒಂದನ್ನು ಆರಿಸಿಕೊ. ಬ್ರಾಹ್ಮೀ ಸ್ಥಿತಿಯಲ್ಲಿ ಸ್ಥಿರನಾಗಿರುವಾಗ ಶಬ್ದ ಕಲ್ಪನೆಯು ತಾನಾಗಿ ಕಳಚಿಹೋಗುವುದು. ಶಬ್ದ ಭಾವನೆಯು ನಿರ್ಗುಣಧ್ಯಾನದ ಆರಂಭದಲ್ಲಿ ಅನುಷ್ಠಾನಕ್ಕೆ ಸಹಾಯ ವಾಗುವದು.

ಇಂದ್ರಿಯಗಳು, ಮನಸ್ಸು, ಬುದ್ಧಿ, ವಿಷಯಗಳು, ಪಂಚಭೂತಗಳನ್ನು ಸಂಪೂರ್ಣವಾಗಿ ಹಿಂದಕ್ಕೆ ತಳ್ಳಿದಮೇಲೆ ಉಳಿಯುವುದೇ ಚಿನ್ಮಾತ್ರವು ಅಥವಾ ಶುದ್ಧ ಚೈತನ್ಯವು. ಇದು ಚಿದಾನಂದವೇ, ಚಿನ್ಮಾತ್ರವೇ ಸದಾ ಸರ್ವದಾ ಇರುವದು. ಇದೇ ಸತ್ಯವು. ಈ ಶುದ್ಧ ಚೈತನ್ಯವನ್ನು ಧ್ಯಾನಿಸು ಮತ್ತು ಮೋಕ್ಷವನ್ನು ಗಳಿಸು.

ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವುದೇನೆಂದರೆ "ಯಾವುದರಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೊ ಅದು ನಾಶವಾಗತಕ್ಕದ್ದಲ್ಲ ಎಂದು ಅರಿತುಕೊ. ಅವ್ಯಯವಾಗಿರುವ ಈ ಬ್ರಹ್ಮನ ನಾಶವನ್ನು ಯಾವನೂ

ಮಾಡಲಾರನು. ಎಂದರೆ ಪರಬ್ರಹ್ಮನು ನಿತ್ಯವು. ಅದು ಅವಿನಾಶಿಯು.” (ಗೀತಾ ಅಧ್ಯಾಯ—II—17) ಈ ಶ್ಲೋಕವು ಆತ್ಮನ ಅಮರತೆಯನ್ನು ಹೇಳುವುದು. ಈ ಶ್ಲೋಕದ ಪ್ರಾಮುಖ್ಯತೆಯ ಚಿಂತನೆಯಿಂದ ಸತ್ಯವಾಗಿಯೂ ಸ್ವಾತ್ಮಜ್ಞಾನವುಂಟಾಗುವುದು. ಈ ಶ್ಲೋಕದ ಅರ್ಥ ಚಿಂತನೆಯಿಂದ ಆತ್ಮಚಿಂತನೆಯುಂಟಾಗುವುದು. ಅವಿನಾಶಿ ಎಂಬ ಪದದ ಚಿಂತನೆಯಿಂದ ಧೈರ್ಯ, ಸಂಕಲ್ಪ ಶಕ್ತಿಗಳು ಬೇರೂರುವವು ಮತ್ತು ಬೆಳೆಯುವವು. ಈ ಶಬ್ದವನ್ನು ಮನಸ್ಸಿನಲ್ಲಿ ಪುನಶ್ಚರಣೆಮಾಡು. ಯಾವಾಗಲಾದರೂ ಭಯವು ಆಕ್ರಮಿಸಿದಾಗ ನಾನು ಅವಿನಾಶೀ ಆತ್ಮನಾಗಿರುವೆನು—ಓಂ, ಓಂ ಎಂದು ಉಚ್ಚರಿಸು.

ಸರ್ವೋತ್ಕೃಷ್ಟನಾದ ಸಚ್ಚಿದಾನಂದ ಪರಬ್ರಹ್ಮನಲ್ಲಿ ಸೂರ್ಯೋದಯ ಅಥವ ಸೂರ್ಯಾಸ್ತಗಳಿಲ್ಲ. ಹಗಲು-ರಾತ್ರಿಗಳಿಲ್ಲ. ಐಕ್ಯತೆ ಅಥವ ದ್ವೈತವಿಲ್ಲ. ಜೀವ–ನಿರ್ಜೀವಗಳಿಲ್ಲ. ಇಲ್ಲಿ ಎಲ್ಲ ಮಾತೂ ಮೌನದಲ್ಲಿ ಕೊನೆಗಾಣುವದು. ಕರ್ತೃ ಮತ್ತು ಕರ್ಮವು ಒಂದಾಗುವದು. ಇಲ್ಲಿ ಸಾಕ್ಷಿಯಾಗಲೀ, ಸಾಕ್ಷ್ಯವಾಗಲೀ ಇಲ್ಲವು. ಇಲ್ಲಿ ಜ್ಞಾನವೊಂದೇ. ಸೋಽಹಂ ಎಂಬ ಉಚ್ಚಾರವೂ ನಿಲ್ಲವುದು. ಯಾವಾಗ ನೋಡುವವನು, ನೋಡಲ್ಪಡತಕ್ಕ ವಸ್ತು ಮತ್ತು ಅದರ ದೃಷ್ಟಿ ಇಲ್ಲವೆಂದಮೇಲೆ ಅಲ್ಲಿ ಏನಿದೆ, ಏನಿಲ್ಲವೆಂಬುದನ್ನು ಹೇಳುವವರು ಯಾರಿರಬಹುದು ?

ಜೀವನ ಸೌಂದರ್ಯದಲ್ಲಿನ ಅಮೃತದ ಮಾಧುರ್ಯವನ್ನು ಅಂತರ್ಯದಲ್ಲಿ ಸವಿ ಆತ್ಮದಲ್ಲಿದ್ದುಕೊಂಡು ಅಮೃತಾತ್ಮನಿಂದ ಅನುಗ್ರಹಿಸಲ್ಪಡು. ಧ್ಯಾನಮಾಡು. ಅಂತರಾಳದ ಗೂಢಪ್ರದೇಶದಲ್ಲಿರುವ ನಿತ್ಯತೆಯನ್ನು ಅತ್ಯುನ್ನತ ಉತ್ತುಂಗ ಶಿಖರದಲ್ಲಿರುವ ದಿವ್ಯಮಹಿಮೆಯನ್ನು ಸ್ಪರ್ಶಿಸು ಮತ್ತು ಪರಮಾತ್ಮನಲ್ಲಿ ಐಕ್ಯತೆಯನ್ನು ಹೊಂದು. ಈಗ ನಿನ್ನ ದೀರ್ಘವಾದ ಪರಿಶ್ರಮದ ಪ್ರಯಾಣವು ಮುಕ್ತಾಯವಾಗುವುದು. ನಿನ್ನ ಅಂತಿಮ ಗುರಿಯನ್ನು ಮುಟ್ಟಿದಂತಾಯಿತು. ನಿನ್ನ ಸ್ವಸ್ಥಾನವಾದ ಶಾಂತಿಯ ನಿವಾಸವನ್ನು, ಪರಂಧಾಮವನ್ನು ತಲುಪಿದಂತಾಯಿತು.

ವೇದಾಂತ ಮಾರ್ಗದಲ್ಲಿರುವವನು ಧ್ಯಾನಕಾಲದಲ್ಲಿ ತೋರುವ ಶಬ್ದ, ಬಣ್ಣ ಮತ್ತು ದರ್ಶನಗಳನ್ನು ಉಪೇಕ್ಷಿಸುವನು. ಎಲ್ಲ ರೂಪಗಳನ್ನೂ

ಮತ್ತು ದರ್ಶನೆಗಳನ್ನು ತಿರಸ್ಕರಿಸುವುದರಿಂದ ಉಪನಿಷತ್ತಿನ ಮಂತ್ರಗಳ ಪ್ರಾಧಾನ್ಯತೆಯನ್ನು ಚಿಂತಿಸುವನು. ಅಲ್ಲಿ ಸೂರ್ಯನು ಬೆಳಗುವುದಿಲ್ಲ. ಹಾಗೆಯೇ ಚಂದ್ರ, ನಕ್ಷತ್ರಗಳು ಬೆಳಗವು. ಮಿಂಚು ಹೊಳೆಯಲಾರದು, ಇನ್ನು ಅಗ್ನಿಯ ಪಾಡೇನು? ಪರಮಾತ್ಮನು ಪ್ರಕಾಶಿಸುವುದರಿಂದ ಎಲ್ಲವೂ ಅವನ ಬೆಳಕಿನಿಂದ ಪ್ರಕಾಶಿಸುವವು.

ವೇದಾಂತಿಯು ಈ ರೀತಿಯಾಗಿ ಧ್ಯಾನಮಾಡುವನು: "ವಾಯುವು ಅಲ್ಲಿ ಬೀಸುವುದಿಲ್ಲ. ಬೆಂಕಿಯು ಅಲ್ಲಿ ಉರಿಯುವುದಿಲ್ಲ. ಶಬ್ದ–ಸ್ಪರ್ಶ, ಗಂಧ, ವರ್ಣ, ರಸ, ಮನಸ್ಸು, ಅಥವ ಪ್ರಾಣವು ಇಲ್ಲವು."

"ಅಶಬ್ದ, ಅಸ್ಪರ್ಶ, ಅರೂಪ, ಅಗಂಧ
ಅಪ್ರಾಣ, ಅಮನ, ಅತೀಂದ್ರಿಯ, ಅದೃಶ್ಯ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಂ
ನಾನು ಆನಂದಪೂರ್ಣ ಶಿವನು. ನಾನು ಆನಂದ ಪೂರ್ಣ ಶಿವನು."

ತುರೀಯಾವಸ್ಥೆಯನ್ನು ಪಡೆದವನೇ ಸುಖಿಯು. ಸಚ್ಚಿದಾನಂದ ಸ್ವರೂಪದಲ್ಲಿ ನಿಂತವನೇ ಧನ್ಯನು. ಜೀವನದ ಪರಮಗತಿಯನ್ನು ಪ್ರಾಪ್ತಿ ಮಾಡಿಕೊಂಡವನೇ ಶಾಂತಮೂರ್ತಿಯು, ಋಷಿಮುನಿಗಳ ಅಮೃತಸ್ಥಾನವು, ಅನುಪಮವಾದ ಬ್ರಾಹ್ಮೀಸ್ಥಿತಿಯನ್ನು ಮುಟ್ಟಿದವನೇ ಆನಂದಪೂರ್ಣನು.

ಜ್ಞಾನಮಾರ್ಗದಲ್ಲಿ ಮೂರು ಮುಖ್ಯವಾದ ವರ್ಗಗಳಿವೆ ೧) ಸಾಧನ ವರ್ಗ. ೨) ಅಲ್ಪವಾದ ಕ್ಷಣದರ್ಶನಗಳು. ೩) ಸಹಜಾವಸ್ಥೆ. ಇದರಲ್ಲಿ ಯಾರು ಚೆನ್ನಾಗಿ ನೆಲೆನಿಂತಿರುವನೊ ಅವನು ಸಚ್ಚಿದಾನಂದ ಸ್ವರೂಪ ಅಥವಾ ಬ್ರಾಹ್ಮೀಸ್ಥಿತಿಯಲ್ಲಿ ಸ್ಥಿರವಾಗಿರುವನು. ಕ್ಷಣದರ್ಶನಗಳುಂಟಾದಾಗ ಸಾಧನೆಯನ್ನು ನಿಲ್ಲಿಸಬೇಡ. ಸಹಜಾವಸ್ಥೆ ಅಥವ ಭೂಮದಲ್ಲಿ ನಿಲ್ಲುವವರೆಗೂ ಸಾಧನೆಯನ್ನು ಮುಂದುವರಿಸು.

ಅಖಂಡ ಬ್ರಹ್ಮಭಾವನೆಯನ್ನು ಮುಂದುವರೆಸಲು ಪ್ರಯತ್ನಿಸುತ್ತಿರು. ಗಗನದವರೆಗೂ ಏರು. ನಿನ್ನ ಶಕ್ತಿ ಇದ್ದಷ್ಟು ಬಟ್ಟ ಬಯಲಿನಲ್ಲಿರು. ಅದರಲ್ಲೇ ಸ್ಥಿರವಾಗಿ ನಿಲ್ಲು. ಸದಾ ಸಹಜಾವಸ್ಥೆಯನ್ನು ಹೊಂದಿರು. ಇದು ನಿನ್ನ ಧ್ಯೇಯವಾಗಿರಲಿ ಮತ್ತು ಇದಕ್ಕಾಗಿ ಈಗಿನಿಂದಲೇ ಪ್ರಯತ್ನಿಸು. ಕಳೆದ ಈ ಆರು ತಿಂಗಳ ಆಧ್ಯಾತ್ಮಿಕ ಅನುಷ್ಠಾನದಲ್ಲಿ ನೀನು ಸಾಕಷ್ಟು ಮುಂದುವರೆದಿರುವೆ.

ದೇಹವನ್ನು ಮತ್ತು ಪ್ರಪಂಚವನ್ನು ಮರೆತುಬಿಡು. ಮಿತ್ರರು ಮತ್ತು ಬಂಧುಗಳನ್ನೂ ನೆನೆಯದಿರು. ಎಲ್ಲವನ್ನೂ ನಿರ್ಲಕ್ಷಿಸು. ನಿನ್ನೊಳಗಿನ ಬದಲಾಯಿಸದ ನಿತ್ಯ ಸ್ವಯಂ ಪ್ರಕಾಶವನ್ನು ಚಿಂತಿಸು. ಅದು ಮತ್ತು ಅದರಲ್ಲಿ ಮಾತ್ರ ಸ್ಥಿರಚಿತ್ತನಾಗು. ಅದರಲ್ಲಿಯೇ ಒಂದಾಗು. ನೀನು ಜೀವನ್ಮುಕ್ತನಾಗಿರುವೆ ಅಥವ ಭಾಗವತನಾಗಿರುವೆ.

ಬ್ರಹವು ಇಂದ್ರಿಗಳಿಗೆ ನಿಲುಕದ ಪರಾತ್ಪರ ತತ್ವವು. ಆದರೆ ಸಾಧಕನು ಉಪನಿಷತ್ತುಗಳ ಮಹಾವಾಕ್ಯಗಳಾದ " ಅಹಂ ಬ್ರಹ್ಮ ಅಸ್ಮಿ "— " ತತ್ ತ್ವಂ ಅಸಿ " ಎಂದರೆ ನಾನು ಬ್ರಹ್ಮವೆ—ನೀನು ಅದೇ ಆಗಿರುವೆ ಎಂದು ಧ್ಯಾನಿಸುವುದರಿಂದ ಉತ್ಪನ್ನವಾದ ಬ್ರಹ್ಮಾಕಾರವೃತ್ತಿಯ ಮೂಲಕ ಬ್ರಹ್ಮದ ಪ್ರತ್ಯಕ್ಷಾನುಭವವನ್ನು ಸಾಧಕರು ಪಡೆಯುವರು.

ಜೀವಾತ್ಮ, ಪರಮಾತ್ಮ ಐಕ್ಯತೆಯ ಸಾಕ್ಷಾತ್ಕಾರದಿಂದ ಜೀವನಲ್ಲಿನ ಅವಿದ್ಯಾಸಂಬಂಧವಾದ ಎಲ್ಲ ತೊಂದರೆಗಳೂ ಸಂಪೂರ್ಣವಾಗಿ ನಾಶವಾಗುವುದಲ್ಲದೆ ಅವಿದ್ಯಾ ಆವರಣವೂ ತಗೆದು ಹಾಕಲ್ಪಡುವುದು. ಈ ಅನುಭವವು ' ತತ್ ತ್ವಂ ಅಸಿ ' ಮಹಾವಾಕ್ಯದ ಪ್ರಾಮುಖ್ಯತೆಯನ್ನು ಸರಿಯಾದ ಧ್ಯಾನದಿಂದ ಉಂಟಾಗುವದು.

ಅಳುತ್ತಿರುವ ಮಗುವನ್ನು ಸಮಾಧಾನ ಪಡಿಸುವ ಸಲುವಾಗಿ ತಾಯಿಯು ಆ ಮಗುವಿನ ಮುಂದೆ ಒಂದು ಬಾಳೆಯ ಹಣ್ಣನ್ನೋ, ಒಂದು ಚೂರು ಬಿಸ್ಕತ್ತನ್ನೋ ಅಥವಾ ಸಿಹಿ ತಿಂಡಿಯನ್ನೋ ಇಡುವಂತೆ, ತಾಪತ್ರಯಗಳಿಂದ ಸಂಸಾರದಲ್ಲಿ ಬೆಂದು ದುಃಖಿಸುತ್ತಿರುವವರನ್ನು ಸಮಾಧಾನ ಪಡಿಸುವುದಕ್ಕಾಗಿ ದಯಾಮಯನಾದ ಗುರುವು ಬಹಳ ರುಚಿಕರವೂ, ಅಮೂಲ್ಯವೂ ಆದ ಅಧ್ಯಾತ್ಮವೆಂಬ ಆಹಾರವನ್ನು ಶಿಷ್ಯರ ಮುಂದಿಡುವನು. ಎಂದರೆ ಉಪನಿಷತ್ತುಗಳಲ್ಲಿ ಜೀವಬ್ರಹ್ಮೈಕ್ಯವನ್ನು ಘೋಷಿಸುವ ಮಹಾವಾಕ್ಯಗಳನ್ನು ಉಪದೇಶಿಸುವನು. ಆ ಅಧ್ಯಾತ್ಮಗುರುಗಳ ಉಪದೇಶವೇನೆಂದರೆ " ನನ್ನ ಪ್ರೀತಿಯ ಪುತ್ರರೆ, ಇನ್ನು ಅಳಬೇಡಿ. ನೀವು ನಿಜವಾಗಿಯೂ ಸಚ್ಚಿದಾನಂದ ಬ್ರಹ್ಮವು. ಈ ನಶ್ವರವಾದ ದೇಹದೊಡನೆ ಅಧ್ಯಾಸ ಮಾಡಿಕೊಳ್ಳಬೇಡಿ. ' ತತ್ ತ್ವಂ ಅಸಿ '—ನೀನು ಅದೇ ಆಗಿದ್ದೀಯೆ. ಈ ಆತ್ಮನನ್ನು ಕಂಡು ಕೊಂಡು ಆನಂದಪಡಿರಿ."

" ತತ್ ತ್ವಂ ಅಸಿ " ಯ ಪ್ರಮುಖವಾದ ಅರ್ಥವನ್ನು ಮನನಮಾಡಿ. ಜೀವಾತ್ಮ, ಪರಮಾತ್ಮ ಐಕ್ಯವನ್ನು ಉಪದೇಶಿಸುವ ಮಹಾವಾಕ್ಯಗಳ ಅಂತರಾರ್ಥವನ್ನು ತಿಳಿಯುವುದೇ ಮೋಕ್ಷೋಪಾಯವು.

'ಅಹಂ ಬ್ರಹ್ಮಾಸ್ಮಿ'—ನಾನು ಬ್ರಹ್ಮವೇ ಆಗಿದ್ದೇನೆ ಮತ್ತು ಬ್ರಹ್ಮವು ನಾನೇ ಎಂಬುದನ್ನು ಅರಿತುಕೊಳ್ಳಿ. ಆತ್ಮನನ್ನು ಪರಿಶುದ್ಧವೂ, ಅದ್ವಿತೀಯವೂ, ಶ್ರೇಷ್ಠವೂ ಆದ ಪರಮಾತ್ಮನಲ್ಲಿ ಒಂದುಗೂಡಿಸಿ ಆನಂದವನ್ನು ಅನುಭವಿಸುವದೇ ಜೀವನದ ಪರಮಗತಿಯು. ಈಗ ದೇಹದ ಇರುವಿಕೆಯ ಪರಿವೆಯೇ ನಿನಗೆ ಇರುವುದಿಲ್ಲವು. ಪ್ರಪಂಚವು ಬ್ರಹ್ಮನಿಂದ ಭಿನ್ನವಾಗಿದೆ ಎಂದು ತಿಳಿಯುವೆ.

ಹೇ ಸೌಮ್ಯ, ಓಂ, ಓಂ, ಓಂ ; ಶಿವೋಽಹಂ, ಶಿವೋಽಹಂ, ಶಿವೋಽಹಂ ಎಂದು ಗಾನಮಾಡು. ಸದಾ ಹಸನ್ಮುಖಿಯಾಗಿರು. ಮಾಂಸದ ಗೂಡಿನಿಂದ ಹೊರಕ್ಕೆ ಬಾ. ನೀನು ವಿನಾಶವಾಗುವ ದೇಹವಲ್ಲವು. ನೀನು ಅಮೃತಾತ್ಮನು. ನೀನು ಸಚ್ಚಿದಾನಂದ ಸ್ವರೂಪನು, ಲಿಂಗಭೇದವಿಲ್ಲದವನು. ನೀನು ರಾಜರ ರಾಜನು ಚಕ್ರವರ್ತಿಗಳ ಚಕ್ರವರ್ತಿಯು, ಉಪನಿಷತ್ತುಗಳ ಬ್ರಹ್ಮವು, ಹೃದಯದೊಳಗಿನ ಅಂತರಾತ್ಮನು ಮತ್ತು ಮನಸ್ಸಿನ ಮೌನ ಸಾಕ್ಷಿಯು. ಹಾಗೆಯೇ ನಡೆದುಕೊ. ಹಾಗೆಯೇ ಭಾವಿಸು. ನಿನ್ನ ಜನ್ಮಸಿದ್ಧ ಹಕ್ಕನ್ನು ನಾಳೆ, ನಾಳಿದ್ದಿನಿಂದ ಸ್ಥಾಪಿಸದೆ ಈಗಲೇ, ಈ ಕ್ಷಣದಿಂದ ಪ್ರಯತ್ನಿಸು. ಓ ಧೀರ ನಿರಂಜನ, " ತತ್ ತ್ವಂ ಅಸಿ "—ನೀನು ಅದೇ ಆಗಿರುವೆ.

" ತತ್ ತ್ವಂ ಅಸಿ "—ನೀನು ಅಮರನು—ನೀನು ಬ್ರಹ್ಮನು. ನೀನು ಬಂದೂಕಿನ ತುದಿಯಲ್ಲಾಗಲಿ, ಫಿರಂಗಿಯ ಬಾಯಿಯಲ್ಲಾಗಲೀ ನಿಂತಿದ್ದರೂ ಈ ದೃಢವಾದ ತತ್ತ್ವದಲ್ಲಿ ನಿಂತಿರು. ಈ ಆತ್ಮನು ಅವಿನಾಶಿಯು. ನೀನು ಆತ್ಮನೇ ಆಗಿರುವೆ.

---

# 12

## ಜ್ಞಾನಯೋಗ

### ೧. ಬ್ರಹ್ಮವೆಂದರೇನು ?

ಬ್ರಹ್ಮವು ದೇಶ, ಕಾಲ, ಕಾರಣವನ್ನು ಮೀರಿದ ದಿವ್ಯ ಆತ್ಮವು. ಅವನು ಅಪರಿಮಿತನು. ಅವನು ಪರಮ ಶಾಂತನು. ಎಲ್ಲ ದೇಹಗಳಲ್ಲಿ ಸಮತೇಜ ದಿಂದ ಹೊಳೆಯುವವನು. ಅವನು ಯಾವುದೇ ಒಂದು ನಿರ್ದಿಷ್ಟವಾದ ವಸ್ತುವಲ್ಲವು. ಅವನು ಚೈತನ್ಯನು ಅಥವ ಶುದ್ಧಜ್ಞಾನನು. ಬ್ರಹ್ಮನು ವಸ್ತುವು. ಆತ್ಮ ಅಥವಾ ಬ್ರಹ್ಮನು ಅಥವಾ ಶ್ರೇಷ್ಠಜ್ಞಾನವು ಅಡಗಿರುವ ಸಂಪತ್ತು. ಅದು ರತ್ನಗಳ ರತ್ನವು. ಅದು ಆಭರಣಗಳ ಆಭರಣವು. ಅದು ಅವಿನಾಶಿಯಾದ, ಅವ್ಯಯವಾದ, ಯಾವ ಕಳ್ಳ ಅಥವ ದರೋಡೆಕಾರರು ಸೂರೆಗೊಳ್ಳಲಾಗದ ದಿವ್ಯೈಶ್ವರ್ಯವು.

ಎಲ್ಲವನ್ನೂ ತಾನೇ ನೋಡುವವನು ಯಾರೊ, ತನ್ನನ್ನು ಮಾತ್ರ ಯಾರೂ ನೋಡಲಾರರೊ, ಎಲ್ಲವನ್ನೂ ಬೆಳಗುವವನು ಯಾರೊ, ಯಾರನ್ನು ಮಾತ್ರ ಯಾವುದು ಬೆಳಗಲಾಗದೊ ಅದೇ ಬ್ರಹ್ಮವು. ಅದೇ ಆತ್ಮವು. ಸ್ವಯಂಪ್ರಕಾಶವೂ, ಶುದ್ಧವೂ ಆಗಿ, ವಿಶ್ವಾಧಾರವಾಗಿ ಸ್ವತಃಜ್ಞಾನ ಸ್ವರೂಪವಾಗಿ, ಪರಿಪೂರ್ಣ ಆನಂದವಾಗಿ ಎಂದಿಗೂ ಬದಲಾಯಿಸದಿರುವುದೇ ಬ್ರಹ್ಮವು.

ಒಂದು ಶ್ರೇಷ್ಠ ತತ್ವವು ಇರುವುದು. ಅದು ಆತ್ಮವು. ಅದು ಪರ ಬ್ರಹ್ಮವು. ಅದು ಅವಿನಾಶಿಯು, ಅಜವು, ಅಕ್ಷಯವು, ಅಮರವು, ಸನಾತ ನವು, ಏಕವು, ಜ್ಞಾನ ಮತ್ತು ಆನಂದದ ರಾಶಿಯು.

ಬ್ರಹ್ಮವು ಮಹಾನ್ ಸಚ್ಚಿದಾನಂದ ಸಾಗರವು. ಬ್ರಹ್ಮವು ಜ್ಞಾನ ಸಾಗರ, ಪ್ರಾಣಸಾಗರ ಮತ್ತು ಗಗನಸಾಗರವೆಂಬ ತನ್ಮಾತ್ರಗಳ ಸಾಗರಗಳಿಂದ ಸುತ್ತುವರೆಯಲ್ಪಟ್ಟಿರುವುದು. ಆ ಕೇಳಲ್ಪಡದ ಕೇಳುವವನು, ಆ ನೋಡಲ್ಪಡದ ನೋಡುವವನು, ಆ ಅಚಿಂತ್ಯನಾದ ಚಿಂತಕನು, ಅಜ್ಞೇಯನಾದ ಜ್ಞೇಯನು ಬ್ರಹ್ಮನು. ಅಜನೂ, ಅಜರನೂ, ಅಮೃತನೂ, ಅಭಯನೂ ಆದವನೇ ಬ್ರಹ್ಮನು. ಅವನಿಂದ ಯಾವ ಜಗತ್ತು ಸೃಷ್ಟಿಯಾಗಿದೆಯೊ, ಯಾವನಲ್ಲಿ ಜಗತ್ತು ಸ್ಥಿರವೊ, ಯಾವನಲ್ಲಿ ಜಗತ್ತು ಲಯವಾಗುವುದೊ ಅವನು ಬ್ರಹ್ಮವು.

ಆತ್ಮನು ನಿತ್ಯನು, ನಿರ್ವಿಕಾರನು, ಪ್ರಜ್ಞಾನಘನ, ಚಿದ್ಘನ, ವಿಜ್ಞಾನ ಘನದ ಜ್ಞಾನರಾಶಿಯು ಮತ್ತು ಅಕ್ಷರನು.

ಆತ್ಮನು ಕಾಲವಿಲ್ಲದ, ದೇಶವಿಲ್ಲದ, ಸ್ಥಾನವಿಲ್ಲದ, ಅಂತ್ಯವಿಲ್ಲದ ಶುದ್ಧ ಶಕ್ತಿಯು. ಅದು ಜ್ಞಾನಮಯವು. ಅದು ಶಾಂತವೂ ಮತ್ತು ಸ್ವಯಂ ಜ್ಯೋತಿಯು. ಅದು ಜ್ಯೋತಿರ್ಮಯವು. ವೇದಾಂತ ಜಿಜ್ಞಾಸುಗಳು ಬ್ರಹ್ಮಾನುಭವವನ್ನು ಪಡೆಯಲು ಪ್ರಯತ್ನಿಸುವರು. ಬ್ರಹ್ಮವನ್ನು ಪರಮ ವಸ್ತುವೆಂದು ಕರೆಯುವರು. ಅದು ಅಮೃತತ್ವವು.

ಯಾವುದರಲ್ಲಿ ಪೂರ್ವ ಪಶ್ಚಿಮವಿಲ್ಲವೊ, ಬೆಳಕು—ಕತ್ತಲೆಯಿಲ್ಲವೊ, ಸುಖ-ದುಃಖವಿಲ್ಲವೊ, ಹಸಿವು—ತೃಷೆಯಿಲ್ಲವೊ, ಹರ್ಷ—ಶೋಕವಿಲ್ಲವೊ, ಲಾಭ-ಅಲಾಭವಿಲ್ಲವೊ ಅದೇ ಬ್ರಹ್ಮವು.

ಆತ್ಮನು ನಿರವಯವನು. ಆದ್ದರಿಂದ ಅವನು ಅಕರ್ತನು, ನಿಷ್ಕ್ರಿಯನು, ನಿರವಯವ ಆತ್ಮನಿಗೆ ಕರ್ಮಗಳನ್ನು ಹೇಗೆ ಆರೋಪಿಸುವೆ ?

ಆತ್ಮನಿಗೆ ದೇಹವಿಲ್ಲವು, ಅದು ನಿರಾಕಾರವೂ ಮತ್ತು ಅಶರೀರಿಯು ಎಂದ ಮೇಲೆ ಅವನಿಗೆ ಜರಾಮೃತ್ಯುಗಳು ಹೇಗೆ ಉಂಟಾಗುವವು ? ಆದ್ದರಿಂದ ಆತ್ಮನು ಅಜರನು, ಅಮರನು, ಅವಿನಾಶಿಯು.

ಆತ್ಮನು ಮನಸ್ಸಿನ, ದೇಹದ ಅಥವಾ ಕಲ್ಲುಸಕ್ಕರೆಯ ಫಲವಲ್ಲವು. ನಿತ್ಯಜ್ಞಾನವೇ ಅದರ ಸಹಜತೆಯು. ಜೀವಾತ್ಮನು ಬ್ರಹ್ಮದೊಡನೆ ಐಕ್ಯ ವಾಗುವನು ಮತ್ತು ತಾದಾತ್ಮ್ಯವನ್ನು ಹೊಂದುವನು. ಆತ್ಮನು ಪರಿ ಪೂರ್ಣನೂ, ಸ್ವಯಂಜ್ಯೋತಿಯೂ ಆದುದರಿಂದ ಸರ್ವಕ್ಕೂ ಸದಾ ಸಾಕ್ಷಿ ಯಾಗಿರುವನು. ಅದು ತಾನೇ ಆಗಲಿ, ಮತ್ತೊಂದರಿಂದಾಗಲಿ ವ್ಯಾಕೃತ

ವಲ್ಲವು. ಅವನು "ಅಪರೋಕ್ಷತ್ವಾತ್ " ಪ್ರಾಜ್ಞರು ಬ್ರಹ್ಮನನ್ನು ಸಚ್ಚಿದಾನಂದ ವೆಂದು ತಿಳಿಯುವರು. ಆ ಕಾರಣದಿಂದಲೇ ಎಲ್ಲ ಉಪಾಧಿಗಳನ್ನೂ ಬ್ರಹ್ಮನಿಗೆ ಆರೋಪಿಸುವರು. ಆದರೆ ಬ್ರಹ್ಮವು ಸಚ್ಚಿದಾನಂದಕ್ಕಿಂತಲೂ ಸಹ ಬೇರೆಯಾದುದು. ಹಾಗೆಂದ ಮಾತ್ರಕ್ಕೆ ಬ್ರಹ್ಮವು ನಿಸ್ಸಂಗವಾದ ಶೂನ್ಯವಲ್ಲ, ಶೂನ್ಯಭಾವವಲ್ಲ. ಅವನು ಒಬ್ಬನೇ ನಿಜವಾಗಿಯೂ ಇರುವ ಸತ್ಯವು. ಅವನೇ ಇರುವನು. ಅವನೇ ನಿಜವಸ್ತುವು.

ಮನಸ್ಸು ಆನಂದ ಅಥವ ಬ್ರಹ್ಮದಿಂದ ಹುಟ್ಟಿರುವುದರಿಂದ ಅದು ಸುಖದ ಹಿಂದೆಯೇ ಓಡುವುದು. ನೀನು ಮಾವಿನ ಹಣ್ಣನ್ನು ಇಚ್ಛಿಸುವೆ. ಏಕೆಂದರೆ ಅದು ಸುಖವನ್ನು ಕೊಡಬಲ್ಲುದು. ಎಲ್ಲಾ ವಸ್ತುಗಳಲ್ಲಿ ನಿನ್ನ ಆತ್ಮವನ್ನೇ ಬಹಳವಾಗಿ ನೀನು ಪ್ರೀತಿಸುವೆ. ಈ ಸುಳಿವಿನಿಂದಲೇ ಆತ್ಮದ ಸಹಜ ಸ್ವಭಾವವು ಆನಂದವೇ ಆಗಿರಬೇಕು ಎಂದು ಊಹಿಸಬಹುದು.

ಆ ಅದ್ವಿತೀಯನಾದ ಪರಮಾತ್ಮನು ಹೃದಯ ಮಂದಿರದಲ್ಲಿ ಅಂತ ರ್ಯಾಮಿ, ಸೂತ್ರಧಾರಿ, ಸಾಕ್ಷಿ, ಅಂತರಾತ್ಮನಾಗಿದ್ದುಕೊಂಡು ಆದಿ ಮಧ್ಯಾಂತರಹಿತನೂ, ಜಗದಾಧಾರನೂ, ವೇದಗಳ ಮೂಲನೂ, ದೇಹ, ಮನಸ್ಸು, ಇಂದ್ರಿಯಗಳು ಮತ್ತು ಪ್ರಾಣಗಳ ಆಶ್ರಯನೂ, ಸರ್ವವ್ಯಾಪಿಯೂ, ಅಸ್ಪರ್ಶನೂ, ಏಕರಸನೂ, ಭೂತ, ಭವಿಷ್ಯತ್ ವರ್ತಮಾನ ಕಾಲಾತ್ಮನೂ, ಸ್ವಯಂಭುವೂ, ಸ್ವತಂತ್ರನೂ, ಸ್ವಯಂಜ್ಯೋತಿಯೂ ಆದವನೇ ದೇವರು. ಆತ್ಮ, ಬ್ರಹ್ಮ, ಪುರುಷ, ಚೈತನ್ಯ ಅಥವಾ ಪುರುಷೋತ್ತಮ ಎಂದು ಕರೆಯಲ್ಪಡುವನು.

ಆತ್ಮನು ತಿಳಿಯಲ್ಪಡತಕ್ಕ ವಸ್ತುವಿಗಿಂತ ಭಿನ್ನನು. ಅವನು ಅರಿಯ ದಿರುವುದಕ್ಕಿಂತಲೂ ಹೊರತಾಗಿರುವನು. ಅವನು ಅಸಂವೇದ್ಯನು, ದುರವ ಗಾಹ್ಯನು (Incomprehensible). ಹಾಗೆಂದ ಮಾತ್ರಕ್ಕೆ ಗಣನೆಗೆ ಬಾರದ ವ್ಯಕ್ತಿಯಲ್ಲ ಅಥವಾ ಶೂನ್ಯವಲ್ಲ, ನಿಷೇದಾರ್ಥಕ ತತ್ವವಲ್ಲ, ಸೂಕ್ಷ್ಮತಮ ವಾದ ಅಮೂರ್ತಭಾವನೆಯೂ ಅಲ್ಲ. ಅವನು ಜ್ಞಾನರಾಶಿಯು ಅಥವಾ ಅರಿವಿನ ಮೊತ್ತವು. ಅರಿವು ಕಲ್ಲು, ಪ್ಲಾಟಿನಂಮ್ ಅಥವಾ ಚಿನ್ನಕ್ಕಿಂತಲೂ ಬಹಳ ಒತ್ತಾಗಿರುವ ಅಧಿಕ ಸಂಖ್ಯೆಯ ಜ್ಞಾನವು. ಸಮಸ್ತ ವಸ್ತುರಾಶಿಗಳ ಇರವಿನ ಮೂಲನು ಮತ್ತು ಅವನೊಬ್ಬನೇ ಸರ್ವದರ ಸತ್ಯವಾದ ಅಸ್ತಿತ್ವವು.

ಆತ್ಮವು ಮನುಷ್ಯನಲ್ಲಿ ರಸಸ್ವರೂಪವಾದ ಅಮೃತಮೂಲವು. ಚಿಂತನೆಗಳು, ಕಾಮನೆಗಳು, ವಾದಗಳು ಆತ್ಮಮೂಲದಿಂದಲೇ ಬಂದುವು. ಆತ್ಮವು ಶಕ್ತಿಮಯವು. ಏಕೆಂದರೆ ಅದು ಮನಸ್ಸು ಮತ್ತು ದ್ರವ್ಯಕ್ಕೆ ಮೀರಿದುದು. ಅದು ಕಾಲ, ದೇಶ, ಕಾರಣಗಳಿಗೆ ಅತೀತವಾಗಿರುವುದರಿಂದ ಅದು ಅಮರವೇ ಆಗಿರಬೇಕು. ಅದು ಆದ್ಯಂತರಹಿತವು, ಕಾರಣರಹಿತವೂ ಮತ್ತು ಪರಿಪೂರ್ಣವು.

ಪರಮಾತ್ಮ, ಆತ್ಮ ಅಥವಾ ಬ್ರಹ್ಮವು ಸದಾ ಸಂತತವಾಗಿ, ಅವಿನಾಶಿಯಾಗಿ, ಅಸ್ತಿತ್ವದಲ್ಲಿದ್ದು, ಜಗತ್ತಿಗೆ ಮೂಲವಾಗಿ ಅಭಿನ್ನ ಸ್ವಯಂಪ್ರಕಾಶವೂ ಅವಿಕಾರವೂ, ವ್ಯಾಪ್ಯವೂ ಆಗಿರುವುದಲ್ಲದೆ ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿಯೆಂಬ ಅವಸ್ಥಾತ್ರಯಗಳ ಶಕ್ತಿಯಾಗಿ, ಮೌನಸಾಕ್ಷಿಯಾಗಿರುವುದು. ಈ ಆತ್ಮನನ್ನು ಅರಿತವನು ಅಮೃತತ್ವವನ್ನು ಪಡೆದು ಅಮೃತಾನಂದದ ನೆಲೆಯನ್ನು ಪ್ರವೇಶಿಸುವನು.

ಬ್ರಹ್ಮನನ್ನು ಆತ್ಮ ಅಥವಾ ಪುರುಷ ಶಬ್ದಗಳಿಂದಲೂ ತಿಳಿಯುವರು. ಪುರುಷನನ್ನು ಹೀಗೆಂದು ಕರೆಯಲು ಅವನು ದೇಹದಲ್ಲಿರುವನು ಅಥವ ತಾನೇ ಸಂಪೂರ್ಣವಾಗಿರುವನು ಅಥವ ಅವನು ನಾವು ನೋಡುವುದರಲ್ಲೆಲ್ಲಾ ವ್ಯಾಪಿಸಿರುವನು.

ಆತ್ಮ ಅಥವಾ ತಾನು ಪರಮ ಸತ್ಯವು. ಅದೇ ವೇದಾಂತಶಾಸ್ತ್ರದ ಪರಮ ತತ್ವವು. ಅದು ಎಲ್ಲ ವಸ್ತುಗಳ ಆಧಾರವು. ಜೀವಂತ ಸತ್ಯವೂ ಅದೊಂದೇ. ಅದೇ ಉಪನಿಷತ್ತುಗಳ ಬ್ರಹ್ಮವು. ಈ ಜಗತ್ತಿನ ಆಧಾರವೂ ಅದೇ. ಈ ಪ್ರಾಣ ಮತ್ತು ದೇಹದ ಆಸರೆಯು (prop). ಅದು ವ್ಯಕ್ತಿಸ್ವರೂಪವಲ್ಲದ ಪರತತ್ವವು.

ಬ್ರಹ್ಮ ಅಥವ ಆತ್ಮವು ಅಥವ ದಿವ್ಯವಾದ ತಾನು ಸ್ವಯಂಪ್ರಕಾಶವು. ಬ್ರಹ್ಮವು ಬೇರಾವುದರಿಂದಲೂ ಪ್ರಕಾಶಕ್ಕೆ ಬರುವುದಿಲ್ಲವು. ಬ್ರಹ್ಮವೇ ಎಲ್ಲವನ್ನೂ ವ್ಯಕ್ತಪಡಿಸುವುದು.

ಆತ್ಮನು ಸ್ವಯಂ ಪ್ರಕಾಶವೆಂಬ ಸಿದ್ಧಾಂತ ಎಂಬ ಒಂದು ಮೂಲ ನಂಬಿಕೆಯ ಮೇಲೆ ಸಮಗ್ರ ವೇದಾಂತ ಸೌಧವು ನಿರ್ಮಿತವಾಗಿದೆ. ವೇದಾಂತದ ಸಮಗ್ರ ಪ್ರಾಸಾದವು ಸ್ವಯಂಪ್ರಕಾಶ ಸಿದ್ಧಾಂತವೆಂಬ ಅಡಿಗಲ್ಲುಗಳ

ಮೇಲೆ ಭವ್ಯವಾಗಿ ಕಟ್ಟಲ್ಪಟ್ಟಿರುವುದು. ಆತ್ಮನು ಸೂರ್ಯ, ಚಂದ್ರ, ನಕ್ಷತ್ರಗಳು, ವಿದ್ಯುಲ್ಲತೆ, ಅಗ್ನಿ, ಬುದ್ಧಿಶಕ್ತಿ ಮತ್ತು ಸರ್ವೇಂದ್ರಿಯಗಳಿಗೂ ಬೆಳಕನ್ನು ನೀಡುವನು. ಆತ್ಮತೇಜಸ್ಸಿನಿಂದ ಇದೆಲ್ಲವೂ ಬೆಳಗುವವು. ಆದರೆ ಅವು ಆತ್ಮನನ್ನು ಬೆಳಗಲಾರವು.

ಆತ್ಮವೊಂದೇ ಇರುವುದು. ಹಗ್ಗವು ಹಾವಾಗಿ ತೋರುವಂತೆಯೇ ಆತ್ಮವು ನಾವು ನೋಡುವ ವಸ್ತುಗಳಾಗಿ ತೋರುತ್ತಿರುವದು. ಆತ್ಮವು ಈ ಅತಿಶಯವಾದ ವಸ್ತುಗಳಾಗಿ ತೋರುವದು. ಅದು ತನಗೆ ತಾನೇ ಹೊಳೆಯುವುದು. ಅದು ಸ್ವಯಂ ಪ್ರಕಾಶಿತವು. ಎಲ್ಲ ವಸ್ತುಗಳೂ ಅವನಿಂದ ಬೆಳಗುವವು ಎಂದರೆ ಸ್ವಯಂಪ್ರಜ್ವಲಿತ ಆತ್ಮನಿಂದ ಬೆಳಕನ್ನು ತೆಗೆದುಕೊಳ್ಳುವವು.

ಬ್ರಹ್ಮವು ಮನುಷ್ಯನ ಆತ್ಮವು. ಅವನು ವಿಶ್ವದ ಆತ್ಮವು. ಬ್ರಹ್ಮವೊಂದೇ ಪರಿಪೂರ್ಣವು. ಎರಡು ಪೂರ್ಣಗಳು ಇರುವಂತೆಯೇ ಇಲ್ಲ. ಎರಡು ಪೂರ್ಣಗಳಿದ್ದರೆ ಆ ಪೂರ್ಣಗಳೊಡನೆಯೇ ಪರಸ್ಪರ ಹೋರಾಟ ನಡೆಯುವುದು. ಒಂದು ಪೂರ್ಣವು ಸೃಷ್ಟಿಸಿದುದನ್ನು ಮತ್ತೊಂದು ಪೂರ್ಣವು ನಾಶ ಮಾಡುತ್ತಿರುವದು. ಪೂರ್ಣವು ಒಂದೇ ಇರಬೇಕು. ಈ ಆತ್ಮವೇ ಪೂರ್ಣಬ್ರಹ್ಮನು. ಮಿಕ್ಕೆಲ್ಲ ಸೃಷ್ಟಿಯು ಆತ್ಮನ ಅಭಿವ್ಯಕ್ತವು.

ಬ್ರಹ್ಮವು ಹುಟ್ಟಿಲ್ಲದ್ದು, ಸಾವಿಲ್ಲದ್ದು, ಬದಲಾಯಿಸದಿರುವದು, ದೇಹವಿಲ್ಲದ್ದು, ನಾಶವಿಲ್ಲದ್ದು ಮತ್ತು ಭಯವಿಲ್ಲದ್ದು. ಅವನಿಗೆ ಹೆಸರಾಗಲಿ, ರೂಪಾಗಲಿ ಇಲ್ಲವು. ಅವನಿಗೆ ಸಂಕೋಚ, ವಿಕಾಸವಿಲ್ಲವು, ರೂಪ, ಕುರೂಪಗಳಿಲ್ಲವು. ಬ್ರಹ್ಮನು ನಿಜವಾಗಿಯೂ ಅಭಯನು. ಯಾರು ಬ್ರಹ್ಮವನ್ನು ತಿಳಿಯುವರೋ ಅವರು ಅಮರರು, ಅಭಯರೂ ಆಗುವರು.

ಒಳಗೆ ನೋಡು. ಆನಂದದ ಬುಗ್ಗೆಯು ಒಳಗಿರುವುದು. ಅದೇ ನಿಜವಾದ ಜೀವನವು. ನಿಜವಾದ 'ನಾನು' ಯಾವುದು ? ಅದೇ ಆತ್ಮವು. ಅದೇ ತಾನು. ಅದೇ ಬ್ರಹ್ಮವು. ಅದೇ ಶುದ್ಧಜ್ಞಾನವು.

---

# ೨. ಬ್ರಹ್ಮದ ಸ್ವರೂಪ

ಅನಂತ, ನಿರಾಕಾರ, ನಿರ್ಗುಣ, ನಿರ್ವಿಶೇಷ, ಅದೃಷ್ಟ—ಇವು ಬ್ರಹ್ಮನ ನಿಷೇಧಾರ್ಥಕ ಗುಣಗಳು. ಸಚ್ಚಿದಾನಂದ, ಸತ್ಯಂ, ಶಾಂತಂ, ಜ್ಞಾನಂ ಇವು ಬ್ರಹ್ಮನ ಸ್ಪಷ್ಟವಾದ, ಪ್ರತ್ಯಕ್ಷವಾದ ಗುಣಗಳು.

ಈಶಾವಾಸ್ಯ ಉಪನಿಷತ್ತಿನಲ್ಲಿ ಆತ್ಮಸ್ವರೂಪದ ವರ್ಣನೆಯು ಹೀಗಿರುವುದು, "ಆತ್ಮನು ಹಬ್ಬಿಕೊಂಡಿರುವವನು, ಬೆಳಗಿರುವವನು, ಕಾಯವಿಲ್ಲದವನು, ವ್ರಣವಿಲ್ಲದವನು, ನರಗಳಿಲ್ಲದವನು, ಶುದ್ಧನಾಗಿರುವವನು, ಪಾಪದ ಹೊಡೆತವಿಲ್ಲದವನು, ಕವಿಯು, ಮನೀಷಿಯು, ಎಲ್ಲರಮೇಲೂ ಇರುವಾತನು, ಸ್ವಯಂಭುವು. ಶಾಶ್ವತರಾಗಿರುವ ವರ್ಷಗಳಿಗೆ ಸತ್ಯವಾಗಿ ಅರ್ಥಗಳನ್ನು ಆತನೇ ವಿಂಗಡಿಸಿ ಕೊಟ್ಟಿರುತ್ತಾನೆ (ಮಂತ್ರ–೮.) ಅಮರಜೀವಿಗಳಿಗೆ ಯಥಾಯಾಥಾನುಸಾರವಾಗಿ ಕರ್ತವ್ಯಗಳನ್ನು ಸರಿಯಾಗಿ ಅವನೇ ಗೊತ್ತು ಪಡಿಸಿದನು.

ರೂಪುಗಳಿಂದ ಕೂಡಿರುವ ವಸ್ತುಗಳಿಗೆ ಉತ್ಪತ್ತಿ ಮತ್ತು ನಾಶಗಳುಂಟು. ರೂಪವಿಲ್ಲದ ಚೈತನ್ಯ ಅಥವ ಬ್ರಹ್ಮವು ಉತ್ಪತ್ತಿ ಮತ್ತು ನಾಶವನ್ನು ಹೊಂದುವುದೆಂದು ಹೇಳುವುದು ಹೆಡ್ಡತನವು. ಬ್ರಹ್ಮನು ನಿರಾಕಾರನು. ಅದು ಶುದ್ಧ ಜ್ಞಾನವು.

ನೀನು ಯಾವ ಬಾಲಕನನ್ನಾದರೂ ಹೀಗೆ ಪ್ರಶ್ನಿಸಬಹುದು ? ಅವನು ಕೊಡುವ ಉತ್ತರವು ಅವಿನಾಶಿಯಾದ ಆತ್ಮನ ಸ್ವಭಾವವನ್ನು ವಿವರಿಸುವುದಾಗಿರುತ್ತದೆ. "ಎಲೈ, ಬಾಲಕ, ನಿನ್ನ ಹೆಸರೇನು ?" "ನನ್ನ ಹೆಸರು ರಾಮ್." "ಈ ಹೆಸರು ನಿನ್ನ ದೇಹಕ್ಕೆ ಸೇರಿದ್ದೊ? ಅಥವ ನಿನಗೆ ಸೇರಿದ್ದೊ ?" "ಈ ಹೆಸರು ನನ್ನ ದೇಹಕ್ಕೆ ಸಂಬಂಧಿಸಿದ್ದು" ಎಂದು ರಾಮನು ಹೇಳುವನು "ಈ ಟೋಪಿ ಯಾರದ್ದು ?" ರಾಮನು ಹೇಳುವನು "ಅದು ನನ್ನದು." "ಈ ಟೋಪಿಯನ್ನು ನಾಶಮಾಡಿದರೆ, ನೀನೂ ನಾಶವಾಗುವಿಯಾ ?" ರಾಮನ ಉತ್ತರ, "ಇಲ್ಲ". "ನಿನ್ನ ದೇಹವು ನಾಶವಾದರೆ, ನೀನೂ ನಾಶವಾಗುವಿಯಾ ?" "ಇಲ್ಲ, ನಾನು ಆತ್ಮವು, ಆತ್ಮವು ಅಮರವು" ಎಂದು ರಾಮನು ಹೇಳುವನು.

ತೈತ್ತಿರೀಯ ಉಪನಿಷತ್ತು (II-೧) "ಸತ್ಯಂ, ಜ್ಞಾನಂ, ಅನಂತಂ, ಬ್ರಹ್ಮ"—ಎಂಬುದು ವೇದಾಂತಿಗಳಿಂದ ಚರ್ಚೆಯಲ್ಲಿ ಆಗಿಂದಾಗ್ಗೆ ಉದಾಹರಿಸಲ್ಪಡುವುದು.

ಹಿಮಾಲಯ, ಸಾಗರ, ವಿಶಾಲವಾದ ಆಕಾಶ ಮತ್ತು ಸೂರ್ಯ ಇವು ನಾಲ್ಕು ಅವ್ಯಕ್ತ ಬ್ರಹ್ಮನ ಪರಿಪೂರ್ಣತೆಯ ಪ್ರತಿನಿಧಿಗಳು.

ಶೃತಿಗಳು ಬ್ರಹ್ಮಸ್ವರೂಪವನ್ನು ಸ್ಪಷ್ಟವಾಗಿ ಒತ್ತಿ ಹೇಳುವುವು. "ಆಕಾಶವತ್ ಸರ್ವಗತ ನಿತ್ಯಂ." ಆಕಾಶ ಮತ್ತು ಸಾಗರ ಈ ಎರಡು ವಸ್ತುಗಳನ್ನು ಮಾತ್ರ ಭೂಮಿಯಲ್ಲಿ ಬ್ರಹ್ಮನಿಗೆ ಹೋಲಿಸಬಹುದು. ಅವನ ಪರಿಪೂರ್ಣ ಸ್ವಭಾವವು ಸೂಕ್ಷ್ಮವು, ಆಕಾಶದಂತೆ ವ್ಯಾಪ್ಯವು ಮತ್ತು ಆಧಾರವಿಲ್ಲದೆ ಇರುವುದು. ಬ್ರಹ್ಮವು ಸೂಕ್ಷ್ಮವು ವ್ಯಾಪಕವು ಮತ್ತು ನಿರಾಲಂಬವು. ಆದ್ದರಿಂದಲೇ ಆಕಾಶವನ್ನು ಬ್ರಹ್ಮದೊಡನೆ ಹೋಲಿಸುವುದು.

ನಗೆ, ತಿಳಿನಗೆ, ಹಾಡುವಿಕೆ, ನರ್ತಿಸುವಿಕೆಯು ಒಬ್ಬನ ಸಂತೋಷದ ಸ್ಥಿತಿಯನ್ನು ವ್ಯಕ್ತಮಾಡುವುದು. ನೀನು ಸ್ವಭಾವತಃ ಆನಂದೈಕರಸ ಸ್ವರೂಪನು ಎಂಬ ಸುಳಿವನ್ನು ಸೂಚಿಸುವುದು. ಅವು ಆತ್ಮನ ಗುಣವು ಆನಂದವೆಂಬುದನ್ನು ತೋರಿಸುವುವು. ಬ್ರಹ್ಮನು ಆನಂದಘನನೆಂಬುದನ್ನು ಸ್ಪಷ್ಟವಾಗಿ ಹೇಳುವುವು.

ಬ್ರಹ್ಮವು ವಿಜ್ಞಾನಘನ, ಚಿದ್ಘನ, ಪ್ರಜ್ಞಾನ ಘನವೆಂಬ ಜ್ಞಾನಗಳ ರಾಶಿಯು. ಅವನು ಅನ್ಯಗುಣರಹಿತನು. ಅವನು ಸಂಪೂರ್ಣವಾಗಿ ಯಾವ ವಿಧವಾದ ಭೇದವೂ ಇಲ್ಲದವನು. ಬೃಹದಾರಣ್ಯಕ ಉಪನಿಷತ್ತಿನಲ್ಲಿ "ಉಪ್ಪಿನ ಗಡ್ಡೆಯು ಒಳಗೆ, ಹೊರಗೆ ಎಲ್ಲೆಡೆಯೂ ರುಚಿಯಲ್ಲಿ ಕೇವಲ ಉಪ್ಪೇ ಆಗಿರುವಂತೆ, ಬ್ರಹ್ಮವು ಒಳಗೆ, ಹೊರಗೆ ಎಲ್ಲೆಲ್ಲಿಯೂ ಪ್ರಜ್ಞಾನ ಘನವಾಗಿರುವುದು." ಉಪ್ಪಿನ ಗಡ್ಡೆಯು ಒಳಗೆ, ಹೊರಗೆ ಉಪ್ಪೇ ಆಗಿದ್ದು ಬೇರಾವ ರುಚಿಯನ್ನೂ ಕೊಡದಿರುವಂತೆ ಬ್ರಹ್ಮವು ಬಾಹ್ಯಾಭ್ಯಂತರಗಳಲ್ಲಿ ಜ್ಞಾನ ಒಂದೇ ಇರುವುದು. ಒಳಗೆ, ಹೊರಗೆ ಎಂಬುದು ಮನಸ್ಸಿನ ಕಲ್ಪನೆಯು ಮಾತ್ರ. ಮನಸ್ಸು ಶಾಂತಿಯಲ್ಲಿ ಲಯಗೊಂಡಾಗ ಅಂತರ್ಬಾಹ್ಯಗಳೆಂಬ ಭಾವನೆಯು ಅದೃಶ್ಯವಾಗುವುವು. ಯೋಗಿಯು ಅನಂತವೂ, ಕೇವಲ ಜ್ಞಾನ ಘನದ ಏಕ ರಸಮಯವೂ ಆದ ಬ್ರಹ್ಮವನ್ನೇ ನೋಡುವನು. ನೀರಿನ

ಮೇಲ್ಭಾಗವು ವಿಸ್ತಾರವಾದಂತೆಲ್ಲ ಸೂರ್ಯನ ಪ್ರತಿಬಿಂಬವೂ ವಿಸ್ತಾರವಾಗಿ ಕಾಣುವುದು. ನೀರು ಸಂಕುಚಿತವಾದಾಗ ಅದು ಚಿಕ್ಕದಾಗುವುದು, ಚಂಚಲ ವಾದಾಗ ಅದು ಅಲುಗಾಡುವುದು. ಹಾಗೆಯೇ ನೀರನ್ನು ಭಾಗಗಳಾಗಿ ಮಾಡಿದಷ್ಟು ಅಷ್ಟೇ ಪ್ರತಿಬಿಂಬಗಳೂ ಕಾಣುವುವು. ಸೂರ್ಯಬಿಂಬವು ನೀರಿನ ಗುಣಧರ್ಮಗಳನ್ನು ಅನುಸರಿಸುತ್ತಿದ್ದರೂ ಸೂರ್ಯನು ಮಾತ್ರ ಸ್ವಲ್ಪವೂ ಬದಲಾಯಿಸದೆ ಒಂದೇ ಸಮನಾಗಿ ಪ್ರಕಾಶಿಸುವನು. ಹೀಗೆಯೇ ತಾನು ಎಂದಿಗೂ ಬದಲಾಯಿಸದೆ ದೇಹದ ಉಪಾಧಿಗಳ ಗುಣಧರ್ಮಕ್ಕೆ ತಕ್ಕಂತೆ ವರ್ತಿಸುವನು. ಅವುಗಳಲ್ಲಿದ್ದು ಅವು ಬೆಳೆದರೆ ತಾನೂ ಬೆಳೆದಂತೆ, ಚಲಿಸಿದರೆ ತಾನೂ ಚಲಿಸಿದಂತೆ, ಅವುಗಳ ಸ್ವರೂಪದಂತೆಯೇ ತೋರಿಕೊಳ್ಳುವನು.

ಬ್ರಹ್ಮವು ಎಲ್ಲ ವಿಧವಾದ ಬೇಧಗಳಿಗೆ ಒಳಪಡದವನು. ಅವನು ಒಳಗೆ, ಹೊರಗೆಂಬುದಿಲ್ಲದವನು. ಅವನು ಏಕರಸನು, ಅವಿಭಾಜ್ಯನು, ಅಮೃತದ ಸಾರನು. ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳಿಂದ ಮುಕ್ತನು. ಅವನು ದುಂಡಾಗಿ ಅಥವ ಬಿಂದುವಾಗಿಲ್ಲವು. ಅವನು ಕುಳ್ಳಾಗಿ ಅಥವ ಎತ್ತರವಾಗಿಲ್ಲವು ಅವನು ಸ್ಥೂಲವಾಗಿ ಅಥವ ತೆಳುವಾಗಿಲ್ಲವು.

ಬ್ರಹ್ಮನು ಸೂಕ್ಷ್ಮತಮದಲ್ಲಿ ಸೂಕ್ಷ್ಮತರನು, ಹಿತಾಹಿತಗಳಿಲ್ಲದವನು, ಶಾಂತನು, ನಿತ್ಯನು ಮತ್ತು ನಿರ್ವಿಕಾರನು (Immutable). ಅವನು ಜಡ – ಚೇತನಗಳಲ್ಲದವನು, ಆಕಾಶದಂತೆ ಸ್ವತಂತ್ರನು, ನಿಷ್ಕಳಂಕನು (Immaculate) ಮತ್ತು ಪೂರ್ಣನು. ಅವನು ಸತ್ಯಾಸತ್ಯಗಳನ್ನು ಮೀರಿದವನು.

ಬ್ರಹ್ಮನು ಶಾಂತಿಯೊಡನೆ ಸಂಪೂರಿತನಾಗಿ (replete) ತನ್ನಲ್ಲೇ ಅಂತರ್ಗತನಾಗಿರುವನು. ಸಾವಿಲ್ಲದವನು. ಮರಣವೆಂದರೆ ಮುಖ್ಯಪ್ರಾಣನು ದೇಹವನ್ನು ಬಿಟ್ಟು ಹೋಗುವುದು. ಮರಣವು ಜೀವನ ವಿಷಯದಲ್ಲಿ ಮಾತ್ರ ಸಾಧ್ಯ. ಏಕೆಂದರೆ ಜೀವನು ಪ್ರಾಣವನ್ನುಳ್ಳವನು. ಪರಮಾತ್ಮನು ಪ್ರಾಣಸಂಬಂಧವಿಲ್ಲದವನು. ಶ್ರುತಿಯಲ್ಲಿ "ಬ್ರಹ್ಮನು ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುದ್ಧನು" ಎಂದು ಹೇಳಿದೆ.

ಆತ್ಮನು ಕರ್ಮಸಂಬಂಧವನ್ನು ಹೊಂದಿಲ್ಲ. ಅವನು ಅಂಗವೂ ಅಲ್ಲ, ಕರ್ಮವೂ ಅಲ್ಲ. ಆತ್ಮನು ಪರಿಣಾಮನಲ್ಲ, ಹುಟ್ಟುವುದಿಲ್ಲ, ಬದಲಾಯಿಸು

ವುದೂ ಇಲ್ಲ. ಬ್ರಹ್ಮವು ಪಡೆಯಬೇಕಾದ ಅಥವ ಸರಿಹೊಂದಿಸುವ ವಸ್ತುವೂ ಅಲ್ಲ. ಅವನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಅವನು ಸದಾ ಶಾಂತ ಸಾಕ್ಷಿಯು.

ಅವನನ್ನು ಕಣ್ಣು ನೋಡಲಾರದು, ಮನಸ್ಸು ಮುಟ್ಟಲಾರದು, ಪ್ರಾಪಂಚಿಕರು ಅವನನ್ನು ತಿಳಿಯಲಾರರು. ಅವನನ್ನು ಮಾತು (ವಾಕ್ಕು) ವರ್ಣಿಸಲಾರದು. ವಾಕ್ಕು ಅವನನ್ನು ವರ್ಣಿಸಲು ಬೇಕಾದ ಶಬ್ದಗಳನ್ನು ಹೊಂದಿಲ್ಲವಾದುದರಿಂದ ಮನಸ್ಸಿನೊಡನೆ ಹಿಂತಿರುಗುವುದು. ಜ್ಞಾನಿಗಳು ಹೇಳುವುದೇನೆಂದರೆ “ ಅವನನ್ನು ವಿವರಿಸುವುದರಲ್ಲಿ ನಾವು ಮೂಕರಾಗಿದ್ದೇವೆ. ಅವನ ಮಹಿಮೆಯು ವರ್ಣನೆಗೆ ಮೀರಿದುದು. ಅವನನ್ನು ವರ್ಣಿಸುವುದೆಂದರೆ ಅವನನ್ನು ತಿರಸ್ಕರಿಸಿದಂತೆಯೇ. ಅಪೂರ್ಣವಾದ ಮನಸ್ಸು ಪೂರ್ಣ ಬ್ರಹ್ಮನನ್ನು ಗ್ರಹಿಸುವುದು ಹೇಗೆ? ಯಾರು ಸಾಧನ ಚತುಷ್ಟಯ ಸಂಪನ್ನನೋ, ಸಂತತ ಧ್ಯಾನ ಮಾಡಿರುವನೊ, ಚುರುಕಾದ, ಸೂಕ್ಷ್ಮವಾದ, ಶುದ್ಧವಾದ ಜ್ಞಾನಿಯೊ ಅವನೇ ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡ ಬಲ್ಲನು.



# ೩. ವೇದಾಂತ ತತ್ವವು

ಅನಂತವು ಆನಂದವು. ಅನಂತವು ಸುಖವು ಮಾತ್ರ. ಅನಂತವು ಬ್ರಹ್ಮವು, ಆತ್ಮವು ಅಥವಾ ದಿವ್ಯ ಶಕ್ತಿಯು. ಅನಂತವೇ ಪರಮ ಶ್ರೇಷ್ಠವು. ಭೂಮವು ಕಾರ್ಯ, ಕಾರಣ, ಕಾಲ, ದೇಶಗಳಿಗೆ ಮೀರಿದುದು ಹಾಗೂ ಅಪಾರವಾದುದು. ಅನಂತತೆಯು ಅಮರತೆಯು. ಎಲ್ಲಿ ಏನನ್ನೂ ನೋಡು ವುದಿಲ್ಲವೊ, ಕೇಳುವುದಿಲ್ಲವೊ, ಅರಿಯುವುದಿಲ್ಲವೊ ಅದೇ ಅನಂತವು. ಅದು ತನ್ನ ಮಹಿಮೆಯಲ್ಲಿಯೇ ಇರುವುದು. ಅದು ಪರಮ ಶಾಂತಿಯು. ಅನಂತವು ಅಭಯವು. ಅನಂತವು ಸ್ವಯಂ ಸಚ್ಚಿದಾನಂದವು. ಅದು ಸರ್ವಪೂರ್ಣವು ಮತ್ತು ಅಭೇದ್ಯವು. ಅದು ಸ್ವಯಂಭುವಾದ, ಸ್ವಯಂಪೂರ್ಣವಾದ

ಸ್ವಪ್ರಕಾಶವು. ಅನಂತವೇ ನೈಜವು. ತ್ರಿಕಾಲಗಳಲ್ಲಿರುವುದೂ ಅನಂತವೇ. ನೀನು ಅನಂತವನ್ನು ಹುಡುಕು, ಅರಿತುಕೊ ಮತ್ತು ಸಾಕ್ಷಾತ್ಕಾರ ಮಾಡಿಕೊ.

ನೀನು ನೋಡುವುದೆಲ್ಲ ಭಾವ ಪದಾರ್ಥವು. ಪದಾರ್ಥ ಎಂದರೆ ವಸ್ತು. ಯಾವುದು ಇರುವುದೋ ಅದು ಭಾವವು. "ಅದು ಬಹಳ ದೊಡ್ಡದಾಗಿದೆ. ಅದು ಬಹಳ ಸಿಹಿಯಾಗಿರುವುದು. ಲಂಡನ್ ಬಹು ದೊಡ್ಡ ನಗರ" ಎಂದು ನೀನು ಹೇಳಿದಾಗ ಈ 'ಬಹಳ' ಶಬ್ದವು "ಅಭಾವ ಪದಾರ್ಥ"ವನ್ನು ಸೂಚಿಸುವುದು. ಅದನ್ನು ಮನಸ್ಸು ಗ್ರಹಿಸಬಲ್ಲದು. ಬ್ರಹ್ಮವು ಅಭಾವ ಪದಾರ್ಥವು. ಏಕೆಂದರೆ ಅದು ಅನಂತವು.

ಬ್ರಹ್ಮ ಅಥವಾ ಆತ್ಮವನ್ನು ವಿವರಿಸುವ ಭಾಷೆಯಿಲ್ಲದಿರುವುದರಿಂದ ಜಿಜ್ಞಾಸೆಗೆ ಜ್ಞಾನಿಯು ಬ್ರಹ್ಮವನ್ನು ಉಪದೇಶಿಸುವಾಗ ಹಿಂದೆ ಹೇಳಿದಂತೆ ಶಾಂತಿ ಮತ್ತು ಆಕಾಶಕ್ಕೆ ಹೋಲಿಸುವನು. ಬ್ರಹ್ಮದ ಸ್ವರೂಪವನ್ನು ಪ್ರಾಪಂಚಿಕ ಅನುಭವಗಳ ದೃಷ್ಟಾಂತದಿಂದ ವಿವರಿಸುವನು.

ಬ್ರಹ್ಮನು ಸಚ್ಚಿದಾನಂದನು. ಬ್ರಹ್ಮನು ಸ್ವಯಂಪ್ರಕಾಶನು. ಬಹ್ಮನು ಸಾವಿಲ್ಲದವನು ಮತ್ತು ಮಾರ್ಪಾಟಾಗದವನು. ಬ್ರಹ್ಮನು ಇದು ಮಾತ್ರವೇ ಅಲ್ಲ. ಇದಕ್ಕಿಂತಲೂ ಉತ್ಕೃಷ್ಟನೂ ಮತ್ತು ಸಂಪೂರ್ಣವಾಗಿ ಬೇರೆಯವನು. ಅದು ಅತೀಂದ್ರಿಯ ವಸ್ತುವು. ವೇದಾಂತಿಗಳು ಅದನ್ನು "ವಸ್ತು" ಎನ್ನುವರು. ಬ್ರಹ್ಮವನ್ನು ವಿವರಿಸಲಾಗುವುದಿಲ್ಲ. ಮೇಲಿನದು ಕೇವಲ ತಾತ್ಕಾಲಿಕ ವಿವರಣೆಯು. ಏಕೆಂದರೆ ನಾವು ಈ ವಿಶ್ವದಲ್ಲಿ ಅಸತ್, ಜಡ, ದುಃಖದ ಅನುಭವವನ್ನು ಪಡೆಯುವುದರಿಂದ ಅದಕ್ಕೆ ವಿರುದ್ಧ ಗುಣಗಳಾದ ಸಚ್ಚಿದಾನಂದವನ್ನು ಬ್ರಹ್ಮನಿಗೆ ಆರೋಪಿಸುವೆವು. ಇದು ವೇದಾಂತದಲ್ಲಿ ಅತದ್ವ್ಯಾವೃತ್ತಿ ಲಕ್ಷಣವು.

ಶ್ರುತಿಗಳು, "ಬ್ರಹ್ಮನು ಕೆಳಗೂ ಇರುವನು ಬ್ರಹ್ಮನು ಮೇಲಿರುವನು. ಬ್ರಹ್ಮನು ಹಿಂದುಗಡೆ ಇರುವನು. ಬ್ರಹ್ಮನು ಮುಂದುಗಡೆ ಇರುವನು. ಬ್ರಹ್ಮನು ಇದೆಲ್ಲವೂ ಆಗಿದ್ದಾನೆ. ಈ ಬ್ರಹ್ಮವನ್ನು ಅರಿತವನು ಅಮರನೇ ಆಗುವನು. ಆತ್ಮನನ್ನು ಅರಿಯುವವನು ದುಃಖವನ್ನು ದಾಟುವನು" ಎಂದು ಹೇಳುವುವು.

ಯಾಜ್ಞವಲ್ಕ್ಯ ಮತ್ತು ಶಾಕಲ್ಯನಿಗೆ ನಡೆದ ಸಂಪಾದವು ಇಲ್ಲಿದೆ :— "ಪೂರ್ವ ದಿಕ್ಕಿನಲ್ಲಿರುವ ದೇವತೆ ಯಾವುದು ?" "ಸೂರ್ಯನು." "ಸೂರ್ಯನು ಎಲ್ಲಿ ಪ್ರತಿಷ್ಠಿತನಾಗಿರುವನು ?" "ಕಣ್ಣುಗಳಲ್ಲಿ." "ಕಣ್ಣುಗಳು ಎಲ್ಲಿ ಪ್ರತಿಷ್ಠಿತವಾಗಿವೆ ?" "ಬಣ್ಣಗಳಲ್ಲಿ". ಅವನು ಹೇಳಿದನು, "ಹೃದಯದಲ್ಲಿ" ; ಏಕೆಂದರೆ ಹೃದಯದಿಂದ ಬಣ್ಣಗಳು ಹುಟ್ಟುವುವು. ಆದ್ದರಿಂದ ಹೃದಯವೇ ಬಣ್ಣಗಳ ನಿಜಸ್ಥಾನವು."

ಬೃಹದಾರಣ್ಯಕ ಉಪನಿಷತ್ತಿನಲ್ಲಿ ನೀವು ಇದನ್ನು ಕಾಣಬಹುದು. "ಹಾಗಾದರೆ ಅವನು ಯಾರನ್ನು ಏತರಿಂದ ನೋಡಬೇಕು ?" ಆತ್ಮನು ಇಂದ್ರಿಯ ಗ್ರಾಹ್ಯನಲ್ಲವೆಂಬುದು ಇದರಿಂದ ಸ್ಪಷ್ಟವಾಯಿತು. ಅದು ಯಾವಾಗಲೂ ತಿಳಿಯುವುದು . ಅಲ್ಲಿ ಮಧ್ಯವರ್ತಿ ಇಲ್ಲ, ಕರ್ಮದ ವಸ್ತುವಿಲ್ಲ ಅಥವಾ ಸಾಧನವೂ ಇಲ್ಲ. ಈ ಸ್ಥೂಲ ಪ್ರಪಂಚದಲ್ಲಿಯೇ ದೃಕ್, ದೃಶ್ಯ, ದ್ರಷ್ಟೃ ಎಂಬ ತ್ರಿಪುಟಿಯಿರುವುದು. ತಿಳಿಯುವವನನ್ನು ತಿಳಿಯಲು ಹೇಗೆ ಸಾಧ್ಯ ? ಯಾರಿಂದ ಇವುಗಳೆಲ್ಲವನ್ನೂ ತಿಳಿಯುವೆವೊ ಅವನನ್ನು ಯಾರು ಹೇಗೆ ತಿಳಿದಿದ್ದಾರೆ ? ದೃಶ್ಯವನ್ನು ನೋಡದವನನ್ನು ನೀನು ನೋಡಲಾರೆ. ಕೇಳಬೇಕಾದ್ದನ್ನು, ಕೇಳುತ್ತಿರುವವನನ್ನು ನೀನು ಕೇಳಲಾರೆ. ಗ್ರಹಿಸಬೇಕಾದ್ದನ್ನು ಗ್ರಹಿಸುವವನನ್ನು ನೀನು ಗ್ರಹಿಸಲಾರೆ. ಜ್ಞಾನದ ಜ್ಞಾತೃವನ್ನು ನೀನು ತಿಳಿಯಲಾರೆ. ವೈಶೇಷಿಕ ದರ್ಶನದಲ್ಲಿ ಆರು ಪದಾರ್ಥಗಳಿವೆ. ಅವು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಮತ್ತು ಸಮವಾಯ.

ಅಂತಃಕರಣವು ಸೂಕ್ಷ್ಮವಸ್ತುವಿನಿಂದಾಗಿದೆ. ಸೂಕ್ಷ್ಮ ಭೂತಗಳು ಮನಸ್ಸನ್ನು ಮಾಡುವ ತನ್ಮಾತ್ರೆಗಳ, ದ್ರವ್ಯದ ಮೂಲತತ್ವಗಳು. ಮನಸ್ಸು ವಾಯು ತನ್ಮಾತ್ರೆಯಿಂದಾಗಿ ವಾಯುವಿನಂತೆಯೇ ಅಲೆದಾಡುವುದು. ಬುದ್ಧಿಯು ಪಂಚತನ್ಮಾತ್ರೆಗಳಿಂದಾದುದು. ಚಿತ್ತವು ಜಲತನ್ಮಾತ್ರೆಯಿಂದಾದುದು. ಅಹಂಕಾರವು ಪೃಥ್ವೀತನ್ಮಾತ್ರೆಯಿಂದಾಯಿತು. ಅಸ್ತಿತ್ವವು ಆಕಾಶತನ್ಮಾತ್ರೆಯದು.

ಇಂದ್ರನು ಅನೇಕ ಅವಿದ್ಯಾವಂತ ಸನ್ಯಾಸಿಗಳನ್ನು ಕೊಂದನು. ಅವರ ಕೊಲ್ಲುವಿಕೆಯಿಂದ ಅವನಿಗೆ ಯಾವ ಬಾಧೆಯು ಆಗಲಿಲ್ಲ. ಅವನು

ಜ್ಞಾನಾಗ್ನಿಯನ್ನು ಹೊಂದಿದ್ದುದರಿಂದ ಕರ್ಮಗಳನ್ನು ನಾಶ ಮಾಡಿದನು. ತಾನು ಅಕರ್ತ, ಅಭೋಕ್ತೃ, ಅಸಂಗ ಎಂಬುದನ್ನು ತಿಳಿದಿದ್ದನು. ಜನಕ ರಾಜನು ತನ್ನ ಬ್ರಹ್ಮವಿದ್ಯೆಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡ ಲಾರದ ಪಂಡಿತರನ್ನೆಲ್ಲಾ ಸೆರೆಮನೆಯಲ್ಲಿಟ್ಟನು. ಅವನಿಗೆ ಅದರಿಂದ ಕಿಂಚಿತ್ತೂ ತೊಂದರೆಯಾಗಲಿಲ್ಲ. ಅವನು ಜ್ಞಾನಿಯಾಗಿದ್ದನು. ಆ ಕಾರಣದಿಂದಲೇ ಗೀತೆಯು ಹೇಳುವುದೇನೆಂದರೆ "ಅಹಂಕಾರ ಭಾವಗಳಿಂದ ಯಾವನು ಬಿಡಲ್ಪಟ್ಟಿರುವನೋ, ಯಾರ ಬುದ್ಧಿಯು ಬಾಧಿಸಲ್ಪಟ್ಟಿಲ್ಲವೊ ಅಂತಹವನು ಇವರುಗಳನ್ನು ಕೊಂದರೂ ಕೊಂದಹಾಗಲ್ಲವು ಮತ್ತು ಬದ್ಧ ನಲ್ಲವು."

ಪ್ರತಿಯೊಬ್ಬನೂ ತನ್ನದೇ ಆದ ಪ್ರಪಂಚವನ್ನು ಹೊಂದಿದ್ದಾನೆ. ಕೋತಿ ಅಥವ ನಾಯಿ ಅದರದರ ಲೋಕವನ್ನು ಹೊಂದಿವೆ. ಕಿವುಡನೂ, ಕುರುಡನೂ, ಹುಚ್ಚನೂ, ಅನಾಗರಿಕನೂ, ಸೊಗಸುಗಾರನೂ, ಮಗುವೂ, ಜಿಜ್ಞಾಸುವೂ, ನೀಚನೂ, ಕಳ್ಳನೂ, ರಾಜನೂ ಮತ್ತು ರೈತನೂ ತಮ್ಮ ತಮ್ಮದೇ ಆದ ಲೋಕಗಳನ್ನು ಹೊಂದಿರುವರು.

ಅದೃಷ್ಟ, ಪುರುಷಾರ್ಥ, ಪ್ರಾರಬ್ಧ, ಮುಕ್ತಸಂಕಲ್ಪ ಮತ್ತು ಅವಶ್ಯ ಕತೆ ಎಲ್ಲವೂ ಸಮಾನಾರ್ಥ ಪದಗಳು.

ಅಜ್ಞಾನವೆಂಬ ಹಾವಿನಿಂದ ಕಡಿಯಲ್ಪಟ್ಟವನನ್ನು ಬ್ರಹ್ಮಜ್ಞಾನ ವೆಂಬ ಗರುಡ ಮಂತ್ರದಿಂದ ಬದುಕಿಸಬಹುದು.

ನಿಜವಾದ ನಾನು ನಿತ್ಯವಾದ ಆತ್ಮವು. ಈ ಸತ್ಯವಾದ ನಾನು ದೇಹವು. ಒಂದೇ ಸಮನಾಗಿ ಬದಲಾಯಿಸುತ್ತಿದ್ದರೂ ತಾನು ಮಾತ್ರ ಬದಲಾಯಿಸುವುದಿಲ್ಲವು. ಈ ದೇಹವು ಅಶುದ್ಧಮಯವು. ಅದು ಹೇಗೆ ಶುದ್ಧಾತ್ಮನಾಗಬಲ್ಲದು ?

ಈ ಆಶ್ಚರ್ಯಕರವಾದ ಕಥೆಯನ್ನು ಕೇಳಿ. ಜಲ ಮರೀಚಿಕೆಯಲ್ಲಿ ಸ್ನಾನ ಮಾಡಿ ಗಗನಕುಸುಮಗಳನ್ನು ಧರಿಸಿಕೊಂಡ ಈ ಬಂಜೆಯ ಮಗನು ಮೊಲದ ಕೊಂಬಿನಿಂದ ಮಾಡಲ್ಪಟ್ಟ ಧನುಸ್ಸಿನಿಂದ ಯುದ್ಧಕ್ಕೆ ಹೊರಟಿರು ವನು. ಅದು ಎಷ್ಟು ನಿಜವಾಗಿದೆ ? ಈ ಪ್ರಪಂಚವು ಈ ಕಥೆಯಷ್ಟೇ ಸತ್ಯವಾಗಿರುವುದು.

ಸತ್ಕರ್ಮ ಅಥವ ದುಷ್ಕರ್ಮವೆಂಬುದು ಇಲ್ಲವು. ಗೀತೆಯು ಹೇಳುವುದೇನೆಂದರೆ, "ಸಹಜವಾದ ಕರ್ಮವು ದೋಷಯುಕ್ತವಾದರೂ ಅದನ್ನು ಬಿಡಬಾರದು. ಹೇಗೆ ಹೊಗೆಯಿಂದ ಮುಸುಕಿದ ಅಗ್ನಿಯನ್ನು ಬಿಡುವುದಿಲ್ಲವೋ ಹಾಗೆ ದೋಷಗಳಿಂದ ತುಂಬಿದ್ದರೂ ಕರ್ಮಗಳನ್ನು ಬಿಡದಿರು."

ಸಮಷ್ಟಿ ಅಹಂ, ವ್ಯಷ್ಟಿ ಅಹಂ ಎಂದು ಅಹಂನಲ್ಲಿ ಎರಡು ವಿಧ. ಈಶ್ವರನು ಸಮಷ್ಟಿ ಅಹಂ, ಜೀವನು ವ್ಯಷ್ಟಿ ಅಹಂ, ಜೀವನು ಮೊದಲು ಅಹಂಕಾರವನ್ನು ಹೊಂದಿ "ನಾನು ಜೀವನು ಎಂದು ಭಾವಿಸುತ್ತಿರುವನು ಮತ್ತು ಕಾಲಕ್ರಮವಾಗಿ ಜಗತ್ತನ್ನು ಈಶ್ವರನೆಂದು ತಿಳಿಯುವನು. ಆದರೆ ವ್ಯಷ್ಟಿ ಅಹಂಗೆ ಸಮಷ್ಟಿ ಅಹಂ ಅಥವ ಈಶ್ವರ ಮತ್ತು ಪ್ರಪಂಚವು ಇರಲಾರದು.

ನೀನು ಈ ದೇಹವಲ್ಲವೆಂದು ತಿಳಿದೊಡನೆಯೇ ಸಾವು ಮತ್ತು ವಸ್ತು ವಿನಿಂದ ಬಿಡಲ್ಪಡುವೆ. ಕರ್ಮ, ಕರ್ಮದ ಬಂಧನ, ಕಾಮಗಳ ಕ್ಲೇಶ, ನಶ್ವರ ಜೀವನದ ಭ್ರಮೆಯಿಂದ ಮತ್ತು ಅದರ ಕಲ್ಪಿತವಾದ ಹಾನಿಗಳು ಮತ್ತು ತೊಂದರೆಗಳಿಂದ ಬಿಡಲ್ಪಡುವೆ.

ನೀನು ಒಂದು ಜಲಪಾತವನ್ನು ನೋಡುವೆ. ಅಲ್ಲಿ ಜಲವು ಸಂತತ ವಾಗಿ ಧುಮುಕುವುದು. ಅದರ ಒಂದು ಛಾಯಾಚಿತ್ರವನ್ನು ತೆಗೆದು ಕೊಂಡರೆ ಆ ಜಲಪಾತವನ್ನು ಚಿತ್ರದಲ್ಲಿ ನೋಡಬಹುದು. ಆದರೆ ಚಿತ್ರ ದಲ್ಲಿನ ಜಲಪಾತದಲ್ಲಿ ನೀರಿನ ಚಲನೆಯಿಲ್ಲವು. ಚಲನೆಯು ಮನಸ್ಸಿನ ಸೃಷ್ಟಿಯು. ಅದು ಮನಸ್ಸಿನ ಮತ್ತು ಕಣ್ಣಿನ ಮೋಸವು. ಚಲನೆಯು ಸಾಪೇಕ್ಷಿಕ ಶಬ್ದವು. ವಸ್ತುವು ಚಲಿಸಿದಂತಾಗುವುದು. ಚಲನೆಯು ಭ್ರಮೆಯು. ವಸ್ತುಗಳ ಚಲನೆಯ ಹಿನ್ನೆಲೆಯಲ್ಲಿ ಚಲನೆಯಿಲ್ಲದ ಆತ್ಮ ವೊಂದೇ ಇರುವುದು. ಅವನು ಎಲ್ಲವೂ ಆಗಿ, ಎಲ್ಲೆಲ್ಲಿಯೂ ಪೂರ್ಣನಾಗಿ ಇರುವುದರಿಂದ ಅವನು ಚಲಿಸುವುದು ಹೇಗೆ? ಅವನು ಕುಳಿತುಕೊಂಡೇ ದೂರ ಹೋಗುವನು. ಮಲಗಿಕೊಂಡೇ ಎಲ್ಲೆಲ್ಲಿಯೂ ಇರುವನು. ಏಕೆಂದರೆ ಅವನು ವ್ಯಾಪಕನು ಮತ್ತು ಪೂರ್ಣನು.

ಹತ್ತು ಜನ ಅಜ್ಞಾನಿಗಳು ಈಜಿಕೊಂಡು ಒಂದು ನದಿಯನ್ನು ದಾಟಿ ದರು, ಎಲ್ಲರೂ ಇನ್ನೊಂದು ದಡವನ್ನು ಸುಲಭವಾಗಿ ತಲುಪಿದರು.

ತಮ್ಮಲ್ಲಿ ಎಲ್ಲರೂ ಬಂದರೇ ಎಂದು ತಿಳಿದುಕೊಳ್ಳಲು ಒಬ್ಬೊಬ್ಬರನ್ನಾಗಿ ಎಣಿಸಿದರು. ಒಬ್ಬನು ಒಂಬತ್ತು ಜನರನ್ನು ಎಣಿಸಿ, ತನ್ನನ್ನು ಮರೆತು ಹತ್ತನೆಯವನು ಇಲ್ಲವೆಂದು ಅಳಲಾರಂಭಿಸಿದನು. ಹತ್ತನೆಯವನು ಮುಳುಗಿ ಹೋದನೆಂದು ಅವನ ನಂಬಿಕೆ. ಹೀಗೆಯೇ ಉಳಿದ ಒಂಬತ್ತು ಜನರೂ ತಮ್ಮತಮ್ಮನ್ನೇ ಮರೆತು ಇತರರನ್ನು ಎಣಿಸಿ ಹತ್ತನೆಯವನು ಸತ್ತನೆಂದು ಪ್ರತಿಯೊಬ್ಬನೂ ಅತ್ತನು. ಒಬ್ಬನು ಅಳಲಾರಂಭಿಸಿದರೆ ಉಳಿದ ಒಂಬತ್ತು ಜನವೂ ಅವನ ಜೊತೆಗೆ ಅಳುತ್ತಿದ್ದರು. ಅಲ್ಲಿಯೇ ನಿಂತಿದ್ದವನೊಬ್ಬನು ಇದನ್ನು ನೋಡಿ ಅವರ ತಪ್ಪನ್ನು ತೋರಿಸಿಕೊಟ್ಟನು. "ಎಲೈ ಮನುಷ್ಯನೇ ಯಾರೊಬ್ಬನೂ ತಪ್ಪಿಸಿಕೊಂಡಿಲ್ಲವು. ಇಲ್ಲಿ ಹತ್ತು ಜನರಿರುವರು. ಹತ್ತನೆಯವನು ನೀನೇ ಆಗಿರುವೆ. ನಿನ್ನನ್ನು ನೀನೇ ಎಣಿಸಿಕೊಳ್ಳುವುದನ್ನು ಮರೆತು ತಪ್ಪು ಮಾಡಿದೆ." ಅವರೆಲ್ಲರಿಗೂ ಬಹಳ ಸಂತೋಷವಾಯಿತು.

ತನ್ನ ಇರುವಿಕೆಗೆ ತಾನು ತುಂಬ ಸಮೀಪದಲ್ಲಿದ್ದರೂ, ತಾನು ತಿಳಿಯ ದಿದ್ದರೂ, ಹತ್ತು ಜನರೂ ಪೂರ್ಣವಾಗಿರುವಂತೆ, ಯಾವಾಗ ಅವನ (ಎಣಿಸು ವವನ) ಮನಸ್ಸು ತನ್ನನ್ನು ಮರೆತು ಹೊರಗಿನವರನ್ನೇ ಎಣಿಸುವಂತೆ, ತಾನು ಅವರಲ್ಲಿ ಒಂದಾಗಿದ್ದರೂ ತಿಳಿಯದಿರುವಂತೆ, ಜೀವನು ಪರಮಾತ್ಮನೊಡನೆಯೇ ಇದ್ದು ತನ್ನನ್ನು ತಿಳಿಯದಿರುವುದರಿಂದ ದುಃಖಿಸುವನು. ಆದರೆ ಯಾವಾಗ ಶೃತಿಗಳಿಂದ ಗುರುವಿನಂತೆ 'ಆ ಆತ್ಮನೆ ನೀನಾಗಿರುವೆ' ಎಂದು ಬೋಧಿಸಲ್ಪಡು ವನೋ, ಅದರಿಂದ ಹತ್ತನೆಯವನು ತಾನೇ ಎಂದು ತಿಳಿದಂತೆ ಅಖಂಡವಾದ ಬ್ರಹ್ಮವು ತಾನೇ ಎಂದರಿತು ಸಂತೋಷಿಸುವನು.

---

## ೪. ವೇದಾಂತ ಮತ್ತು ಇತರ ದರ್ಶನಗಳು

ಸಾಂಖ್ಯಶಾಸ್ತ್ರ ರೀತ್ಯ ಪ್ರಾಣತತ್ವವೆಂಬುದಿಲ್ಲವು. ಪ್ರಾಣವು ಸರ್ವಾಂಗ ಗಳ ಸಂಯೋಗ ಕ್ರಿಯೆಯಿಂದಾದುದು.

ಪ್ರಮೇಯ, ತರ್ಕ, ದೃಷ್ಟಾಂತ, ಅನ್ವಯ, ಸಿದ್ಧಾಂತ—ಇವು ಐದು ಅವಯವಗಳು ಗೌತಮ ಋಷಿಯ ನ್ಯಾಯ ಸಿದ್ಧಾಂತದಲ್ಲಿ ಇವೆ.

೧) ಪರಿಣಾಮವಾದ ೨) ವಿವರ್ತವಾದ ೩) ಅಜಾತಿವಾದ ಎಂದು ಮೂರು ವಾದಗಳಿವೆ. ೧) ಸಾಂಖ್ಯ ಶಾಸ್ತ್ರದ ಪರಿಣಾಮವಾದಕ್ಕೆ ದೃಷ್ಟಾಂತ ಹಾಲು ಮೊಸರಾಗಿ ಪರಿವರ್ತನವಾಗುವುದು. ೨) ಶ್ರೀ ಶಂಕರಾಚಾರ್ಯರ ವಿವರ್ತವಾದಕ್ಕೆ ದೃಷ್ಟಾಂತ ಹಗ್ಗವು ಹಾವಿನಂತೆ ತೋರಿಕೊಳ್ಳುವುದು ಮತ್ತು ೩) ಶ್ರೀ ಗೌಡಪಾದರ ಅಜಾತಿವಾದದಂತೆ ವಿಶ್ವದ ವಿಕಾಸವಿಲ್ಲದಿರುವುದು. ಮೊದಲನೆಯ (ಪರಿಣಾಮ) ವಾದವು ಅಧಮವು, ವಿವರ್ತವಾದವು ಮಧ್ಯಮವು, ಅಜಾತವಾದವು ಸರ್ವೋತ್ತಮವು.

ಕಣಾದ ಋಷಿಯ ವೈಶೇಷಿಕ ಶಾಸ್ತ್ರದಂತೆ ೧) ದ್ರವ್ಯ ೨) ಗುಣ ೩) ಕರ್ಮ ೪) ಸಾಮಾನ್ಯ ೫) ವಿಶೇಷ ಮತ್ತು ೬) ಸಮವಾಯ.

ಸಾಂಖ್ಯ ದರ್ಶನದಲ್ಲಿ ಪ್ರಾಣಗಳು ಎಂಬುದು ಇಲ್ಲವು. ಅದರಲ್ಲಿ ಚಿತ್ತವೂ ಇಲ್ಲವು. ಅದೇ ವ್ಯತ್ಯಾಸವು. ವೇದಾಂತವು ಸಾಂಖ್ಯ ಶಾಸ್ತ್ರದ ಪೋಷಕವು ಮತ್ತು ಪೂರಕವು. ಸಾಂಖ್ಯದಲ್ಲಿ ಅನೇಕ ಪುರುಷರಿರುವರು. ಆದರೆ ವೇದಾಂತದಲ್ಲಿ ಅಖಂಡನೂ, ಪರಿಪೂರ್ಣನೂ ಆದ ಆತ್ಮನೊಬ್ಬನೇ ಇರುವನು.

ಕೆಲವು ರಾಜ್ಯಗಳಲ್ಲಿ ಪ್ರಧಾನಿಯೇ ಸರ್ವಶಕ್ತನು. ಅವನು ಏನು ಬೇಕಾದರೂ (ಉದ್ಧಾರ, ವಿನಾಶ) ಮಾಡಬಲ್ಲನು. ಮಹಾರಾಜನು ಹೆಸರಿಗೆ ಮಾತ್ರ ಇರುವನು. ಹಾಗೆಯೇ ಸಾಂಖ್ಯರ ಪುರುಷನು ನಾಮಮಾತ್ರ ಪ್ರಧಾನನು. ಅವನ ಇರುವಿಕೆಯು ಮಾತ್ರ ಅವಶ್ಯಕವು. ಪ್ರಕೃತಿಯೇ ಸರ್ವಾಧಿಕಾರಿ. ಅವಳೇ ಸಮಸ್ತ ಸೃಷ್ಟಿಯನ್ನು ಮಾಡುವಳು.

ಸಚ್ಚಿದಾನಂದವೆಂಬ ಸದ್ಗುಣಗಳಿಂದ ಅಸತ್, ಅವಿದ್ಯಾ, ದುಃಖ ಮೊದಲಾದುವು ಬ್ರಹ್ಮದಲ್ಲಿ ಇಲ್ಲವೆಂದು ಸರಿಯಾಗಿ ತಿಳಿದುಕೊಳ್ಳುವೆ. ಸಚ್ಚಿದಾನಂದಕ್ಕೆ ವಿರುದ್ಧವಾದ ಗುಣಗಳು ಆತ್ಮದಲ್ಲಿ ಕಂಡುಬರುವುದಿಲ್ಲ. ಹೀಗೆಯೇ ಬ್ರಹ್ಮದಲ್ಲಿ ಕಂಡುಬಾರದ ಗುಣಗಳು ಮೃತ್ಯು ಮತ್ತು ಕೊನೆ (ಅಂತ). ಆದ್ದರಿಂದ ಆತ್ಮದಲ್ಲಿ ಅನಂತ, ಅಮೃತಮ್ ಎಂಬ ಗುಣಗಳನ್ನು ಆರೋಪಿಸಲಾಗಿದೆ. ಇದನ್ನು ವೇದಾಂತದಲ್ಲಿ ವ್ಯಾವೃತ್ತಿ ಎಂದು ತಿಳಿಯಲ್ಪಡುವುದು.

ಸತ್ತಾ–ಸಾಮಾನ್ಯವು ನಿರ್ಗುಣ ಬ್ರಹ್ಮದ ಮತ್ತೊಂದು ಹೆಸರು. ತುರೀಯಾತೀತಾವಸ್ಥೆಯಲ್ಲಿ ಜೀವನು ಪರಬ್ರಹ್ಮನಲ್ಲಿ ಒಂದಾಗುವನು.

ಬ್ರಹ್ಮದಲ್ಲಿ ಪರಿಣಾಮವಾಗುವುದು ಹೇಗೆ ? ಬ್ರಹ್ಮ ಎಂದರೆ ಮಹತ್, ಅಖಂಡ ಮತ್ತು ಶ್ರೇಷ್ಠ. ಹಾಲು ಮೊಸರಾಗುವುದು. ಇದನ್ನು ಪರಿಣಾಮ ಎನ್ನುವರು. ಪರಿಣಾಮವು ಸಾವಯವ ವಸ್ತುವಿನಲ್ಲಿ ಮಾತ್ರ ಸಾಧ್ಯವು. ಸಾವಯವ ಎಂದರೆ "ಅವಯವಗಳಿಂದ ಕೂಡಿರುವುದು." ಎಂದರೆ ಮನುಷ್ಯನ ದೇಹವು ಕಾಲುಗಳು, ಕೈಗಳು, ಪಾದಗಳು ಮುಂತಾದವುಗಳಿಂದ ಕೂಡಿರುವಂತೆ ಬ್ರಹ್ಮವು ನಿರವಯವವು, ಬ್ರಹ್ಮದಲ್ಲಿ ಯಾವ ಪರಿಣಾಮವೂ ಇರುವುದಿಲ್ಲ. ಈ ವಿಷಯವನ್ನು ಚೆನ್ನಾಗಿ ತಿಳಿದುಕೊ. ನೀನು ಹಲವು ಗೊಂದಲಗಳು, ಕುತೂಹಲಗಳು ಮತ್ತು ಮಾನಸಿಕ ತೊಂದರೆಗಳಿಂದ ರಕ್ಷಿಸಲ್ಪಡುವೆ.

ಶ್ರೀ ರಾಮಾನುಜರ ಸವಿಶೇಷ ಬ್ರಹ್ಮನ ಕಲ್ಯಾಣ ಗುಣಗಳು ಶ್ರೀ ಶಂಕರರ ನಿರ್ವಿಶೇಷ ಬ್ರಹ್ಮ ಅಥವ ಅನಂತ ಗುಣಗಳ ಒಂದು ಅಂಶವು ಮಾತ್ರ.

ನಿರ್ಗುಣವೆಂದರೆ ಪರಬ್ರಹ್ಮ ಅಥವ ಶುದ್ಧಬ್ರಹ್ಮನು, ಗುಣಗಳೇ ಇಲ್ಲ ವೆಂದು ಅರ್ಥವಲ್ಲ. ಹಾಗೆಂದರೆ ನಿರ್ಗುಣ ಬ್ರಹ್ಮನು ಗುಣಗಳ ಆಗರವು. ಶ್ರೀ ರಾಮಾನುಜರ ಕೆಲವು ಅನುಯಾಯಿಗಳು ವಿವೇಕವಿಲ್ಲದೆ ಮತ್ತು ದ್ವೇಷ ದಿಂದ ಹೀಗೆ ಹೇಳುವರು : "ಶ್ರೀ ಶಂಕರರ ನಿರ್ಗುಣ ಬ್ರಹ್ಮವು ಒಂದು ಕಲ್ಲುಬಂಡೆ, ಒಂದು ಶೂನ್ಯ. ಅವನು ಶುಷ್ಕನು. ಅಂತಹ ನಿರ್ಗುಣ ಬ್ರಹ್ಮನಲ್ಲಿ ರಸವಿಲ್ಲವು." ಇದು ಅಜ್ಞಾನವು ಮಾತ್ರ. ಶ್ರೀ ಶಂಕರರ ನಿರ್ಗುಣ ಬ್ರಹ್ಮನು "ರಸೋವೈಸಃ—ಆನಂದೋವೈಸಃ", ಅವನು ಆನಂದ ಮತ್ತು ರಸಪೂರ್ಣನು. ಅವನು ಎಲ್ಲವನ್ನೂ ತಿಳಿದವನಲ್ಲ. ಅವನು ಜ್ಞಾನವೇ ಆಗಿರುವನು. ಅವನು ಸರ್ವ ಸೌಂದರ್ಯನಲ್ಲ. ಅವನೇ ಸೌಂದರ್ಯವು. ಇದು ಸ್ವರೂಪವು. ಇದೇ ಸಾರವು. ಅವನು ಎಲ್ಲ ರಸಗಳ ಸ್ವರೂಪನು.

---

## ೫. ತತ್ತ್ವಗಳು

ನೀನು ಹೊರಗೆ ನೋಡುವ ನಾಮ ರೂಪಗಳ ತೋರಿಕೆಯೆಲ್ಲವೂ ಮಾಯೆಯ ಕಾರ್ಯವಾಗಿವೆ. ಮಾಯೆಯು ಅವ್ಯಕ್ತವು, ಅವ್ಯಾಕೃತಿಯು. ಅದು ಭಗವಂತನ ಅನಿರ್ವಚನೀಯ ಶಕ್ತಿಯು. ಸತ್ತ್ವ, ರಜಸ್ ಮತ್ತು

ತಮಸ್ಸಿನಿಂದ ಕೂಡಿದುದು. ಭಗವದ್ಗೀತೆಯಂತೆ, ಜೀವರ ಕರ್ಮಕ್ಕೆ ತಕ್ಕಂತೆ ಫಲಗಳನ್ನು ಕೊಡಲು ಸತ್ವ, ರಜಸ್, ತಮೋಗುಣಗಳ ಸಮತೋಲನವು ಚಂಚಲಗೊಳಿಸಲ್ಪಟ್ಟು ಮಹಾಕಲ್ಪದ ಆದಿಯಲ್ಲಿ ಈ ಜಗತ್ತು ಹೊರತೋರುವುದು (ವ್ಯಾಕೃತವಾಗುವುದು).

ಬ್ರಹ್ಮನು ಯೋಚಿಸಿದನು, "ಅಲ್ಲಿ ಪ್ರಪಂಚಗಳೆಲ್ಲವೂ ನಿಜವಾಗಿ ಇವೆ, ನಾನು ಸೃಷ್ಟಿಕರ್ತನಾದುದರಿಂದ ಈ ಲೋಕಗಳ ರಕ್ಷಕರನ್ನು ಸೃಷ್ಟಿಸುವೆನು." ಅವನು ನೀರಿನ ಹೊರಕ್ಕೆ ಹಿರಣ್ಯಗರ್ಭಪುರುಷನನ್ನು ತೆಗೆದು ಅವನನ್ನು ರೂಪಿಸಿದನು. ಏಕಾಂತ ಶಕ್ತಿಯಿಂದ ಅವನು ತಪಿಸುವಂತೆ ಮಾಡಿದನು. ಹೀಗೆ ಅವನು ತಪಿಸಲ್ಪಟ್ಟಾಗ ಅವನ ಹೃದಯವು ಒಡೆಯಿತು. ಹೃದಯದಿಂದ ಮನಸ್ಸು ಬಂದಿತು. ಮನಸ್ಸಿನಿಂದ ಮನೋಭಿಮಾನ ದೇವತೆಯಾದ ಚಂದ್ರನು ಬಂದನು. ಹೃದಯವು ಮನಸ್ಸಿನ ಸ್ಥಾನವು. ಆದ್ದರಿಂದ ಮನಸ್ಸು ಹೃದಯವು ಸಿಡಿದಾಗ ಹೊರಬಂದಿತು—ಸಮಾಧಿಯಲ್ಲಿ ಮನಸ್ಸು ಮತ್ತೆ, ಪುನಃ ತನ್ನ ಸ್ವಸ್ಥಾನವಾದ ಹೃದಯವನ್ನು ಪ್ರವೇಶಿಸುವುದು. ಸುಷುಪ್ತಿಯಲ್ಲಿಯೂ ಸಹ ಮನಸ್ಸು ಹೃದಯವನ್ನು ಪ್ರವೇಶಿಸಿದರೂ ಮನಸ್ಸು ಮತ್ತು ಬ್ರಹ್ಮನ ನಡುವೆ ಒಂದು ಅಜ್ಞಾನದ ತೆರೆಯಿರುವುದು. (ಐತರೇಯ ಉಪನಿಷತ್ತು. ೧,—೩—೪.)

ಅವ್ಯಕ್ತ ಅಥವಾ ಮಾಯೆಯಿಂದ, ಬೀಜದಿಂದ ಮೊಳಕೆಯು ಹೊರಬರುವಂತೆ, ಮಹತ್ ತತ್ವವು ಹೊರಬರುವುದು. ಮಹತ್‌ನಿಂದ ಅಹಂಕಾರವು ಹೊರಡುವುದು. ನಂತರ ಮನಸ್ಸು, ಪ್ರಾಣ, ತನ್ಮಾತ್ರೆಗಳು ಮತ್ತು ಪಂಚಭೂತಗಳು ಕ್ರಮವಾಗಿ ಹೊರಬಂದವು. ನಂತರ ಪಂಚಭೂತಗಳಿಂದ ಬಾಹ್ಯ ವಿಶ್ವವೆಲ್ಲವೂ ಸೃಷ್ಟಿಯಾದವು.

ಗುಣಗಳು ಇಪ್ಪತ್ತನಾಲ್ಕು. ಅವು ಯಾವುವೆಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಪರಿಮಾಣ, ಸಾಂಖ್ಯ, ಸಂಯೋಗ, ವಿಭಾಗ, ಪೃಥಕ್ತ್ವ, ಗುರುತ್ವ, ದ್ರವತ್ವ, ಪರತ್ವ, ಸಂಸ್ಕಾರ, ಧೀ, ದ್ವೇಷ, ಸುಖ, ದುಃಖ, ಇಚ್ಛೆ, ಧರ್ಮ, ಅಧರ್ಮ ಮತ್ತು ಪ್ರಯತ್ನ.

ಲಕ್ಷಣಗಳು ಒಂಬತ್ತು. ಪಂಚಭೂತಗಳು, ದಿಕ್, ಕಾಲ, ಆತ್ಮ ಮತ್ತು ಮನಸ್ಸು.

ಚತುರ್ವ್ಯೂಹಗಳು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ. ಇವು ನಾಲ್ಕೂ ಪುರುಷೋತ್ತಮನಲ್ಲಿ ಐಕ್ಯವು. ಜೀವಾತ್ಮನು, ಮನಸ್ಸು, ಅಹಂಕಾರವು ಅವನಲ್ಲಿ ಐಕ್ಯವಾಗುವುವು.

ಬ್ರಹ್ಮನ ಒಂದು ದಿನವು ಮನುಷ್ಯನ ೪೩೨ ದಶಲಕ್ಷ ವರ್ಷಗಳಿಗೆ ಸಮವು. ಪ್ರಾಯಶಃ ಇದೇ ಜಗತ್ತಿನ ಆಯಸ್ಸು. ನಾಶವೆಂದರೆ ಇಡೀ ವಿಶ್ವವು ಕಾರಣಕ್ಕೆ ಹಿಂತಿರುಗಿ ಅದರಲ್ಲಿ ಒಂದಾಗುವುದು.

---

# ೬. ಬ್ರಹ್ಮವಿದ್ಯಾ ವಿದ್ಯಾರ್ಥಿಗಳು

ವಾಜಶ್ರವಸನು ಬಹಳ ಸಂಪತ್ತಿನ ವಿಶ್ವಜಿತ್ ಯಜ್ಞವನ್ನು ಮಾಡಿದನು. ಅವನಿಗೆ ನಚೀಕೇತಸ್‌ನೆಂಬ ಒಬ್ಬ ಮಗನಿದ್ದನು. ವಾಜಶ್ರವಸನು ಋತ್ವಿಕ್‌ಗಳಿಗೆ ಅನುಪಯುಕ್ತವಾದ ಮುದೀ ಹಸುಗಳನ್ನು ದಾನ ಮಾಡಿದನು. ನಚೀಕೇತಸ್‌ನಿಗೆ ಅವನ ತಂದೆಯು ಮಾಡುತ್ತಿದ್ದ ದಾನಗಳಿಂದ ಸಮಾಧಾನವಾಗಲಿಲ್ಲ. ತನ್ನ ತಂದೆಯು ಯಜ್ಞದಿಂದ ಪಡೆಯಬೇಕಾದ ಪೂರ್ಣ ಫಲವನ್ನು ಹೊಂದುವುದಿಲ್ಲವೆಂದೂ ಮತ್ತು ಸುಖವನ್ನು ಕೊಡುವ ಬೇರೆಯ ಲೋಕಗಳಲ್ಲಿ ಸುಖವನ್ನು ಹೊಂದುವುದಿಲ್ಲವೆಂದೂ ಯೋಚಿಸಿದನು.

ಆದ್ದರಿಂದ ನಚೀಕೇತನು ತಂದೆಯನ್ನು ಕೇಳಿದನು : "ತಂದೆ, ನನ್ನನ್ನು ಯಾರಿಗೆ ಕೊಡುತ್ತೀಯೆ ?" ಹೀಗೆ ವಾಜಶ್ರವಸನನ್ನು ಮೂರು ಸಾರಿ ಕೇಳಿದನು. ತಂದೆಗೆ ಬಹಳ ಖೇದವೂ, ಕೋಪವೂ ಉಂಟಾಗಿ : ನಿನ್ನನ್ನು ನಾನು ಮೃತ್ಯುವಿಗೆ ಕೊಡುವೆನು" ಎಂದನು.

ನಚೀಕೇತನು ಆ ಕೂಡಲೆ ಯಮದೇವನ ಅರಮನೆಗೆ ನಡೆದನು. ಯಮದೇವನು ಮನೆಯಲ್ಲಿರಲಿಲ್ಲ. ಆದ್ದರಿಂದ ನಚೀಕೇತನು ಮೂರು ರಾತ್ರಿಗಳು ಉಪವಾಸ ಮಾಡಿದನು.

ಯಮದೇವನು ಹಿಂತಿರುಗಿದನು. ಅವನು ನಚೀಕೇತನಿಗೆ ಹೇಳಿದನು, "ಓ ಬ್ರಾಹ್ಮಣ ನೀನು ಇಲ್ಲಿ, ನನ್ನ ಮನೆಯಲ್ಲಿ ಮೂರು ದಿನಗಳು ಉಪವಾಸ

ಮಾಡಿಕೊಂಡಿದ್ದೆಯಾದ್ದರಿಂದ ಅದಕ್ಕೆ ಪ್ರತಿಯಾಗಿ ಮೂರು ವರಗಳನ್ನು ಕೇಳು. ನಿನಗೆ ನನ್ನ ಸಾಷ್ಟಾಂಗ ನಮಸ್ಕಾರಗಳು."

ನಚಿಕೇತನು ಯಮನಿಂದ ಮೂರು ವರಗಳನ್ನು ಬೇಡಿದನು. ೧) ಮೃತ್ಯುವೇ, ನನ್ನ ತಂದೆಯಾದ ಗೌತಮನು ನನ್ನ ವಿಷಯದಲ್ಲಿ ಶಾಂತ ಸಂಕಲ್ಪನಾಗಿ, ಒಳ್ಳೆಯ ಮನಸ್ಸುಳ್ಳವನಾಗಿ, ವೀತಮನ್ಯುವಾಗಿ ಆಗುವಂತೆಯೂ, ನಿನ್ನಿಂದ ಬೇಡಿಕೊಂಡ ನನ್ನನ್ನು ಅರಿತುಕೊಂಡು ಮಾತನಾಡಿಸುವಂತೆಯೂ ಆಗಲಿ. ೨) ಎಲೈ ಮೃತ್ಯುವೆ, ನೀನು ಸ್ವರ್ಗ್ಯವಾದ ಅಗ್ನಿಯನ್ನು ಅಧ್ಯಯನ ಮಾಡಿರುತ್ತೀಯೆ. ಶ್ರದ್ಧೆಯುಳ್ಳ ನನಗೆ ಅದನ್ನು ಹೇಳಿಕೊಡು. ಸ್ವರ್ಗಲೋಕದವರು ಅಮೃತತ್ವವನ್ನು ಹೊಂದುತ್ತಾರೆ. ೩) ಮನುಷ್ಯನು ಸತ್ತ ಮೇಲೆ ಇರುತ್ತಾನೆಂದು ಕೆಲವರು, ಇವನು ಇರುವುದಿಲ್ಲವೆಂದು ಕೆಲವರು, ಹೀಗೆ ಸಂಶಯವುಂಟಷ್ಟೇ. ನಿನ್ನಿಂದ ಅನುಶಿಷ್ಟನಾಗಿ ತಿಳಿಯಲು ಇಚ್ಛಿಸುವೆನು. ದಯಮಾಡಿ ಇದರ ಬಗ್ಗೆ ಸತ್ಯವನ್ನು ಉಪದೇಶಿಸು.

ಯಮದೇವನು ಮೊದಲ ಎರಡು ವರಗಳನ್ನು ಸಂತೋಷವಾಗಿ ಕೊಟ್ಟನು. ಮೂರನೆಯ ವರವನ್ನು ಕೊಡಲು ಹಿಂಜರಿದನು. ಯಮನು ಹೇಳಿದನು, "ಇಲ್ಲಿ ದೇವತೆಗಳೂ ಸಹ ಸಂಶಯಪಡುವರು. ಇದು ಬಹು ಸೂಕ್ಷ್ಮವಾದ ಪ್ರಶ್ನೆಯು. ಅದನ್ನು ತಿಳಿಯುವುದು ಸುಲಭವಲ್ಲವು. ನಚಿಕೇತನೇ, ಬೇರೆ ಯಾವುದಾದರೂ ವರವನ್ನು ಕೇಳು ಈ ವಿಷಯದಲ್ಲಿ ಮಾತ್ರ ನನ್ನನ್ನು ಬಲವಂತಪಡಿಸಬೇಡ."

ಯಮದೇವನು ನಚಿಕೇತನ ಶ್ರದ್ಧೆಯನ್ನು ತಿಳಿಯಲು ಮತ್ತು ಅವನಿಗೆ ನಿಜವಾಗಿ ವಿವೇಕ, ವೈರಾಗ್ಯಗಳಿವೆಯೇ ಎಂಬುದನ್ನು ತಿಳಿಯಲು ಇಚ್ಛಿಸಿದನು. ನಚಿಕೇತನಿಗೆ ಆನೆಗಳು, ಐಶ್ವರ್ಯ, ಸಾಮ್ರಾಜ್ಯಗಳ ಮೇಲೆ ಸಾರ್ವಭೌಮತ್ವ, ಸುಂದರಾಂಗಿಯರಿಂದ ಸೇವೆ, ಚಿರಂಜೀವಿತ್ವ, ಪುತ್ರರು, ಪೌತ್ರರು, ಪಶುಗಳು, ಬಂಗಾರ, ಗೋವುಗಳು, ಅಶ್ವಗಳು, ರಥಗಳು ಮತ್ತು ಸಂಗೀತ ವಾದ್ಯಗಳ ಆಸೆಯನ್ನು ತೋರಿಸಿದನು.

ಯಮನಿಂದ ಹೀಗೆ ಆಸೆಗಳುಂಟುಮಾಡಲ್ಪಟ್ಟರೂ ನಚಿಕೇತನು ಅವುಗಳಿಂದ ಪ್ರಕ್ಷುಬ್ಧನಾಗದೆ ಮನಸ್ಸನ್ನು ಸ್ಥಿರವಾಗಿಟ್ಟುಕೊಂಡು ಹೀಗೆ ಹೇಳಿದನು "ಯಮದೇವ, ಇವು ನಶ್ವರವಾದ ವಸ್ತುಗಳು. ಇವು ಇಂದ್ರಿಯ

ಗಳನ್ನೂ, ಶಕ್ತಿಯನ್ನು ಕುಂದಿಸುವುವು. ದೀರ್ಘ ಜೀವನವೂ ಅಲ್ಪವೇ. ಅಖಂಡದ ಮುಂದೆ ಕಾಲವೆಲ್ಲಿ? ಈ ಸುಂದರಿಯರೂ ಮತ್ತು ಸುಖಗಳೂ ದುಃಖವನ್ನೇ ಉಂಟುಮಾಡುವುವು. ಏಕೆಂದರೆ ಅವು ಸದ್ಗುಣ, ಬಲ, ಬುದ್ಧಿಶಕ್ತಿ, ಸಾಮರ್ಥ್ಯ, ಕೀರ್ತಿಯನ್ನು ನಾಶ ಮಾಡುವುವು. ಅವು ಒಬ್ಬನನ್ನು ನಾಸ್ತಿಕನಾಗಿ ಮಾಡುವುವು. ರಥಗಳು, ಚಿನ್ನ, ನೃತ್ಯ, ಸಂಗೀತ, ಸುಂದರಿಯರು ಎಲ್ಲವೂ ನಿನಗೇ ಇರಲಿ. ಧರ್ಮರಾಜ ಆತ್ಮನ ನಿಜವಾದ ಸ್ವಭಾವವನ್ನು, ಅವನ ಅಮೃತತ್ವದ ವರವನ್ನು ಮಾತ್ರ ಕರುಣಿಸು."

ಯಮದೇವನು ನಚಿಕೇತಸ್‌ನ ಪ್ರಾರ್ಥನೆಗೆ ಮನಸೋತನು ಮತ್ತು ಅವನು ಬ್ರಹ್ಮವಿದ್ಯೆಗೆ ಅರ್ಹನೆಂಬುದನ್ನು ತಿಳಿದನು. ಅವನಿಗೆ ಆತ್ಮಜ್ಞಾನ ಅಥವಾ ಬ್ರಹ್ಮವಿದ್ಯೆಯನ್ನುಪದೇಶಿಸಿದನು.

ಆರುಣಿಯ ಮೊಮ್ಮಗನಾದ ಶ್ವೇತಕೇತು ಆರುಣೇಯನು ಪಾಂಚಾಲನ ಸಭೆಗೆ ಬಂದನು. ಪಾಂಚಾಲರ ದೊರೆ ಪ್ರವಾಹಣ ಜೈವಲಿಯು ಅವನನ್ನು ಪ್ರಶ್ನಿಸಿದನು, "ಮಗು ನಿಮ್ಮ ತಂದೆಯು ನಿನಗೆ ಉಪದೇಶಿಸಿರುವನೇ?" "ಹೌದು ಉಪದೇಶಿಸಿದ್ದಾರೆ" ಎಂದು ಉತ್ತರ ಕೊಟ್ಟನು. "ಮನುಷ್ಯರು ಇಲ್ಲಿಂದ ಎಲ್ಲಿಗೆ ಹೋಗುವರು ಎಂಬುದು ನಿನಗೆ ಗೊತ್ತಿದೆಯೆ?" "ಇಲ್ಲ ಸ್ವಾಮಿ" ಎಂದು ಉತ್ತರ ಕೊಟ್ಟನು. "ದೇವತೆಗಳು ಮತ್ತು ಪಿತೃಗಳ ಮಾರ್ಗವು ಎಲ್ಲಿ ಬೇರೆಯಾಗುವುದೆಂಬುದು ತಿಳಿದಿದೆಯೇ?" "ಇಲ್ಲ ಸ್ವಾಮಿ." "ಆ ಪಿತೃಗಳ ಲೋಕವು ಏಕೆ ಪೂರ್ಣವಾಗುವುದೆಂಬುದನ್ನು ಹೇಳ ಬಲ್ಲೆಯಾ?" "ಇಲ್ಲ ಸ್ವಾಮಿ." ಎಂದು ಉತ್ತರಕೊಟ್ಟನು. "ಹಾಗಾದರೆ ನಿನಗೆ ಉಪದೇಶವಾಗಿದೆಯೆಂದು ಹೇಗೆ ಹೇಳಿದೆ? ಈ ವಿಷಯಗಳನ್ನು ತಿಳಿಯದವನು ತನಗೆ ಉಪದೇಶವಾಗಿದೆಯೆಂದು ಹೇಗೆ ಹೇಳಬಲ್ಲನು?" ಆಗ ಆ ಹುಡುಗನು ಚಿಂತಾಕ್ರಾಂತನಾಗಿ ತಂದೆಯ ಬಳಿಗೆ ಬಂದು "ನೀನು ನನಗೆ ಹೇಳಿಕೊಡದಿದ್ದರೂ ಉಪದೇಶಿಸಿರುವೆನೆಂದು ಹೇಳಿದೆ. ಆ ರಾಜನು ನನಗೆ ಐದು ಪ್ರಶ್ನೆಗಳನ್ನು ಹಾಕಿದನು. ನಾನು ಒಂದಕ್ಕೂ ಉತ್ತರ ಹೇಳಲಾಗಲಿಲ್ಲ." ತಂದೆಯು ಹೇಳಿದನು "ನನಗೆ ಗೊತ್ತಿದ್ದರೆ ನಾನು ಇವುಗಳನ್ನು ನಿನಗೆ ಏಕೆ ಹೇಳುತ್ತಿರಲಿಲ್ಲ?"

ನಂತರ ಗೌತಮನು ರಾಜನ ಅರಮನೆಗೆ ಹೋದನು. ಕೂಡಲೇ ರಾಜನು ಅವನಿಗೆ ಸನ್ಮಾನವನ್ನು ಮಾಡಿದನು. ಬೆಳಿಗ್ಗೆ ರಾಜರ ಸಭೆಯನ್ನು ಪ್ರವೇಶಿಸಿದನು. ದೊರೆಯು ಅವನನ್ನು ಕುರಿತು "ಪೂಜ್ಯ ಗೌತಮ ಲೌಕಿಕರಿಗೆ ಬೇಕಾಗುವಂತಹ ಒಂದು ವರವನ್ನು ಕೇಳು." ಗೌತಮನು "ಮನುಷ್ಯರಿಗೆ ಬೇಕಾದ ವಸ್ತುಗಳು ನಿನ್ನ ಬಳಿಯೇ ಇರಲಿ. ನನ್ನ ಪುತ್ರನಿಗೆ ಕೇಳಿದ ಪ್ರಶ್ನೆಗಳಿಗೆ ಮೊದಲು ಉತ್ತರ ಕೊಡು" ಎಂದು ಕೇಳಿದನು.

ರಾಜನಿಗೆ ಯೋಚನೆ ಹುಟ್ಟಿತು. "ಇಲ್ಲಿ ಕೆಲವು ಕಾಲ ಇರು" ಎಂದನು. ಆನಂತರ "ಗೌತಮಾ ಈ ಜ್ಞಾನವು ಈವರೆಗೂ ಬ್ರಾಹ್ಮಣರ ಬಳಿಗೆ ಹೋಗಲಿಲ್ಲವು. ಆದ್ದರಿಂದ ಅದು ಕ್ಷತ್ರಿಯರಲ್ಲಿ ಮಾತ್ರವೇ ಇದ್ದಿತು" ಎಂದು ಹೇಳಿದನು.

ಜನಕನು ಯಾಜ್ಞವಲ್ಕ್ಯನನ್ನು ಕೇಳಿದನು : "ಈ ಪುರುಷನು ಯಾವ ಬೆಳಕಿನವನು ?" ಅವನು ಹೇಳಿದನು "ದೊರೆಗಳ ದೊರೆಯೇ ಆದಿತ್ಯನ ಬೆಳಕಿನವನು. ಆದಿತ್ಯನ ಬೆಳಕಿನಿಂದ ಮನುಷ್ಯನು ಕುಳಿತು ಕೊಳ್ಳುವನು, ಸುತ್ತಾಡುವನು, ಕರ್ಮಗಳನ್ನು ಮಾಡುವನು ಮತ್ತು ಮನೆಗೆ ಹಿಂತಿರುಗುವನು."

"ಓ ಯಾಜ್ಞವಲ್ಕ್ಯ ಅದು ಹಾಗೆಯೇ. ಆದಿತ್ಯನು ಮುಳುಗಿರುವಾಗ ಯಾವ ಬೆಳಕಿನಿಂದ ಬೆಳಗುವನು ?" "ಚಂದ್ರನು ಅವನ ಬೆಳಕು. ಚಂದ್ರನ ಬೆಳಕಿನಿಂದ ಅವನು ಎಲ್ಲವನ್ನೂ ಮಾಡುವನು" ಎಂದು ಉತ್ತರ ಕೊಟ್ಟನು. "ಅದೂ ಹಾಗೆಯೇ, ಯಾಜ್ಞವಲ್ಕ್ಯ."

"ಓ ಯಾಜ್ಞವಲ್ಕ್ಯ, ಸೂರ್ಯ ಚಂದ್ರರಿಬ್ಬರೂ ಮುಳುಗಿದಾಗ ಇವನು ಯಾವ ಬೆಳಕಿನಲ್ಲಿರುವನು ?" ಎಂದು ಮತ್ತೆ ಜನಕನು ಕೇಳಿದನು. "ಈಗ ಅಗ್ನಿಯೇ ಬೆಳಕು. ಈಗ ಅಗ್ನಿಯ ಬೆಳಕಿನಿಂದ ಎಲ್ಲ ವ್ಯವಹಾರ ವನ್ನೂ ನಡೆಸುವನು." "ಅದೂ ಸಹ ಹಾಗೆಯೇ ಓ ಯಾಜ್ಞವಲ್ಕ್ಯ" ಎಂದು ಸಮಾಧಾನಪಟ್ಟನು.

"ಎಲೈ ಯಾಜ್ಞವಲ್ಕ್ಯನೇ, ಸೂರ್ಯ, ಚಂದ್ರ ಮತ್ತು ಅಗ್ನಿಯು ವಿಶ್ರಾಂತಿಯಲ್ಲಿರುವಾಗ ಈ ಪುರುಷನು ಯಾವ ಬೆಳಕಿನವನು ?" "ಈಗ ವಾಕ್ಕೇ ಬೆಳಕು. ಅವನು ವಾಕ್ಕಿನಿಂದಲೇ ಎಲ್ಲವನ್ನೂ ಮಾಡುವನು.

ಯಾವಾಗ ಓ ದೊರೆಯೇ, ತನ್ನ ಕೈಗಳು ಕಾಣುವುದಿಲ್ಲವೊ ಆಗ ಅವನ ಮಾತುಗಳು ಹೊರಡುವುವು" ಅದೂ ಹಾಗೆಯೇ ಓ ಯಾಜ್ಞವಲ್ಕ್ಯ.

"ಓ ಯಾಜ್ಞವಲ್ಕ್ಯ ಸೂರ್ಯ, ಚಂದ್ರ, ಅಗ್ನಿ ಮತ್ತು ವಾಕ್ ಸಹ ವಿರಮಿಸಿದಾಗ ಈ ಪುರುಷನು ಯಾವ ಬೆಳಕಿನವನು ?" "ಆತ್ಮನೇ ಅವನ ಬೆಳಕು. ಆತ್ಮನ ಬೆಳಕಿನಿಂದ ಕುಳಿತುಕೊಳ್ಳುವನು, ಸಂಚರಿಸುವನು, ಕರ್ಮಗಳನ್ನು ಮಾಡುವನು ಮತ್ತು ಹಿಂತಿರುಗುವನು." "ಯಾವ ಆತ್ಮನು ?" ಎಂದು ಮತ್ತೆ ಪ್ರಶ್ನಿಸಲು ಯಾಜ್ಞವಲ್ಕ್ಯನು ಹೀಗೆ ಹೇಳಿದನು : "ಇಂದ್ರಿಯಗಳಲ್ಲಿರುವ ಆತ್ಮಜ್ಞಾನವು ಹೃದಯದಲ್ಲಿರುವುದು ಮತ್ತು ಪುರುಷನೆಂದು ಕರೆಯಲ್ಪಡುವುದೇ ಆ ಆತ್ಮವು."

---

# ೭. ರಾಜನೀತಿಯಲ್ಲಿ ಶಾಂತಿ

ರಾಜಧರ್ಮ ಅಥವಾ ರಾಜನೀತಿಯನ್ನು ಮಹಾಭಾರತ, ಮನು ಮತ್ತು ಯಾಜ್ಞವಲ್ಕ್ಯ ಸ್ಮೃತಿಗಳಲ್ಲಿ ನೋಡಬಹುದು. ಧರ್ಮ, ನೀತಿ ಮತ್ತು ದೇವರು ಒಂದೇ ಕಡೆ ಇರುವುದು. ರಾಜನ ಧರ್ಮವು ನಿಜವಾದ ನೀತಿಯನ್ನು ಒಳಗೊಳ್ಳದಿದ್ದರೆ, ಆಧ್ಯಾತ್ಮಿಕ ಆಧಾರವು ಇಲ್ಲದಿದ್ದರೆ, ಅದು ನಿಸ್ಸಂಶಯವಾಗಿ ವ್ಯರ್ಥವಾಗುವುದು. ಸಮಾಜ ಮತ್ತು ರಾಜನೀತಿಯ ತಳಹದಿಯು ದೇವರು. ಆದ್ದರಿಂದ ಮತ ಮತ್ತು ನೀತಿಗಳಿಂದ ರಾಜ್ಯಧರ್ಮವನ್ನು ಪ್ರತ್ಯೇಕಿಸು ವಂತೆಯೇ ಇಲ್ಲ. ಶುಷ್ಕ ರಾಜನೀತಿಯು ಭ್ರಷ್ಟಾಚಾರ ಮತ್ತು ಅನಾಹುತಗಳಲ್ಲಿ ಪರ್ಯವಸಾನವಾಗುವುದು. ರಾಜನೀತಿಜ್ಞನ ಗುರಿಯು ದೇಶಸೇವೆ ಮತ್ತು ಜಗತ್ತಿನ ಮೂಲಕವಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದಾಗಿರಬೇಕು.

ಭಾರತ ಅಥವಾ ಯಾವುದೇ ರಾಷ್ಟ್ರವು ರಾಜಕೀಯ ಚಟುವಟಿಕೆಗಳು ಮತ್ತು ಆಧ್ಯಾತ್ಮಿಕ ಅನುಷ್ಠಾನಗಳು, ಜೊತೆಗೂಡಿ ನಡೆದರೆ ಸ್ವರಾಜ್ಯವನ್ನು ಅನುಭವಿಸಲು ಸಾಧ್ಯವು. ಸೇವಕರು ಪ್ರತಿಯೊಂದು ಕರ್ಮವನ್ನೂ ಯೋಗ ವೆಂದು ತಿಳಿಯಬೇಕು ಮತ್ತು ಅವುಗಳನ್ನು ಭಗವಂತನಿಗೆ ಅರ್ಪಿಸಬೇಕು.

ಅವರು ಸ್ವಾರ್ಥ, ಅಹಂಕಾರ, ಮಮತ್ವ, ಲೋಭ, ಕಾಮ ಮುಂತಾದವು ಗಳನ್ನು ಬಿಡಬೇಕು ಮತ್ತು ದಿವ್ಯಗುಣಗಳಾದ ಪರಿಶುದ್ಧತೆ, ಅಹಿಂಸೆ, ಸತ್ಯಸಂಧತೆ, ತಾಳ್ಮೆ, ಆತ್ಮಸಂಯಮ, ವಿಶ್ವಪ್ರೇಮ, ಹೃದಯ ವೈಶಾಲ್ಯ ವನ್ನೂ, ವಿಶಾಲ ಸಹನೆ ಮತ್ತು ಭಗವಂತನಲ್ಲಿ ದೃಢವಾದ ನಂಬಿಕೆಯನ್ನೂ ಹೊಂದಿರಬೇಕು. ಅವರಿಗೆ ತತ್ವಶಾಸ್ತ್ರ, ಕರ್ಮಯೋಗದ ಸಿದ್ಧಾಂತಗಳು ಚೆನ್ನಾಗಿ ತಿಳಿದಿರಬೇಕು. ಕರ್ಮಫಲಾಸಕ್ತಿಯಿಲ್ಲದೆ ದುಡಿಯಬೇಕು. ಮತ್ತು ನಾನು ಮಾಡುವವನು, ಇವುಗಳಿಂದ ನಾನು ಲಾಭ ಪಡೆಯುವೆನು ಎಂಬ ಮನೋಭಾವವಿರಕೂಡದು. ಅವರು ತಮ್ಮೆಲ್ಲಾ ಕರ್ಮಗಳನ್ನೂ ಮತ್ತು ಅದರ ಫಲಗಳನ್ನೂ ಈಶ್ವರಾರ್ಪಣ ಬುದ್ಧಿಯಿಂದ ಭಗವಂತನಿಗೆ ಅರ್ಪಿಸಬೇಕು.

ಕೊಲೆಪಾತಕನನ್ನು ನೇಣು ಹಾಕುವ ಪದ್ಧತಿಯು ಒಳ್ಳೆಯದಲ್ಲವು. ಅವನು ವಿದ್ಯೆಯನ್ನು ಕಲಿತು ಮತ್ತು ತಿದ್ದಿಕೊಂಡು ಬಾಳುವ ಅವಕಾಶವನ್ನು ನಾವು ಕಸಿದುಕೊಳ್ಳುವೆವು. ಅವನನ್ನು ಗಲ್ಲಿಗೇರಿಸಬಾರದು. ಆದರೆ ಸರಿಯಾಗಿ ವಿದ್ಯೆಯನ್ನು ಕೊಡಬೇಕು.

ಹೆರಿಗೆಯ ಮುನ್ನ ಎಷ್ಟು ಕಠಿಣವಾದ ಯಾತನೆಯಿರುವುದೊ ಹಾಗೆಯೇ ಜಗತ್ತಿನಲ್ಲಿ ಹೊಸ ರೀತಿಯು ಹುಟ್ಟುವ ಮುನ್ನ, ಹೊಸ ಶಿಖೆಯು ಬರುವ ಮುನ್ನ, ಹೊಸ ಸಂಸ್ಕೃತಿಯು, ಹೊಸ ನಾಗರೀಕತೆಯು ಜನಿಸುವ ಮುನ್ನ ಅತ್ಯಂತ ಯಾತನೆಯಿರುವುದು.

ಜನರು ಬಹಳ ಕೋಪಗೊಂಡಾಗ ಅವರಿಗೆ ಒಳ್ಳೆಯದರ, ಮತ್ತು ಕೆಟ್ಟದರ ಪರಿವೆ ಇರುವುದಿಲ್ಲ. ಅವರು ತಮ್ಮ ವಿವೇಕಶಕ್ತಿಯನ್ನು ಕಳೆದು ಕೊಳ್ಳುವರು ಮತ್ತು ತಮ್ಮ ಪಶುಶಕ್ತಿಯನ್ನು ಪ್ರಯೋಗ ಮಾಡುವರು. ಅವರು ನ್ಯಾಯದ ಕಣ್ಣನ್ನು ಕಳೆದುಕೊಳ್ಳುವರು.

ಓ ಶಾಂತಿಯ ಮಿತ್ರರೆ ! ಏಳಿ ! ಎಚ್ಚರಿಕೆಯಿಂದಿರಿ ! ಅದ್ಭುತವಾದ ಶಕ್ತಿಯಿಂದ ದುಡಿಯಿರಿ. ಶಾಂತಿಯನ್ನು ಎಲ್ಲೆಲ್ಲಿಯೂ ಹರಡಿರಿ. ನಿಮ್ಮ ಪ್ರಯತ್ನದಲ್ಲಿ ಯಾವುದನ್ನೂ ಬಿಡದಿರಿ. ಸ್ವರ್ಗ, ಮರ್ತ್ಯಗಳನ್ನಾದರೂ ಚಲಿಸಿ ಶಾಂತಿಯನ್ನು ಸ್ಥಾಪಿಸಿರಿ. ಶಾಂತಿಯನ್ನು ಚಿಂತಿಸಿ. ಶಾಂತಿಯನ್ನು ಕುರಿತು ಮಾತನಾಡಿ. ಶಾಂತಿಗಾಗಿ ದುಡಿಯಿರಿ. ಶಾಂತಿಗಾಗಿ ಹೋರಾಡಿ. ಯಾರು ಶಾಂತಿಸ್ಥಾಪಕರೋ ಅವರು ಭಗವಂತನ ಸಾಮ್ರಾಜ್ಯವನ್ನು

ಪ್ರವೇಶಿಸುವರು. ಭೂಮಿಯಲ್ಲಿ ಶಾಂತಿಯಿದ್ದರೆ ಸಂತರು ತಮ್ಮ ಆಧ್ಯಾತ್ಮಿಕ ಉಪದೇಶಗಳನ್ನು ಪ್ರಚಾರ ಮಾಡಬಲ್ಲರು ಮತ್ತು ಸಾಧಕರೂ ಯೋಗವನ್ನು ಅನುಷ್ಠಾನ ಮಾಡಬಲ್ಲರು.

---

## ೮. ಸಾಧಕರಿಗೆ ಸೂಚನೆಗಳು

ನೀವು ಅನೇಕ ಆಧ್ಯಾತ್ಮಿಕ ಪಾಠಗಳನ್ನು ಮಗುವಿನಿಂದಲೂ ಕಲಿಯುತ್ತೀರಿ. ನಿಮ್ಮೆಲ್ಲರಿಗೂ ಕೊಡುವುದಕ್ಕಾಗಿ ಮಗುವೂ ಒಂದು ಸಂದೇಶವನ್ನು ಹೊಂದಿದೆ. ಮಗುವಿನಲ್ಲಿ ಉಪನಿಷತ್ತುಗಳ ಅನುಭವಗಳು ಮತ್ತು ಋಷಿಗಳ, ಜ್ಞಾನಿಗಳ, ಯೋಗಿಗಳ ಸ್ಫೂರ್ತಿಯುತವಾದ ಅನುಭವಗಳೂ ಕಂಡುಬರುವುವು. ಮಗುವಿನಲ್ಲಿ ಒಂದು ಹೊಸ ಧರ್ಮದ ಅನುಷ್ಠಾನವನ್ನು ಕಾಣಬಲ್ಲೆ. ಆರ್ಷೇಯ ಸಂದೇಶಗಳಾದ ಶಾಂತಿ, ಸಮರಸತೆ, ಸ್ವಾತಂತ್ರ್ಯ ಮತ್ತು ಆನಂದವನ್ನು ಮಗುವು ನೀಡುವುದು. ಮಗುವನ್ನು ಎಚ್ಚರಿಕೆಯಿಂದ ಗಮನಿಸಿ. ಅದರ ಆಧ್ಯಾತ್ಮ ಪಾಠಗಳನ್ನು ಕಲಿತು ಬುದ್ಧಿವಂತರಾಗಿ. ಆಗ ತಾನೆ ಹುಟ್ಟಿದ ಶಿಶುವು ಸದಾ ಸಮಾಧಿಯಲ್ಲಿ ಅಥವಾ ಭಗವಂತನೊಡನೆ ಆತ್ಮಾನಂದಸ್ಥಿತಿಯಲ್ಲಿರುವುದು. ಅವನ ಕಣ್ಣುಗಳು ಎಷ್ಟು ನೆಟ್ಟಗಿವೆ. ಅವನು ಬ್ರಹ್ಮವೇ ಆಗಿರುವನು. ಅವನು ತನ್ನ ತಾಯಿ ತಂದೆಗಳನ್ನು ದೃಷ್ಟಿಸಿ ನೋಡಿದಾಗಲೇ, ಅವರನ್ನು ಗುರ್ತಿಸಿದಾಗಲೇ ಮತ್ತು ನಕ್ಕಾಗಲೇ ಮಾಯೆಯು ಅವನಲ್ಲಿ ಪ್ರವೇಶಿಸಿದಳು.

ಪವಿತ್ರ ಕರ್ಮಗಳನ್ನು ಆಚರಿಸುವುದರಿಂದ, ಅದನ್ನು ವಿಸ್ತಾರವಾಗಿ ಪ್ರಚಾರ ಮಾಡುವುದರಿಂದ, ಪಶ್ಚಾತ್ತಾಪದಿಂದ, ಧರ್ಮದಿಂದ, ತಪಸ್ಸುಗಳಿಂದ, ಪವಿತ್ರ ತೀರ್ಥಕ್ಷೇತ್ರಗಳ ಯಾತ್ರೆಯಿಂದ, ಸರ್ವವಸ್ತುಗಳ ತ್ಯಾಗದಿಂದ, ನಿರಂತರ ಧ್ಯಾನದಿಂದ, ಶಾಸ್ತ್ರಗಳ ಅಧ್ಯಯನದಿಂದ ಪಾಪವು ತೊಳೆಯಲ್ಪಡುವುದು. ಯಾರು ಸರ್ವಸಂಗ ಪರಿತ್ಯಾಗ ಮಾಡಿರುವನೊ ಅವನು ಹೊಸ ಹೊಸ ಪಾಪಗಳನ್ನು ಮಾಡಲಾರನು.

"ನಮಗಿಂತಲೂ ಶ್ರೇಷ್ಠವಾದ ಬ್ರಾಹ್ಮಣರನ್ನು ಆಸನ, ಪಾದ್ಯ, ಅರ್ಘ್ಯ ಮೊದಲಾದವುಗಳಿಂದ ಸತ್ಕರಿಸಬೇಕು. ಶ್ರದ್ಧೆಯಿಂದ ಕೊಡು ಅಶ್ರದ್ಧೆಯಿಂದ ಕೊಡಬೇಡ. ಸಂತೋಷ, ವಿನಯ, ಭಯ ಮತ್ತು ದಯೆಯಿಂದ ದಾನಮಾಡು. ಕರ್ಮ ಅಥವ ನಡತೆಯ ಬಗ್ಗೆ ಯಾವುದಾದರೂ ಸಂಶಯ ವಿದ್ದರೆ ಕೂಡಲೇ ನೀನೇ ಒಳ್ಳೆಯ ನ್ಯಾಯ ನಿಷ್ಠರಾಗಿ ತಮ್ಮನ್ನು ನೇಮಿಸಲಿ, ಅಥವ ನೇಮಿಸದಿರಲಿ, ಎಲ್ಲಿಯವರೆಗೂ ಅವರು ಕ್ರೂರಿಗಳಾಗಿಲ್ಲವೋ, ಆದರೆ ಕರ್ತವ್ಯ ಪರಿಪಾಲಕರೋ ಅಂತಹ ಬ್ರಾಹ್ಮಣರಂತೆ ನಡೆದುಕೊ. ನಂತರ ಪಾಪದಿಂದ ನಿಂದಿಸಲ್ಪಡುವವರ ಬಗ್ಗೆ, ತಮ್ಮನ್ನು ನೇಮಿಸಲಿ, ನೇಮಿಸದಿರಲಿ, ತಾವು ಮಾತ್ರ ದುಷ್ಟರಾಗದೆ, ಕರ್ತವ್ಯ ಪರಾಯಣರಾಗಿ ನ್ಯಾಯ ನೀತಿ ಯಿಂದಿರುವರೋ ಆ ಬ್ರಾಹ್ಮಣರಂತೆ ನೀನು ನಡೆದುಕೊ. ಇದೇ ನಿಯಮವು. ಇದೇ ಉಪದೇಶವು. ಇದೇ ವೇದಗಳ ಸಾರವು. ಇದೇ ಆಜ್ಞೆಯು. ಈ ಆದೇಶವೇ ಅನುಸರಿಸಲ್ಪಡಬೇಕು—ಇದನ್ನೇ ಅನುಸರಿಸಬೇಕು." ಇದೇ ನಿಜ ವಾದ ವಿದ್ಯಾಭ್ಯಾಸವು.

ಒಳ್ಳೆಯ (ಬಹಳ) ಆರೋಗ್ಯವಂತನಾದ ಯುವಕನು ಮಧುರವಾದ ಗಾಢ ನಿದ್ದೆಯನ್ನು ಒಂದು ಗಂಟೆಗಿಂತ ಹೆಚ್ಚು ಮಾಡಲಾರನು. ಪಾಶ್ಚಾತ್ಯ ಮನಶ್ಶಾಸ್ತ್ರಜ್ಞರೂ ಹೀಗೆಯೇ ಅಭಿಪ್ರಾಯ ಪಡುವರು. ವಯಸ್ಕನಿಗೆ ಆರು ಗಂಟೆಗಳಷ್ಟು ನಿದ್ದೆಯು ಸಾಕಾಗುವುದು. ರಾತ್ರಿ ೧೦ ಘಂಟೆಗೆ ಮಲಗಿ ಬೆಳಿಗ್ಗೆ ೪ ಘಂಟೆಗೆ ಏಳಿ.

ಎರಡು ವಸ್ತುಗಳನ್ನು ಹೋಲಿಸಿದರೆ ಅದು ಒಂದು ಗೊತ್ತಾದ ವಿಷಯ ದಲ್ಲಿ ಅಥವ ಒಂದು ಸಾಮಾನ್ಯವಾದ ರೂಪಿನಲ್ಲಿ ಸಮಾನತೆ ಹೊಂದಿರ ಬಹುದು. ದೃಷ್ಟಾಂತಗಳು ಒಂದು ವಿಷಯವನ್ನು ಮಾತ್ರ ತಿಳಿಸು ವುವು. ಎಲ್ಲ ಭಾಗಗಳಲ್ಲೂ ಸಂಪೂರ್ಣವಾದ ಹೋಲಿಕೆಯಿರುವುದು ದೊರೆಯುವುದೇ ಇಲ್ಲ. ಎರಡರಲ್ಲಿ ಸರ್ವಸಮಾನತೆಯಂತೂ ದೊರೆಯುವುದೇ ಇಲ್ಲ.

ನಮ್ಮಲ್ಲಿ ಭಿನ್ನಾಭಿಪ್ರಾಯಗಳಿವೆಯೆಂದು ಅಥವ ಭಿನ್ನ ತತ್ವಗಳಿವೆ ಯೆಂದು ಅಥವ ಬೇರೆಯಾದ ಆದರ್ಶವನ್ನು ಹೊಂದಿರುವೆವೆಂದು ಅಥವ ಭಿನ್ನಮತದವರೆಂದು ನಾವು ಪರಸ್ಪರ ಶತ್ರುಗಳಾಗಿರಬೇಕಾಗಿಲ್ಲ.

ನೀವು ಕಾಗದಗಳನ್ನು ಬರೆಯುವಾಗ ಸ್ಫುಟವಾಗಿ ಸಾಕಷ್ಟು ಅವಕಾಶ ಗಳನ್ನು ಬಿಟ್ಟು ಸಾಲುಸಾಲಾಗಿ ಬರೆಯಿರಿ. ಲೋಭಿಗಳಾಗಬೇಡಿ. ನೀವು ಅಸ್ಪಷ್ಟವಾಗಿ ಬರೆದರೆ, ಸೊಟ್ಟಪಟ್ಟಾಗಿ ಕೊರೆದರೆ, ಪೋಸ್ಟ್ ಕವರ್ ಮೇಲೆ ಬರೆಯಬೇಕಾದ್ದನ್ನು ಕಾರ್ಡಿನ ಮೇಲೆ ಬರೆದರೆ ನೀವು ದುಷ್ಕರ್ಮವನ್ನು ಮಾಡಿ ದಂತೆ. ಅದರಿಂದ ಓದುವವರ ಕಣ್ಣಿಗೆ ಆಯಾಸವಾಗುವುದು, ಮನಸ್ಸಿಗೆ ಗೊಂದಲವಾಗುವುದು. ಅವರ ಅಮೂಲ್ಯವಾದ ಹೆಚ್ಚು ಕಾಲವನ್ನು ಇದಕ್ಕೆ ವೆಚ್ಚಮಾಡಬೇಕಾಗುವುದು.

ನೀನು ಸದಾ ದುಷ್ಟಶಕ್ತಿಯನ್ನೇ ಚಿಂತಿಸುತ್ತಿದ್ದರೆ ನೀನೂ ಸಹ ಒಂದು ಭೂತವಾಗುವೆ. ಏಕೆಂದರೆ ನಿರ್ವಿಕಲ್ಪದ ಸಿದ್ಧಾಂತದಂತೆ ಅಥವ ಸಾಯುವ ಮೊದಲು ಬರುವ ಕೊನೆಯ ಚಿಂತೆಯಂತೆ ಪುನರ್ಜನ್ಮವುಂಟಾಗು ವುದು. **"ಅಂತಿಮ ಭಾವನೆಯು ಬಾಳಿನಲ್ಲಿ ಉದ್ದಕ್ಕೂ ಯಾವು ದನ್ನು ಬಲವಾಗಿ ಚಿಂತಿಸಿದ್ದೇವೆಯೊ ಅದೇ ಬರುವುದು."** ಸದಾ ಭಗವಂತ ಅಥವಾ ಬ್ರಹ್ಮನನ್ನು ಚಿಂತಿಸಿರಿ, ನಿಮ್ಮ ಅಂತಿಮ ಆಲೋಚನೆಯು ಭಗವಂತನು ಅಥವ ಬ್ರಹ್ಮನೇ ಆಗಿದ್ದು ನೀವು ಮುಕ್ತಿಯನ್ನು ಪಡೆಯುವಿರಿ.

ಭೂತಗಣಗಳೊಡನೆ ಸಂಬಂಧವೂ ಮತ್ತು ಅವುಗಳ ಸಂದೇಶಗಳೂ, ಈ ನಮ್ಮ ಬದುಕಿಗೆ ಮೀರಿದ ಜೀವನವೂ, ಇರುವುದು ಸತ್ಯವೆಂಬುದು ಸಿದ್ಧ ವಾಯಿತು. ಆದರೆ ಈ ಭೂತ ಪಿಶಾಚಿಗಳೊಡನೆ ಇಟ್ಟುಕೊಂಡ ಸಂಬಂಧ ದಿಂದ ನಿಮಗೆ ಹೆಚ್ಚಿನ ಲಾಭವಾಗದು. ಅದಕ್ಕಿಂತಲೂ ನೀವು ಪ್ರಾರ್ಥನೆ, ಸಂಕೀರ್ತನೆ ಮಾಡುವುದರಿಂದ, ಶ್ರಾದ್ಧ ಮುಂತಾದ ಸತ್ಕರ್ಮಗಳಿಂದ ಆ ಭೂತ ಪಿಶಾಚಿಗಳಿಗೆ ಶಾಂತಿಯನ್ನೂ, ಸದ್ಗತಿಯನ್ನೂ ಉಂಟುಮಾಡಬಹುದು. ನೀವು ಆ ಭೂತಶಕ್ತಿಗಳೊಡನೆ ಸಂಪರ್ಕವನ್ನು ಬೆಳೆಸಿದರೆ ಅವುಗಳನ್ನು ನೀವು ಈ ಭೂಮಿಗೆ ಬಂಧಿಸಿದಂತಾಯಿತು. ಅವು ನಿಮ್ಮಲ್ಲಿ ವ್ಯಾಮೋಹ ಬೆಳೆಸುವಂತೆ ನೀವು ಅವುಗಳಲ್ಲಿ ವ್ಯಾಮೋಹವನ್ನು ಹೊಂದುವಿರಿ. ಅದಕ್ಕಿಂತಲೂ ಆ ಭೂತಶಕ್ತಿಯ ಆಲೋಚನೆಗಳು ನಿಮ್ಮನ್ನು ಕನಸಿನಲ್ಲೂ ಕಾಡಿಸುವುವು. ಆ ದುಷ್ಟ ಭೂತಗಳ ಸಂದೇಶಗಳು ಯಾವಾಗಲೂ ನಿಜವಾಗುವುದೂ ಇಲ್ಲ. ನಿಮ್ಮ ಆತ್ಮಸಾಕ್ಷಾತ್ಕಾರಕ್ಕಾಗಿ ನೀವು ಹೆಚ್ಚು ಪ್ರಯತ್ನ ಮಾಡಿ. ಜಗತ್ತೆಲ್ಲವೂ ಅದರಿಂದ ಸಂತೋಷಗೊಳ್ಳುವುದು. ನೀವು ಜಗತ್ತಿಗೂ ಉಪಕಾರಮಾಡು

ವಂತಾಗುವುದು. ನಿಮ್ಮ ಪೂರ್ವಿಕರು ಶಾಂತಿಯನ್ನು ಹೊಂದುವರು. ಯಾರು ತನ್ನಷ್ಟಕ್ಕೇ ಪರಿಶುದ್ಧನಾಗಿರುವನೊ ಅವನು ಪ್ರಪಂಚವನ್ನೆಲ್ಲಾ ಮತ್ತು ತನ್ನ ಪಿತೃದೇವತೆಗಳನ್ನೆಲ್ಲಾ ಸಂತೋಷಗೊಳಿಸುವನು. ಶಂಖು, ಕಪ್ಪೆಚಿಪ್ಪುಗಳನ್ನು ಹುಡುಕುತ್ತ ಹೋಗದಿರಿ. ನಿಮ್ಮ ಅಂತರ್ಯದಲ್ಲಿರುವ ಆತ್ಮವೆಂಬ ಅಮೂಲ್ಯವಾದ ಮುತ್ತನ್ನು ಹಿಡಿದುಕೊಳ್ಳಿ.

ವಸಂತವು ತನ್ನ ಸರ್ವಸೌಂದರ್ಯಗಳೊಡನೆ ಬಂದಿರುವುದು. ಜೀವನದ ವಸಂತವನ್ನು ಅನುಭವಿಸಿರಿ. ನಿಮ್ಮ ಜೀವನದಲ್ಲಿ ವಸಂತನು ವಾಸಿಸಲಿ. ಭಗವಂತನೊಡನೆ ಮಧುರ ಮಿಲನ, ಫಲ ಪುಷ್ಪಗಳೆಂಬ ಆತ್ಮ ಜ್ಞಾನದೊಡನೆ ಭಕ್ತಿ, ಬ್ರಹ್ಮಜ್ಞಾನ, ಮುಕ್ತಿ, ಅಮೃತತ್ವ, ಶಾಂತಿ, ಆನಂದ ಗಳೆಂಬ ಉಪಚಾರ ವಸ್ತುಗಳೊಡನೆ ಭಗವಂತನೊಡನೆ ಮಧುರ ಮಿಲನದ ಜೀವನವು ಉಂಟಾಗಲಿ.

ಹಳೆಯ ವಸ್ತುಗಳನ್ನು ಜನರು ಎಸೆಯುವುದಿಲ್ಲ. ಹಳೆಯ ಸಕ್ಕರೆ, ಹಳೆಯ ಅಕ್ಕಿ, ಹಳೆಯ ಉಪ್ಪಿನಕಾಯಿ, ಹಳೆಯ ಕಲ್ಲುಸಕ್ಕರೆ, ಹಳೆಯ ತುಪ್ಪವನ್ನು ಐವತ್ತು ವರ್ಷಗಳಾದರೂ ಇಟ್ಟಿರುವರು. ಏಕೆಂದರೆ ಅವು ಬಹಳ ಶಕ್ತಿವರ್ಧಕವು ಮತ್ತು ಅತ್ಯಮೂಲ್ಯವಾದುವು. ಅವು ಅನೇಕ ರೋಗಗಳನ್ನು ವಾಸಿಮಾಡಬಲ್ಲವು. ಆದ್ದರಿಂದ ಜನರು ಅವುಗಳನ್ನು ತುಂಬಾ ಜೋಪಾನಮಾಡುವರು. ಹಾಗೆಯೇ ವೇದಾಂತ ದೃಷ್ಟಿಯುಳ್ಳ ಯಜಮಾನನಿಗೆ ವೃದ್ಧ ಪತ್ನಿಯಲ್ಲಿ ಬಹಳ ಪ್ರೀತಿ. ವಿವೇಕಿಯಾದ ಯಜ ಮಾನನಿಗೆ ವೃದ್ಧ ಪ್ರಾಮಾಣಿಕ ಸೇವಕನನ್ನು ಕಂಡರೆ ತುಂಬ ಪ್ರೇಮ. ತಿಳಿವಳಿಕೆಯುಳ್ಳವರಿಗೆ ತಮ್ಮ ಹಳೆಯ ನಿಷ್ಠಾವಂತ ಸ್ನೇಹಿತರನ್ನು ಕಂಡರೆ ಬಹಳ ಪ್ರೀತಿ.

ನೀನು ಸೂಕ್ಷ್ಮಜೀವಿಗಳಿಂದಲೂ, ಕ್ರಿಮಿಗಳಿಂದಲೂ ಸುತ್ತು ವರೆಯಲ್ಪಟ್ಟಿರುವೆ. ನಿನ್ನ ದೇಹವು ಈ ಸೂಕ್ಷ್ಮಜೀವಿಗಳಿಂದಲೇ ತುಂಬಿದೆ. ಆದರೂ ನೀನು ಬದುಕಿರುವೆ. ಇದು ಬಹಳ ವಿಚಿತ್ರವು. ಇದು ಆಶ್ಚರ್ಯ ಗಳಲ್ಲಿ ಪರಮಾಶ್ಚರ್ಯವು.

ವ್ಯಕ್ತಿತ್ವವು ಒಂಟಿತನಕ್ಕಿಂತ ಪ್ರತ್ಯೇಕವಾದುದು. ಒಂಟಿತನವನ್ನು ಬೆಳೆಸುವುದರಿಂದ ತೊಂದರೆಯೇನಿಲ್ಲ. ವೇದಾಂತ ಅಥವಾ ಜ್ಞಾನ

ಅನುಷ್ಠಾನಕ್ಕೆ ಏಕಾಂತವಾಸಿಯೇ ಅರ್ಹನು, "ಅಹಂ ಅಸ್ಮಿ—ನಾನು ಇರುವೆನು." ಇದು ಏಕಾಂತ ಭಾವವು, ತುಂಬ ಸಾತ್ವಿಕವು. ಆದರೆ ವ್ಯಕ್ತಿತ್ವವು ಅವನವನ ಮನಸ್ಸಿನ ಕಲ್ಪನೆಯು. ಅದು ರಾಜಸವು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವ್ಯಕ್ತಿತ್ವವು (personality) ಪ್ರಧಾನವಾದುದು. ಹಿಂದುವು ಅದನ್ನು ಗಣನೆಗೆ ತರುವುದಿಲ್ಲ. ಪ್ರಶಸ್ತಿಗಳು, ಬಿರುದುಗಳು, ಸ್ಥಾನಮಾನಗಳು, ಗೌರವಾದರಣೆಗಳು ಒಬ್ಬನ ವ್ಯಕ್ತಿತ್ವಕ್ಕೆ ಜೋತುಬಿದ್ದಿರುವುವು. ಪಾಶ್ಚಿಮಾತ್ಯನು ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದೆಂದರೆ ಮರಣವನ್ನಪ್ಪಿದಂತೆ. ಆದರೆ ಆ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದರಿಂದ ಹಿಂದುವಿಗೆ ಪರಮ ಸಂತೋಷವಾಗುವುದು. ಹಿಂದುವು ಅಮೃತತ್ವ ಪ್ರಾಪ್ತಿಗಾಗಿ ಈ ಅಲ್ಪವಾದ ವ್ಯಕ್ತಿತ್ವವನ್ನು ಅಳಿಸಿಹಾಕಲು ಪ್ರಯತ್ನಿಸುವನು. ವ್ಯಕ್ತಿತ್ವವು ಅಹಂಕಾರವಾಗಿರುವುದು. ಹಿಂದುವು ಅದರ ತ್ಯಾಗವನ್ನು ಸ್ವಾಗತಿಸಿ ಸನ್ಯಾಸಿಯಾಗುವನು. ಹಿಂದುವಿನ ಮನಸ್ಸಿನಲ್ಲಿ ಧಾರ್ಮಿಕ ಭಾವನೆಗಳು ಬಲವಾಗಿರುವುವು. "ತಾಗ್ಯ" ಮತ್ತು "ಸನ್ಯಾಸ" — ಈ ಶಬ್ದಗಳೇ ಪಾಶ್ಚಾತ್ಯರ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸುವುವು. ಹಿಂದುಗಳ ಮನಸ್ಸುಗಳಲ್ಲಿ "ತ್ಯಾಗ ಮಾಡಬೇಕೆಂಬುದು" ಬೇರೂರಿರುವುದು. ಪಾಶ್ಚಾತ್ಯರ ಮನಸ್ಸುಗಳಲ್ಲಿ "ಸ್ವೀಕರಿಸಬೇಕೆಂಬುದು" ರೂಢಮೂಲವಾಗಿರುವುದು.

ಮಾಯೆಯು ಅತ್ಯಂತ ವಿಚಿತ್ರವಾದುದು! ಅವಳು ಜೀವರನ್ನು ವಿಚಿತ್ರ ರೀತಿಯಲ್ಲಿ ಮೋಸಗೊಳಿಸಿ ಬಂಧಿಸುವಳು. ಅವರ ತಿಳುವಳಿಕೆಗಳನ್ನು ನಾಶಮಾಡಿ ಕಾಮ, ಲೋಭ, ಅಧಿಕಾರಗಳಿಗೆ ಗುಲಾಮರನ್ನಾಗಿ ಮಾಡುವಳು. ವೃದ್ಧ ಮಾತೆಯು ಮಗನು ಮದುವೆಯಾಗುವಂತೆ ಬಲವಂತ ಮಾಡುವಳು. ತನ್ನ ಸೊಸೆಯು ತನ್ನ ವೃದ್ಧಾಪ್ಯದಲ್ಲಿ ಚೆನ್ನಾಗಿ ಸೇವೆ ಮಾಡುವಳೆಂದೂ, ರಾತ್ರಿಯ ವೇಳೆ ಕಾಲನ್ನು ಒತ್ತುವಳೆಂದೂ, ಕಾಲಕಾಲಕ್ಕೆ ಎಲೆ, ಅಡಿಕೆ ಮತ್ತು ಟೀಯನ್ನು ಕೊಡುವಳೆಂದು ಭಾವಿಸುವಳು. ಸೊಸೆಯು ಮನೆಯನ್ನು ಪ್ರವೇಶಿಸಿದಂತೆ ಅವಳು ಮನೆಯ ಯಜಮಾನಿಯಾಗುವಳು. ಅವಳು ಮನೆಯ ಹಣದ ಪೆಟ್ಟಿಗೆಯ, ಟ್ರಂಕುಗಳ ಬೀಗದಕ್ಕೆ ಗೊಂಚಲನ್ನು ತಾನೇ ಇಟ್ಟುಕೊಳ್ಳುವಳು. ಸೊಸೆಯು ತನಗೆ ವಿಧೇಯಳಾಗಿರಬೇಕೆಂದು ಅತ್ತೆಯು

ಅಪೇಕ್ಷಿಸುವಳು. ಅವಿದ್ಯಾವಂತಳಾದ ಅತ್ತೆಯು ಬುದ್ಧಿವಂತಳಾದ ತನಗೆ ವಿಧೇಯಳಾಗಿರಬೇಕೆಂದು ಸೊಸೆಯು ಅಪೇಕ್ಷಿಸುವಳು. ಸುಸಂಸ್ಕೃತಳಾದ ಆ ಸೊಸೆಯು ತನ್ನ ಗೊಡ್ಡು ಅತ್ತೆಯು ತನ್ನ ಮಾತುಗಳಂತೆ ಕೇಳಬೇಕೆಂದು ಆಶಿಸುವಳು. ಹೀಗೆಯೇ ಚಿಕ್ಕವಳಾದ ಸೊಸೆ ತನ್ನ ಹಿಡಿತದಲ್ಲಿರಬೇಕೆಂದು ಅತ್ತೆ ಯತ್ನಿಸುವಳು. ತನಗೆ ಅವಮಾನ ಮಾಡುವಳೆಂದು ತನ್ನ ಬಗ್ಗೆ ಸರಿಯಾಗಿ ನಡೆದುಕೊಳ್ಳುವುದಿಲ್ಲವೆಂದು ಸೊಸೆಯ ಆಕ್ಷೇಪ. ಪ್ರತಿದಿನ ಅತ್ತೆ ಸೊಸೆಯರ ಜಗಳ ತಪ್ಪದೆ ನಡೆಯುವುದು. ಬಡಪಾಯಿ ಮಗನ ಸ್ಥಿತಿ ದೊಡ್ಡ ತೊಂದರೆಗೆ ಸಿಕ್ಕಿಸುವರು. ತಾಯಿಯನ್ನಾಗಲಿ, ಹೆಂಡತಿಯನ್ನಾಗಲಿ ಸಮಾಧಾನಪಡಿಸು ವುದು ಅವನಿಗೆ ಕಷ್ಟವಾಗುವುದು. ತಮಟೆಯಂತೆ ಅವನಿಗೆ ಎರಡು ಕಡೆಯೂ ಪೆಟ್ಟು ಬೀಳುವುದು. ಮನೆಯಲ್ಲಿ ಹೇರಳವಾಗಿ ಧನವಿದೆ, ಬೇಕುಬೇಕಾದ ಪದಾರ್ಥಗಳೆಲ್ಲಾ ಇವೆ. ಆದರೆ ಶಾಂತಿಯೊಂದೇ ಇಲ್ಲ. ಒಬ್ಬರು ಇನ್ನೊಬ್ಬರನ್ನು ಹತೋಟಿಯಲ್ಲಿಡಬೇಕೆಂಬ ಪ್ರಯತ್ನದಿಂದ ಪ್ರಯೋಜನವೇನು ? ಎಲ್ಲ ವಸ್ತು ಗಳೂ ನಶ್ವರವಾದುದರಿಂದ ಈ ಲೋಕದ ಅಧಿಕಾರದಿಂದ ಏನು ಪ್ರಯೋಜನ ? ವಿಧೇಯರಾಗಿರುವುದನ್ನು ಕಲಿಯಿರಿ. ಇತರರಿಗೆ ಸೇವೆ ಮಾಡುವುದನ್ನೂ, ಸಂತೋಷಗೊಳಿಸುವುದನ್ನೂ ಅಭ್ಯಾಸಮಾಡಿ. ಆಗ ಪ್ರತಿಯೊಬ್ಬರೂ ನಿಮ್ಮ ಅಧೀನರಾಗುವರು. ನೀವು ಎಲ್ಲರ ಹೃದಯದೊಳಗೆ ಪ್ರವೇಶಿಸಬಹುದು. **ತ್ಯಾಗಕ್ಕಿಂತಲೂ ವಿಧೇಯತೆಯು ಉತ್ತಮವು. ವಿಧೇಯತೆಯು ನಿಮ್ಮ ಅಹಂಕಾರವನ್ನು ಅಡಗಿಸುವುದು.** ಮತ್ತು ಆಧ್ಯಾತ್ಮಿಕ ಬಲ, ಆನಂದ ಮತ್ತು ಶಾಂತಿಯನ್ನು ಕೊಡುವುದು.

ಸಾರಜನಕವನ್ನು ಗಾಳಿಯಿಂದ ನೇರವಾಗಿ ತೆಗೆದುಕೊಳ್ಳುವ ಜೀವಾಣು ಗಳನ್ನು ಮನುಷ್ಯದೇಹಕ್ಕೆ ಬಿಟ್ಟರೆ ಅವನು ಆಹಾರವಿಲ್ಲದೆ ಇರಬಹುದು. ಏಕೆಂದರೆ ಅವನ ಶರೀರವನ್ನು ಪ್ರವೇಶಿಸಿರುವ ಜೀವಾಣುಗಳು ಸಾರಜನಕ ವನ್ನು ಒದಗಿಸುವುದರಲ್ಲಿ ಸಹಾಯಮಾಡುವುವು. ಆಗ ಮನುಷ್ಯನಿಗೂ ಮತ್ತು ಸೂಕ್ಷ್ಮ ಜೀವಾಣುಗಳಿಗೂ ನಡುವೆ ಸಹಜೀವನ (Symbiosis) ವುಂಟಾಗುವುದು. ಜೀವಾಣುಗಳು ಮನುಷ್ಯನಿಗೆ ಬೇಕಾಗುವಷ್ಟು ಸಸಾರ ಜನಕವನ್ನು ಒದಗಿಸುವುದು ಮತ್ತು ತಮಗೆ ಬೇಕಾದುವನ್ನು ಅವನಿಂದ ಪಡೆದುಕೊಳ್ಳುವುವು. ಸಹಜೀವನ (Symbiosis) ಪದವನ್ನು ಡಿ ಬ್ಯಾರಿ

ಎಂಬುವರು, ಪಾಚಿ, ಅಣಬೆಯು ಕೂಡಿದ ಕಲ್ಲು ಹೂವು ಹೀಗೆ ಹಲವು ಭಿನ್ನ ಜೀವಿಗಳು ಒಂದನ್ನೊಂದು ಆಶ್ರಯಿಸಿಕೊಂಡು ಬದುಕುವುದನ್ನು ಸೂಚಿಸುವುದಕ್ಕೆ ಮೊದಲು ಪ್ರಯೋಗಿಸಿದರು. ಈಚೆಗೆ ಅನೇಕರ ದೇವರು ಹೊಟ್ಟೆಗೆ ಮಾತ್ರ ಸಂಬಂಧಿಸಿದವನಾಗಿದ್ದಾನೆ. ಮೇಲಿನ ಪ್ರಯೋಗವು ಫಲಪ್ರದವಾದರೆ ಮನುಷ್ಯನು ತನ್ನ ಹೆಚ್ಚು ಕಾಲವನ್ನು ಶ್ರೇಷ್ಠವಾದ ಧ್ಯಾನಕ್ಕೂ ಮತ್ತು ಆಧ್ಯಾತ್ಮಿಕ ಪ್ರಯತ್ನಗಳಿಗೂ ವಿನಿಯೋಗಿಸಬಹುದು. ಮನುಷ್ಯನ ಹಸಿವನ್ನು ಹಿಂಗಿಸಲು ಸಹಾಯ ಮಾಡುವ ಮತ್ತು ಆಹಾರ ವನ್ನು ತೆಗೆದುಕೊಳ್ಳದೇ ಇರುವಂತೆ ಮಾಡುವ ಈ ಜೀವಾಣುಗಳಿಗೆ ನಮಸ್ಕಾರಗಳು.

ನಿನಗೆ ಒಂದು ಚರ್ಮದ ಪೆಟ್ಟಿಗೆಯು (suit-case) ಬೇಕಾದರೆ ನಿನ್ನ ಮನಸ್ಸಿಗೆ ಒಪ್ಪುವುದನ್ನೇ ಕೊಳ್ಳಲು ಪೇಟೆಯಲ್ಲಿ ಅನೇಕ ಅಂಗಡಿಗಳಿಗೆ ಅಲೆದಾಡುವೆ. ಹಾಗೆಯೇ ಅಂಗಡಿಯವನು ಸರಿಯಾದ ಗಿರಾಕಿಗಾಗಿ ಕುತೂಹಲವಾಗಿ ಕಾಯುತ್ತಿರುವನು. ಇದು ಏಕಕಾಲದಲ್ಲಿ ಎರಡು ಕಡೆ ಯಿಂದಲೂ ಆಶ್ಚರ್ಯವಾಗುವಂತೆ ಸಂಭವಿಸುವ ವಿಚಿತ್ರ ಸಂಘಟನೆಯು. ಹೀಗೆಯೇ ಆಕ್ಸ್‌ಫರ್ಡ್‌ನಲ್ಲಿ ವಿಶೇಷ ವಿದ್ಯಾಭ್ಯಾಸ ಮಾಡಬೇಕೆಂಬ ಬಡ ಹುಡುಗನೊಬ್ಬನು ಮುಂದಿನ ಜನ್ಮದಲ್ಲಿ, ತನ್ನ ಮಗನು ಆಕ್ಸ್‌ಫರ್ಡ್‌ನಲ್ಲೇ ಓದಿ ವಿದ್ಯಾವಂತನಾಗಬೇಕೆಂದು ಅಪೇಕ್ಷೆಯುಳ್ಳ, ವಾತಾವರಣವುಳ್ಳ ಶ್ರೀಮಂತ ಕುಟುಂಬದಲ್ಲೇ ಪುನರ್ಜನ್ಮವನ್ನು ಪಡೆಯುವನು. ಇದೂ ಸಹ ಒಂದು ವಿಚಿತ್ರ ಸಂಘಟನೆಯ ದೃಷ್ಟಾಂತವು.

" ಚಕ್ಷುಭ್ಯಾಂ ಹಸತೇ ವಿದ್ವಾನ್ ದಂತೌಷ್ಟಭ್ಯಾಂ ತು ಮಧ್ಯಮಃ
ಅಧಮಾ ಅಟ್ಟಹಾಸೇನ ನ ಹಸಂತಿ ಮುನೀಶ್ವರಾಃ ||"

ಬುದ್ಧಿವಂತರು ಕಣ್ಣುಗಳ ಮೂಲಕ ನಗುವರು. ಹಲ್ಲು, ತುಟಿಗಳನ್ನು ತೆರೆದು ನಗುವವರು ಮಧ್ಯಮರು. ಗಟ್ಟಿಯಾಗಿ ನಗುವವರು ಅಧಮರು. ಆದರೆ ಮುನೀಶ್ವರರು ಎಂದೂ ನಗುವುದಿಲ್ಲವು.

ದೀರ್ಘ ಜೀವನಕ್ಕಾಗಿ ಅಥವ ಶೀಘ್ರ ಸಾವಿಗಾಗಿ ಹಂಬಲಿಸದೆ ಯಜ ಮಾನನಿಗೆ ಕಾಯುವ ಸೇವಕನಂತೆ ತಾಳ್ಮೆಯಿಂದಿರು. ಇದೇ ಜ್ಞಾನಿಯ ಉದಾಸೀನ ವೃತ್ತಿಯು.

ಯೋಗ ಸಾಧನೆಗಳಿಗೆ ಮಾರ್ಗದರ್ಶನ ಮಾಡುವ ಅತ್ಯಂತ ಉತ್ಕೃಷ್ಟವಾದುದೆಂದರೆ ಶ್ರೀಚಕ್ರವು. ಶ್ರೀವಿದ್ಯೆಯಲ್ಲಿ ಪರಿಪೂರ್ಣತೆಯನ್ನು ಹೊಂದಿದರೆ ಇನ್ನು ಯೋಗಗಳಿಂದ ಪಡೆಯಬೇಕಾದುದು ಏನೂ ಉಳಿಯುವುದಿಲ್ಲವು. ಯೋಗಾಭ್ಯಾಸವು ನಮಗೆ ತೋರಬಹುದಾದ ಉತ್ತುಂಗ ಶಿಖರ ಶ್ರೀಚಕ್ರ.

ಒಬ್ಬ ಕೂಲಿಯವನು ನನ್ನ ದಿನಗೂಲಿಗೆ ತಕ್ಕಂತೆ ವೆಚ್ಚಗಳನ್ನು ಹೊಂದಿರುವನು. ಒಬ್ಬ ಗುಮಾಸ್ತನಿಗೆ ಅವನ ಕೆಲಸದಷ್ಟು ಜವಾಬ್ದಾರಿ ಇರುವುದು. ಒಬ್ಬ ತಹಸೀಲ್ದಾರನು ತನಗೆ ಒಳಪಟ್ಟ ಪ್ರದೇಶದಷ್ಟು ರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುವನು. ಒಬ್ಬ ಡೆಪ್ಯುಟಿ ಕಲೆಕ್ಟರನಿಗೆ ತಾಲ್ಲೂಕುಗಳ ಅಧಿಕಾರವಿರುವುದು. ಒಬ್ಬ ಕಲೆಕ್ಟರನಿಗೆ ಜಿಲ್ಲೆಯ ಆಡಳಿತ, ರಾಜ್ಯಪಾಲನಿಗೆ ಪ್ರಾಂತ್ಯದ ಆಡಳಿತ ಮತ್ತು ರಾಷ್ಟ್ರಪತಿಗೆ ಸಮಗ್ರ ಭಾರತದ ಕ್ಷೇಮಚಿಂತನೆ. " ಕಿರೀಟವನ್ನು ಧರಿಸಿದವನ ತಲೆಗೆ ನೆಮ್ಮದಿಯಿರುವುದಿಲ್ಲ." ಮನುಷ್ಯನು ಉನ್ನತ ಪದವಿಗೇರಿದಷ್ಟೂ ಅವನ ಜವಾಬ್ದಾರಿಗಳೂ, ಕರ್ತವ್ಯಗಳೂ ಹೆಚ್ಚುವುವು. ಶ್ರೇಷ್ಠವಾದ ಕರ್ಮಗಳನ್ನು ಮಾಡಿ ಬ್ರಹ್ಮಲೋಕವನ್ನು ಸೇರಿದವನು ಮುಂದಿನ ಕಲ್ಪದಲ್ಲಿ ಅವನವನ ಕರ್ಮಾತಿಶಯಕ್ಕೆ ತಕ್ಕಂತೆ ವಿಶ್ವಸೃಷ್ಟಿಯಲ್ಲಿ ಶ್ರೇಷ್ಠವಾದ ಸ್ಥಾನವನ್ನು ಪಡೆಯುವನು. ಹಿರಣ್ಯಗರ್ಭಾರಾಧಕರು ಅವನೊಡನೆಯೇ ಬ್ರಹ್ಮಾಂಡವು ಲಯವಾಗುವಾಗ ಪರಬ್ರಹ್ಮನಲ್ಲಿ ಸೇರುವರು.

ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವವರು ಸ್ವರ್ಗದಲ್ಲಿ ಬಹುಕಾಲವಿದ್ದು ಅವರವರ ಕಾಮ್ಯಕರ್ಮಕ್ಕೆ ತಕ್ಕಂತೆ, ಉದ್ದೇಶಕ್ಕೆ ತಕ್ಕಂತೆ ಫಲಗಳನ್ನು ಪಡೆಯುವರು : ಬ್ರಾಹ್ಮಣರ ಕೊಲೆ, ಸುರಾಪಾನವು ಸರ್ವಥಾ ನಿಷಿದ್ಧ ಕರ್ಮಗಳು. ಸಂಧ್ಯಾವಂದನವು ನಿತ್ಯಕರ್ಮವು.

---

# 13

## ಜೀವನ್ಮುಕ್ತನು

ಜೀವನ್ಮುಕ್ತನು ಮುಕ್ತನಾದ ಜ್ಞಾನಿಯು. ಅವನು ಬದುಕಿರುವಾಗಲೇ ಬಿಡುಗಡೆಯನ್ನು ಹೊಂದಿರುವನು. ಅವನು ಪ್ರಪಂಚದಲ್ಲಿದ್ದರೂ ಪ್ರಪಂಚಕ್ಕೆ ಸೇರದವನು. ಆತನು ಸದಾ ಪರಮಾತ್ಮನ ಶ್ರೇಷ್ಠಾನಂದದಲ್ಲಿ ವಿಹರಿಸುವನು. ದೇಹ ಮತ್ತು ಇಂದ್ರಿಯಗಳೊಡನೆ ಅಧ್ಯಾಸವನ್ನು ಹೊಂದಿಲ್ಲವು. ತನ್ನ ಪ್ರಾರಬ್ಧಗಳನ್ನು ಸಂಪೂರ್ಣವಾಗಿ ಕಳೆದುಕೊಂಡಿರರುವುದರಿಂದ ಇದು ಸುಖವು, ತಾನು ಸುಖ ಪಡುವವನು ಎಂಬ ಭಾವನೆಯು ಅವನಿಗಿಲ್ಲವು. ಅವನಿಗೆ ಕರ್ಮ ಅಥವಾ ಕರ್ತೃತ್ವದ ಭಾವನೆಯಿಲ್ಲವು. ಅವನು ಸಂಗರಹಿತನಾಗಿ, ಸಂತೋಷನಾಗಿ, ಸಮಚಿತ್ತ ಮತ್ತು ಸಮದೃಷ್ಟಿಯಿಂದ ಇಷ್ಟ ಬಂದಂತೆ ಸಂಚರಿಸುವನು. ಅವನ ಸ್ಥಿತಿಯು ಅನಿರ್ವಚನೀಯವು. ಅವನು ಸಾಕ್ಷಾತ್ ಬ್ರಹ್ಮನೇ ಆಗಿರುವನು.

ಜೀವನ್ಮುಕ್ತನು ಒಬ್ಬ ಮಹಾನ್ ಆಚಾರ್ಯ ಪುರುಷನು. ಅವನು ಆತ್ಮಜ್ಞಾನ ಸಂಪನ್ನನಾದ ಪ್ರಕಾಶಮಯ ಋಷಿಯು. ಅವನು ಮಾನವರಲ್ಲಿ ಸರ್ವೋತ್ಕೃಷ್ಟನು. ಅವನು ಮನಸ್ಸನ್ನು ಜಯಿಸಿದವನು, ಆಸೆ, ಆಕಾಂಕ್ಷೆಗಳಿಂದ, ಭಯ–ಭ್ರಮೆಗಳಿಂದ, ದಂಭ–ದರ್ಪಗಳಿಂದ ಸಂಪೂರ್ಣವಾಗಿ ಬಿಡಲ್ಪಟ್ಟವನು.

ಜೀವನ್ಮುಕ್ತನಿಗೆ ನೀಚ–ಸಂತ, ಚಿನ್ನ–ಕಲ್ಲು, ಉತ್ತಮ–ಅಧಮ, ಸ್ತ್ರೀ–ಪುರುಷ, ಮನುಷ್ಯ–ಪ್ರಾಣಿ, ನಿಂದಾ–ಸ್ತುತಿ, ಗೌರವ–ಅಗೌರವಗಳು ಎಂಬ ಬೇಧ–ಭಾವಗಳಿಲ್ಲವು. ಅವನು ಎಲ್ಲೆಡೆಯಲ್ಲಿರುವ ಏಕಾತ್ಮನನ್ನೇ ನೋಡುವನು, ಪ್ರತಿಯೊಬ್ಬರಲ್ಲಿರುವ ದಿವ್ಯಾತ್ಮನನ್ನೇ ನೋಡುವನು. ಅವನಿಗೆ

ಮನಸ್ಸಿಲ್ಲದಿರುವುದರಿಂದ ಎಲ್ಲ ಬೇಧಗಳೂ ಅಡಚಣೆಗಳೂ ಅವನಿಂದ ಅದೃಶ್ಯವಾಗಿವೆ

ವಿಶಾಲವಾದ, ಏಕರಸವೂ, ಅಮೃತಮಯವೂ ಆದ ಬ್ರಹ್ಮಸಾಗರ ದಲ್ಲಿ ಜೀವನ್ಮುಕ್ತನು ಏನನ್ನೂ ನೋಡನು ಅಥವ ಕೇಳನು ಮತ್ತು ಆನಂದ ದಲ್ಲಿ ವಿಹರಿಸುವನು ಅವನು ತನ್ನ ಆತ್ಮದಲ್ಲೇ ತನ್ನ ಸಹಜವಾದ ಸಚ್ಚಿದಾ ನಂದ ಸ್ವರೂಪದಲ್ಲೇ ಸ್ಥಿರನಾಗಿರುವನು ನಿರ್ವಿಕಲ್ಪ ಸಮಾಧಿಯ ಮೂಲಕ ಅದ್ವಿತೀಯನಾದ ಆತ್ಮನನ್ನೇ ನೋಡುವನು. ಅವನ ದರ್ಶನಾನುಭವಗಳು ವರ್ಣಿಸಲಸದಳವು ಅವನು ಪರಮ ನಿಶ್ಚಲ ಸ್ಥಿತಿಯನ್ನು ಪ್ರಾಪ್ತಿ ಮಾಡಿ ಕೊಂಡಿರುವನು ಅವನು ಸದಾ ಸಂತೋಷಿಯು ಅವನು ಶುದ್ಧ ಸ್ವಭಾವ ವುಳ್ಳವನು ತಾನು ಶುದ್ಧ ಚೈತನ್ಯವೆಂದು ಅರಿತುಕೊಂಡಿರುವನು ತನ್ನದೇ ಆದ ಆತ್ಮವೆಂಬ ಆನಂದದ ಉದ್ಯಾನದಲ್ಲಿ ಸಂಪೂರ್ಣ ಸ್ವೇಚ್ಛೆಯಾಗಿ ವಿರಮಿಸುವನು

ಜನಕರಾಜನು ಒಬ್ಬ ಜ್ಞಾನಿಯನ್ನು ಈ ರೀತಿ ಪ್ರಶ್ನಿಸಿದನು . " ಪೂಜ್ಯರಾದ ಮಹರ್ಷಿಗಳೇ, ಬೆಳಗಿನ ಜಾವ, ಮಧ್ಯಾಹ್ನ ಮತ್ತು ಸಂಜೆಯ ವೇಳೆ ನೀವು ಸಂಧ್ಯಾವಂದನೆಯನ್ನೇಕೆ ಮಾಡುವುದಿಲ್ಲ ?" ಆ ಮಹರ್ಷಿಯು ಕೊಟ್ಟ ಉತ್ತರವಿದು . " ಹೇ ರಾಜ, ಜ್ಞಾನಸೂರ್ಯನು ನನ್ನ ಹೃದಯ ವೆಂಬ ಚಿದಾಕಾಶದಲ್ಲಿ ಸದಾ ಬೆಳಗುತ್ತಿರುವನು ಅಲ್ಲಿ ಸೂರ್ಯೋದಯ ವಾಗಲಿ, ಸೂರ್ಯಾಸ್ತಮಯವಾಗಲಿ ಇಲ್ಲವು ಬೆಳಗಿನ ಜಾವ, ಸಂಜೆಯು ಆಗದಿರುವಾಗ ನಾನು ಸಂಧ್ಯಾವಂದನೆಯನ್ನು ಹೇಗೆ ಮಾಡಲಿ ? ಮೇಲಾಗಿ ನನ್ನ ಅಜ್ಜಿ ಮಾಯೆಯು ಸತ್ತುಹೋಗಿದ್ದಾಳೆ " ಜನಕರಾಜನು ಆ ಋಷಿಗೆ ಮೌನವಾಗಿ ತನ್ನ ತಲೆಯನ್ನು ತಗ್ಗಿಸಿ ಆ ಸ್ಥಳದಿಂದ ಹೊರಟನು ಈ ಋಷಿಯು ನಿಜವಾದ ಜೀವನ್ಮುಕ್ತನೆಂದೂ, ಸಾದು ಬ್ರಾಹ್ಮೀಸ್ಥಿತಿ ಯಲ್ಲಿರುವನೆಂದೂ ಅವನು ಅರಿತುಕೊಂಡನು,

ಕಿಂಚಿತ್ತೂ ಅವಕಾಶವಿಲ್ಲದ ಬ್ರಹ್ಮದಲ್ಲಿ ಅವಕಾಶವು ವ್ಯಕ್ತವಾಗುವು ದೆಂತು ? ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರಗಳು ಹೇಗೆ ಬಂದಾವು ? ಇವೂ ಸಹ ಮನಸ್ಸಿನ ಮೋಸದ ಸೃಷ್ಟಿಯು ನಿನಗೆ ಆಯಾಸವಾಗಿದ್ದರೆ ಕೇವಲ ಒಂದು ಫರ್ಲಾಂಗ್ ಒಂದು ಮೈಲಿಯಂತೆ ತೋರುವುದು. ನೀನು ಬಲಿಷ್ಠ

ನಾದರೆ ಒಂದು ಮೈಲಿಯು ಸಹ ಒಂದು ಫರ್ಲಾಂಗಿನಂತೆ ಕಾಣುವುದು. ಜೀವನ್ಮುಕ್ತ ಅಥವ ಜ್ಞಾನಿಗೆ ಕಾಲ ಅಥವ ದೇಶವಿಲ್ಲ. ಅವನು ಕಾಲ ದೇಶಗಳಿಗೆ ಮೀರಿದ ಬ್ರಹ್ಮವೊಂದನ್ನೇ ಚೆನ್ನಾಗಿ ಹಿಡಿಯುವನು.

ಒಬ್ಬ ಜೀವನ್ಮುಕ್ತನು ಅಹಂಕಾರ, ಸಂಶಯ, ಭಯ ಮತ್ತು ದುಃಖ ದಿಂದ ಪೂರ್ಣವಾಗಿ ಬಿಡಲ್ಪಟ್ಟವನು. ಈ ನಾಲ್ಕು ಚಿಹ್ನೆಗಳು ಮನುಷ್ಯನು ಪರಿಪೂರ್ಣತೆಯನ್ನು ಪಡೆದಿರುವುದನ್ನು ಸೂಚಿಸುವುವು.

ಹರ್ಷ – ಶೋಕದಿಂದ ಮುಕ್ತವಾದ ಸಮದೃಷ್ಟಿ, ಸಮಚಿತ್ತ ಮತ್ತು ತ್ರಿಕಾಲಜ್ಞಾನವು ಜೀವನ್ಮುಕ್ತನ ಬಹಳ ಮುಖ್ಯವಾದ ಲಕ್ಷಣಗಳು (features).

ದೇಹಾಧ್ಯಾಸವು ನೋವನ್ನುಂಟುಮಾಡುವುದು. ಆತ್ಮಜ್ಞಾನವನ್ನು ಪಡೆದುಕೊಂಡಾಗ ದೇಹದ ಬಾಧೆಗಳು ಮತ್ತು ರೋಗಗಳು ಅವನಿಂದ ಅನು ಭವಿಸಲ್ಪಡುವುದಿಲ್ಲ. ಚೆನ್ನಾಗಿ ಮುಂದುವರೆದಿರುವ ಹಠಯೋಗಿಯು, ಕಾಯಸಿದ್ಧಿಯನ್ನು ಪಡೆದು, ಅಣುಗಳ ಮೇಲೆ ಹಿಡಿತವನ್ನು ಹೊಂದಿರುವವನು ಮಾತ್ರ ತನ್ನ ದೇಹವನ್ನು ಭಾದೆಗಳಿಲ್ಲದಂತೆ ಮಾಡಬಲ್ಲನು. ದೇಹಭಾವವನ್ನು ಬಿಟ್ಟು ನೋವಿಲ್ಲದ, ರೋಗವಿಲ್ಲದ ಆತ್ಮನೊಡನೆ ಒಂದಾಗಿ. ನೀವು ಗಾಢ ನಿದ್ದೆಯಲ್ಲಿರುವಾಗ ನಿಮಗೆ ರೋಗವು ಬಾಧಿಸುವುದಿಲ್ಲ. ಕ್ಲೋರೋಫಾರಾಂ ನಿಂದ ನಿಶ್ಚೇಷ್ಟಿತಗೊಂಡಾಗ ಕಾಲನ್ನು ಕತ್ತರಿಸಿ ಬಿಸಾಟರೂ ನೋವಿನ ಅನುಭವವಿರುವುದಿಲ್ಲ. ಮನಸ್ಸು ದೇಹದೊಡನೆ ಸಂಬಂಧಿಸಿದರೆ ಮಾತ್ರ ನೋವು ಎದ್ದು ಕಾಣುವುದು. ಮನಸ್ಸನ್ನು ದೇಹದಿಂದ ಬುದ್ಧಿಪೂರ್ವಕವಾಗಿ ಬೇರ್ಪಡಿಸಿ ಆನಂದಮಯ ಆತ್ಮನಲ್ಲಿ ನಿರಂತರ ಧ್ಯಾನದಿಂದ ನಿಲ್ಲಿಸಿದರೆ ದೇಹವು ದೀರ್ಘಾವಧಿಯ ಬಾಧೆಯಿಂದ ನರಳುತ್ತಿದ್ದರೂ ನಿಮಗೆ ನೋವು ತಿಳಿಯುವು ದಿಲ್ಲ. ಇದೇ ಜ್ಞಾನಯೋಗ ಸಾಧನವು. ಪ್ರಾರಬ್ಧವನ್ನು ಅನುಭವಿಸಲೇ ಬೇಕು. ಆದ್ದರಿಂದ ದೇಹವು ರೋಗಕ್ಕೆ ಅಧೀನವಾಗುವುವು. ಜೀವನ್ಮುಕ್ತನಿಗೆ ನೋವಿನ ಅನುಭವವಿಲ್ಲ. ನೋಡುವವನು ಮಾತ್ರ ತಪ್ಪಾಗಿ ಜ್ಞಾನಿಯು ಸಂಕಟದಲ್ಲಿರುವನೆಂದು ಭಾವಿಸುವರು. ಇದೊಂದು ದೊಡ್ಡ ದೋಷವು. ರಾಮಕೃಷ್ಣ ಪರಮಹಂಸರು ಗಂಟಲು ವ್ರಣವನ್ನು ಹೊಂದಿದ್ದರು. ಬುದ್ಧನಿಗೆ ತೀವ್ರತರವಾದ ಆಮಶಂಕೆಯಿದ್ದಿತು. ಶ್ರೀ ಶಂಕರರಿಗೆ ಮೂಲವ್ಯಾಧಿ.

ಆದರೆ ಅವರುಗಳು ಯಾವ ನೋವನ್ನೂ ಅನುಭವಿಸಲಿಲ್ಲ. ರಾಮಕೃಷ್ಣ ಪರಮಹಂಸರನ್ನು ವೈದ್ಯರು "ನೀವು ಹೀಗೇಕೆ ನರುಳುವಿರಿ? ಶಸ್ತ್ರ ಚಿಕಿತ್ಸೆಯನ್ನು ಮಾಡಿಸಬಹುದಲ್ಲ?" ಎಂದಾಗ ಅವರು ಹೀಗೆ ಉತ್ತರ ಕೊಟ್ಟರು. "ನಾನು ನನ್ನ ಮನಸ್ಸನ್ನು ಕಾಳೀಮಾತೆಗೆ ಅರ್ಪಿಸಿದ್ದೇನೆ. ದೇಹದ ಬಗ್ಗೆ ಹೇಗೆ ಯೋಚಿಸಲಿ. ಮನಸ್ಸನ್ನು ಮತ್ತೆ ಈ ಮಾಂಸ ಮಯವಾದ ಚೀಲಕ್ಕೆ ಹೇಗೆ ಹಿಂತಿರುಗಿಸಲಿ. ನಾನು ಸದಾ ಸಂತೋಷ ವಾಗಿರುವೆನು."

ಶಾಂತಿ, ಸಂತೋಷ, ಹರ್ಷ ಶೋಕಗಳಿಂದ ಬಿಡುಗಡೆ, ನಿರ್ಭಯತೆ, ಸಮತೆ, ಇವು ಐದು ಜೀವನ್ಮುಕ್ತನ ಪ್ರಧಾನ ಲಕ್ಷಣಗಳು.

ಆತ್ಮಜ್ಞಾನಿಯ ಮಾತುಗಳು ಶಾಂತಿ, ಸಮಾಧಾನ, ಶಕ್ತಿ ಮತ್ತು ಬಲವನ್ನು ಶ್ರೋತೃಗಳಿಗೆ ಕೊಡುವುದು. ಅವು ಜ್ಞಾನಿಯ ಆಂತರಿಕ ಜೀವನದ ಮಹಿಮೆ, ಶಾಂತಿ ಮತ್ತು ಕೃಪೆಯಿಂದ ಹೊರಮುಖವಾಗಿ ಪ್ರವಹಿಸಿದ ಶಕ್ತಿಯು. ಅವನು ಯಾವಾಗಲೂ ಆನಂದವನ್ನು ಸವಿದು, ಆನಂದವನ್ನೇ ಹರಡುತ್ತಾ ಪ್ರೇಮಮಯಿಯಾಗಿರುವನು.

ಆತ್ಮಜ್ಞಾನವನ್ನು ಪ್ರಾಪ್ತಿಮಾಡಿಕೊಂಡವನು ಸದಾ ಸಂತೋಷಚಿತ್ತ ನಾಗಿ ಸಂತೃಪ್ತನಾಗಿರುವುದರಿಂದ, ಸರ್ವಜ್ಞನಾಗಿರುವುದರಿಂದ, ತನಗಿಂತ ಬೇರೆಯಾಗಿ ಒಳಗೆ ಮತ್ತು ಹೊರಗೆ ಬಯಸಲು ಬೇರೇನೂ ಇಲ್ಲದಿರುವುದರಿಂದ ಅವನು ಕಾಮರಹಿತನಾಗಿರುವನು. "ಆಪ್ತ ಕಾಮಸ್ಯ ಕಾ ಸ್ಪೃಹ"— ಎಲ್ಲವನ್ನೂ ಹೊಂದಿದವನು ಏನನ್ನು ಬಯಸುವನು? ಬ್ರಹ್ಮವು ಪರಿಪೂರ್ಣವು ಮತ್ತು ನಿರಪೇಕ್ಷವು. ಆದ್ದರಿಂದ ಈ ಬ್ರಹ್ಮವನ್ನು ಕಂಡುಕೊಂಡವನು ಎಲ್ಲವನ್ನೂ ಬ್ರಹ್ಮದಲ್ಲಿ ಮತ್ತು ಬ್ರಹ್ಮವನ್ನು ಎಲ್ಲದರಲ್ಲಿ ನೋಡುತ್ತಿರುವಾಗ ಅವನ ಮನಸ್ಸಿನಲ್ಲಿ ಕಾಮನೆಗಳು ಉಂಟಾಗುವುದು ಹೇಗೆ?

ಜ್ಞಾನನಿಷ್ಠನಾದ ಋಷಿಯ ಮನಸ್ಸು ಸಚ್ಚಿದಾನಂದಬ್ರಹ್ಮದಲ್ಲಿ ಒಂದಾಗಿರುವುದರಿಂದ, ಅಜ್ಞಾನವನ್ನು ಗೆದ್ದಿರುವುದರಿಂದ ನಾನು, ನನ್ನದು ಎಂಬ ಭಾವಗಳು ಇಲ್ಲದೆ ಅಹಂಕಾರ, ಸ್ವಾರ್ಥ, ಪ್ರೀತಿ, ದ್ವೇಷ, ಅಸೂಯೆಗಳು ಅವನಿಂದ ಮೂಲೋತ್ಪಾಟನೆಯಾಗಿರುವುದರಿಂದ ಅಪರಿಮಿತವಾದ ಸುಖ ಸಾಗರದಲ್ಲಿ ಕ್ರೀಡಿಸುವನು.

ಪರಮಹಂಸನು ಯಾರು ? ಎಲ್ಲ ಜೀವಿಗಳಲ್ಲೂ ಆತ್ಮನನ್ನು ನೋಡುವ, ಹಂಸವು ನೀರಿನಿಂದ ಹಾಲನ್ನು ಬೇರ್ಪಡಿಸಿ ಕುಡಿಯುವಂತೆ ಪಂಚಭೂತಗಳು ಮತ್ತು ಪಂಚಕೋಶಗಳಿಂದ ಪ್ರತ್ಯೇಕಿಸಿ ಆನಂದಿಸುವವನು ಪರಮಹಂಸನು. ಚಳಿಗಾಲದಲ್ಲಿ ತಿಳಿಯಾಗಿ ಹರಿಯುವ ಗಂಗೆಯಂತೆ ಪರಿಶುದ್ಧನಾಗಿ ಪರಿವ್ರಾಜಕ ಜೀವನದಿಂದ ಅಸಂಗನಾಗಿರುವವನೇ ಪರಮಹಂಸನು.

ಪರಮಶ್ರೇಷ್ಠವಾದ ಬ್ರಹ್ಮವನ್ನರಿತವನು ಅಮೃತತ್ವವನ್ನು ಪಡೆದು ಶಾಶ್ವತ ಆನಂದವನ್ನು ಅನುಭವಿಸುವನು. ಅವನು ದುಃಖಗಳನ್ನು ದಾಟಿ ಶುಭಾಶುಭಗಳನ್ನು ಮೀರಿ ಹೋಗುವನು. ಸಂಶಯ, ಭ್ರಾಂತಿ ಮತ್ತು ಪರಿಮಿತಿಯಿಂದ ಮುಕ್ತನು. ಹೃದಯಗ್ರಂಥಿಗಳಾದ ಅವಿದ್ಯಾ, ಕಾಮ. ಕರ್ಮಗಳಿಂದ ಬಿಡಲ್ಪಟ್ಟವನು. ಅವನ ಸ್ಥಿತಿಯು ಅನಿರ್ವಚನೀಯವು.

ಸಂಚಿತ ಕರ್ಮಗಳು ಅವಿದ್ಯೆಯನ್ನು ಆಶ್ರಯಿಸುವುವು. ಕ್ರಿಯಮಾಣ ಕರ್ಮವು ಅಹಂಕಾರಾಶ್ರಯವು. ಪ್ರಾರಬ್ಧ ಕರ್ಮವು ಸ್ಥೂಲ ದೇಹಾಶ್ರಯವು. ಜೀವನ್ಮುಕ್ತನಲ್ಲಿ ಜ್ಞಾನೋದಯವಾಗಿರುವುದರಿಂದ ಅಜ್ಞಾನವು ನಾಶಮಾಡಲ್ಪಟ್ಟಿದೆ. ಆದ್ದರಿಂದ ಸಂಚಿತ ಕರ್ಮಗಳೂ ನಾಶಮಾಡಲ್ಪಟ್ಟಿವೆ. ಅವನಿಗೆ ದಂಭವಿಲ್ಲ. ಕ್ರಿಯಾಮಾಣ ಕರ್ಮಗಳೂ ನಾಶಮಾಡಲ್ಪಟ್ಟಿವೆ. ಈ ದೃಷ್ಟಿಯಿಂದ ಅವನಿಗೆ ದೇಹವಿಲ್ಲ ಮತ್ತು ವಿಭುವಾದ ಬ್ರಹ್ಮದಲ್ಲಿ ಐಕ್ಯನಾಗಿರುವನು. ಆತ್ಮಜ್ಞಾನಪ್ರಾಪ್ತಿಯಿಂದ ಕರ್ಮತ್ರಯಗಳೂ ನಾಶವಾಗುವುವು.

ಸತ್ಕರ್ಮಗಳನ್ನು ಮಾಡಿದವರು ಸ್ವರ್ಗಕ್ಕೆ ಹೋಗುವರು. ಉಪಾಸನೆಯನ್ನು ಮಾಡಿದವರು ಬ್ರಹ್ಮಲೋಕವನ್ನು ಸೇರುವರು. ಜ್ಞಾನಿಗಳು ಯಾವ ಲೋಕವನ್ನೂ ಪ್ರವೇಶಿಸುವುದಿಲ್ಲ. ಅವರು ಸರ್ವವ್ಯಾಪಿಯಾದ ಬ್ರಹ್ಮನಲ್ಲಿ ಒಂದಾಗಿರುವರು.

ಗಾರ್ಗಿ ಒಬ್ಬ ದೊಡ್ಡ ಜ್ಞಾನಿ. ಅವಳ ಹೆಸರು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವುದು. ಅವಳು ಪೂರ್ಣ ನಗ್ನಳಾಗಿ ಜನಕರಾಜನ ಸಭೆಯನ್ನು ಪ್ರವೇಶಿಸಿ ಯಾಜ್ಞವಲ್ಕ್ಯರೊಡನೆ ತತ್ವವಿಚಾರ ಮಾಡಿದಳು.

ಜ್ಞಾನಿಗೆ ಮೇಲಿನ ತೋಳು ದಿಂಬು, ಆಕಾಶವೇ ಮುಸುಕು ಅಥವಾ ಮೇಲುಹೊದಿಕೆ, ಹಸಿರು ಹುಲ್ಲಿನ ಭೂಮಿಯೇ ಸುಂದರವಾದ ಹಸಿರು

ಜನುಖಾನ. ಅಥವ ರೇಶಿಮೆಯ ಹಾಸಿಗೆ, ನಕ್ಷತ್ರ ಮಂಡಲಗಳೇ ವಿದ್ಯುದ್ದೀಪಗಳು, ವಾಯು ಭಗವಾನ್ ಮತ್ತು ವಿರಾಟನೇ ಅವನ ವಿಧೇಯರಾದ ಸೇವಕರಾಗಿ ವಿಶ್ವಕ್ಕೇ ಗಾಳಿಯನ್ನು ಬೀಸುವರು. ಅವಕಾಶವು ಅವನ ಬಟ್ಟೆಯು, ಕೈಗಳು ಸದಾಸಿದ್ಧವಾದ ಪಾತ್ರೆಗಳು. ಅವನ ಪತ್ನಿಯಾದ ತ್ಯಾಗವನ್ನು ಆಲಂಗಿಸಿ ಯಾವ ಆಕಾಂಕ್ಷೆಗಳಿಲ್ಲದೆ ಅವನು ನಿದ್ರಿಸುವನು. ತನ್ನ ಜ್ಞಾನ, ವೈರಾಗ್ಯ ಮತ್ತು ಉಪರತಿಗಳೆಂಬ ಮಕ್ಕಳೊಡನೆ ಎಲ್ಲೆಂದರಲ್ಲಿ ಪರಮ ಶಾಂತಿಯನ್ನು ಅಥವ ನಿಷ್ಕಲ್ಮಷವಾದ ಆನಂದವನ್ನು ಅನುಭವಿಸುವನು.

ಜೀವಕೋಟಿಯಲ್ಲಿ ಎಲ್ಲೋ ಒಬ್ಬ ಜೀವನ್ಮುಕ್ತನು ಸ್ವಪ್ರಯತ್ನದಿಂದ ಆನುಕ್ರಮ ವೈಶಾಲ್ಯತೆಯಿಂದ ಆತ್ಮವನ್ನು ಪ್ರಾಪ್ತಿಮಾಡಿಕೊಂಡವನು. ಧ್ಯಾನದಿಂದ ಜೀವಭಾವವನ್ನು ಬಿಟ್ಟು ಬ್ರಹ್ಮಭಾವವನ್ನು ಪಡೆದುಕೊಂಡಿದ್ದಾನೆ. ಅವನು ಅನೇಕ ಜನ್ಮಗಳನ್ನು ತೆಗೆದುಕೊಂಡಿದ್ದಾನೆ. ಅಂತೂ ಈ ಜನನ ಮರಣ ಸುಳಿಯಿಂದ ಮುಕ್ತನಾಗಲು ಹೇಗೆ ಹೇಗೋ ಪ್ರಯತ್ನಮಾಡಿದ್ದಾನೆ. ಅವನು ಕೇವಲ ಕೆಲವರಿಗೆ ಮಾತ್ರ ಸಹಾಯಮಾಡುವನು. ಅನೇಕರನ್ನು ಉದ್ಧಾರ ಮಾಡಲಾರನು. ಅವನನ್ನು ನಾಲ್ಕು – ಐದು ಜನರು ಕುಳಿತುಕೊಳ್ಳುವ ಒಂದು ಜೋಡೆತ್ತಿನ ಗಾಡಿ ಅಥವ ನದಿಯಲ್ಲಿ ತೇಲುವ ಒಂದು ಮರದ ಹಲಗೆಗೆ ಹೋಲಿಸಬಹುದು. ಆತ್ಯಂತಿಕವಾಗಿ ಮುಕ್ತವಾದ ಈಶ್ವರಕೋಟಿಯಲ್ಲಿ ಜೀವನ್ಮುಕ್ತನು ಹುಟ್ಟಿ ಧರ್ಮವನ್ನು ಸ್ಥಾಪಿಸುವನು ಮತ್ತು ಮಾನವರಿಗೆ ಹಿತವನ್ನುಂಟುಮಾಡುವನು ಮತ್ತು ಶಿಷ್ಟರನ್ನು ರಕ್ಷಿಸುವನು. ಈ ಜನ್ಮದಲ್ಲಿ ಯಾವ ಬಗೆಯ ಸಾಧನವನ್ನು ಅಥವ ಧ್ಯಾನವನ್ನು ಅಭ್ಯಾಸಮಾಡುವುದಿಲ್ಲ. ಅವನು ಭಗವದಂಶನು, ಅಜನ್ಮ ಸಿದ್ಧನು. ಬಾಲ್ಯದಿಂದಲೇ ಜ್ಞಾನಿಯು. ಅವನು ಅನೇಕರಿಗೆ ಬೆಳಕನ್ನು ನೀಡುವನು. ಲೋಕಸಂಗ್ರಹ ಕಾರ್ಯಕ್ಕಾಗಿ ವ್ಯಕ್ತನಾಗಿ, ಅದು ಮುಗಿದ ಒಡನೆಯೇ ಅದೃಶ್ಯನಾಗುವನು. ಅವನನ್ನು ಬಹಳ ಜನರನ್ನು ಹೊತ್ತು ಚಲಿಸುವ ದೊಡ್ಡ ಟ್ರೈನಿಗೋ, ಅಥವ ಹಬೆಯ ಹಡಗಿಗೋ ಹೋಲಿಸಬಹುದು. ಶ್ರೀ ಶಂಕರರು ಈಶ್ವರಕೋಟಿಗೆ ಮತ್ತು ವಾಮದೇವನು ಜೀವಕೋಟಿಗೆ ಸೇರಿದ ಜೀವನ್ಮುಕ್ತರು.

ಜ್ಞಾನಿಗಳಲ್ಲಿ ಎರಡು ಬಗೆಯವರು ೧) ಸಿದ್ಧಜ್ಞಾನಿ ಮತ್ತು ಕೇವಲ ಜ್ಞಾನಿ. ಆತ್ಮಸಾಕ್ಷಾತ್ಕಾರವನ್ನು ಹೊಂದಿದ್ದರೂ ಜಗತ್ತಿನ ಜನರಿಗೆ ಹೆಚ್ಚು

ಸಹಾಯ ಮಾಡಲಾರದವನು ಕೇವಲ ಜ್ಞಾನಿಯು. ತನ್ನ ಮಾತ್ರಕ್ಕೆ ತಾನು ಒಳ್ಳೆಯವನು. ಅವನು ರಾತ್ರಿಯ ವೇಳೆ ಮಿನುಗುಟ್ಟುವ ನಕ್ಷತ್ರದಂತೆ. ಅವನು ಲೋಕದಲ್ಲಿ ಹೆಚ್ಚು ಪರಿಚಿತನಲ್ಲ. ಆದರೆ ಸಿದ್ಧಜ್ಞಾನಿಯು ಮಹಿಮಾ ಪುರುಷನು, ಸೂರ್ಯನಂತೆ ಲೋಕಪ್ರಕಾಶಕನು. ಅವನು ಜ್ಞಾನಿಯು ಮತ್ತು ಯೋಗಿಯು. ಜಗತ್ತಿನ ಬಹುಸಂಖ್ಯಾತ ಜನರಿಗೆ ಹೆಚ್ಚು ಉಪಕಾರಮಾಡುವನು. ಶ್ರೀ ಶಂಕರಾಚಾರ್ಯರು ಸಿದ್ಧಜ್ಞಾನಿಗಳು. ಮದಾಲಸೆಯು ಕೇವಲ ಜ್ಞಾನಿ.

ಇಂದು ಜಗತ್ತಿಗೆ ಅಂತರ್ದೃಷ್ಟಿಯ ಸಂಪತ್ತುಳ್ಳವರ ಅವಶ್ಯಕವಿದೆ. ಆತ್ಮಜಾಗೃತಿಯನ್ನು ಹೊಂದಿ ಜ್ಞಾನನಿಷ್ಠರಾದವರ ಕೃಪೆಯು ಪ್ರಪಂಚಕ್ಕೆ ಬೇಕಾಗಿದೆ. ಅವರು ಜನರಿಗೆ ಧರ್ಮಮಾರ್ಗದಲ್ಲಿ ನೆರವು ನೀಡುವುದಲ್ಲದೆ ಈ ಅಜ್ಞಾನ ಸಾಗರವನ್ನು ದಾಟಲು ನಿತ್ಯಾನಂದವನ್ನು, ಅಮೃತತತ್ವವನ್ನು ಪಡೆಯಲು ಸಹಾಯ ಮಾಡುವರು. ಅವರು ವಿದ್ಯಾಪೀಠಗಳ ಕುಲಪತಿಗಳಿಗೂ ಮಾರ್ಗದರ್ಶನ ಮಾಡುವರು.

ವೇದಾಂತಿಯು : "ನನ್ನದೆಂಬುದು ಯಾವುದೂ ಇಲ್ಲ ಅಥವ ಎಲ್ಲವೂ ನನ್ನದೇ," ಎಂದು ಹೇಳುವನು. ಪ್ರಪಂಚವು ದೃಶ್ಯಮಾತ್ರವಾದುದರಿಂದ "ನನ್ನದೆಂಬುದು ಯಾವುದೂ ಇಲ್ಲ" ಎಂದು ಹೇಳುವುದು ಅಕ್ಷರಶಃ ಸತ್ಯವು. ಅವನು ಆತ್ಮವನ್ನು ಪಡೆದಿರುವುದರಿಂದ, ಇಡೀ ಜಗದಾಧಾರನಾದ ಪರಬ್ರಹ್ಮನೊಬ್ಬನೇ ಇರುವನೆಂದು ಸಾಕ್ಷಾತ್ಕಾರ ಮಾಡಿಕೊಂಡಿರುವುದರಿಂದ "ಎಲ್ಲವೂ ನನ್ನದೇ" (ಬ್ರಹ್ಮಕ್ಕಿಂತ ಅನ್ಯವಾಗಿ ಜಗತ್ತು ಸತ್ಯವಲ್ಲ) ಎಂದು ಹೇಳುವನು. ಪೃಥ್ವೀತತ್ವ ಮತ್ತು ಘ್ರಾಣೇಂದ್ರಿಯವನ್ನು ಗೆದ್ದಿರುವುದರಿಂದ ಎಲ್ಲ ಬಗೆಯ ಪರಿಮಳಗಳನ್ನೂ, ಅವುಗಳ ಇಂದ್ರಿಯಗಳನ್ನೂ ಹತೋಟಿಯಲ್ಲಿಡುವನು. ಹೀಗೆಯೇ ಜಲತತ್ವವನ್ನು ಗೆದ್ದು ಎಲ್ಲ ರುಚಿಗಳನ್ನೂ ಗೆಲ್ಲುವನು. ಅಗ್ನಿತತ್ವ ಮತ್ತು ಎಲ್ಲ ಬಗೆಯ ರೂಪುಗಳ ವಸ್ತುಗಳನ್ನು ಕಣ್ಣನ್ನು ಹಿಡಿತದಲ್ಲಿಡುವುದರಿಂದ ಗೆಲ್ಲುವನು. ನಾಲಗೆಯನ್ನು ಹಿಡಿತದಲ್ಲಿಟ್ಟು ವಾಯುತತ್ವ, ಅದಕ್ಕೆ ಸಂಬಂಧಿಸಿದ ಎಲ್ಲ ಬಗೆಯ ಸ್ಪರ್ಶಗಳನ್ನು ವಶಪಡಿಸಿಕೊಳ್ಳುವನು. ಕಿವಿಗಳನ್ನು ಹಿಡಿತದಲ್ಲಿಡುವುದರಿಂದ ಆಕಾಶತತ್ವವನ್ನೂ ಎಲ್ಲ ಬಗೆಯ ಶಬ್ದಗಳನ್ನೂ ವಶಮಾಡಿಕೊಳ್ಳುವನು.

ಸಕ್ಕರೆಯಲ್ಲಿ ಮಾಡಿದ ಬೆಕ್ಕು ಮಗುವಿನ ದೃಷ್ಟಿಯಲ್ಲಿ ನಿಜವಾದ ಬೆಕ್ಕು. ಬೆಕ್ಕಿನ ರೂಪು ಸಕ್ಕರೆಯ ಭಾವವನ್ನು ನುಂಗಿಬಿಟ್ಟಿರುವುದರಿಂದ ಮಗುವಿನ ಕಣ್ಣಿಗೆ ಸಕ್ಕರೆಯು ತೋರುವುದಿಲ್ಲ. ಬೆಕ್ಕು ಸಕ್ಕರೆಯನ್ನು ಅಡಗಿಸಿಕೊಂಡುಬಿಟ್ಟಿದೆ. ವಯಸ್ಕರಿಗೆ ಮಾತ್ರ ಅದು ಕೇವಲ ಸಕ್ಕರೆ. ಅವರ ದೃಷ್ಟಿಯಲ್ಲಿ ಬೆಕ್ಕಿಲ್ಲ. ಹಾಗೆಯೇ ಜೀವನ್ಮುಕ್ತನಿಗೆ ತೋರಿಕೆಯ ಎಲ್ಲ ನಾಮರೂಪಗಳನ್ನೂ ನುಂಗಿದ ಬ್ರಹ್ಮವೊಂದೆ. ಅವನು ಎಲ್ಲೆಲ್ಲಿಯೂ ಬ್ರಹ್ಮವನ್ನೇ ನೋಡುವನು. ಎಲ್ಲ ನಾಮರೂಪಗಳೂ ಅದೃಶ್ಯವಾಗುವುವು. ಪ್ರಾಪಂಚಿಕನಿಗೆ ಎಲ್ಲ ನಾಮರೂಪಗಳೊ ಬ್ರಹ್ಮವನ್ನು ಅಡಗಿಸಿಕೊಂಡು ಬಿಟ್ಟಿದೆ. ಅವನು ತೋರಿಕೆಯ ರೂಪುಗಳನ್ನು ಮಾತ್ರ ಕಾಣುವನು.

ಯಾಜ್ಞವಲ್ಕ್ಯನು ಮೈತ್ರೇಯಿಗೆ ಹೇಳಿದನು : "ಓ ಮೈತ್ರೇಯಿ ಪಾರ್ವತಿಯ ಪ್ರೇಮದಿಂದ ಮಾರುಹೋದ ಪರಮೇಶ್ವರನು ಅವಳಿಗೆ ಅರ್ಧ ದೇಹವನ್ನೇ ಕೊಟ್ಟನು. ಆದರೆ ನೀನು ಇನ್ನೂ ಹೆಚ್ಚಿನ ಪ್ರೀತಿಯಿಂದ ನನ್ನ ಇರುವಿಕೆಯನ್ನೇ ಪೂರ್ಣವಾಗಿ ಆಕ್ರಮಿಸಲು ಹಂಬಲಿಸುತ್ತಿರುವೆ." ಯಾರು ಬ್ರಹ್ಮಜ್ಞಾನವನ್ನು ಪಡೆಯುವನೊ ಅವನು ಎಲ್ಲವನ್ನೂ ಒಳಹೊಗುವನು. ಏಕೆಂದರೆ ತಾನೇ ಎಲ್ಲದರ ಅಂತರಾತ್ಮನಾಗಿರುವನು.

ಜೀವನ್ಮುಕ್ತನಿಗೆ ವಿಭುತ್ವ, ಅಮರತೆ, ಅಭಿನ್ನತೆ, ಮತ್ತು ಸ್ವಯಂ ಪ್ರಕಾಶತೆಯಿಂದ ಕೂಡಿದ ಆತ್ಮನು ಎಲ್ಲೆಲ್ಲಿಯೂ ಕಾಣುವುದರಿಂದ ಅವನು ಇನ್ನು ತಿಳಿಯಬೇಕಾದ ಅಥವ ಪಡೆಯಬೇಕಾದುದು ಮತ್ತೊಂದಿಲ್ಲವು. ಅವನು ಪೂರ್ಣತೆಯನ್ನು, ಹೆಚ್ಚಿನ ಆನಂದವನ್ನು ಮತ್ತು ಪರಮೋಚ್ಚವಾದ ಜ್ಞಾನವನ್ನು ಪಡೆದಿರುವನು. ಜ್ಞಾನಿಯು ಜಗತ್ತಿನ ಎಲ್ಲ ವಿಧವಾದ ಸಮಷ್ಟಿ, ಅಭಿಮಾನಿ, ವ್ಯಷ್ಟಿ, ವಿಶ್ವ ಮೊದಲಾದ ದೇಹಗಳೊಡನೆ ಐಕ್ಯತೆ ಯನ್ನು ಕಂಡುಕೊಂಡಿದ್ದರೂ ಪ್ರಾರಬ್ಧವಶನಾಗಿ ತನ್ನ ದೇಹದ ಕಡೆಗೂ ಗಮನಕೊಡುತ್ತಿರುವನು.

ಜೀವನ್ಮುಕ್ತ ಅಥವ ಭಾಗವತನು ತೇಜಃಪುಂಜವಾದ ಕಣ್ಣುಗಳನ್ನು ಹೊಂದಿರುವನು. ತಲೆಯ ಮೇಲ್ಭಾಗದ ತ್ರಿಕುಟಿಯಲ್ಲಿ ಒಂದು ಉಬ್ಬಿರುವುದು (ಹುಬ್ಬುಗಳ ನಡುವೆ). ಅವನು ಏನನ್ನೇ ಹೇಳಿದರು ನಿನ್ನ ಮನಸ್ಸಿಗೆ ಹಿಡಿಯುವುದು. ನೀನು ಸಾಯುವವರೆಗೂ ಅದನ್ನು ಮರೆಯಲಾರೆ.

ಅದ್ಭುತವಾದ ಆಕರ್ಷಣ ಶಕ್ತಿಯನ್ನು ಹೊಂದಿರುವನು. ನಿನ್ನೆಲ್ಲ ಸಂಶಯ ಗಳನ್ನೂ ಆಶ್ಚರ್ಯಕರ ರೀತಿಯಲ್ಲಿ ಕಳೆಯುವನು. ಅವನ ಸನ್ನಿಧಿಯಲ್ಲಿ ನಿನಗೆ ಒಂದು ವಿಚಿತ್ರವಾದ ಸಂತೋಷವುಂಟಾಗುವುದು, ನಿನ್ನ ಸಂಶಯಗಳು ತಾನಾಗಿ ನಿವಾರಣೆಯಾಗುವುದು. ಅವನ ಭಾಷೆ ಮೌನ. ಅವನು ದಯಾ ಮಯನು. ಸ್ವಾರ್ಥ, ಕ್ರೋಧ, ಲೋಭ, ದಂಭ, ಕಾಮ ಮತ್ತು ಅಹಂಕಾರ ಗಳಿಲ್ಲದವನು. ಅವನು ಸತ್ಯ, ಶಾಂತಿ, ಜ್ಞಾನ ಮತ್ತು ಆನಂದದ ಪ್ರತಿ ಮೂರ್ತಿಯು.

ನೀನು ಒಂದು ಚಿತ್ರದಲ್ಲಿರುವ ಹೆಣ್ಣುಗಳು, ಜ್ವಾಲೆ, ಚಾಕು, ಗಿಡಗಳು, ನದಿಗಳು ಮುಂತಾದವನ್ನು ಕಂಡರೂ ಅವು ನಿಜವಾದುದಲ್ಲವೆಂದು ತಿಳಿಯು ವಂತೆ ಈ ಜಗತ್ತಿನಲ್ಲಿ ತೋರುವ ಅದೇ ವಸ್ತುಗಳನ್ನು ಅವನು ಮಿಥ್ಯವೆಂದು ಕರೆಯುವನು.

ಚಿತ್ರದಲ್ಲಿರುವ ಹಾವು, ಹುಲಿಗಳನ್ನು ಕಂಡು ಯಾರೂ ಭಯಪಡ ದಿರುವಂತೆ ಜ್ಞಾನನಿಷ್ಠನಾದ ಜೀವನ್ಮುಕ್ತನಿಗೆ ಜೀವಂತ ಪ್ರಾಣಿಗಳನ್ನು ಕಂಡರೂ ಭಯವಿಲ್ಲ. ಯಾವ ಯೋಗಿಯು ಬ್ರಹ್ಮಕ್ಕಿಂತ ಭಿನ್ನವಾದ ಪ್ರಪಂಚವಿಲ್ಲವೆಂದೂ, ತಾನು ಬ್ರಹ್ಮವೇ ಆಗಿರುವೆನೆಂದೂ, ಸರ್ವವೂ ಬ್ರಹ್ಮ ಮಯವೆಂದು ತಿಳಿದಿರುವನೋ ಅವನು ಜನನ-ಮರಣ ಪ್ರವಾಹದಿಂದ ಬಿಡಲ್ಪಟ್ಟವನು. ಅವನು ಸ್ವಾತಂತ್ರ್ಯ, ಪೂರ್ಣತೆ ಮತ್ತು ಅಮೃತತತ್ವವನ್ನು ಪಡೆದುಕೊಂಡಿರುವನು. ಅವನು ಜೀವನ್ಮುಕ್ತನು-ಎಂದರೆ ಬದುಕಿರುವಾಗಲೇ ಮುಕ್ತಿಯನ್ನು ಪಡೆದುಕೊಂಡವನು.

ಒಂದು ದೊಡ್ಡ ಉತ್ಸವದಲ್ಲಿನ ಜನಸ್ತೋಮವನ್ನು ನೀನು ಸುಮ್ಮನೆ ನೋಡುವೆ. ಅವರಮೇಲೆ ನಿನಗೆ ಯಾವ ವ್ಯಾಮೋಹವೂ ಇಲ್ಲ. ಜೀವನ್ಮುಕ್ತನು ಅದೇ ದೃಷ್ಟಿಯಲ್ಲಿ ಈ ಜಗತ್ತನ್ನು ನೋಡುವನು. ಅವನಿಗೆ ಯಾರಮೇಲೂ ವ್ಯಾಮೋಹವಿಲ್ಲವು.

ಒಬ್ಬ ರಾಜನ ಅರಮನೆಯಲ್ಲಿ ಕನ್ನಡಿಯ ಕೊಠಡಿಯೊಂದಿತ್ತು. ಅದನ್ನು ಪ್ರವೇಶಿಸಿದಾಗ ರಾಜನು ಎಲ್ಲ ದಿಕ್ಕುಗಳಿಂದಲೂ ತನ್ನ ಪ್ರತಿಬಿಂಬ ವನ್ನು ನೋಡುತ್ತಿದ್ದನು. ಎಲ್ಲೆಲ್ಲಿಯೂ ತನ್ನ ರೂಪವೇ ಇರುವುದನ್ನು ನೋಡಿ ಸಂತೋಷಪಡುತ್ತಿದ್ದನು. ಒಂದು ಸಲ ಅವನ ನಾಯಿಯು ಆ

ಕೊಠಡಿಯನ್ನು ಪ್ರವೇಶಿಸಿತು. ಎಲ್ಲೆಡೆಯೂ ನಾಯಿಯ ಪ್ರತಿಬಿಂಬ ವುಂಟಾಯಿತು. ತನಗಿಂತ ಬೇರೆಯಾದ ಅನೇಕ ನಾಯಿಗಳು ಸುತ್ತಲೂ ಇವೆಯೆಂದು ತಿಳಿಯಿತು. ಅದು ಎಲ್ಲ ಕಡೆಯೂ ಆ ನಾಯಿಗಳನ್ನು ಕಚ್ಚಲು ಹಾರಾಡಿತು. ಜ್ಞಾನಿಯು ಪ್ರಪಂಚದಲ್ಲಿ ಎಲ್ಲೆಲ್ಲಿಯೂ ತನ್ನ ಸ್ವರೂಪವನ್ನು ಕಂಡು ಸಂತೋಷಿಸುವನು. ಲೌಕಿಕನು ಅಜ್ಞಾನಿಯಾಗಿ ಎಲ್ಲರನ್ನೂ ತನಗಿಂತ ಬೇರೆಯವರೆಂದು ಭಾವಿಸಿ ಅವರನ್ನು ದ್ವೇಷಿಸುವನು ಮತ್ತು ಜಗಳ ವಾಡುವನು.

ಬ್ರಹ್ಮವನ್ನು ತಿಳಿದವನು ಶುಭಾಶುಭಗಳನ್ನು ಕೊಡವಿ ದುಃಖದಿಂದ ಮುಕ್ತನಾಗುವನು. ದಿವ್ಯಾತ್ಮನಲ್ಲಿ ಪರಮ ಐಕ್ಯವನ್ನು ಕಂಡುಕೊಳ್ಳುವನು ಮತ್ತು ಆತ್ಮನಲ್ಲಿ ಅಪರಿಮಿತ ಆನಂದವನ್ನು ಪಡೆಯುವನು.

ಜೀವನ್ಮುಕ್ತನಲ್ಲಿ ಜೀವನದ ರೀತಿಯು ಪ್ರತ್ಯೇಕವಾಗಿರುವುದು. ಭಗೀರಥನು ರಾಜಠೀವಿಯಲ್ಲಿ ಬದುಕಿದನು. ಇನ್ನೊಬ್ಬ ಸಂತನು ಬಿಕ್ಷುಕ ನಂತೆ ಬಾಳಿದನು. ಒಬ್ಬ ಯೋಗಿಯು ಸದಾ ಧ್ಯಾನಾವಸ್ಥೆಯಲ್ಲಿರುವನು. ಅವನು ಕರ್ಮ ಮಾಡುವುದಿಲ್ಲ, ಮಾತನಾಡುವುದಿಲ್ಲ. ಸದಾ ಏಕಾಂತದಲ್ಲೇ ಇರುವನು. ಜಡಭರತನು ಈ ಬಗೆಯ ಜೀವನ ನಡೆಸುವನು. ಮತ್ತೊಬ್ಬ ಸಂತನು ಜನಸಂದಣಿಯು ದಟ್ಟವಾದ ನಗರದಲ್ಲಿ ಸದಾ ಕಾರ್ಯಮಗ್ನ ನಾಗಿರುವನು. ಅವನು ಸೇವೆಯಲ್ಲಾದರೂ ದುಮುಕುವನು. ಜನರೊಡನೆ ಮಾತನಾಡುವನು, ಉಪನ್ಯಾಸಗಳನ್ನು ಮಾಡುವನು, ಆಧ್ಯಾತ್ಮಿಕ ತರಗತಿ ಗಳನ್ನು ನಡೆಸುವನು, ಗ್ರಂಥಗಳನ್ನು ರಚಿಸುವನು. ಶ್ರೀ ಶಂಕರರು ಈ ಬಗೆಯ ಜೀವನ ನಡೆಸಿದರು. ಇದೆಲ್ಲಾ ಪ್ರಾರಬ್ಧದಿಂದಲೇ. ಪ್ರತಿಯೊಬ್ಬ ಜ್ಞಾನಿಗೂ ಒಂದೊಂದು ಬಗೆಯ ಪ್ರಾರಬ್ಧ. ಎಲ್ಲ ಜ್ಞಾನಿಗಳೂ ಒಂದೇ ಬಗೆಯ ಜೀವನ, ಒಂದೇ ವಿಧದ ಪ್ರಾರಬ್ಧವನ್ನು ಹೊಂದಿದರೆ ಪ್ರಪಂಚವು ಒಂದು ದೊಡ್ಡ ಸೆರೆಮನೆಯಂತೆ ಕಾಣುವುದು. ಪ್ರಕೃತಿಯಲ್ಲಿ ವೈವಿಧ್ಯತೆ ಗಳ ವ್ಯಕ್ತವೇ ಅದರ ಸ್ವಭಾವವು.

ಕೆಲವು ಸಂಪ್ರದಾಯ ವೇದಾಂತಿಗಳು ಹೇಳುವುದೇನೆಂದರೆ ಜೀವನ್ಮುಕ್ತ ಅಥವ ವ್ಯವಹಾರ ಜ್ಞಾನಿಯು ಸಹ ಕೋಪತಾಪಗಳನ್ನು ಹೊಂದಿರುವನು. ಆದರೆ ಅದು ಆಭಾಸ ಮಾತ್ರವು (mere semblance) ಅದು ಸುಟ್ಟ

ಬಟ್ಟೆಯಂತೆ, ನದಿಯ ನೀರಿನ ಮೇಲೆ ದೋಣ್ಣೆಯಿಂದ ಹೊಡೆದು ಅನೇಕ ಆಕೃತಿಗಳನ್ನು ಮಾಡಿದಂತೆ. ಇದು ಸಂಪೂರ್ಣವಾಗಿ ತಪ್ಪು. ಜೀವನ್ಮುಕ್ತನು ಯಾವ ಕಾಲದಲ್ಲೇ ಆಗಲಿ ಅಥವ ಯಾವುದೇ ಸ್ಥಿತಿಯಲ್ಲಿ ಅವನು ಸ್ವಲ್ಪವೂ ಕೋಪವನ್ನು ತೋರಿಸುವುದಿಲ್ಲ. ಅವನು ಪೂರ್ಣನಾಗಿ ಅಮನಸ್ಕನು. ಅಂದರೆ ಅವನಿಗೆ ಕೋಪವೆಲ್ಲಿ ಬಂತು ? ಎಂದಿಗೂ ಇಲ್ಲವು. ನೀವು ಶುಕದೇವನ ಕಥೆಯನ್ನು ಕೇಳಿಲ್ಲವೆ ? ರಾಜಾ ಜನಕನ ಅರಮನೆಯ ಬಾಗಿಲು ಕಾಯುವವರು ಅವನನ್ನು ಎಷ್ಟೇ ಅಪಮಾನಗೊಳಿಸಿದರೂ ಶುಕ ದೇವನು ಎಷ್ಟು ಶಾಂತಮೂರ್ತಿಯಾಗಿದ್ದನು ? ಅವನು ಆಭಾಸಮಾತ್ರದ ಕೋಪವನ್ನಾದರೂ ತೋರಿಸಿದನೆ ?

ಈಶ್ವರನು ನಿರ್ಗುಣ ಬ್ರಾಹ್ಮೀಸ್ಥಿತಿಯನ್ನು ಕಳೆದುಕೊಳ್ಳದ ನಿರ್ಗುಣ ಬ್ರಹ್ಮದಲ್ಲಿದ್ದು ಕರ್ಮವನ್ನು ಮಾಡಬಲ್ಲನು. ಅವನಿಗೆ ಮಾಯೆಯಮೇಲೆ ಹಿಡಿತವಿದೆ. ಅವತಾರಪುರುಷನು ತನ್ನ ಸ್ವರೂಪದಲ್ಲೇ ಇದ್ದುಕೊಂಡು ಲೀಲೆ ಯನ್ನು ತೋರುವನು. ಆದರೆ ಜ್ಞಾನಿಯು ಸಪ್ತಭೂಮಿಕೆಯಲ್ಲಿದ್ದಾಗ ಏನನ್ನೂ ಮಾಡಲಾರನು.

ಆರು ಅಥವ ಏಳನೆಯ ಭೂಮಿಕೆಯಲ್ಲಿರುವ ಜ್ಞಾನಿಯು ಪ್ರಪಂಚದಲ್ಲಿ ಕರ್ಮ ಮಾಡಲಾರನು. ಅವನು ಸದಾ ಬ್ರಹ್ಮದಲ್ಲಿ ತನ್ಮಯನಾಗಿರುವನು — ಕರ್ಮವನ್ನು ಮಾಡಲಿಚ್ಛಿಸಿದರೆ ನಾಲ್ಕು ಅಥವ ಐದನೆಯ ಭೂಮಿಕೆಗೆ ಬರಬೇಕು. (ಇವೆರಡೂ ಹಳೆಯ ಸಂಪ್ರದಾಯಕ್ಕೆ ಸೇರಿದವು).

ಜ್ಞಾನಿಗೆ ಎರಡು ವಿಧವಾದ ಅರಿವು ಇರುವುದು. ಆರು ಅಥವ ಏಳನೆಯ ಭೂಮಿಕೆಯಲ್ಲಿ ಸ್ವಸ್ವರೂಪದಲ್ಲಿದ್ದುಕೊಂಡು ಕರ್ಮಗಳನ್ನು ಮಾಡ ಬಲ್ಲನು. ಅವನು ಆ ಸ್ಥಿತಿಯಿಂದ ಕೆಳಗಿಳಿದು ಬರಬೇಕಾಗಿಲ್ಲವು (ನವೀನ ಸಂಪ್ರದಾಯ ರೀತ್ಯ ಚೋರನಾರಿಯ ದೃಷ್ಟಾಂತದಂತೆ ; ಕಾಗೆಗೆ ಎರಡು ಕಣ್ಣಿದ್ದರೂ ಯಾವ ಪಕ್ಕಕ್ಕೆ ತಿರುಗಿದರೆ ಆ ಒಂದು ಕಣ್ಣಿನಿಂದಲೇ ನೋಡುವಂತೆ).

ಜೀವನ್ಮುಕ್ತನು ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದ ಕೂಡಲೆ ಅದೃಶ್ಯ ನಾಗುವುದಿಲ್ಲ. ಹಾಗೇನಾದರೂ ಅದೃಶ್ಯವಾಗುವುದಿದ್ದರೆ ಅವನು ಜಿಜ್ಞಾಸು ಗಳಿಗೆ ಧಾರ್ಮಿಕ ಉಪದೇಶಗಳನ್ನು ಕೊಡಲು ಹೇಗೆ ಸಾಧ್ಯ ? ಅಲ್ಲದೆ

ಸಾಧಕರು ಜೀವನ್ಮುಕ್ತರಿಂದ ವೇದಾಂತ ಪಾಠಗಳನ್ನು ಪಡೆಯುತ್ತಿರುವುದನ್ನು ನಾವು ನೋಡಿದ್ದೇವೆ.

ಹಾಲನ್ನು ಹಾಲಿಗೆ ಬೆರೆಸಿದಂತೆ, ಎಣ್ಣೆಯನ್ನು ಎಣ್ಣೆಗೆ, ನೀರನ್ನು ನೀರಿಗೆ ಸುರಿದಾಗ ಒಂದಾಗುವಂತೆ ಜ್ಞಾನಿಯು ಆತ್ಮನನ್ನು ತಿಳಿದು ಆತ್ಮನಲ್ಲಿ ಒಂದಾಗುವನು. ಇದರಲ್ಲಿ ಸಂಶಯವೇ ಇಲ್ಲವು. ವಾಮದೇವ, ಜಡಭರತ, ಮನ್‌ಸೂ, ಶಾಮ್ಸ್ ತ್ಯಾಬ್ರೀಸ್, ಮದಾಲಸ, ಚೂಡಾಲೆಯು ಆತ್ಮನಲ್ಲಿ ಐಕ್ಯತೆಯನ್ನು ಹೊಂದಿ ತಮ್ಮ ಅನುಭವಗಳನ್ನು ದಿಟ್ಟ ಉಪದೇಶಗಳಿಂದ ಬೋಧಿಸಿ ಕಷ್ಟದಲ್ಲಿದ್ದ ಜನಾಂಗವನ್ನು ಉದ್ಧಾರಮಾಡಿದರು.

ಕರ್ಪೂರವು ಕರಗಿ ಬೆಂಕಿಯೊಡನೆ ಒಂದಾಗುವಂತೆ ಜ್ಞಾನಿಯ ಮನಸ್ಸು ಕರಗಿ ಬ್ರಹ್ಮನಲ್ಲಿ ಒಂದಾಗುವುದು.

ಆತ್ಮನನ್ನು ಪಡೆವ ಜ್ಞಾನಿಯು ಆತ್ಮನಲ್ಲಿ ಒಂದಾಗುವನು. ಅವನು ಬ್ರಹ್ಮವೇ ಆಗುವನು. ಅವನ ಶರೀರತ್ರಯಗಳು ಜ್ಞಾನಾಗ್ನಿಯಲ್ಲಿ ಭಸ್ಮವಾಗುವುವು. ನೋಡುವವರಿಗೆ ಅವನ ಸ್ಥೂಲ ಶರೀರವಿದ್ದಂತೆ ಕಂಡರೂ ಜ್ಞಾನಿಯು ಬ್ರಹ್ಮತಾದಾತ್ಮ್ಯವನ್ನು ಹೊಂದಿರುವುದರಿಂದ ಅವನ ದೃಷ್ಟಿಯಲ್ಲಿ ದೇಹವಿಲ್ಲವು.

ಜೀವನ್ಮುಕ್ತನು ಅಧ್ಯಾತ್ಮ ಬಲದ ಶಕ್ತಿ ಕೇಂದ್ರವು. ಆ ಶಕ್ತಿ ಪ್ರವಾಹವನ್ನು ಜಗತ್ತಿನ ನಾನಾ ದಿಕ್ಕುಗಳಲ್ಲಿ ಪ್ರವಹಿಸುವಂತೆ ಬೆಳಗುವನು. ಅವನ ಮುಂದೆ ಕುಳಿತುಕೊ. ನಿನ್ನ ಸಂಶಯುಗಳು ಕೂಡಲೇ ನಾಶವಾಗುವುವು. ಅವನ ಸಾನ್ನಿಧ್ಯದಲ್ಲಿ ವಿಲಕ್ಷಣವಾದ ಶಾಂತಿ ಮತ್ತು ರೋಮಹರ್ಷವುಂಟಾಗುವುದು.

ಎಂತಹ ಮಹದಾಶ್ಚರ್ಯವು ! ಈ ಜೀವನ್ಮುಕ್ತರು ಎಂತಹ ಕೀರ್ತಿಪ್ರದವಾದ ಕಾರ್ಯಗಳನ್ನು ಮಾಡಿರುವರು ! ಬದುಕಿರುವಾಗಲೇ ಮುಕ್ತರಾಗಿಬಿಟ್ಟಿರುವರು. ಅವರ ಸತ್ಸಂಕಲ್ಪದ ಮೂಲಕವಾಗಿ ಆಶ್ಚರ್ಯವನ್ನುಂಟು ಮಾಡುವರು. ಅವರು ಭೂಲೋಕದ ದೇವತೆಗಳು. ಅವರು, ಎಷ್ಟು ಬಲಶಾಲಿಗಳು. ಅವರ ಮನೋಧಾರ್ಢ್ಯವು ಅನುಪಮವಾದುದು. ಅವರು ಹೋದಕಡೆಗಳಲ್ಲೆಲ್ಲಾ ಜನರನ್ನು ಪ್ರಭಾವಿತರನ್ನಾಗಿ ಮಾಡುವರು. ಅವರು ಮಾತನಾಡದಿದ್ದರೂ ತಮ್ಮ ಮೌನದ ಮೂಲಕ ಸಾಧಕರಿಗೆ ಉಪದೇಶಿಸುವರು. ಇಂತಹ ಮಹಾಮಹಿಮರಿಗೆ ಪ್ರಣಾಮಗಳು.

ಜ್ಞಾನವೇ ಶಕ್ತಿಯು. ಔಷಧಿಗಳ, ಔಷಧ ಯಂತ್ರಗಳ, ಅವುಗಳ ಕಾರ್ಯಗಳ ಮತ್ತು ರೋಗಗಳನ್ನು ಪತ್ತೆ ಹಚ್ಚುವ ಸರಿಯಾದ ಚಿಕಿತ್ಸಾ ಕ್ರಮಗಳನ್ನು ತಿಳಿದುಕೊಂಡಿರುವವನೇ ಪ್ರಬಲನಾದ ವೈದ್ಯನು. ಅವನು ಸಹಾಸ್ರಾರು ಜನಗಳ ಮೇಲೆ ಪ್ರಭಾವ ಬೀರುವನು. ನ್ಯಾಯಶಾಸ್ತ್ರವನ್ನು ಚೆನ್ನಾಗಿ ತಿಳಿದವನು ಪ್ರಭಾವ ಶಾಲಿಯಾದ ವಕೀಲನಾಗುವನು. ಯುದ್ಧ ಭೂಮಿಯಲ್ಲಿ ಆಕ್ರಮಣದ ರೀತಿಗಳು, ರಕ್ಷಣಾ ವಿಧಾನಗಳು, ಮುಂಜಾಗ್ರತಾ ಕ್ರಮಗಳನ್ನು ತಿಳಿದು ಜಯಶಾಲಿಯಾಗಬಲ್ಲವರೇ commander-in-chief ಮತ್ತು field-marshall (ಮಹಾದಂಡನಾಯಕರು). ಇಡೀ ಸೈನ್ಯವು ಶೀಘ್ರವಾಗಿ ಜಾಗೃತಗೊಂಡು ಅವರ ಆಜ್ಞೆಗಳನ್ನು ಪಾಲಿಸಲು ಕಾತರಗೊಂಡು ನಿಲ್ಲುವುದು. ದೊಡ್ಡ ರಸ್ತೆಗಳಲ್ಲಿ ಸಂಚರಿಸುವ ಎಲ್ಲ ಮೋಟಾರು ಕಾರುಗಳನ್ನೂ ಒಬ್ಬ ಪೋಲೀಸನ ಬೆರಳು ನಿಲ್ಲಿಸಬಲ್ಲದು. ಶಾಖವನ್ನು ಬೆಂಕಿಯಿಂದ ಪ್ರತ್ಯೇಕಿಸಲಾಗದಂತೆ ಜ್ಞಾನದಿಂದ ಶಕ್ತಿಯನ್ನು ಪ್ರತ್ಯೇಕಿಸಲು ಸಾಧ್ಯವಿಲ್ಲ. ಮಾಯೆಗೆ ಮೂಲಾಧಾರವಾದ ಬ್ರಹ್ಮವು ಸರ್ವಶಕ್ತಿಗಳ ಆಗರವು. ಬ್ರಹ್ಮಜ್ಞಾನವುಳ್ಳ ಜ್ಞಾನಿಯು ಅದ್ಭುತವಾದ ಶಕ್ತಿಗಳನ್ನು ಹೊಂದಿರುವನು. ತನ್ನ ಸತ್ಸಂಕಲ್ಪದ ಮೂಲಕ ಅವನು ಮಾಡುವನು. ಎಲ್ಲವೂ ಅವನ ಇಚ್ಛೆಯಿಂದ ನಡೆಯುವುದು.

ಮಾಂಸ ಮುಂತಾದ ತಾಮಸಾಹಾರಗಳನ್ನು ಸಾತ್ವಿಕವನ್ನಾಗಿ ಪರಿವರ್ತಿಸುವ ಸಾಮರ್ಥ್ಯವನ್ನು ಹೊಂದಿರುವನು. ಅವನು ಮಾಂಸವನ್ನು ಹಲ್ವವಾಗಿ ಪರಿವರ್ತಿಸುವನು. ಸಾಮಾನ್ಯ ಜನರಂತೆ ಬಾಯಿ ಚಪಲಕ್ಕಾಗಿ ಅಥವ ಸುಖಕ್ಕಾಗಿ ಅವನು ತಿನ್ನುವುದಿಲ್ಲ. ಅವನ ಮನಸ್ಸಿನಲ್ಲಿ ಯಾವುದರ ಚಿಹ್ನೆಯೂ ಉಂಟಾಗುವುದಿಲ್ಲ. ಅವನು ಸಾಕ್ಷಿಯಾಗಿರುವೆನೆಂದು ಭಾವಿಸು ವನು. ದೇಹ, ಇಂದ್ರಿಯ ಮತ್ತು ಮನಸ್ಸಿನಿಂದ ಪ್ರತ್ಯೇಕ ಮಾಡಿ ಕೊಂಡಿರುವನು. ಒಳಗಿನ ಆತ್ಮನಿಂದಲೇ ಸದಾ ಆನಂದವನ್ನು ಪಡೆದು ಕೊಳ್ಳುವನು. ಬಹಳ ರುಚಿಕರವಾದ ಯಾವುದೇ ಆಹಾರವನ್ನಾಗಲೀ ತಾನು ತೆಗೆದುಕೊಂಡೆನೆಂದು ಭಾವಿಸುವುದಿಲ್ಲ. ನನ್ನ ಪ್ರಿಯ ಮಿತ್ರರೇ, ಜೀವನ್ಮುಕ್ತನ ಸ್ಥಿತಿಯು ಅವರ್ಣನೀಯವು. ನೀನು ಅವನನ್ನು ಅರ್ಥ ಮಾಡಿಕೊಳ್ಳಲಾರೆ.

ಆತ್ಮಸಾಕ್ಷಾತ್ಕಾರವನ್ನು ಹೊಂದಿದವನ ಮಾತುಗಳು ಕೇಳುವವರಿಗೆ ಶಕ್ತಿ, ಬಲ, ಶಾಂತಿ ಮತ್ತು ಸಾಮರಸ್ಯವನ್ನು ನೀಡುವುವು. ಅವು ಅವನ ಆಂತರಿಕ ಜೀವನದ ವೈಭವ, ಶಾಂತಿ ಮತ್ತು ಅನುಗ್ರಹಗಳು ಹೊರಗಡೆಗೆ ಉಕ್ಕಿಬಂದಂತಹವು. ಆತನು ಪ್ರೇಮ, ಆನಂದಗಳನ್ನು ಅನುಭವಿಸಿ ಇತರರಿಗೂ ಹರಡುವನು.

ಕಾನ್‌ಪುರದ ಪಕ್ಕದಲ್ಲಿ ಒಬ್ಬ ಯೋಗಿ ಇರುವನು. ಅವನು ಅನೇಕ ಸಿದ್ಧಿಗಳನ್ನು ಹೊಂದಿರುವನು. ಚಿಂದಿಯ ಬಟ್ಟೆಗಳಲ್ಲಿ ಸುತ್ತಾಡುವನು. ಆತನು ಅವಧೂತ ಸ್ಥಿತಿಯಲ್ಲಿರುವನು. ಒಬ್ಬ ಯೂರೋಪಿಯನ್ ಅಧಿಕಾರಿಯು ಆ ಹಳ್ಳಿಯಲ್ಲಿ ಪ್ರಯಾಣ ಮಾಡುತ್ತಿರುವಾಗ ಆ ಮಂಗಳದಾಸ ಯೋಗಿಯು ತನ್ನ ಪೆಟ್ಟಿಗೆಯನ್ನು ಹೊರುವಂತೆ ಬಲವಂತಗೊಳಿಸಿದನು. ಯುರೋಪಿಯನ್ ಅಧಿಕಾರಿಯು ಕುದುರೆಯ ಮೇಲೆ ಕುಳಿತು ಮುಂದೆ ಹೋಗುತ್ತಿದ್ದನು. ಅವನು ಒಮ್ಮೆ ಹಿಂತಿರುಗಿದಾಗ ಮಂಗಳದಾಸನ ತಲೆಯ ಮೇಲೆ ಮೂರು ಅಡಿ ಎತ್ತರದಲ್ಲಿ ಆ ಪೆಟ್ಟಿಗೆಯು ಚಲಿಸುತ್ತಿರುವುದನ್ನು ಕಂಡನು. ಆ ಅಧಿಕಾರಿಗೆ ಬಹಳ ಆಶ್ಚರ್ಯವಾಯಿತು. ಕೂಡಲೇ ಅವನು ಕುದುರೆಯಿಂದಿಳಿದು ಆ ಸಂತನ ಪಾದಗಳ ಮೇಲೆ ಬಿದ್ದು ತನ್ನ ಮಹಾಪರಾಧಗಳನ್ನು ಕ್ಷಮಿಸಬೇಕೆಂದು ದೀನವಾದ ಮಾತುಗಳಿಂದ ಬೇಡಿಕೊಂಡನು.

ಜೀವನ್ಮುಕ್ತ ಅಥವ ಜ್ಞಾನಿಯು ತಾನು ಎಲ್ಲದರಿಂದ ಬಿಡಲ್ಪಟ್ಟವನೆಂಬ ಅರಿವಿನಲ್ಲಿ ಸದಾ ನಿಂತಿರುವನು. ತನಗೆ ಪುನರ್ಜನ್ಮಗಳು ಮುಗಿದಿವೆಯೆಂದು ತಿಳಿದಿರುವನು. ತಾನು ಕರ್ತವ್ಯ ಪೂರ್ಣನೆಂದೂ, ಮತ್ತೆ ಈ ಜಗತ್ತಿಗೆ ಹೇಗೂ ಹಿಂತಿರುಗಿ ಬರಬೇಕಾಗಿಲ್ಲವೆಂದೂ ತಿಳಿದಿರುವನು. ತಾನು ಅನುಭವಿಸಬೇಕಾದುದೆಲ್ಲವನ್ನೂ ಪಡೆದು, ತನ್ನ ಕಾಮಗಳೆಲ್ಲವನ್ನೂ ಪೂರ್ಣ ಮಾಡಿ, ಇನ್ನು ತಿಳಿಯಬೇಕಾದುದು ಏನೂ ಇಲ್ಲವೆಂದೂ, ತನಗೆ ಪೂರ್ಣ ಜ್ಞಾನವು ಪ್ರಾಪ್ತಿಯಾಗಿದೆಯೆಂದೂ ಅರಿತಿರುವನು.

ಜೀವನ್ಮುಕ್ತನಿಗೆ ಲೋಕವು ಅದೃಶ್ಯವಾಗಿರುವುದು. ಅವನು ಎಲ್ಲೆಲ್ಲಿಯೂ ಬ್ರಹ್ಮವೊಂದನ್ನೇ ನೋಡುವನು. ಅಧ್ಯಾಸವನ್ನು ಕಳೆದುಕೊಂಡವನು ಹಾವಿನಂತೆ ಕಂಡರೂ ಹಗ್ಗವೆಂದೇ ಹೇಗೆ ತಿಳಿಯುವನೊ, ಸರೋವರದಂತೆ

ಕಂಡರೂ ಜಲಮರೀಚಿಕೆಯೆಂದು ಹೇಗೆ ತಿಳಿಯುವನೊ ಮತ್ತು ಹೇಗೆ ಭ್ರಮಾಧೀನನಾಗುವುದಿಲ್ಲವೊ ಹಾಗೆಯೇ ಜೀವನ್ಮುಕ್ತನಿಗೆ ನಾಮರೂಪಗಳು ಕಾಣುತ್ತಿದ್ದರೂ ಅದನ್ನು ಬ್ರಹ್ಮವೆಂದೇ ತಿಳಿಯುವನು. ಅವನಿಗೆ ಈ ಪ್ರಪಂಚವು ಸುಖ ದುಃಖಗಳೆಂಬ ದ್ವಂದ್ವಗಳಿಂದ ಕೂಡಿದ, ವಿರುದ್ಧ ಧರ್ಮ ಗಳ, ತೊಂದರೆ—ತಾಪತ್ರಯಗಳ ಬಂಧನವಾಗಿರುವುದಿಲ್ಲವು. ದುಃಖ, ನೋವುಗಳಿಂದ ತುಂಬಿದ ಜಗತ್ತು ಬದಲಿಸಿ ಸಚ್ಚಿದಾನಂದವಾದ ಸಹಜ ರೂಪಿನಲ್ಲಿ ಕಾಣುವುದು. ಎಲ್ಲ ಅಡ್ಡಿಗಳು, ಭೇದಗಳು, ತರತಮ ಭಾವಗಳು, ದ್ವೈತಗಳು, ಸಂಕುಚಿತ ಮನೋಭಾವಗಳು ವ್ಯಾಪ್ಯವಾದ ವಿಷ್ಣುದರ್ಶನ ದಿಂದ ನಾಶವಾಗುವವು. ಅವನಿಗೆ ವಿರಾಟ್ ದರ್ಶನವಾಗಿರುವುದು. ಅವನು ಯಾವಾಗಲೂ ಆತ್ಮಸಂತೋಷ ಮತ್ತು ಆತ್ಮಜ್ಞಾನವನ್ನು ಅನುಭವಿಸುತ್ತಿರು ವನು. ಅವನು ಸ್ವಾತ್ಮಾರಾಮನಾಗಿರುವನು. ಅವನು ಆತ್ಮ ಸ್ವಾರಾಜ್ಯದಲ್ಲಿ ಪ್ರತಿಷ್ಠಿತನಾಗಿರುವುದರಿಂದ ಅವನನ್ನು ಯಾವುದೂ ಚಾಂಚಲ್ಯವನ್ನುಂಟು ಮಾಡಲಾರದು. ಅವನ ಸ್ಥಿತಿಯು ಅವರ್ಣನೀಯವು.

ನಿಮ್ಮ ಪಾದರಕ್ಷೆಗಳು ಹಳೆಯದಾಗಿ ಸವೆದಿರುವಾಗ ಅವು ಸುಮ್ಮನೆ ನಿಮ್ಮ ಕಾಲಿಗೆ ಜೋತುಬಿದ್ದಿರುವಂತೆ ಬ್ರಹ್ಮ ಸ್ವರೂಪದಲ್ಲಿರುವ ಜ್ಞಾನಿಗೆ ತನಗಿಂತ ಪ್ರತ್ಯೇಕವಾದ ಶರೀರವು ತನಗೆ ಜೋತುಬಿದ್ದಿರುವುದೆಂದು ಸ್ಪಷ್ಟ ವಾಗಿ ತಿಳಿಯುವದು.

ಮದ್ಯಪಾನದಿಂದ ಮತ್ತನಾದವನು ಮೈಮೇಲಿನ ಬಟ್ಟೆಯು ಬೀಳು ತ್ತಿದ್ದರೂ ಪ್ರಜ್ಞೆಯೇ ಇಲ್ಲದಿರುವಂತೆ ಬ್ರಹ್ಮಾನಂದದಿಂದ ಮತ್ತನಾದ ಜ್ಞಾನಿಯು ದೇಹದ ಪ್ರಜ್ಞೆಯನ್ನು ಹೊಂದಿರುವುದಿಲ್ಲ. ಜೀವನ್ಮುಕ್ತನಿಗೆ ಈ ನಶ್ವರ ಪ್ರಪಂಚದ ತೋರಿಕೆಯು ಭಾಸವಾಗುವುದು. ಆದರೆ ಅವನ ಅನು ಭವವು ವಿಶಿಷ್ಟವಾದುದು. ಸಮಸ್ತ ಪ್ರಪಂಚವು ತನ್ನಲ್ಲಿಯೇ ಆತ್ಮರೂಪ ವಾಗಿರುವುದೆಂದು ಭಾವಿಸುವನು. ಪ್ರಪಂಚವು ಮಿಥ್ಯವೆಂಬ ನಿಶ್ಚಯ ಜ್ಞಾನವು ಅವನಲ್ಲಿ ನಿಶ್ಚಲವಾಗಿರುವುದು.

ಸ್ವಪ್ನದಲ್ಲಿ ಒಬ್ಬನು ದೊರೆಯಾಗುವನು, ಇಷ್ಟಪಟ್ಟ ಸುಖಗಳನ್ನೆಲ್ಲಾ ಅನುಭವಿಸುವನು; ನಂತರ ಶತ್ರುವಿನಿಂದ ಸೋಲಿಸಲ್ಪಟ್ಟಾಗ ಅರಣ್ಯವನ್ನು ಹೊಕ್ಕು ತಪಸ್ಸುಗಳನ್ನು ಆಚರಿಸುವನು. ಅನಂತರ ತಾನು ಭಿಕ್ಷುಕನೆಂಬ

ಕನಸನ್ನು ಕಾಣುವನು. ಕೇವಲ ಅರ್ಧ ಗಂಟೆಯಲ್ಲಿ ತಾನು ಎಂಬತ್ತು ವರ್ಷಗಳು ಬದುಕಿದ್ದೇನೆಂದು ಕಲ್ಪಿಸುವನು. ತನಗೆ ಹಾವು ಕಡಿದಂತೆಯೂ ಮತ್ತು ಸತ್ತಂತೆಯೂ ಭಾವಿಸುವನು. ಭಯದಿಂದ ಎಚ್ಚರಗೊಂಡು ಕಣ್ಣು ಬಿಟ್ಟಾಗ ತಾನು ಕಂಡುದೆಲ್ಲವೂ ಕೇವಲ ಕನಸೆಂದು ತಿಳಿದುಕೊಳ್ಳುವನು. ಎಚ್ಚರಗೊಂಡವನು ಹೇಗೆ ಕನಸಿನ ವಸ್ತುಗಳನ್ನು ಕಾಣಲಾರನೋ ಹಾಗೆಯೇ ಬ್ರಹ್ಮಜ್ಞಾನವನ್ನು ಪಡೆದ ಯೋಗಿಯು ನಾಮರೂಪಾತ್ಮಕವಾದ ಜಗತ್ತನ್ನು ನೋಡುವುದಿಲ್ಲವು.

ಜ್ಞಾನಿಯು ವಿಶ್ವವೆಲ್ಲಾ ತನ್ನೊಳಗಿರುವುದೆಂದೂ, ತಾನು ಅದೆಲ್ಲವನ್ನೂ ಒಂದೇ ಆತ್ಮವಾಗಿ ನೋಡುವನು.

ಹಗಲಿನಲ್ಲಿ ಸೂರ್ಯನು ಬೆಳಕನ್ನು ಕೊಡುವನು. ಚಂದ್ರನು ಮತ್ತು ನಕ್ಷತ್ರಗಳು ರಾತ್ರಿಯ ಕಾಲದಲ್ಲಿ ಬೆಳಕನ್ನು ಕೊಡುವುವು. ನೀನು ಯಾವ ಸಾಧನದಿಂದ ಬೆಳಕನ್ನು ನೋಡುವೆ? ನೀನು ಬೆಳಕನ್ನು ಕಣ್ಣಿನ ಮೂಲಕವೇ ನೋಡಬಲ್ಲೆ. ಕುರುಡನಿಗೆ ಬೆಳಕಿನ ಭಾವನೆಯೇ (ತಿಳಿವಳಿಕೆ) ಇಲ್ಲ. ಕಣ್ಣು ಮುಚ್ಚಿದೆ ಅಥವ ತೆಗೆದಿದೆ ಎಂಬುದನ್ನು ಯಾವುದರಿಂದ ತಿಳಿದುಕೊಳ್ಳಬಲ್ಲೆ? ಬುದ್ಧಿಯಿಂದ. ಬುದ್ಧಿಯು ಇಲ್ಲದೇ ಇದ್ದರೆ ನೀನು ಸೂರ್ಯನ ಬೆಳಕನ್ನು ನೋಡಲಾರೆ. ಬುದ್ಧಿಗೂ ಬೆಳಕನ್ನು ಕೊಡುವುದು ಯಾವುದು? ಅದು ಆತ್ಮವು. ಅದು ಜ್ಯೋತಿಗಳ ಜ್ಯೋತಿಯಾದ ಸ್ವಯಂಜ್ಯೋತಿಯಾಗಿರುವುದು. ನಾನು ಅದೇ ಆಗಿರುವೆನು. "ತತ್ರ ಅಹಂ" — ನಾನು ಅಲ್ಲಿರುವೆನು.

ಜೀವನ್ಮುಕ್ತನು ಹೇಳುವುದೇನೆಂದರೆ: "ನಾನು ಪೃಥ್ವಿಯು. ನಾನು ಪೃಥ್ವಿಯಲ್ಲಿರುವೆನು. ನಾನು ಜಲವು. ನಾನು ಅಗ್ನಿಯು. ನಾನು ಅಗ್ನಿಯಲ್ಲಿರುವೆನು. ನಾನು ವಾಯುವು. ನಾನು ವಾಯುವಿನಲ್ಲಿರುವೆನು. ನಾನು ಪುಷ್ಪವು. ನಾನು ಪುಷ್ಪದಲ್ಲಿರುವೆನು. ನಾನು ವೃಕ್ಷವು. ನಾನು ವೃಕ್ಷದಲ್ಲಿರುವೆನು. ನಾನು ಸ್ತ್ರೀಯು. ನಾನು ಸ್ತ್ರೀಯಲ್ಲಿರುವೆನು. ನಾನು ಬುದ್ಧಿಯು. ನಾನು ಬುದ್ಧಿಯಲ್ಲಿರುವೆನು. ನಾನು ಸಾಗರವು. ನಾನು ಸಾಗರದಲ್ಲಿರುವೆನು. ನಾನು ವ್ಯಾಕೃತ ವಿರಾಟನು. ನಾನು ಹಿರಣ್ಯಗರ್ಭದಲ್ಲಿರುವೆನು. ನಾನು ಬ್ರಹ್ಮನು."

ನಾನು ಬ್ರಹ್ಮವೇ ಆಗಿರುವಾಗ ಯಾರಿಗೆ ನನ್ನ ನಮಸ್ಕಾರಗಳನ್ನು ಸಮರ್ಪಿಸಲಿ ? ಆತ್ಮನಾದ ನನಗಿಂತ ಅನ್ಯವಾಗಿ ಮತ್ತೊಂದಿರುವಾಗ ಯಾರು ಯಾರನ್ನು ಗೌರವಿಸಬೇಕು ? ಯಾರನ್ನು ಯಾರು ನಮಸ್ಕರಿಸಬೇಕು ? ಅಜ್ಞಾನವನ್ನು ದಾಟಿರುವ, ಆದಿತ್ಯನಂತೆ ಪ್ರಕಾಶಿಸುವ ಆ ಪುರುಷೋತ್ತಮ ನನ್ನು ನಾನು ತಿಳಿದಿರುವೆನು. ಅವನನ್ನು ತಿಳಿಯುವುದರಿಂದಲೇ ಮೃತ್ಯು ವನ್ನು ಗೆಲ್ಲುವನು – ಮೋಕ್ಷಕ್ಕೆ ಬೇರೆಯ ಉಪಾಯವಿಲ್ಲವು.

ನಾನು ಒಂದು ಮರಳಿನ ಕಣದಲ್ಲಿ ಪ್ರಪಂಚವನ್ನೂ, ಕಾಡಿನ ಹೂವಿನಲ್ಲಿ ಸ್ವರ್ಗವನ್ನೂ, ನನ್ನ ಅಂಗೈಯಲ್ಲಿ ಅನಂತವನ್ನೂ ಕೇವಲ ಒಂದೇ ಗಂಟೆಯಲ್ಲಿ ನೋಡುವೆನು.

ನನ್ನಲ್ಲೇ ವಿಶ್ವವು ಉದಯಿಸುವುದು. ನನ್ನಲ್ಲಿಯೇ ವಿಶ್ವವು ಸ್ಥಿರ ವಾಗಿರುವುದು. ನನ್ನಲ್ಲಿ ವಿಶ್ವವು ಲಯಗೊಂಡಿರುವುದು — ಈ ಬ್ರಹ್ಮವು ಕಾಲಾತೀತವು. ನಾನು ಅದೇ ಆಗಿರುವೆನು. ಅದು ನಾನೇ ಆಗಿರುವೆನು. ಶಿವೋಹಂ, ಶಿವೋಹಂ, ಶಿವೋಹಂ

ನಾನು ಈ ದೇಹವೂ ಅಲ್ಲ, ಮನಸ್ಸೂ ಅಲ್ಲ. ಚಿದಾನಂದ ರೂಪ ಶಿವ ನಾನು. ಶಿವೋಹಂ—ನಾನು ಶಿವನು—ನಾನು ಶಿವನು—ಸರ್ವಾನಂದ ಮಯನು ಮತ್ತು ಸರ್ವಜ್ಞನು.

ನಾನು ಎಲ್ಲ ದೇಹಗಳಲ್ಲಿ ಸುಖಪಡುವೆನು. ನಾನು ಎಲ್ಲ ದೇಹಗಳಲ್ಲಿ ದುಃಖಿಸುವೆನು. ನಾನು ಎಲ್ಲ ಕಣ್ಣುಗಳಿಂದ ನೋಡುವೆನು. ಎಲ್ಲ ಕೈಗಳ ಮೂಲಕ ಕರ್ಮಮಾಡುವೆನು. ಎಲ್ಲ ಕಿವಿಗಳ ಮೂಲಕ ಕೇಳುವೆನು. ಇದು ಜ್ಞಾನಿಯ ವಿಶ್ವೈಕ್ಯ ಭಾವನೆಯು. ನೀನು ಹಲವು ಗ್ರಂಥಗಳನ್ನು ಓದುವ ಅವಶ್ಯಕವಿಲ್ಲವು. ಈ ಮೇಲಿನ ಭಾವನೆಗಳಲ್ಲಿ ಸದಾ ನಿಲ್ಲು. ನಿನಗೆ ಆತ್ಮಸಾಕ್ಷಾತ್ಕಾರವು ಶೀಘ್ರವಾಗಿ ಆಗುವುದು.

ಜ್ಞಾನಿಯು ಹೇಳುವನು : "ನಾನೇ ಎಲ್ಲವು, ನಾನು ಎಲ್ಲದರಲ್ಲಿ ಎಲ್ಲ ವಾಗಿರುವೆನು." ಅವನು ಬ್ರಹ್ಮದೊಡನೆ ತನ್ನನ್ನು ಗುರುತಿಸಿಕೊಳ್ಳುವನು. ಈ ಇಡೀ ವಿಶ್ವವು ಬ್ರಹ್ಮದಲ್ಲಿ ತೇಲಾಡುತ್ತಿರುವುದು. ಆದ್ದರಿಂದ ಅವನು ಹೀಗೆ ಭಾವಿಸುವನು : "ನಾನೇ ಸರ್ವವು. ಸಮಸ್ತ ನಾಮರೂಪಗಳನ್ನೂ ನನ್ನ ಚಿಂತನೆಗಳಿಂದ ಬೇರ್ಪಡಿಸಲಾಗದು. ಆಲೋಚನೆಗಳನ್ನು "ನಾನು" ಇಂದ

ಪುನಃ ಬೇರ್ಪಡಿಸಲಾಗುವುದಿಲ್ಲ. ಆದ್ದರಿಂದ "ನಾನೇ ಎಲ್ಲವೂ ಆಗಿದ್ದೇನೆ" ಎಂದು ಹೇಳುವುದೇ ನ್ಯಾಯವಾದುದು.

ಓಂ ತತ್ಸತ್



ವಿದ್ಯಾ ಮುದ್ರಣ, ನೂರಡಿ ರಸ್ತೆ, ಮೈಸೂರು ೪